ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫-೨

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದವಿವರಣೆಗಳೊಡನೆ.)

ಮೂರನೆಯ ಸ್ಕಂಧ



ಅನುವಾದಕ

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೩

# ಮುನ್ನುಡಿ

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

'ಪುರಾಪಿ ನವಮಿವ ಪುರಾಣಂ' ಎಂದು ಪುರಾಣ ಶಬ್ದಕ್ಕೆ ವಿವರಣೆಯನ್ನು ಹೇಳುತ್ತಾರೆ. ಇದರ ತಾತ್ಪರ್ಯವು ಹೀಗಿದೆ. ಮನುಷ್ಯನು ತಿಳಿಯಬಯಸುವ ತತ್ತ್ವ ಸಿದ್ಧಾಂತಗಳೂ, ಅವುಗಳ ಮನವರಿಕೆಗೆ ಅನುಕೂಲವಾದ, ದಿನಗಟ್ಟಲೆಯ ಜೀವನ ಕ್ರಮದಲ್ಲಿ ಅನುಸರಿಸಬೇಕಾದ (ನೀತಿನಿಯಮಗಳೂ ಪೂರ್ವಕಾಲದಲ್ಲಿ ಹೇಗೆ ಇದ್ದುವೋ ಮತ್ತು ಆಗಿನ ಜನರನ್ನು ಹೇಗೆ ಒಲಿಸಿಕೊಂಡವೋ, ಅವು ಈಗಲೂ ಹಾಗೆಯೇ ಇರುತ್ತ ಜನರನ್ನು ಒಲಿಸಿಕೊಂಡು ಅವರ ಆದರಕ್ಕೆ ಪಾತ್ರವಾಗಿರುತ್ತವೆ. ಅಂತಹ ತತ್ತ್ವಗಳನ್ನೂ ನೀತಿನಿಯಮಗಳನ್ನೂ ತಿಳಿಸುವ ಗ್ರಂಥಕ್ಕೆ ಪುರಾಣವೆಂದು ಹೆಸರು ಒಪ್ಪುತ್ತದೆ. ಮಹಾಪುರಾಣವೆಂದರೆ ಮಹತ್ತ್ವವನ್ನು ಅಥವಾ ಮೇಲ್ಮೆಯನ್ನು ಉಂಟುಮಾಡುವ ಪುರಾಣವೆಂದು ಅರ್ಥವು. ಈ ದೇವೀಭಾಗವತವನ್ನು ಓದುವುದು, ಹೇಳುವುದು, ಕೇಳುವುದು, ಅರ್ಥವನ್ನು ವಿವರಿಸುವುದು ಮತ್ತು ಆಚರಿಸಿ ಪ್ರಚಾರಮಾಡುವುದು, ಇದರಿಂದ, ಮಾನವನ ಮನಸ್ಸು ವಿಶಾಲವಾಗುತ್ತದೆ. ಅವನ ಹೃದಯವು ವಿಸ್ತಾರವನ್ನೂ ಪೂರ್ಣತೆಯನ್ನೂ ಪಡೆಯುತ್ತದೆ. ಎಂಬುದು ಅನುಭವದಿಂದ ಗೊತ್ತಾಗುತ್ತಿದೆ.

ಸನಾತನ ತತ್ತ್ವವು ಒಂದೇ ಆಗಿದೆ. ಅದು ಸರ್ವವ್ಯಾಪಿಯೂ, ಸರ್ವಜ್ಞವೂ, ಸರ್ವಶಕ್ತವೂ ಆಗಿರಬೇಕು. ಅದು ಚೈತನ್ಯಸ್ವರೂಪವಾದುದು ಎಂಬುದು ಎಲ್ಲ ವೇದಗಳೂ, ಶಾಸ್ತ್ರಗಳೂ, ಪುರಾಣಗಳೂ ಬೋಧಿಸುವ ಮುಖ್ಯ ತತ್ತ್ವವಾಗಿದೆ. ಸತ್ಯಪರತೆ, ಅಹಿಂಸೆ, ಶೌಚ, ದಾನ, ದಮ, ಶಮ ಮುಂತಾದ ಸರ್ವಜನ ಸಮವಾದ ನೀತಿಯನ್ನು ಜನರು ದಿನಗಟ್ಟಲೆಯ ಜೀವನಕ್ರಮದಲ್ಲಿ ಆಚರಿಸಬೇಕು ಎಂಬ ನೀತಿನಿಯಮವನ್ನೂ, ಅದರ ಆಚರಣೆಯಿಂದ ತತ್ತ್ವವನ್ನು ಅಪರೋಕ್ಷಾನುಭವದಲ್ಲಿ ಸಾಕ್ಷಾತ್ಕರಿಸಿದವರ ಉದಾಹರಣೆಗಳನ್ನೂ ಪುರಾಣಗಳು ಮಿತ್ರನಂತೆ ತಿಳಿಯಹೇಳುತ್ತವೆ. ಶುಕ ಜನಕರ ಸಂವಾದದ ಕಥೆಯೂ, ಸತ್ಯವ್ರತನ ಕಥೆಯೂ ಇವಕ್ಕೆ ಉದಾಹರಣೆಗಳೆನ್ನಬಹುದು. ಹೀಗಿರುವುದರಿಂದಲೇ 'ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ।' ಎಂದು ತಿಳಿದವರು ಹೇಳಿರುತ್ತಾರೆ. ವೇದಗಳಲ್ಲಿ ಸಂಗ್ರಹವಾಗಿ ಸೂಚಿಸಿರುವ ತತ್ತ್ವಗಳನ್ನೂ, ಸಂಕ್ಷೇಪವಾಗಿ ತಿಳಿಸಿರುವ ಕಥೆಗಳನ್ನೂ

ಪುರಾಣಗಳಲ್ಲಿ ವಿಸ್ತರಿಸಿ, ಮಾರ್ಪಡಿಸಿ, ಕೆಲವು ಸಂದರ್ಭಗಳಲ್ಲಿ ವಿವರಗಳಿಂದ ಮೇಲ್ಪಡಿಸಿ ವಿವರಿಸಿದೆ.

'ಏಕಂ ಸದ್ವಿಪ್ರಾ ಬಹುಧಾ ವದಂತಿ,' 'ಆನೀದವಾತಂ ಸ್ವಧಯಾ ತದೇಕಂ,' 'ಸತ್ಯಂವದ, ಧರ್ಮಂಚರ,' ಇಹಚೇದವೇದೀದಥ ಸತ್ಯಮಸ್ತಿ ನ ಚೇದಿಹಾವೇದೀತ್ ಮಹತೀ ವಿನಷ್ಟಿಃ,' - ಧರ್ಮೋ ವಿಶ್ವಸ್ಯ ಜಗತಃಪ್ರತಿಷ್ಠಾ,' 'ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ,' ಜಾಯಮಾನೋವೈ ಬ್ರಾಹ್ಮಣಸ್ತ್ರಿಭಿಃಋಣವಾಜಾಯತೆ। ಬ್ರಹ್ಮಚರ್ಯೇಣ ಋಷಿಭ್ಯಃ । ಯಜ್ಞೇನ ದೇವೇಭ್ಯಃ । ಪ್ರಜಯಾ ಪಿತೃಭ್ಯಃ ॥" ಎಂದು ಮುಂತಾದ ಶ್ರುತಿವಾಕ್ಯಗಳು ಮೇಲಿನ ಅರ್ಥವನ್ನು ವಿಧಿರೂಪದಿಂದ ರಾಜಾಜ್ಞೆಯಂತೆ ಎಲ್ಲರಿಗೂ ಗೊತ್ತುಮಾಡಿ ಹೇಳುತ್ತಿವೆ. ಇವಕ್ಕನುಸಾರವಾಗಿ 'ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ । ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ ।' ವಿದ್ವದ್ಭಿಸ್ಸೇವಿತಸ್ಸದ್ಭಿಃ ನಿತ್ಯಮದ್ವೇಷರಾಗಿಭಿಃ । ಹೃದಯೇ ನಾಭ್ಯನುಜ್ಞಾತಃ ಯೋ ಧರ್ಮ ಸ್ತಂನಿಬೋಧತ ॥ 'ಸರ್ವಂ ಖಲ್ವಿದಮೇವಾಹಂ ನಾನ್ಯ ದಸ್ತಿ ಸನಾತನಂ । 'ದೇ. ಭಾ. ೧. ೧೫-೫೨. ಎಂದು ಮುಂತಾದ ಸ್ಮೃತಿ ಪುರಾಣ ವಾಕ್ಯಗಳೂ ಮಿತ್ರನಂತೆ ಹೃದಯಂಗಮವಾಗಿ ಇದೇ ಅಂಶವನ್ನು ತಿಳಿಯಹೇಳುತ್ತವೆ.

ಇಂತಹ ಸಾಮಾನ್ಯ ಧರ್ಮದ, ವಿಶ್ವಧರ್ಮದ ಅರಿವು, ಆಚರಣೆ, ಪ್ರಚಾರಣಗಳಿಂದ ಈ ಪ್ರಪಂಚದ ಭವಿಷ್ಯದ ಯೋಗಕ್ಷೇಮಗಳನ್ನು ಸಾಧಿಸಬೇಕಾಗಿದೆ. ಈ ಕಾರ್ಯನಿರ್ವಹಣಭಾರವು ವಿವೇಕಿಗಳಾದ ವಿದ್ಯಾವಂತರ ಧಾರ್ಮಿಕಕರ್ತವ್ಯ ವಾಗಿದೆ. ಇದರ ತಿಳಿವಳಿಕೆಯಿಂದ ಮನಸ್ಸು ವಿಶಾಲವಾಗಿ, ಇದರ ಆಚರಣೆಯಿಂದ ಹೃದಯವು ಶುದ್ಧವಾಗಿ, ಈ ಜಗತ್ತಿಗೆ ಕಲ್ಯಾಣವಾಗಬೇಕಾಗಿದೆ. ಇಂತಹ ಒಳ್ಳೆಯ ಫಲವು ಜನರಿಗೆ ದೊರೆಯಬೇಕಾದರೆ, ಮೇಲೆಹೇಳಿದಂತೆ 'ಋಣಾನಿತ್ರೀಣ್ಯಪಾಕೃತ್ಯ ಮುನೋ ಮೋಕ್ಷೇನಿವೇಶಯೇತ್' ಎಂದರೆ ಈ ಲೋಕದಲ್ಲಿ ಈ ಮೂರು ಸಾಲ ಗಳನ್ನು ತೀರಿಸಿಯೇ ಮನುಷ್ಯರು ಮೋಕ್ಷವನ್ನು ಪಡೆಯಲು ಯತ್ನಿಸಬೇಕು, ಎಂಬ ನಿಯಮಾನುಸಾರವಾಗಿ, ಜನಸಾಮಾನ್ಯದಲ್ಲಿ ವಿಶ್ವಧರ್ಮದ ಅರಿವು ಆಚರಣೆ ಗಳು ಹೆಚ್ಚುಹೆಚ್ಚಾಗಿ ರೂಢಿಗೆ ಬರಬೇಕು. ಈ ಋಣಗಳಲ್ಲಿ ಒಂದಾದ ಋಷಿಋಣ ವನ್ನು ಗ್ರಂಥರಚನೆಯಿಂದಲೂ, ಪಾಠಪ್ರವಚನದಿಂದಲೂ ತೀರಿಸಲು ಆಗುವಂತೆ, ಗ್ರಂಥಪ್ರಚಾರಣದಿಂದೂ ಮೇಲಾದ ರೀತಿಯಲ್ಲೇ ತೀರಿಸಲು ಅವಕಾಶವಿದೆ. ಇಂತಹ ಮಹಾಕಾರ್ಯವು ಮುಂದಾಲೋಚನೆಯುಳ್ಳ ಧಾರ್ಮಿಕರಾದ ಶ್ರೀಮಂತರನ್ನು ಹೆಚ್ಚಾಗಿ ಅವಲಂಬಿಸಿದೆ.

ಕೀರ್ತಿಶೇಷರೂ ಪೂಜ್ಯರೂ ಆಗಿರುವ ಆಳಿದ ಮಹಾಸ್ವಾಮಿಗಳವರ ಮಂಗಳ ಕರಗಳಾದ ಮಾದರಿಗಳನ್ನನುಸರಿಸಿ ರಾಜ್ಯಭಾರದ ಇತರ ಮಹಾಕಾರ್ಯಗಳನ್ನು ನೆರವೇರಿಸುತ್ತಿರುವಂತೆ, ಈ ಮಹಾಕಾರ್ಯವನ್ನೂ ನೆರವೇರಿಸುವ ಉದ್ದೇಶ ದಿಂದ ನಮ್ಮನ್ನಾಳುತ್ತಿರುವ ಮಹಾಪ್ರಭುಗಳಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು** ಇಂತಹ ಉತ್ತಮ ಗ್ರಂಥಗಳ ಅರಿವು ಕನ್ನಡಿಗರೆಲ್ಲರಿಗೂ ದೊರೆಯುವಂತಾಗಲೆಂದೂ, ಅದರಿಂದ ಜನರ ನಡೆವಳಿಕೆ ಸಂಸ್ಕೃತಿಗಳು ಮೇಲ್ಪಡಲೆಂದೂ, ಈ ದೇವೀಭಾಗವತಮಹಾಪುರಾಣದ ಕನ್ನಡ ಅನುವಾದವನ್ನು ಬರೆದು ಮುದ್ರಿಸಿ ಪ್ರಚಾರ ಮಾಡಲು ಅಪ್ಪಣೆಮಾಡಿರುವುದು ಕನ್ನಡಿಗರೆಲ್ಲರಿಗೂ ಹೆಮ್ಮೆಯಾಗಿದೆ. ಈ ಘನವಾದ ಉದ್ದೇಶವು ಸಂತತವಾಗಿ ನೆರವೇ ರುತ್ತಿರುವಂತಾಗಲೆಂದು ಸರ್ವಶಕ್ತಿಸ್ವರೂಪಳಾದ ದುರ್ಗಾದೇವೀಮಹಾತಾಯಿಯನ್ನು ಪ್ರಾರ್ಥಿಸುತ್ತೇನೆ.

ಸ್ವಭಾನುಸಂವತ್ಸರದ<br>ಚೈತ್ರ ಶುಕ್ಲ ಪ್ರಥಮಾ 5—4—1943

**ಎಡತೊರೆ ದೇವಯ್ಯದೀಕ್ಷಿತರ ಮಗ**<br>**ಚಂದ್ರಶೇಖರಶಾಸ್ತ್ರೀ.**

# ದೇವೀಭಾಗವತಮಹಾಪುರಾಣದಲ್ಲಿನ ಮೂರನೆಯ ಸ್ಕಂಧದ ವಿಷಯಸೂಚಿಕೆ


| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| 1. | ಜನಮೇಜಯರಾಜನು, ಬ್ರಹ್ಮವಿಷ್ಣುಮಹೇಶ್ವರಾದಿದೇವತೆಗಳಲ್ಲೆಲ್ಲಾ ಶ್ರೇಷ್ಠರು ಯಾರೆಂದು ವ್ಯಾಸಮಹರ್ಷಿಯನ್ನು ಪ್ರಶ್ನೆಮಾಡುವನು ...... | ೧-೧೫ |
| 2. | ಈ ಪ್ರಪಂಚದ ಸೃಷ್ಟಿಕರ್ತನು ಯಾರೆಂಬ ವಿಷಯದಲ್ಲಿ ಮತಭೇದಗಳನ್ನು ತಿಳಿಸಿ ನಿಶ್ಚಯವನ್ನು ತಿಳಿಸುವುದು. ತಪಸ್ಸಿನಿಂದ ದೇವಿಯನ್ನು ಸಾಕ್ಷಾತ್ಕರಿಸಿದ ಬ್ರಹ್ಮವಿಷ್ಣುಮಹೇಶ್ವರರು ದೇವೀಪ್ರಭಾವದಿಂದ ಬಂದ ವಿಮಾನದಲ್ಲಿ ಮಣಿದ್ವೀಪಕ್ಕೆ ತೆರಳುವುದು. ದಾರಿಯಲ್ಲಿ ಅವರು ಇತರ ಬ್ರಹ್ಮಾಂಡಗಳಲ್ಲೂ ಸೃಷ್ಟಿಸ್ಥಿತಿಲಯಗಳನ್ನು ನೆರವೇರಿಸುತ್ತಿರುವ ಬ್ರಹ್ಮವಿಷ್ಣುರುದ್ರರನ್ನು ನೋಡುವುದು ...... | ೧೬-೨೫ |
| 3. | ವಿಮಾನದಲ್ಲಿದ್ದ ಬ್ರಹ್ಮವಿಷ್ಣುಮಹೇಶ್ವರರು ಪ್ರಕೃತಿಯ ಆನಂತ್ಯವನ್ನು ಮನಗಾಣುತ್ತಾ ಕಡೆಗೆ ದೇವಿಯ ದರ್ಶನಮಾಡುವುದು. ಆ ಮಣಿದ್ವೀಪದಲ್ಲಿ ತ್ರಿಮೂರ್ತಿಗಳೂ ಸ್ತ್ರೀರೂಪವನ್ನು ಹೊಂದಿ ಪ್ರವೇಶವನ್ನು ಪಡೆಯುವುದು | ೨೬-೪೦ |
| 4. | ತ್ರಿಮೂರ್ತಿಗಳಿಗೆ ಸಂಕುಚಿತಭಾವವು ಹೋಗಲು, ಆ ದೇವಿಯೇ ಎಲ್ಲರಿಗೂ ತಾಯಿಯು ಎಂಬ ನೆನಪು ಬಂದು ವಿಷ್ಣುವು ದೇವಿಯನ್ನು ಸ್ತೋತ್ರಮಾಡುವುದು. ದೇವಿಯ ಅದ್ಭುತಮಹಿಮೆ | ೪೧-೫೫ |
| 5. | ಈಶ್ವರ ಮತ್ತು ಬ್ರಹ್ಮ ಇವರೂ ದೇವಿಯನ್ನು ಸ್ತೋತ್ರಮಾಡುವುದು ...... | ೫೬-೭೩ |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| 6. | ಪರತತ್ತ್ವವು ಒಂದೇ ಅನೇಕವೇ ? ಪುರುಷನೇ ಸ್ತ್ರೀಯೇ ? ಎಂಬ ವಿಚಾರ. ತ್ರಿಮೂರ್ತಿಗಳಿಗೆ ದೇವಿಯು ಮೂರುಜನ ಶಕ್ತಿ ದೇವಿಯರನ್ನು ಕೊಟ್ಟು ಉಪದೇಶಮಾಡುವುದು. ದೇವಿಯು ಸಕಲಸ್ವರೂಪಳು ....... | ೭೪-೯೬ |
| 7. | ತತ್ತ್ವವು ಒಂದೇ ; ಅನೇಕವಲ್ಲವು. ಶಕ್ತಿಯೇ ಸೃಷ್ಟಿಸ್ಥಿತಿಲಯಗಳಿಗೆ ಕಾರಣಳು. ತ್ರಿಮೂರ್ತಿಗಳಲ್ಲಿ ಭೇದವಿಲ್ಲವು. ಭೇದವನ್ನು ಎಣಿಸಲೂಬಾರದು. ನಿರ್ಗುಣಬ್ರಹ್ಮತತ್ತ್ವದ ಸ್ವರೂಪ. ಅಹಂಕಾರವೇ ಎಲ್ಲಕ್ಕೂ ಮೂಲಕಾರಣ. ಪಂಚೀಕರಣ. ಸತ್ತ್ವರಜಸ್ತಮೋಗುಣಗಳ ಸ್ವರೂಪ ....... | ೯೭-೧೧೧ |
| 8. | ಗುಣಗಳನ್ನು ಗುರುತಿಸುವ ಬಗೆ. ರಾಜಸವಾದ ಸತ್ಕರ್ಮಗಳೂ ನಿಷ್ಫಲಗಳು. ತಾಮಸಶ್ರದ್ಧೆ. ಗುಣಗಳ ಸಂಯೋಗದ ಫಲ ಪರಿಣಾಮಗಳು ....... | ೧೧೨-೧೨೫ |
| 9. | ಗುಣಗಳ ಲಕ್ಷಣದ ವಿಚಾರವಾಗಿ ನಾರದನು ಬ್ರಹ್ಮನನ್ನು ಪುನಃ ಪ್ರಶ್ನಿಸಲು ಅವುಗಳ ಸ್ವರೂಪದಲ್ಲಿ ಹೆಚ್ಚಿನ ವಿವರಣೆ. ವ್ಯಕ್ತಿಭೇದ, ಗುಣತ್ರಯ ಫಲಭೇದ. ಗುಣತ್ರಯಕ್ಕೂ ದೇವಿಯೇ ಕಾರಣಳು. ಬ್ರಹ್ಮತತ್ತ್ವದ ಇಚ್ಛಾಜ್ಞಾನಕ್ರಿಯಾಶಕ್ತಿಯೇ ದೇವಿಯು ....... | ೧೨೬-೧೩೯ |
| 10. | ಸತ್ಯವ್ರತಋಷಿಯ ವೃತ್ತಾಂತವು. ದೇವದತ್ತನ ಪುತ್ರಕಾಮೇಷ್ಟಿಯಾಗವು ....... | ೧೪೦-೧೫೬ |
| 11. | ಉತಥ್ಯಮುನಿಯ ವೃತ್ತಾಂತವು. ಸತ್ಯವ್ರತನು ಧರ್ಮಸಂಕಟದಿಂದ ಪಾರಾದುದು. ದೇವಿಯ ವಾಗ್ಬೀಜಮಂತ್ರೋಚ್ಚಾರಣೆಯಿಂದ ಸತ್ಯವ್ರತನು ಸಿದ್ಧಿಯನ್ನು ಪಡೆಯುವುದು | ೧೫೭-೧೭೩ |
| 12. | ಅಂಬಾಯಜ್ಞವಿಧಾನವು. ವಿಶ್ವರೂಪಾಚಾರ್ಯನ ವೃತ್ತಾಂತವು. ಮಾನಸಯಜ್ಞಕ್ರಮವು. ಸಮಾಧಿಯಿಂದ ಜೀವನ್ಮುಕ್ತಿಯು | ೧೭೪-೧೯೭ |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| 13. | ವಿಷ್ಣುವು ಆಕಾಶವಾಣಿಯಿಂದ ಉಪದೇಶಮಾಡಿದ ಅಂಬಾ ಯಜ್ಞದ ವಿವರಣೆಯು ....... | ೧೯೮-೨೧೨ |
| 14. | ಜನಮೇಜಯರಾಜನು ದೇವಿಯ ಮಹಿಮೆಯನ್ನು ಹೇಳ ಬೇಕೆಂದು ವ್ಯಾಸಮಹರ್ಷಿಯನ್ನು ಪ್ರಶ್ನಿಸುವುದು ; ಧ್ರುವ ಸಂಧಿರಾಜನ ವೃತ್ತಾಂತವು ....... | ೨೧೩-೨೨೫ |
| 15. | ದೌಹಿತ್ರರಿಗೆ ರಾಜ್ಯಪ್ರಾಪ್ತಿಗಾಗಿ ಯುಧಾಜಿತ್ ಮತ್ತು ವೀರ ಸೇನರಾಜರ ಪರಸ್ಪರ ಯುದ್ಧವು. ವೀರಸೇನನ ಮರಣ. ಶತ್ರುಜಿತನಿಗೆ ರಾಜ್ಯಾಭಿಷೇಕ ....... | ೨೨೬-೨೪೧ |
| 16. | ಧ್ರುವಸಂಧಿಯ ಮಗನಾದ ಸುದರ್ಶನನ ತಾಯಿಯು ಕೊಲೆ ಯನ್ನು ತಪ್ಪಿಸಿಕೊಂಡು ಭರದ್ವಾಜಋಷ್ಯಾಶ್ರಮದಲ್ಲಿ ಮಗ ನೊಡನೆ ಇರಲು ಅಲ್ಲೂ ಅವನನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ಯುಧಾಜಿದ್ರಾಜನು ಭಾರದ್ವಾಜಾಶ್ರಮಕ್ಕೆ ಹೋಗುವುದು. ಜಯದ್ರಥನ ಉದಾಹರಣೆಯು. ಭರದ್ವಾಜ ಋಷಿಯ ಪ್ರತಿಭಟನೆ ....... | ೨೪೨-೨೫೫ |
| 17. | ವಿಶ್ವಾಮಿತ್ರನ ವೃತ್ತಾಂತವು ಮತ್ತು ಸುದರ್ಶನನಿಗೆ ದೇವಿಯ ಬೀಜಾಕ್ಷರಪ್ರಾಪ್ತಿಯು ....... | ೨೫೬-೨೬೦ |
| 18. | ಕಾಶೀನಗರದ ಸುಬಾಹುರಾಜನು ತನ್ನ ಮಗಳಾದ ಶಶಿಕಲೆಗೆ ಸ್ವಯಂವರವನ್ನು ವಿರಚಿಸುವುದು ....... | ೨೬೧-೨೮೪ |
| 19. | ಸ್ವಯಂವರಕ್ಕೆ ರಾಜರುಗಳ ಮತ್ತು ಸುದರ್ಶನನ ಆಗಮನವು. ಇದಕ್ಕೆ ಯುಧಾಜಿತನ ಆಕ್ಷೇಪಣೆ. ಅದನ್ನು ಕೇರಳರಾಜನು ಪ್ರತಿಭಟಿಸಿದುದು ....... | ೨೮೫-೩೦೦ |

| ಅಧ್ಯಾಯ | ವಿಷಯ | ಪುಟಸಂಖ್ಯಾ |
| --- | --- | --- |
| 20. | ರಾಜರ ಅಪೇಕ್ಷೆಯಂತೆ ಸುಬಾಹುರಾಜನು ತನ್ನ ಮಗಳಾದ ಶಶಿಕಲೆಗೆ ಸ್ವಯಂವರಮಂಡಪಕ್ಕೆ ಬರುವಂತೆ ಬೋಧಿಸುವುದು. ಆದರೆ ಶಶಿಕಲೆಯು ಮುಂಚಿತವಾಗಿಯೇ ಸುದರ್ಶನನನ್ನು ಮನಸ್ಸಿನಲ್ಲಿ ವರಿಸಿದ್ದುದರಿಂದ ಆ ಮಾತನ್ನು ಕೇಳದೇ ಹೋದುದು ...... | ೨೦೧-೨೧೭ |
| 21. | ಸ್ವಯಂವರಕ್ಕಾಗಿ ನೆರದಿರುವ ರಾಜರ ಕೋಲಾಹಲವು ಮತ್ತು ಸುಬಾಹುರಾಜನ ಧರ್ಮಸಂಕಟವು. ಕಡೆಗೆ ಸುಬಾಹುವು ಶಶಿಕಲೆಯ ಮಾತಿಗೇ ಸಮ್ಮತಿಸುವುದು ...... | ೨೧೮-೨೨೨ |
| 22. | ಸುದರ್ಶನಶಶಿಕಲೆಯರ ವಿವಾಹವು. ಧರ್ಮವಿದ್ದಲ್ಲಿ ಜಯವು. | ೨೨೩-೨೪೯ |
| 23. | ಅರಣ್ಯದಲ್ಲಿ ನಡೆದ ಯುದ್ಧದಲ್ಲಿ ದೇವಿಯು ಪ್ರತ್ಯಕ್ಷಳಾಗಿ ಶತ್ರುರಾಜರನ್ನು ಸಂಹರಿಸುವುದು. ಕಾಶೀರಾಜನ ದೇವೀಸ್ತುತಿ | ೨೫೦-೨೬೫ |
| 24. | ದೇವೀಮಹಿಮೆಯ ವರ್ಣನವು. ಕಾಶಿಯಲ್ಲಿ ದುರ್ಗಾದೇವಿಯು ವಾಸಮಾಡಲು ಸಂಮತಿಸುವುದು. ಸುದರ್ಶನನ ದೇವೀಸ್ತುತಿ. ದೇವಿಯ ಚತುರ್ವ್ಯೂಹಸ್ವರೂಪವು. ಸುದರ್ಶನನಿಗೆ ಅಯೋಧ್ಯೆಯಲ್ಲಿ ಸ್ವಾಗತವು ...... | ೨೬೬-೨೭೯ |
| 25. | ಚಿಕ್ಕಮ್ಮನಿಗೆ ಸುದರ್ಶನನ ಸಮಾಧಾನೋಕ್ತಿ. ಸುಬಾಹುವು ದೇವಿಯನ್ನು ಸಂತೋಷಗೊಳಿಸಿ ಕಾಶಿಯಲ್ಲಿ ದೇವೀವಿಗ್ರಹವನ್ನು ಸ್ಥಾಪಿಸುವುದು ...... | ೨೮೦-೨೯೧ |
| 26. | ಜನಮೇಜಯರಾಜನಿಗೆ ವ್ಯಾಸಮಹರ್ಷಿಯು ಶರದೃತುವಿನ ನವರಾತ್ರಿಯಲ್ಲಿ ಮಾಡುವ ದೇವೀಪೂಜಾವಿಧಾನಕ್ರಮವನ್ನೂ ಮತ್ತು ದೇವೀವಿಗ್ರಹಸ್ವರೂಪ, ಪೂಜೆಯ ಪೂರ್ವಾಂಗಗಳು, ಸಾಮಗ್ರಿಗಳು ಇವೇ ಮುಂತಾದುವನ್ನೂ ವಿವರಿಸಿದುದು ಕುಮಾರೀಪೂಜಾಕ್ರಮ ...... | ೨೯೨-೪೦೬ |

| ಅಧ್ಯಾಯ | ವಿಷಯ | ಪುಟಸಂಖ್ಯಾ |
| --- | --- | --- |
| 27. | ಕುಮಾರೀಪೂಜೆಯಲ್ಲಿ ಆರಿಸಿಕೊಳ್ಳಬೇಕಾದ ಬಿಡಬೇಕಾದ ಕುಮಾರಿಯರ ಲಕ್ಷಣಗಳು. ಪರ್ತಕನ ವೃತ್ತಾಂತವು | ೪೦೭-೪೨೨ |
| 28. | ರಾಮಾಯಣ ಕಥಾಸಂಗ್ರಹ. ವಿಶ್ವಾಮಿತ್ರನ ಯಾಗರಕ್ಷಣ. ಅಹಲ್ಯಾಶಾಪವಿಮೋಚನ. ಶೂರ್ಪಣಖಾವಿಕರಣ. ಖರದೂಷಣರ ಸಂಹಾರ. ಸೀತಾಪಹರಣಕ್ಕಾಗಿ ರಾವಣನ ಆಗಮನ | ೪೨೩-೪೩೯ |
| 29. | ರಾಮನು ಸೀತಾಪಹರಣದಿಂದ ದುಃಖಿಸುತ್ತಿರುವುದು. ಲಕ್ಷ್ಮಣನ ಸಮಾಧಾನದ ಮತ್ತು ಭರವಸೆಯ ಮಾತುಗಳು. ರಾಮನ ಸಮಾಧಾನ. ನಾರದರ ಆಗಮನ. ಸೀತಾಯೋಗಕ್ಷೇಮಕಥನ. ರಾಮಾವತಾರದ ಉದ್ದೇಶಕಥನ. ಸೀತಾಸ್ವರೂಪಕಥನ | ೪೪೦-೪೬೩ |
| 30. | ನಾರದನು ರಾಮನಿಗೆ ಶರನ್ನವರಾತ್ರಿಯಲ್ಲಿ ದುರ್ಗಾದೇವೀವ್ರತವನ್ನು ಮಾಡಲು ಉಪದೇಶಮಾಡಿದುದು. ದೇವೀತತ್ತ್ವಸ್ವರೂಪವನ್ನು ವಿವರಿಸಿದುದು. ರಾಮನು ನವರಾತ್ರವ್ರತವನ್ನು ಆಚರಿಸಿದುದು. ದೇವಿಯು ಪ್ರತ್ಯಕ್ಷಳಾದುದು. ವಿಷ್ಣುವಿನ ಅದುವರೆಗಿನ ಏಳು ಅವತಾರಗಳ ಕಥೆಯನ್ನು ಸಂಗ್ರಹಿಸಿ ಹೇಳಿ, ರಾಮನ ಸ್ವರೂಪವನ್ನೂ ಅವನಿಗೆ ಮುಂದಿನ ಶುಭವನ್ನೂ ತಿಳಿಸಿ ಬುದ್ಧಿವಾದದಿಂದ ಸಮಾಧಾನ ಮಾಡುವುದು ....... | ೪೬೪-೪೮೦ |



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### || ಪ್ರಥಮೋಽಧ್ಯಾಯಃ ||

### ಮೊದಲನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಭಗವನ್ ಭವತಾ ಪ್ರೋಕ್ತಂ ಯಜ್ಞಮಂಬಾಭಿಧಂ ಮಹತ್ ।**
**ಸಾ ಕಾ ಕಥಂ ಸಮುತ್ಪನ್ನಾ ಕುತ್ರ ಕಸ್ಮಾಚ್ಚ ಕಿಂಗುಣಾ ॥೧॥**

ಸೌಂದರ್ಯೋದ್ದೇಶನೀತಿಕ್ರಮ ಇತಿ ಗಮಕೈರ್ಜ್ಞಾಪ್ಯತೇಽತ್ರ ಪ್ರಪಂಚೇ
ಸರ್ವಜ್ಞಾ ಸರ್ವಶಕ್ತಾ ಪ್ರಭವತಿ ಫಲದಾ ಸೃಷ್ಟಿರಕ್ಷಾಂತಕರ್ತ್ರೀ ।
ಸಾಮಗ್ರೀಸನ್ನಿವೇಶಾನ್ ಪ್ರಗತಿಸಮುಚಿತಾನ್ ಮುಕ್ತಿಸೋಪಾನಭೂತಾನ್
ತನ್ವಾನಾ ಜನ್ಮಮಾರ್ಗೇ ಜಗತಿ ಜನಿಮತಾಂ ಸ್ವಸ್ವಕರ್ಮಾನುರೂಪಾನ್ ॥

ಒಂದು ಗಡಿಯಾರವನ್ನು ನೋಡಿದ ಕೂಡಲೆ ನಾವು ಅದರ ಆಕಾರ, ಅಂದ, ಚಂದ, ಬಣ್ಣಗಳ ಸೌಂದರ್ಯವನ್ನೂ, ಕಾಲವನ್ನು ಗೊತ್ತುಮಾಡಿಕೊಳ್ಳುವ ಉದ್ದೇಶವು ಅದರಿಂದ ನೆರವೇರುತ್ತಿರುವುದನ್ನೂ, ಅದರ ಚಲನವಲನರೀತಿನೀತಿಗಳಲ್ಲಿನ ಕ್ರಮವನ್ನೂ, ಮನಗಂಡು ಅಭಿನಂದಿಸುತ್ತಾ, ಹಾಗೆಯೇ ಅಂತಹ ಉಪಯೋಗಕರವಾದ ವಸ್ತುವನ್ನು ರಚಿಸಿದವನ ಜಾಣತನ ಬುದ್ಧಿಶಕ್ತಿಗಳನ್ನೂ ಮನಗಾಣುತ್ತಾ ಆ ಚೈತನ್ಯವನ್ನು ಗೌರವಿಸುತ್ತೇವೆ. ಇದರಂತೆಯೇ ಈ ಪ್ರಪಂಚದಲ್ಲೂ ಗಿಡ ಮರ ಬಳ್ಳಿಗಳೂ, ಎಲೆ ಹೂವು ಹಣ್ಣುಗಳೂ, ಬೆಳ್ಳಿ ಚಿನ್ನ ರತ್ನ ಮುತ್ತುಗಳೂ, ಕಾಮನಬಿಲ್ಲು ಸಂಧ್ಯಾರಾಗ, ಚಂದ್ರೋದಯಗಳೂ, ಇವೇ ಮುಂತಾದುವು ಸೌಂದರ್ಯವನ್ನು ಬೀರುತ್ತಿವೆ. ಪ್ರಾಣಿಗಳ ದಿನಗಟ್ಟಲೆಯ ಜೀವನವೂ ತಿಂಡಿ ನೀರು ಬಟ್ಟೆ ಮನೆಗಳಿಂದ ಸಾಗುತ್ತಿರುತ್ತದೆ. ಸಸ್ಯವರ್ಗ, ಪ್ರಾಣಿವರ್ಗ, ಮಾನವವರ್ಗದ ದೇಹಗಳಲ್ಲಿ ಆತ್ಮನ ಗುಣಶಕ್ತಿಗಳ ಹೆಚ್ಚಿಗೆ, ಮೇಲ್ಮೆಗಳೂ ಹೆಚ್ಚುಹೆಚ್ಚಾಗಿ ಹೊರಹೊಮ್ಮುತ್ತಾ ಮುಂದು

ವರಿಯುತ್ತಿರುತ್ತವೆ. ಗ್ರಹಗಳ ಚಲನೆಯಲ್ಲೂ, ದೇಶ ಕಾಲ ನಿಮಿತ್ತ ಕ್ರಿಯಾ ಫಲ ಗಳಲ್ಲೂ, ಕ್ರಮವೂ ಗೊತ್ತಾಗುತ್ತದೆ. ಬಾಹ್ಯಪ್ರಕೃತಿಯೊಡನೆ ದೇವರೂ ಸಹಕರಿಸುವ ರೀತಿನೀತಿಕ್ರಮಗಳೂ ಕಾಣಬರುತ್ತವೆ. ಇವೇ ಮುಂತಾದ ಗುರುತುಗಳಿಂದ ಈ ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ನೆರವೇರಿಸುತ್ತಿರುವುದಕ್ಕೆ ಬೇಕಾದ ತಕ್ಕ ಎಲ್ಲ ತಿಳಿವಳಿಕೆ ಶಕ್ತಿಗಳನ್ನೂ ಪಡೆದಿರುವ, ಜೀವರಿಗೆ ಅವರವರ ಕರ್ಮಗಳಿಗೆ ತಕ್ಕಂತೆ ಫಲಗಳನ್ನು ಆಯಾ ಕಾಲ ದೇಶಗಳಲ್ಲಿ ತಪ್ಪದೆ ಕೊಡಬಲ್ಲ ಪ್ರಭುವು ಒಬ್ಬನು ಇದ್ದಾನೆಂದೂ, (ಇದು ತನ್ನಷ್ಟಕ್ಕೆ ತಾನೇ ಸ್ವಾಭಾವಿಕವಾಗಿ ಆಗಲಾರದು. ಏಕೆಂದರೆ, ಜೀವರು ಭಿನ್ನ ಭಿನ್ನವಾದ ಅವರವರ ಸಂಸ್ಕೃತಿಯ ಮಟ್ಟಗಳಿಗೆ ತಕ್ಕಂತೆ ಅಭಿರುಚಿ ಮತ್ತು ಪ್ರವೃತ್ತಿಗಳುಳ್ಳವರಾಗಿರುತ್ತಾರೆ. ಆದುದರಿಂದ ಇವೆಲ್ಲಕ್ಕೂವ್ಯವಸ್ಥಾಪಕನು ಒಬ್ಬ ನಿರಬೇಕೆಂದೂ) ಗೊತ್ತುಮಾಡಿಕೊಳ್ಳಬಹುದಾಗಿದೆ. ಇಂತಹ ಚೈತನ್ಯವೇ ಈಶ್ವರನು. ಅವನ ಇಚ್ಛಾಜ್ಞಾನ ಕ್ರಿಯಾಶಕ್ತಿಯೇ ಮಾಯೆಯು. ದೇವರು ಈ ಜಗತ್ತಿನಲ್ಲಿ ತಮ್ಮ ತಮ್ಮ ಸತ್ಕರ್ಮದುಷ್ಕರ್ಮಗಳಿಗೆ ತಕ್ಕಂತಹ ಜನ್ಮಗಳನ್ನು ಪಡೆಯುತ್ತಿರುವ ಜೀವರಿಗೆ ಅವರ ಜನ್ಮಗಳ ಮಾರ್ಗದಲ್ಲಿ, ಈ ಸಂಸಾರಯಾತ್ರೆಯಲ್ಲಿ, ಬೇಕಾಗುವ ಪದಾರ್ಥಗಳನ್ನೂ, ಜನರನ್ನೂ, ಅವರವರ ಸಮಾಗಮ ವಿಯೋಗ ಮುಂತಾದ ಸನ್ನಿವೇಶಗಳನ್ನೂ, ಆಯಾದೇಶಕಾಲಗಳಲ್ಲಿ ಒದಗುವಂತೆ ಮಾಡುತ್ತಿರುತ್ತಾನೆ. ಜೀವರು ತಮ್ಮ ಕರ್ಮಾನುಸಾರವಾಗಿ ಸುಖದುಃಖರೂಪವಾದ ಫಲಗಳನ್ನು ಪಡೆಯುತ್ತಿರುತ್ತಾರಾದುದರಿಂದ ಅವರ ಹೊಣೆಗಾರಿಕೆಯೂ ಇರುತ್ತದೆ. ಇದರಿಂದ ದೇವರಿಗೆ ವೈಷಮ್ಯ, ಪಕ್ಷಪಾತ, ನೈರ್ಘೃಣ್ಯ ಮುಂತಾದ ದೋಷಗಳೂ ತಗುಲುವು ದಿಲ್ಲವು. ಈ ರೀತಿಯಲ್ಲಿ ಜೀವರೂ ಸಹ ತಮ್ಮ ಪ್ರಗತಿಯನ್ನು ಕ್ರಮವಾಗಿ ಸಾಧಿಸಿ ಕೊಳ್ಳುತ್ತಾ ಮುಂದುವರಿಯುತ್ತಿರುತ್ತಾರೆ. ಹಾಗೆಯೇ ವಿವೇಕವಿಮರ್ಶೆಗಳಿಂದ ಕಡೆಗೆ ನಿಷ್ಕಾಮಕರ್ಮಾಚರಣೆಯಿಂದ ಚಿತ್ತಶುದ್ಧಿಯನ್ನೂ ಪಡೆದು ಪುಣ್ಯಪಾಪಗಳೆರಡೂ ವಿಲಯವಾದ ಮೇಲೆ ಮುಕ್ತಿಯನ್ನು ಪಡೆಯಲು ಈ ಜನ್ಮಗಳು ಸೋಪಾನಗಳಂತಿರು ತ್ತವೆ. ಹೀಗೆ ಕರ್ತೃತ್ವ, ಭೋಕ್ತೃತ್ವ, ಜನನ, ಮರಣ, ಸುಖದುಃಖಾನುಭವ ಇವುಗಳ ಸುಳಿಯಲ್ಲಿ ಸುತ್ತುತ್ತಿರುವಿಕೆಗೆ ಸಂಸಾರವೆಂದು ಹೆಸರು. ಈ ಸಂಸಾರದ ನಿರ್ಬಂಧದುಃಖದಿಂದ ಬಿಡುಗಡೆಯೇ ಮುಕ್ತಿಯು. ಈ ಪರಮಪುರುಷಾರ್ಥವಾದ ಶ್ರೇಯಸ್ಸನ್ನು ಪಡೆಯಲು ಎಲ್ಲರಿಗೂ ಕಾಲಕ್ರಮದಲ್ಲಿ ತಕ್ಕ ಸೌಕರ್ಯಗಳನ್ನು ಒದಗಿಸುವ ಚೈತನ್ಯವನ್ನೇ ಈಶ್ವರನೆಂದು ಶಾಸ್ತ್ರಗಳಲ್ಲೂ ಪುರಾಣಗಳಲ್ಲೂ ಆಗಾಗ್ಗೆ ವಿವರಿಸಿ ಹೇಳಿದೆ. ಈ ಈಶ್ವರನೂ ಶಕ್ತಿಯೂ ಅವಿನಾಭಾವದಿಂದ ಅಭಿನ್ನರಾಗಿದ್ದಾರೆ.

ಜನಮೇಜಯರಾಜನು ಹೇಳಿದನು--ಓ ಪೂಜ್ಯನಾದ ವ್ಯಾಸಮುನಿಯೇ, ನೀನು ಅಂಬಾ (ಮಾತೆ, ಶಕ್ತಿ, ದೇವೀ) ಎಂಬ ಹೆಸರುಳ್ಳ ಅತ್ಯಂತಪೂಜನೀಯವಾದ ದೊಡ್ಡ ತತ್ತ್ವ ಒಂದನ್ನು ಹೇಳಿದೆಯಲ್ಲಾ, ಆ ಜಗನ್ಮಾತೆಯು ಎಂತಹ ಸ್ವರೂಪವುಳ್ಳವಳು? ಎಲ್ಲಿ, ಹೇಗೆ, ಯಾರಿಂದ ಉತ್ಪನ್ನಳಾದಳು? ಅವಳೆಂತಹ ಗುಣವುಳ್ಳವಳು?

**ಕೀದೃಶಶ್ಚ ಮಖಸ್ತಸ್ಯಾಃ ಸ್ವರೂಪಂ ಕೀದೃಶಂ ತಥಾ ।**
**ವಿಧಾನಂ ವಿಧಿವದ್ಬ್ರೂಹಿ ಸರ್ವಜ್ಞೋಽಸಿ ದಯಾನಿಧೇ ॥೨॥**

ಅವಳನ್ನು ತೃಪ್ತಿಪಡಿಸುವುದಕ್ಕೆ ಮಾಡುವ ಯಜ್ಞವು ಎಂತಹುದು? ಮತ್ತು ಆ ಯಜ್ಞದ ಸ್ವರೂಪವು ಎಂತಹುದು? ಕರುಣಾಶಾಲಿಯಾದ ಓ ವ್ಯಾಸಮುನಿಯೇ, ನೀನು ಎಲ್ಲವನ್ನೂ ತಿಳಿದವನಾಗಿರುತ್ತೀಯೆ. ಆದುದರಿಂದ ಆ ಯಾಗಕ್ರಮವನ್ನು ಶಾಸ್ತ್ರದಲ್ಲಿ ಹೇಳಿರುವಂತೆಯೇ ನಮಗೆ ತಿಳುಹಿಸು.

**ಬ್ರಹ್ಮಾಂಡಸ್ಯ ತಥೋತ್ಪತ್ತಿಂ ವದ ವಿಸ್ತರತಸ್ತಥಾ ।**
**ಯಥೋಕ್ತಂ ಯಾದೃಶಂ ಬ್ರಹ್ಮನ್ನಖಿಲಂ ವೇತ್ಸಿ ಭೂಸುರ ॥೩॥**

ಓ ಬ್ರಾಹ್ಮಣೋತ್ತಮನೇ, ಈ ಪ್ರಪಂಚದ ಉತ್ಪತ್ತಿಯ ಕ್ರಮ, ರೀತಿ ಇವುಗಳನ್ನು ವಿಸ್ತಾರವಾಗಿ ಹೇಳು. ನಾನು ಕೇಳಿರುವ ಸೃಷ್ಟಿಸ್ಥಿತಿಲಯಮುಂತಾದುವು ಹೇಗೆ ಆಗುತ್ತಿರುವುವೋ, ಶಾಸ್ತ್ರಗಳಲ್ಲಿ ಆ ವಿಷಯಗಳನ್ನು ಹೇಗೆ ಹೇಳಿದೆಯೋ, ಅವೆಲ್ಲವನ್ನೂ ನೀನು ತಿಳಿದಿರುತ್ತೀಯೆ.

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ತ್ರಯೋ ದೇವಾ ಮಯಾ ಶ್ರುತಾಃ ।**
**ಸೃಷ್ಟಿಪಾಲನಸಂಹಾರಕಾರಕಾಃ ಸಗುಣಾಸ್ತ್ವಮೀ ॥೪॥**

ಬ್ರಹ್ಮ, ವಿಷ್ಣು, ರುದ್ರರೆಂಬ ಮೂವರು ತ್ರಿಮೂರ್ತಿಗಳೆಂದು ಪ್ರಸಿದ್ಧರಾದ, ಪ್ರಮುಖರಾದ ದೇವತೆಗಳೆಂಬುದನ್ನು ನಾನು ಕೇಳಿರುತ್ತೇನೆ. ಅಲ್ಲದೆ, ಅವರು ಈ ಎಲ್ಲ ಪ್ರಪಂಚದ ಸೃಷ್ಟಿ, ಪಾಲನೆ, ಮತ್ತು ನಾಶ ಇವು ಮೂರಕ್ಕೆ ಪ್ರತ್ಯೇಕವಾಗಿ, ಕ್ರಮವಾಗಿ ಕಾರಣರೆಂದೂ, ಆದುದರಿಂದಲೇ ಅಂತಹ ಕಾರ್ಯಗಳನ್ನು ನೆರವೇರಿಸಲು ಬೇಕಾದ ಶಕ್ತಿ, ವಿವೇಕ, ಮುಂತಾದ ಗುಣಗಳಿಂದ ಕೂಡಿರುತ್ತಾರೆಂದೂ ಕೇಳಿರುತ್ತೇನೆ.

**ಸ್ವತಂತ್ರಾಸ್ತೇ ಮಹಾತ್ಮಾನಃ ಪಾರಾಶರ್ಯ ವದಸ್ವ ಮೇ ।**
**ಆಹೋಸ್ವಿತ್ಪರತಂತ್ರಾಸ್ತೇ ಶ್ರೋತುಮಿಚ್ಛಾಮಿ ಸಾಂಪ್ರತಂ ॥೫॥**

ಓ ಪರಾಶರಮುನಿಯ ಪುತ್ರನಾದ ವ್ಯಾಸಮುನಿಯೇ, ಮಹಾಮಹಿಮೆಯುಳ್ಳ ಆ ತ್ರಿಮೂರ್ತಿಗಳು ಸ್ವತಂತ್ರರೋ ? ಅಥವಾ ಪರತಂತ್ರರೋ, ಎಂದರೆ, ಇನ್ನೊಬ್ಬರಿಗೆ ಅಧೀನರೋ ? ಇವೇ ಮೊದಲಾದ ವಿಷಯಗಳನ್ನು ಈಗ ನಾನು ಕೇಳಲು ಅಪೇಕ್ಷಿಸುತ್ತೇನೆ. ನನಗೆ ಅವನ್ನು ತಿಳಿಯಹೇಳು.

**ಮೃತ್ಯುಧರ್ಮಾಶ್ಚ ತೇ ನೋ ವಾ ಸಚ್ಚಿದಾನಂದರೂಪಿಣಃ ।**
**ಅಧಿಭೂತಾದಿಭಿರ್ಯುಕ್ತಾ ನ ವಾ ದುಃಖೈಸ್ತ್ರಿಧಾತ್ಮಕೈಃ ॥೬॥**

ಅವರು ಇತರ ಪ್ರಾಣಿಗಳಂತೆ ಮರಣಕ್ಕೆ ಒಳಪಡುವರೋ, ಅಥವಾ ಸತ್ಯ ಜ್ಞಾನ ಮತ್ತು ಆನಂದ ಇವುಗಳ ಸ್ವರೂಪರೋ ? ಅವರಿಗೆ ನಮ್ಮಂತೆ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ಮೂರುಬಗೆಯ ದುಃಖಗಳು ಇರುವುವೋ ಇಲ್ಲವೋ ?

**ಕಾಲಸ್ಯ ವಶಗಾ ನೋ ವಾ ತೇ ಸುರೇಂದ್ರಾ ಮಹಾಬಲಾಃ ।**
**ಕಥಂ ತೇ ವೈ ಸಮುತ್ಪನ್ನಾಃ ಕಸ್ಮಾದಿತಿ ಚ ಸಂಶಯಃ ॥೭॥**

ತುಂಬ ಬಲಿಷ್ಠರಾದ ಮತ್ತು ದೇವತೆಗಳಿಗೂ ಒಡೆಯರಾದ ಅವರು ಕಾಲಕ್ಕೆ ಅಧೀನರೋ, ಅಲ್ಲವೋ ? ಅಲ್ಲದೆ, ಆ ತ್ರಿಮೂರ್ತಿಗಳು ಹೇಗೆ, ಯಾರಿಂದ, ಏತಕ್ಕೋಸ್ಕರವಾಗಿ ಉತ್ಪನ್ನರಾದರು ? ಎಂದು ನನಗೆ ಸಂದೇಹವುಂಟಾಗಿರುತ್ತದೆ.

**ಹರ್ಷಶೋಕಯುತಾಸ್ತೇ ವೈ ನಿದ್ರಾಲಸ್ಯಸಮನ್ವಿತಾಃ ।**
**ಸಪ್ತಧಾತುಮಯಾಸ್ತೇಷಾಂ ದೇಹಾಃ ಕಿಂ ವಾಽನ್ಯಥಾ ಮುನೇ ॥೮॥**

ಓ ವ್ಯಾಸಮುನಿಯೇ, ಅವರೂ, ನಮ್ಮ ಹಾಗೆಯೇ ಸುಖ, ದುಃಖ, ಸಂತೋಷ, ವ್ಯಸನ ಇವುಗಳಿಂದಲೂ, ನಿದ್ರೆ, ಸೋಮಾರಿತನ, ಔದಾಸೀನ್ಯ, ಇವುಗಳಿಂದಲೂ ಕೂಡಿರುವರೋ ಇಲ್ಲವೋ ? ನಮಗಿರುವಂತೆ ಅವರಿಗೂ ರಕ್ತವೇ ಮೊದಲಾದ ಏಳು ಧಾತುಗಳಿಂದ ಕೂಡಿರುವ ಶರೀರವಿದೆಯೋ, ಇಲ್ಲವೋ ?

**ಕೈರ್ದ್ರವ್ಯೈರ್ನಿರ್ಮಿತಾಸ್ತೇ ವೈ ಕೈರ್ಗುಣೈರಿಂದ್ರಿಯೈಸ್ತಥಾ ।**
**ಭೋಗಶ್ಚ ಕೀದೃಶಸ್ತೇಷಾಂ ಪ್ರಮಾಣಮಾಯುಷಸ್ತಥಾ ॥೯॥**

ಹಾಗಿಲ್ಲದಿದ್ದರೆ, ಆ ತ್ರಿಮೂರ್ತಿಗಳ ದೇಹಗಳು ಯಾವ ಪದಾರ್ಥಗಳಿಂದ ಸೃಷ್ಟಿಸಲ್ಪಟ್ಟಿವೆ? ಮತ್ತು, ಎಂತಹ ಗುಣಗಳಿಂದ ಮತ್ತು ಇಂದ್ರಿಯಗಳಿಂದ ಅವರು ಕೂಡಿದವರಾಗಿದ್ದಾರೆ? ಅವರು ಅನುಭವಿಸುವ ಸುಖವು ಎಂತಹುದು? ಅವರ ಆಯುಸ್ಸಿನ ಪರಿಮಿತಿಯೆಷ್ಟು?

**ನಿವಾಸಸ್ಥಾನಮಪ್ಯೇಷಾಂ ವಿಭೂತಿಂ ಚ ವದಸ್ವ ಮೇ ।**
**ಶ್ರೋತುಮಿಚ್ಛಾಮ್ಯಹಂ ಬ್ರಹ್ಮನ್ ವಿಸ್ತರೇಣ ಕಥಾಮಿಮಾಂ ॥೧೦॥**

ಅವರು ವಾಸಮಾಡುವ ಸ್ಥಳವನ್ನೂ, ಅವರು ಪಡೆದಿರುವ ಐಶ್ವರ್ಯಮಹಿಮೆಯನ್ನೂ ನನಗೆ ವಿವರಗಳೊಡನೆ ಹೇಳು. ಓ ಬ್ರಾಹ್ಮಣಶ್ರೇಷ್ಠನೇ, ಈ ಕಥೆಯನ್ನು ನಾನು ವಿಸ್ತಾರವಾಗಿ ಕೇಳಲಿಚ್ಛಿಸುತ್ತೇನೆ.

॥ ವ್ಯಾಸ ಉವಾಚ ॥

**ದುರ್ಗಮಃ ಪ್ರಶ್ನಭಾರೋಽಯಂ ಕೃತೋ ರಾಜನ್ ತ್ವಯಾಧುನಾ ।**
**ಬ್ರಹ್ಮಾದೀನಾಂ ಸಮುತ್ಪತ್ತಿಃ ಕಸ್ಮಾದಿತಿ ಮಹಾಮತೇ ॥೧೧॥**

ವ್ಯಾಸಮುನಿಯು ಹೇಳಿದನು—ಎಲೈ ಮಹಾಬುದ್ಧಿಶಾಲಿಯಾದ ರಾಜನೇ, ಬ್ರಹ್ಮನೇ ಮೊದಲಾದ ತ್ರಿಮೂರ್ತಿಗಳ ಉತ್ಪತ್ತಿಯು ಯಾರಿಂದ, ಏಕೆ ಆಯಿತು? ಎಂದು ಮೊದಲಾಗಿ ನೀನು ಅನೇಕ ದೊಡ್ಡ ಪ್ರಶ್ನೆಗಳ ಹೊರೆಯನ್ನೇ ಕೇಳಿ, ಇವಕ್ಕೆ ಸರಿಯಾದ ಉತ್ತರಗಳನ್ನು ಸಮಂಜಸವಾಗಿರುವಂತೆ ಹೇಳುವ ಭಾರವನ್ನು ನನ್ನ ಮೇಲೆ ಹಾಕಿರುತ್ತೀಯೆ.

**ಏತದೇವ ಮಯಾ ಪೂರ್ವಂ ಪೃಷ್ಟೋಽಸೌ ನಾರದೋ ಮುನಿಃ ।**
**ವಿಸ್ಮಿತಃ ಪ್ರತ್ಯುವಾಚೇದಮುತ್ಥಿತಃ ಶೃಣು ಭೂಪತೇ ॥೧೨॥**

ಹಿಂದೆ ನಾನೂ ಇಂತಹ ಪ್ರಶ್ನೆಗಳನ್ನೇ ನಾರದಮುನಿಯನ್ನು ಕೇಳಿದೆನು. ಆ ಮುನಿಯು ಆಶ್ಚರ್ಯಪಟ್ಟು, ತುಂಬ ಎಚ್ಚರಿಕೆಯುಳ್ಳವನಾಗಿ ಮುಂದೆ ಹೇಳುವಂತೆ ಉತ್ತರವನ್ನು ಹೇಳಿದನು. ಎಲೈ ರಾಜನೇ, ಅದನ್ನು ನಾನು ನಿನಗೆ ಹೇಳುವೆನು. ಎಚ್ಚರಿಕೆಯಿಂದ ಸಾವಧಾನವಾಗಿ ಕೇಳು.

**ಕಸ್ಮಿಂಶ್ಚ ಸಮಯೇ ಚಾಹಂ ಗಂಗಾತೀರೇ ಸ್ಥಿತಂ ಮುನಿಂ ।**
**ಅಪಶ್ಯಂ ನಾರದಂ ಶಾಂತಂ ಸರ್ವಜ್ಞಂ ವೇದವಿತ್ತಮಂ ॥೧೩॥**

ಒಂದಾನೊಂದು ಸಮಯದಲ್ಲಿ ನಾನು ಗಂಗಾನದಿಯ ದಡದಲ್ಲಿ ಶಾಂತವಾದ ಸ್ವಭಾವವುಳ್ಳ, ವೇದವನ್ನು ಬಲ್ಲವರಲ್ಲಿ ಶ್ರೇಷ್ಠನಾದ, ಮತ್ತು ಸರ್ವಜ್ಞನಾದ ನಾರದ ಮುನಿಯನ್ನು ನೋಡಿದೆನು.

**ದೃಷ್ಟ್ವಾಽಹಂ ಮುದಿತೋ ಗತ್ವಾ ಪಾದಯೋರಪತಂ ಮುನೇಃ ।**
**ತೇನಾಜ್ಞಪ್ತಃ ಸಮೀಪೇಽಸ್ಯ ಸಂವಿಷ್ಟಶ್ಚ ವರಾಸನೇ ॥೧೪॥**

ಆ ಮುನಿಯನ್ನು ನೋಡಿ ಸಂತುಷ್ಟನಾಗಿ, ನಾನು ಅವನಲ್ಲಿಗೆ ಹೋಗಿ ಆತನ ಪಾದಗಳಿಗೆ ನಮಸ್ಕರಿಸಿದೆನು. ಮತ್ತು ಅವನ ಅಪ್ಪಣೆಯಿಂದ ಅವನ ಸಮೀಪ ದಲ್ಲಿಯೇ ಉತ್ತಮವಾದೊಂದು ಆಸನದಲ್ಲಿ ಕುಳಿತೆನು.

**ಶ್ರುತ್ವಾ ಕುಶಲವಾರ್ತಾಂ ವೈ ತಮಪೃಚ್ಛಂ ವಿಧೇಃ ಸುತಂ ।**
**ನಿವಿಷ್ಟಂ ಜಾಹ್ನವೀತೀರೇ ನಿರ್ಜನೇ ಸೂಕ್ಷ್ಮವಾಲುಕೇ ॥೧೫॥**

ನಾನು ಕುಶಲಪ್ರಶ್ನೆಯನ್ನು ಕೇಳಿದ ಮೇಲೆ, ಗಂಗಾನದಿಯ ದಡದಲ್ಲಿ ಜನರ ಸುಳಿವಿಲ್ಲದ ಮತ್ತು ಸಣ್ಣಮರಳಿನಿಂದ ಕೂಡಿ ಮೃದುವಾಗಿರುವ, ಉತ್ತಮವೂ, ಶಾಂತವೂ ಆಗಿರುವ ಆ ಪ್ರದೇಶದಲ್ಲಿ ಕುಳಿತಿರುವ ಬ್ರಹ್ಮನ ಮಾನಸಪುತ್ರನಾದ ಆ ನಾರದನನ್ನು ಕುರಿತು ಹೀಗೆ ಪ್ರಶ್ನಿಸಿದೆನು.

**ಮುನೇಽತಿವಿತತಸ್ಯಾಸ್ಯ ಬ್ರಹ್ಮಾಂಡಸ್ಯ ಮಹಾಮತೇ ।**
**ಕಃ ಕರ್ತಾ ಪರಮಃ ಪ್ರೋಕ್ತಸ್ತನ್ಮೇ ಬ್ರೂಹಿ ವಿಧಾನತಃ ॥೧೬॥**

ತುಂಬ ಬುದ್ಧಿವಂತನಾದ ಎಲೈ ನಾರದಮುನಿಯೇ, ಅತ್ಯಂತ ವಿಸ್ತಾರವಾದ ಈ ಪ್ರಪಂಚಕ್ಕೆ ಮುಖ್ಯನಾದ ಮೇಲಾದ ಕರ್ತೃವು ಯಾರು ? ಇದನ್ನು ಕ್ರಮವಾಗಿ ನನಗೆ ಹೇಳು.

**ಕಸ್ಮಾದೇತತ್ಸಮುತ್ಪನ್ನಂ ಬ್ರಹ್ಮಾಂಡಂ ಮುನಿಸತ್ತಮ ।**
**ಅನಿತ್ಯಂ ವಾ ತಥಾ ನಿತ್ಯಂ ತದಾಚಕ್ಷ್ವ ದ್ವಿಜೋತ್ತಮ ॥೧೭॥**

ಓ ಮುನಿಶ್ರೇಷ್ಠನೇ, ಈ ಜಗತ್ತು ಯಾರಿಂದ ಹುಟ್ಟಿತು ? ಇದು ನಿತ್ಯ ವಾದುದೋ, ಎಂದರೆ ಯಾವಾಗಲೂ ಇರುವುದೋ ಅಥವಾ ಅನಿತ್ಯವೋ ಎಂದರೆ ನಾಶವಾಗುವಂತಹುದೋ ? ಓ ಬ್ರಾಹ್ಮಣೋತ್ತಮನೇ ಅದನ್ನು ನನಗೆ ತಿಳಿಯಹೇಳು.

**ಏಕಕರ್ತೃಕಮೇತದ್ವಾ ಬಹುಕರ್ತೃಕಮನ್ಯಥಾ ।**
**ಅಕರ್ತೃಕಂ ನ ಕಾರ್ಯಂ ಸ್ಯಾದ್ವಿರೋಧೋಽಯಂ ವಿಭಾತಿ ಮೇ ॥೧೮॥**

ಇದನ್ನು ಸೃಷ್ಟಿಸಿದ ಕರ್ತೃವು ಒಬ್ಬನೇ ಅಥವಾ ಅನೇಕ ಕರ್ತೃಗಳು ಸೃಷ್ಟಿಸಿದರೇ ? ಕರ್ತೃವಿಲ್ಲದೆಯೇ ಯಾವ ವಸ್ತುವೂ ಹುಟ್ಟಲಾರದು. ಇಲ್ಲಿ ಸ್ಪಷ್ಟವಾಗಿ ಕರ್ತೃವು ತೋರುವುದಿಲ್ಲ. ಆದುದರಿಂದ ನನಗೆ ಇದು ವಿರುದ್ಧವಾಗಿರುವಂತೆ ತೋರುತ್ತದೆ.

**ಇತಿ ಸಂದೇಹಸಂದೋಹೇ ಮಗ್ನಂ ಮಾಂ ತಾರಯಾಧುನಾ ।**
**ವಿಕಲ್ಪಕೋಟೀಃ ಕುರ್ವಾಣಂ ಸಂಸಾರೇಽಸ್ಮಿನ್ಸುವಿಸ್ತರೇ ॥೧೯॥**

ಈ ವಿಸ್ತಾರವಾದ ಸಂಸಾರದ ವಿಷಯವಾಗಿ ಕೋಟ್ಯಂತರ ವಿಕಲ್ಪಗಳನ್ನು ಎಂದರೆ ಸಂಶಯಗಳನ್ನು ಮಾಡುತ್ತಲಿರುವ ಕಾರಣದಿಂದ ಸಂಶಯಗಳ ಸಮೂಹವೆಂಬ ಸಾಗರದಲ್ಲಿ ಮುಳುಗಿರುವ ನನ್ನನ್ನು ಈಗ ಆ ಸಂಶಯಗಳನ್ನು ನಿವಾರಣೆ ಮಾಡುವುದರಿಂದ ಉದ್ಧಾರಮಾಡು.

**ಬ್ರುವಂತಿ ಶಂಕರಂ ಕೇಚಿನ್ಮತ್ವಾ ಕಾರಣಕಾರಣಂ ।**
**ಸದಾಶಿವಂ ಮಹಾದೇವಂ ಪ್ರಲಯೋತ್ಪತ್ತಿವರ್ಜಿತಂ ॥೨೦॥**

ಕೆಲವರು ಶಂಕರನನ್ನು ನಾನಾಬಗೆಯ ಕಾರ್ಯಕಾರಣಗಳಿಗೂ ಕಾರಣನೆಂದು ತಿಳಿದು, ಅವನನ್ನು ಯಾವಾಗಲೂ ಮಂಗಳಸ್ವರೂಪನೆಂದೂ ದೊಡ್ಡ ದೇವನೆಂದೂ ನಾಶ, ಉತ್ಪತ್ತಿ, ಇವುಗಳಿಲ್ಲದವನೆಂದೂ ಹೇಳುತ್ತಿದ್ದಾರೆ.

**ಆತ್ಮಾರಾಮಂ ಸುರೇಶಂ ಚ ತ್ರಿಗುಣಂ ನಿರ್ಮಲಂ ಹರಂ ।**
**ಸಂಸಾರತಾರಕಂ ನಿತ್ಯಂ ಸೃಷ್ಟಿಸ್ಥಿತ್ಯಂತಕಾರಣಂ ॥೨೧॥**

ಆ ಪರಶಿವನು ತನ್ನಲ್ಲಿಯೇ ತಾನು ವಿಹರಿಸುವವನೆಂದೂ, ದೇವತೆಗಳಿಗೆಲ್ಲಾ ಒಡೆಯನೆಂದೂ ಸತ್ತ್ವರಜಸ್ತಮೋಗುಣಗಳಿಂದ ಕೂಡಿದವನೆಂದೂ, ಈ ಸಂಸಾರದಿಂದ ಧಾರ್ಮಿಕರಾದ ಭಕ್ತರೆಲ್ಲರನ್ನೂ ಉದ್ಧರಿಸತಕ್ಕವನೆಂದೂ ನಿತ್ಯನೆಂದೂ ಜಗತ್ತಿನ ಸೃಷ್ಟಿ, ಪಾಲನೆ, ನಾಶ ಇವುಗಳಿಗೆ ಕಾರಣನೆಂದೂ, ಈಶ್ವರನೆಂದೂ ಹೇಳುತ್ತಾರೆ.

**ಅನ್ಯೇ ವಿಷ್ಣುಂ ಸ್ತುವಂತ್ಯೇನಂ ಸರ್ವೇಷಾಂ ಪ್ರಭುಮೀಶ್ವರಂ ।**
**ಪರಮಾತ್ಮಾನಮವ್ಯಕ್ತಂ ಸವಶಕ್ತಿಸಮನ್ವಿತಂ ॥೨೨॥**

ಇನ್ನು ಕೆಲವರು ಈ ವಿಷ್ಣುವನ್ನು, ಅವನು ಎಲ್ಲರಿಗೂ ಒಡೆಯನೆಂದೂ, ಆದುದರಿಂದಲೇ ಈಶ್ವರನೆಂದೂ, ಪರಮಾತ್ಮನೆಂದೂ, ಸಾಮಾನ್ಯದೃಷ್ಟಿಗೆ ಗೋಚರ ನಲ್ಲವೆಂದೂ ಸಕಲ ಶಕ್ತಿಗಳಿಂದಲೂ ಕೂಡಿದವನೆಂದೂ ತಿಳಿದು ಸ್ತೋತ್ರಮಾಡು ತ್ತಾರೆ.

**ಭುಕ್ತಿದಂ ಮುಕ್ತಿದಂ ಶಾಂತಂ ಸರ್ವಾದಿಂ ಸರ್ವತೋಮುಖಂ ।**
**ವ್ಯಾಪಕಂ ವಿಶ್ವಶರಣಮನಾದಿನಿಧನಂ ಹರಿಂ ॥೨೩॥**

ಆ ವಿಷ್ಣುವು ಸಕಲಭೋಗಗಳನ್ನು ಕೊಡುವವನೆಂದೂ, ಶಾಂತನೆಂದೂ, ಎಲ್ಲಕ್ಕೂ ಮೊದಲಿನವನೆಂದೂ, ಎಲ್ಲೆಡೆಯಲ್ಲಿಯೂ ಇರುವ ಮುಖವುಳ್ಳವನೆಂದೂ, ಆದುದರಿಂದಲೇ ಎಲ್ಲೆಡೆಯಲ್ಲಿಯೂ ವ್ಯಾಪಿಸಿಕೊಂಡಿರುವವನೆಂದೂ, ಪ್ರಪಂಚಕ್ಕೆಲ್ಲ ರಕ್ಷಕನೆಂದೂ, ಉತ್ಪತ್ತಿನಾಶಗಳಿಲ್ಲದವನೆಂದೂ ಪಾಪಗಳನ್ನು ಹೋಗಲಾಡಿಸತಕ್ಕವ ನೆಂದೂ ಹೇಳುತ್ತಾರೆ.

**ಧಾತಾರಂ ಚ ತಥಾ ಚಾನ್ಯೇ ಬ್ರುವಂತಿ ಸೃಷ್ಟಿಕಾರಣಂ ।**
**ತಮೇವ ಸರ್ವವೇತ್ತಾರಂ ಸರ್ವಭೂತಪ್ರವರ್ತಕಂ ॥೨೪॥**

ಇನ್ನು ಕೆಲವರು ಬ್ರಹ್ಮನನ್ನು ಜಗತ್ತಿನ ಉತ್ಪತ್ತಿಗೆ ಕಾರಣನೆಂದು ಹೇಳು ವರು. ಅವರು, ಅವನನ್ನು ಎಲ್ಲವನ್ನೂ ತಿಳಿದವನೆಂದೂ, ಪಾಂಚಭೌತಿಕವಾಗಿ ಇರುವ ಎಲ್ಲ ಚರಾಚರವಸ್ತುಗಳನ್ನು ಪ್ರೇರಿಸುವವನೆಂದೂ ಹೇಳುತ್ತಾರೆ.

**ಚತುರ್ಮುಖಂ ಸುರೇಶಾನಂ ನಾಭಿಪದ್ಮಭವಂ ವಿಭುಂ ।**
**ಸ್ರಷ್ಟಾರಂ ಸರ್ವಲೋಕಾನಾಂ ಸತ್ಯಲೋಕನಿವಾಸಿನಂ ॥೨೫॥**

ಆ ಬ್ರಹ್ಮನು ನಾಲ್ಕು ಮುಖಗಳುಳ್ಳವನೆಂದೂ ದೇವತೆಗಳಿಗೆ ಒಡೆಯನೆಂದೂ, ವಿಷ್ಣುವಿನ ನಾಭಿಕಮಲದಿಂದ ಹುಟ್ಟಿದವನೆಂದೂ, ಎಲ್ಲಾ ಕಡೆಯಲ್ಲಿಯೂ ವ್ಯಾಪಕ ನೆಂದೂ, ಎಲ್ಲ ಲೋಕಗಳನ್ನು ಸೃಷ್ಟಿಸತಕ್ಕವನೆಂದೂ ಸತ್ಯವೆಂಬ ಹೆಸರುಳ್ಳ ಲೋಕ ದಲ್ಲಿ ವಾಸಿಸುತ್ತಲಿರುವನೆಂದೂ ಹೇಳುತ್ತಾರೆ.

**ದಿನೇಶಂ ಪ್ರವದಂತ್ಯನ್ಯೇ ಸರ್ವೇಶಂ ವೇದವಾದಿನಃ ।**
**ಸ್ತುವಂತಿ ಚೈವ ಗಾಯಂತಿ ಸಾಯಂ ಪ್ರಾತರತಂದ್ರಿತಾಃ ॥೨೬॥**

ಇನ್ನು ಕೆಲವರು ವೇದವನ್ನು ತಿಳಿದು ಹೇಳತಕ್ಕವರು, ದಿವಸಗಳಿಗೆ ಒಡೆಯನಾದ ಸೂರ್ಯನನ್ನು ಎಲ್ಲ ಪ್ರಪಂಚಕ್ಕೆ ಒಡೆಯನೆನ್ನುತ್ತಾರೆ. ಮತ್ತು ಅವನನ್ನು ಪ್ರತಿದಿನದಲ್ಲೂ ಬೆಳಿಗ್ಗೆ ಸಾಯಂಕಾಲಗಳಲ್ಲಿ ಸ್ವಲ್ಪವೂ ಉದಾಸೀನತೆಯಿಲ್ಲದೆ ಅವನ ಗುಣಗಾನವನ್ನು ಮಾಡುತ್ತಾ ಸ್ತೋತ್ರಮಾಡುತ್ತಾರೆ.

**ಯಜಂತಿ ಚ ತಥಾ ಯಜ್ಞೇ ವಾಸವಂ ಚ ಶತಕ್ರತುಂ ।**
**ಸಹಸ್ರಾಕ್ಷಂ ದೇವದೇವಂ ಸರ್ವೇಷಾಂ ಪ್ರಭುಮುಲ್ಬಣಂ ॥೨೭॥**

ಹಾಗೆಯೇ ಇಂದ್ರನನ್ನು ಮತ್ತೆ ಕೆಲವರು ಯಾಗದಲ್ಲಿ ಪೂಜಿಸುತ್ತಾರೆ. ಅವನನ್ನು ನೂರು ಯಾಗಗಳನ್ನು ಮಾಡಿದವನೆಂದೂ, ಸಾವಿರಕಣ್ಣುಗಳುಳ್ಳವನೆಂದೂ, ದೇವತೆಗಳಿಗೊಡೆಯನೆಂದೂ, ಎಲ್ಲರಿಗೂ ಈಶ್ವರನೆಂದೂ, ತುಂಬ ಪರಾಕ್ರಮಶಾಲಿಯೆಂದೂ ಗೌರವಿಸುತ್ತಾರೆ.

**ಯಜ್ಞಾಧೀಶಂ ಸುರಾಧೀಶಂ ತ್ರಿಲೋಕೇಶಂ ಶಚೀಪತಿಂ ।**
**ಯಜ್ಞಾನಾಂ ಚೈವ ಭೋಕ್ತಾರಂ ಸೋಮಪಂ ಸೋಮಪಪ್ರಿಯಂ ॥೨೮॥**

ಮತ್ತು ಅವನನ್ನು ಯಜ್ಞಗಳಿಗೆ ಒಡೆಯನೆಂದೂ ದೇವತೆಗಳಿಗೆ ಅಧಿಪತಿಯೆಂದೂ, ಮೂರುಲೋಕಕ್ಕೂ ಪ್ರಭುವೆಂದೂ, ಶಚೀದೇವಿಯ ಪತಿಯೆಂದೂ, ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವವನೆಂದೂ, ಸೋಮರಸವನ್ನು ಪಾನಮಾಡುವವನೆಂದೂ, ಯಜ್ಞಾದಿಗಳಲ್ಲಿ ಸೋಮಪಾನ ಮಾಡುವವರಿಗೆ ಎಂದರೆ ಯಾಗವನ್ನು ಮಾಡುವ ಯಜಮಾನ ಮುಂತಾದವರಿಗೆ ಅತಿಪ್ರಿಯನೆಂದೂ ಹೇಳುತ್ತಾರೆ.

**ವರುಣಂ ಚ ತಥಾ ಸೋಮಂ ಪಾವಕಂ ಪವನಂ ತಥಾ ।**
**ಯಮಂ ಕುಬೇರಂ ಧನದಂ ಗಣಾಧೀಶಂ ತಥಾ ಪರೇ ॥೨೯॥**

ಹಾಗೆಯೇ ಕೆಲವರು ವರುಣನನ್ನೂ, ಕೆಲವರು ಚಂದ್ರನನ್ನೂ, ಕೆಲವರು ಅಗ್ನಿಯನ್ನೂ, ಕೆಲವರು ವಾಯುವನ್ನೂ, ಕೆಲವರು ಯಮಧರ್ಮನನ್ನೂ, ಕೆಲವರು ಧನವನ್ನು ಕೊಡುವ ಕುಬೇರನನ್ನೂ, ಕೆಲವರು ಗಣಪತಿಯನ್ನೂ ಜಗತ್ತಿಗೆ ಒಡೆಯರೆಂದೂ, ಕರ್ತೃಗಳೆಂದೂ ಹೇಳುತ್ತಾರೆ.

**ಹೇರಂಬಂ ಗಜವಕ್ತ್ರಂ ಚ ಸರ್ವಕಾರ್ಯಪ್ರಸಾಧಕಂ ।**
**ಸ್ಮರಣಾತ್ಸಿದ್ಧಿದಂ ಕಾರ್ಯಕಾಮದಂ ಕಾಮಗಂ ಪರಂ ॥೩೦॥**

ಆ ಗಣಪತಿಯ ಭಕ್ತರು ಅವನನ್ನು ಹೇರಂಬನೆಂದೂ (ರುದ್ರನ ಸಮೀಪದಲ್ಲಿ ವಿಹರಿಸುವವನು) ಆನೆಯಂತೆ ಮುಖವುಳ್ಳವನೆಂದೂ, ಎಲ್ಲಾ ಕಾರ್ಯಗಳನ್ನೂ ಸಾಧಿಸಿಕೊಡುವವನೆಂದೂ, ಸ್ಮರಣಮಾತ್ರದಿಂದಲೇ ಎಲ್ಲ ಕೆಲಸಗಳ ಫಲವನ್ನು ಕೈಗೂಡಿಸುವವನೆಂದೂ, ಭಕ್ತರ ಇಷ್ಟಾರ್ಥಗಳನ್ನು ಅನುಗ್ರಹಿಸುವವನೆಂದೂ, ಸ್ವತಂತ್ರನೆಂದೂ, ಉತ್ಕೃಷ್ಟನೆಂದೂ ಹೇಳುತ್ತಾರೆ.

**ಭವಾನೀಂ ಕೇಚನಾಚಾರ್ಯಾಃ ಪ್ರವದಂತ್ಯಖಿಲಾರ್ಥದಾಂ ।**
**ಆದಿಮಾಯಾಂ ಮಹಾಶಕ್ತಿಂ ಪ್ರಕೃತಿಂ ಪುರುಷಾನುಗಾಂ ॥೩೧॥**

ಇನ್ನು ಕೆಲವರು ಗುರುಗಳು, ಈಶ್ವರನ ಪತ್ನಿಯಾದ ಭವಾನೀದೇವಿಯನ್ನೇ ಸಮಸ್ತ ಇಷ್ಟಾರ್ಥವನ್ನೂ ಕೊಡತಕ್ಕವಳೆಂದೂ, ಜಗತ್ತಿಗೆ ಒಡೆಯಳೆಂದೂ ಆದಿ ಮಾಯೆಯೆಂದೂ, ದೊಡ್ಡ ಶಕ್ತಿಸ್ವರೂಪಳೆಂದೂ, ಪುರುಷನನ್ನು ಅನುಸರಿಸುವ ಪ್ರಕೃತಿ (ಪ್ರಧಾನಕಾರಣ) ಎಂದೂ ಹೇಳುತ್ತಾರೆ.

**ಬ್ರಹ್ಮೈಕತಾಸಮಾಪನ್ನಾಂ ಸೃಷ್ಟಿಸ್ಥಿತ್ಯಂತಕಾರಿಣೀಂ ।**
**ಮಾತರಂ ಸರ್ವಭೂತಾನಾಂ ದೇವತಾನಾಂ ತಥೈವ ಚ ॥೩೨॥**

ಆ ದೇವಿಯನ್ನೇ ಕೆಲವರು ಪರಬ್ರಹ್ಮದೊಂದಿಗೆ ಅವಿನಾಭಾವ ಎಂದರೆ ಯಾವಾಗಲೂ ಬಿಡದಿರುವಿಕೆ ಎಂಬ ಸಂಬಂಧದಿಂದ ಐಕ್ಯವಾಗಿರತಕ್ಕವಳೆಂದೂ, ಈ ಜಗತ್ತಿನ ಉತ್ಪತ್ತಿ, ಪಾಲನ, ನಾಶ ಇವುಗಳನ್ನು ನಿರ್ವಹಿಸತಕ್ಕವಳೆಂದೂ, ಸಮಸ್ತಪ್ರಾಣಿಗಳಿಗೂ, ದೇವತೆಗಳಿಗೂ ತಾಯಿಯೆಂದೂ ಹೇಳುತ್ತಾರೆ.

**ಅನಾದಿನಿಧನಾಂ ಪೂರ್ಣಾಂ ವ್ಯಾಪಿಕಾಂ ಸರ್ವಜಂತುಷು ।**
**ಈಶ್ವರೀಂ ಸರ್ವಲೋಕಾನಾಂ ನಿರ್ಗುಣಾಂ ಸಗುಣಾಂ ಶಿವಾಂ ॥೩೩॥**

ಮತ್ತು ಅವಳು, ಹುಟ್ಟುಸಾವುಗಳಿಲ್ಲದೆ ನಿತ್ಯಳಾದವಳೆಂದೂ, ಸರ್ವವಿಧವಾದ ಐಶ್ವರ್ಯಗಳಿಂದ ತುಂಬಿದವಳೆಂದೂ, ಅಖಂಡವೂ ಅನಂತವೂ ಆದ ಸ್ವರೂಪವುಳ್ಳವಳೆಂದೂ, ಎಲ್ಲಾ ಪ್ರಾಣಿಗಳಲ್ಲಿಯೂ ವ್ಯಾಪಿಸಿಕೊಂಡಿರುವವಳೆಂದೂ, ಹದಿನಾಲ್ಕು ಲೋಕಗಳಿಗೂ ಒಡೆಯಳೆಂದೂ, ಪಾರಮಾರ್ಥಿಕವಾದ ವಾಸ್ತವವಾದ ಸ್ವರೂಪದಲ್ಲಿ ಯಾವ ಗುಣಗಳ ಸಂಬಂಧವೂ ಇಲ್ಲದವಳೆಂದೂ, ಆದರೂ ಮಾಯೆಯಿಂದ ತೋರುತ್ತಿರುವ ವ್ಯಾವಹಾರಿಕಸ್ಥಿತಿಯಲ್ಲಿ ಎಲ್ಲ ಗುಣಗಳಿಂದಲೂ ಕೂಡಿದವಳೆಂದೂ ಮಂಗಳ ಸ್ವರೂಪಳೆಂದೂ ಹೇಳುತ್ತಾರೆ.

**ವೈಷ್ಣವೀಂ ಶಾಂಕರೀಂ ಬ್ರಾಹ್ಮೀಂ ವಾಸವೀಂ ವಾರುಣೀಂ ತಥಾ ।**
**ವಾರಾಹೀಂ ನಾರಸಿಂಹೀಂ ಚ ಮಹಾಲಕ್ಷ್ಮೀಂ ತಥಾದ್ಭುತಾಂ ॥೩೪॥**

ಮತ್ತು ಆ ದೇವಿಯನ್ನು, ವೈಷ್ಣವೀ ಅಥವಾ ವಿಷ್ಣುವಿನ ಶಕ್ತಿಯೆಂದೂ, ಶಾಂಕರೀ ಅಥವಾ ಶಂಕರನ ಶಕ್ತಿಯೆಂದೂ, ಬ್ರಾಹ್ಮೀ ಅಥವಾ ಬ್ರಹ್ಮನ ಶಕ್ತಿಯೆಂದೂ, ವಾಸವೀ ಅಥವಾ ಇಂದ್ರನ ಶಕ್ತಿಯೆಂದೂ, ವಾರುಣೀ ಅಥವಾ ವರುಣನ ಶಕ್ತಿಯೆಂದೂ, ವಾರಾಹೀ ಅಥವಾ ಆದಿವರಾಹದ ಶಕ್ತಿಯೆಂದೂ ನಾರಸಿಂಹೀ ಅಥವಾ ನರಸಿಂಹನ ಶಕ್ತಿಯೆಂದೂ, ಹಾಗೆಯೇ ಆಶ್ಚರ್ಯಕರಳಾದ ಮಹಾಲಕ್ಷ್ಮಿಯೆಂದೂ ಹೇಳುತ್ತಾರೆ.

**ವೇದಮಾತರಮೇಕಾಂ ಚ ವಿದ್ಯಾಂ ಭವತರೋಃ ಸ್ಥಿರಾಂ ।**
**ಸರ್ವದುಃಖನಿಹಂತ್ರೀಂ ಚ ಸ್ಮರಣಾತ್ಸರ್ವಕಾಮದಾಂ ॥೩೫॥**

ವೇದಗಳ ಉಂಟಾಗುವಿಕೆಗೆ ಕಾರಣಳಾದುದರಿಂದ ಮಾತೃಸ್ವರೂಪಳೆಂದೂ, ಅದ್ವೈತಸ್ವರೂಪಳಾದುದರಿಂದ ಇಂತಹ ವಸ್ತುವು ಇವಳೊಬ್ಬಳೇ ಎಂದೂ, ಅಖಂಡವಾದ ಜ್ಞಾನಸ್ವರೂಪಳೆಂದೂ, ಈ ಪ್ರಪಂಚರೂಪವಾದ ಸಂಸಾರವೆಂಬ ವೃಕ್ಷಕ್ಕೆ ಅಧಿಷ್ಠಾನರೂಪಳಾದುದರಿಂದ ಆಶ್ರಯಭೂಮಿಯೆಂದೂ, ಸಮಸ್ತದುಃಖಗಳನ್ನೂ ಹೋಗಲಾಡಿಸುವವಳೆಂದೂ, ಸ್ಮರಿಸಿದ ಮಾತ್ರದಿಂದಲೇ ಎಲ್ಲ ಇಷ್ಟಾರ್ಥಗಳನ್ನೂ ಕೊಡುವವಳೆಂದೂ ಹೇಳುತ್ತಾರೆ.

**ಮೋಕ್ಷದಾಂ ಚ ಮುಮುಕ್ಷೂಣಾಂ ಕಾಮದಾಂ ಚ ಫಲಾರ್ಥಿನಾಂ ।**
**ತ್ರಿಗುಣಾತೀತರೂಪಾಂ ಚ ಗುಣವಿಸ್ತಾರಕಾರಕಾಂ ॥೩೬॥**

ಈ ಸಂಸಾರದಿಂದ ಬಿಡುಗಡೆಯನ್ನು ಹೊಂದಿ, ಮೋಕ್ಷವನ್ನು ಬಯಸುವವರಿಗೆ ಮುಕ್ತಿಯನ್ನು ಕೊಡುವವಳೆಂದೂ, ಫಲವನ್ನು ಅಪೇಕ್ಷಿಸುತ್ತಾ ಕರ್ಮಗಳನ್ನು ಮಾಡುತ್ತಿರುವವರಿಗೆ ಅವರಿಗಿಷ್ಟವಾದ ಫಲವನ್ನು ಕೊಡುವವಳೆಂದೂ, ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಮೂರುಗುಣಗಳಿಂದಲೂ ವಾಸ್ತವವಾಗಿ ಬಿಡಲ್ಪಟ್ಟಿರುವವಳೆಂದೂ, ಆದರೂ ಆ ಮೂರುಗುಣಗಳನ್ನೂ ಮಾಯಿಕವಾಗಿ ವಿಸ್ತರಿಸುವವಳೆಂದೂ ಹೇಳುತ್ತಾರೆ.

**ನಿರ್ಗುಣಾಂ ಸಗುಣಾಂ ತಸ್ಮಾತ್ತಾಂ ಧ್ಯಾಯಂತಿ ಫಲಾರ್ಥಿನಃ ।**
**ನಿರಂಜನಂ ನಿರಾಕಾರಂ ನಿರ್ಲೇಪಂ ನಿರ್ಗುಣಂ ಕಿಲ ॥೩೭॥**

ಅವಳು ವಾಸ್ತವವಾಗಿ ಪಾರಮಾರ್ಥಿಕಸ್ವರೂಪದಲ್ಲಿ ಗುಣಗಳ ಸಂಬಂಧವಿಲ್ಲದವಳೂ, ಮಾಯಿಕವಾದ ವ್ಯಾವಹಾರಿಕಸ್ವರೂಪದಲ್ಲಿ ಗುಣಗಳ ಸಂಬಂಧವುಳ್ಳಂತೆ ತೋರುತ್ತಿರುವವಳೂ, ಆದುದರಿಂದ ಅವಳನ್ನು ಫಲವನ್ನಪೇಕ್ಷಿಸುವವರೂ, ಫಲಾಪೇಕ್ಷೆ ಇಲ್ಲದ ಜ್ಞಾನಿಗಳೂ, ಎಲ್ಲರೂ ಧ್ಯಾನಮಾಡುತ್ತಾರೆ. ಆದುದರಿಂದ ವೇದಾಂತಿಗಳು, ಜರಾಮರಣಾದಿದೋಷವಿಲ್ಲದ, ಶರೀರವಿಲ್ಲದ ಸಂಸಾರದ ಸಂಬಂಧವಿಲ್ಲದ, ಗುಣಗಳ ಸಂಬಂಧವಿಲ್ಲದ ಪರಬ್ರಹ್ಮತತ್ತ್ವರೂಪಳೆಂದೂ ಆ ದೇವಿಯನ್ನು ಭಾವಿಸುತ್ತಾರೆ.

**ಅರೂಪಂ ವ್ಯಾಪಕಂ ಬ್ರಹ್ಮ ಪ್ರವದಂತಿ ಮುನೀಶ್ವರಾಃ ।**
**ವೇದೋಪನಿಷದಿ ಪ್ರೋಕ್ತಸ್ತೇಜೋಮಯ ಇತಿ ಕ್ವಚಿತ್ ॥೩೮॥**

ಮತ್ತು ವಾಸ್ತವವಾಗಿ ಖಂಡವಾದ ರೂಪವಿಲ್ಲದ, ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವ ಬ್ರಹ್ಮಸ್ವರೂಪಳೆಂದು ಮನನಶೀಲರಾದ ಮುನಿಗಳಲ್ಲಿ ಉತ್ತಮರಾದವರು ಹೇಳುತ್ತಾರೆ. ಇನ್ನು ಕೆಲವರು ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಅವಳನ್ನು ಚಿಜ್ಜ್ಯೋತಿಯ ಪ್ರಕಾಶರೂಪಳೆಂದು ಕೆಲವೆಡೆ ಹೇಳಿರುತ್ತದೆ ಎಂದೂ ಹೇಳುತ್ತಾರೆ.

**ಸಹಸ್ರಶೀರ್ಷಾ ಪುರುಷಃ ಸಹಸ್ರನಯನಸ್ತಥಾ ।**
**ಸಹಸ್ರಕರಕರ್ಣಶ್ಚ ಸಹಸ್ರಾಸ್ಯಃ ಸಹಸ್ರಪಾತ್ ॥೩೯॥**

ಇನ್ನು ಕೆಲವರು ವಿಶ್ವರೂಪಾದಿಗಳು, ಪ್ರಸಿದ್ಧವಾದ ಪುರುಷಸೂಕ್ತದಲ್ಲಿ ವರ್ಣಿಸಿರುವಂತೆ ಅವಳನ್ನು ಸಾವಿರ ಶಿರಸ್ಸುಗಳುಳ್ಳ, ಎಂದರೆ ಅನಂತಶಿರಸ್ಸುಗಳುಳ್ಳ, ಸಾವಿರಕಣ್ಣುಗಳುಳ್ಳ, ಹಾಗೆಯೇ ಸಾವಿರ ಕೈಗಳು ಮತ್ತು ಕಿವಿಗಳುಳ್ಳ, ಸಾವಿರಮುಖಗಳುಳ್ಳ, ಸಾವಿರಕಾಲುಗಳುಳ್ಳ ವಿರಾಡ್ರೂಪನಾದ ಪುರುಷನೆಂದು ಹೇಳುತ್ತಾರೆ.

**ವಿಷ್ಣೋಃ ಪಾದಮಥಾಕಾಶಂ ಪರಮಂ ಸಮುದಾಹೃತಂ ।**
**ವಿರಾಜಂ ವಿರಜಂ ಶಾಂತಂ ಪ್ರವದಂತಿ ಮನೀಷಿಣಃ ॥೪೦॥**

ಮತ್ತು, ಈ ಪ್ರಪಂಚವೆಲ್ಲವೂ ಆ ವಿಷ್ಣುವಿನ ಪಾದರೂಪವಾದ ಆಕಾಶವು ಎಂದರೆ ಏಕದೇಶಮಾತ್ರವಾದುದು. ಆ ವ್ಯಾಪಕವಾದ ಶ್ರೇಷ್ಠವಾದ ಅವನ ಸ್ವರೂಪವು ಇದನ್ನೂ ಮೀರಿ ಸ್ವರ್ಗದಲ್ಲೂ ಇದೆ ಎಂದು ಹೇಳಿರುತ್ತದೆ. ಅವನು ವಿರಾಡ್ರೂಪನು ಎಂದರೆ, ಸಮಸ್ತಪ್ರಪಂಚಸ್ವರೂಪನೂ, ಮತ್ತು ಗುಣತ್ರಯಸಂಬಂಧವಿಲ್ಲದ ಪಾಪರಹಿತನೂ, ಈ ಪ್ರಪಂಚವು ಉಪಶಮವಾಗಲು, ಶಾಂತನೂ, ಆಗಿರುತ್ತಾನೆ ಎಂದು ಬುದ್ಧಿವಂತರಾದ ಜ್ಞಾನಿಗಳು ಹೇಳುತ್ತಾರೆ.

**ಪುರುಷೋತ್ತಮಂ ತಥಾ ಚಾನ್ಯೇ ಪ್ರವದಂತಿ ಪುರಾವಿದಃ ।**
**ನೈಕೋಽಪೀತಿ ವದಂತ್ಯನ್ಯೇ ಪ್ರಭುರೀಶಃ ಕದಾಚನ ॥೪೧॥**

ಇನ್ನು ಕೆಲವರು ಹಿಂದಿನದನ್ನು ಎಂದರೆ ಪ್ರಾಚೀನವಾದ ತತ್ತ್ವವನ್ನು ಬಲ್ಲವರು ಅವನನ್ನೇ ಪುರುಷೋತ್ತಮನಾದ ಜಗತ್ಕರ್ತೃವೆಂದು ಹೇಳುತ್ತಾರೆ. ಅಲ್ಲದೆ ಜಗತ್ತಿಗೆ ಕಾರಣನಾದ ಈಶ್ವರನು, ಒಂದು ಮನೆಯನ್ನು ಕಟ್ಟುವ ಅನೇಕ ಕೆಲಸಗಾರರಂತೆ ಅನೇಕ ಈಶ್ವರರ ರೂಪದಲ್ಲಿರುತ್ತಾ ಈ ಜಗತ್ಕರ್ತೃವಾಗಿರಬಲ್ಲವನೆಂದು ಇನ್ನು ಕೆಲವರು ಹೇಳುತ್ತಾರೆ.

**ಅನೀಶ್ವರಮಿದಂ ಸರ್ವಂ ಬ್ರಹ್ಮಾಂಡಮಿತಿ ಕೇಚನ ।**
**ನ ಕದಾಪೀಶಜನ್ಯಂ ಯಜ್ಜಗದೇತದಚಿಂತಿತಂ ॥೪೨॥**

ಸ್ವಭಾವವೇ ಕಾರಣವು ಎಂದು ಹೇಳುವ ಇನ್ನು ಕೆಲವರು ಈ ಜಗತ್ತಿಗೆ ಕರ್ತೃವಾದ ಒಬ್ಬ ಈಶ್ವರನಿಲ್ಲವು. ಹಾಗೆ ಒಬ್ಬ ಈಶ್ವರನಿಂದ ಹುಟ್ಟಿದುದಾದರೆ ಈ ಜಗತ್ತು ಹೀಗೆ ಯಾವಾಗಲೂ ಅನಿರ್ವಚನೀಯವೂ, ಅದ್ಭುತವೂ, ಅಚಿಂತ್ಯವೂ ಆಗಿರುತ್ತಿರಲಿಲ್ಲವೆಂದೂ ಹೇಳುತ್ತಾರೆ.

**ಸದೈವೇದಮನೀಶಂ ಚ ಸ್ವಭಾವೋತ್ಥಂ ಸದೇದೃಶಂ ।**
**ಅಕರ್ತಾಽಸೌ ಪುಮಾನ್ಪ್ರೋಕ್ತಃ ಪ್ರಕೃತಿಸ್ತು ತಥಾ ಚ ಸಾ ॥೪೩॥**

ಈ ಜಗತ್ತು ಯಾವಾಗಲೂ ಹೀಗೆಯೇ ಇರುವುದೆಂದೂ, ಇದಕ್ಕೆ ಬೇರೆಯಾಗಿರುವ ಒಬ್ಬ ಈಶ್ವರನಿಲ್ಲವೆಂದೂ, ಸ್ವಾಭಾವಿಕವಾಗಿ ಎಂದರೆ ತನಗೆ ತಾನೇ ಉಂಟಾಗಿ ಮುಂದುವರಿಯುತ್ತಿದೆ ಎಂದೂ ಅನೀಶ್ವರವಾದಿಗಳು ಹೇಳುತ್ತಾರೆ. ಇನ್ನು ಕೆಲವರು ಪುರುಷಪ್ರಕೃತಿಗಳಿಬ್ಬರಿರುತ್ತಾರೆ. ಪುರುಷನು ಕರ್ತೃವಲ್ಲವು. ಪ್ರಕೃತಿಯೇ ಈ ಪ್ರಪಂಚಕ್ಕೆ ಕರ್ತೃವು ಎಂದು ಹೇಳುತ್ತಾರೆ.

**ಏವಂ ವದಂತಿ ಸಾಂಖ್ಯಾಶ್ಚ ಮುನಯಃ ಕಪಿಲಾದಯಃ ।**
**ಏತೇ ಸಂದೇಹಸಂದೋಹಾಃ ಪ್ರಭವಂತಿ ತಥಾ ಪರೇ ॥೪೪॥**

ಎಂದು ಮುಂತಾಗಿ ನಾನಾಬಗೆಗಳಲ್ಲಿ ಕಪಿಲಮುನಿಯೇ ಮೊದಲಾದ ಜ್ಞಾನಿಗಳು, ಸಾಂಖ್ಯ ಮುಂತಾದ ಶಾಸ್ತ್ರಪ್ರವರ್ತಕರು ಹೇಳುತ್ತಾರೆ. ಈ ರೀತಿಯಲ್ಲಿ

ಹಲವು ಜಗೆಯ ಸಂಶಯಸಮೂಹಗಳೂ, ಹಾಗೆಯೇ ಇನ್ನೂ ಕೆಲವು ಸಂಶಯಗಳೂ ನನಗೆ ಉಂಟಾಗಿವೆ. ಹೀಗೆ ಆಸ್ತಿಕತೆಯು ನಾಸ್ತಿಕತೆಯೊಡನೆ ಹೋರಾಡುವಂತಿದೆ!

**ವಿಕಲ್ಪೋಪಹತಂ ಚೇತಃ ಕಿಂ ಕರೋಮಿ ಮುನೀಶ್ವರ ।**
**ಧರ್ಮಾಧರ್ಮವಿವಕ್ಷಾಯಾಂ ನ ಮನೋ ಮೇ ಸ್ಥಿರಂ ಭವೇತ್ ॥೪೫॥**

ಓ ನಾರದಮುನಿಯೇ, ಹೀಗೆ ನನ್ನ ಮನಸ್ಸು ನಾನಾಬಗೆಯ ಕಲ್ಪನೆಗಳಿಂದ ತುಂಬ ಮಂಕಾಗಿ ವಿವೇಚಿಸಲಾರದ್ದಾಗಿದೆ. ಏನನ್ನು ಮಾಡಲಿ? ಧರ್ಮ ಮತ್ತು ಅಧರ್ಮಗಳ ವಿಷಯವಾಗಿ ನನ್ನ ಮನಸ್ಸು ಈ ಸಂಶಯಗಳಿಂದ ಕಲಕಿಹೋಗಿರುವುದರಿಂದ ನಿಶ್ಚಯದ ನೆಲೆಯುಳ್ಳದ್ದು ಆಗಲಾರದು.

**ಕೋ ಧರ್ಮಃ ಕೀದೃಶೋಽಧರ್ಮಃ ಚಿಹ್ನಂ ನೈವೋಪಲಭ್ಯತೇ ।**
**ದೇವಾಃ ಸತ್ತ್ವಗುಣೋತ್ಪನ್ನಾಃ ಸತ್ಯಧರ್ಮವ್ಯವಸ್ಥಿತಾಃ ॥೪೬॥**

ಧರ್ಮವು ಯಾವುದು? ಅಧರ್ಮವು ಎಂತಹುದು? ಎಂದು ವಿಂಗಡಿಸಿ ಗೊತ್ತುಮಾಡಲು ವಿಶೇಷವಾದ ಗುರುತೇ ಸಿಕ್ಕುವುದಿಲ್ಲವು. ಸತ್ತ್ವಗುಣಪ್ರಾಧಾನ್ಯದಿಂದಲೇ ಹುಟ್ಟಿದ, ಸತ್ಯವಾದ ಧರ್ಮದಲ್ಲಿಯೇ ನಿರತರಾದ ದೇವತೆಗಳೂ ಸಹ,

**ಪೀಡ್ಯಂತೇ ದಾನವೈಃ ಪಾಪೈಃ ಕುತ್ರ ಧರ್ಮವ್ಯವಸ್ಥಿತಿಃ ।**
**ಧರ್ಮಸ್ಥಿತಾಃ ಸದಾಚಾರಾಃ ಪಾಂಡವಾ ಮಮ ವಂಶಜಾಃ ॥೪೭॥**

ಪಾಪಕರ್ಮಪ್ರವರ್ತಕರಾದ ರಾಕ್ಷಸರಿಂದ ಪೀಡಿಸಲ್ಪಡುತ್ತಾರೆ. ಹೀಗಿರುವುದರಿಂದ, "ಯತೋ ಧರ್ಮಸ್ತತೋ ಜಯಃ" ಎಂದು ಮುಂತಾದ ವಚನಗಳು ಸೂಚಿಸುವಂತೆ ಧರ್ಮಕ್ಕೆ ಸರಿಯಾದ ಸ್ಥಿತಿಯೆಲ್ಲಿದೆ? ಮತ್ತು ಧರ್ಮದ ಆಚರಣೆಯಲ್ಲಿಯೇ ನಿರತರಾದ, ಒಳ್ಳೆಯ ನಡವಳಿಕೆಯುಳ್ಳ ನಮ್ಮ ವಂಶದಲ್ಲಿಯೇ ಹುಟ್ಟಿದ ಪಾಂಡವರೂ,

**ದುಃಖಂ ಬಹುವಿಧಂ ಪ್ರಾಪ್ತಾಸ್ತತ್ರ ಧರ್ಮಸ್ಯ ಕಾ ಸ್ಥಿತಿಃ ।**
**ಅತೋ ಮೇ ಹೃದಯಂ ತಾತ ನೇಪತೇಽತೀವ ಸಂಶಯೇ ॥೪೮॥**

ನಾನಾಬಗೆಯ ದುಃಖವನ್ನು ಹೊಂದಿದರು. ಆದುದರಿಂದ ಓ ಪೂಜ್ಯನಾದ ತಾತನೇ, ಧರ್ಮವು ಒಳ್ಳೆಯ ಫಲವನ್ನೇ ಕೊಡುತ್ತದೆಂಬ ಖಚಿತವಾದ ಸ್ಥಿತಿಯು

ಎಲ್ಲಿದೆ? ಹೀಗಿರುವುದರಿಂದ ನನ್ನ ಮನಸ್ಸು ಆಸ್ತಿಕತೆಯನ್ನು ಸಡಿಲಿಸುವ ಇಂತಹ ಹಲವು ಬಗೆಯ ಸಂದೇಹಗಳಲ್ಲಿ ಸಿಕ್ಕಿಬಿದ್ದು ತುಂಬಾ ನಡುಗುತ್ತಲಿದೆ.

**ಕುರು ಮೇಽಸಂಶಯಂ ಚೇತಃ ಸಮರ್ಥೋಽಸಿ ಮಹಾಮುನೇ ।**
**ತ್ರಾಹಿ ಸಂಸಾರವಾರ್ಧೇಸ್ತ್ವಂ ಜ್ಞಾನಪೋತೇನ ಮಾಂ ಮುನೇ ॥೪೯॥**

ಓ ದೊಡ್ಡಮುನಿಯೇ, ನನ್ನ ಮನಸ್ಸನ್ನು ಸಂಶಯವಿಲ್ಲದುದನ್ನಾಗಿ ಮಾಡು. ನೀನು ಆ ವಿಚಾರದಲ್ಲಿ ಸಮರ್ಥನಾಗಿರುತ್ತೀಯೆ. ಓ ಋಷಿಯೇ, ನನ್ನನ್ನು ಜ್ಞಾನ ವೆಂಬ ತೆಪ್ಪವನ್ನು ಕೊಟ್ಟು, ಸಂಸಾರವೆಂಬ ಸಮುದ್ರದಿಂದ ದಾಟಿಸಿ ಕಾಪಾಡು.

**ಮಜ್ಜಂತಂ ಚೋತ್ಪತಂತಂ ಚ ಮಗ್ನಂ ಮೋಹಜಲಾವಿಲೇ ॥೫೦॥**

ಮೋಹದ ಅವಿವೇಕವೆಂಬ ಕೆಸರಿನ ನೀರಿನಿಂದ ತುಂಬಿರುವ ಸಂಸಾರ ಸಾಗರದಲ್ಲಿ ಮುಳುಗುತ್ತಲೂ, ಏಳುತ್ತಲೂ, ತಿರುಗಿ ಮುಳುಗುತ್ತಲೂ ಇರುವ ನನ್ನನ್ನು ತೇಲಿಸಿ, ದಾಟಿಸಿ, ಕಾಪಾಡು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಪ್ರಥಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### || ದ್ವಿತೀಯೋಽಧ್ಯಾಯಃ ||

### ಎರಡನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಯತ್ತ್ವಯಾ ಚ ಮಹಾಬಾಹೋ ಪೃಷ್ಟೋಽಹಂ ಕುರುಸತ್ತಮ ।**
**ತಾನ್ ಪ್ರಶ್ನಾನ್ನಾರದಃ ಪ್ರಾಹ ಮಯಾ ಪೃಷ್ಟೋ ಮುನೀಶ್ವರಃ ॥೧॥**

ವ್ಯಾಸಮುನಿಯು ಹೇಳಿದನು—ಗಟ್ಟಿಯೂ, ನೀಳವೂ ಆಗಿರುವ ತೋಳುಗಳುಳ್ಳ ಎಂದರೆ ಪರಾಕ್ರಮಶಾಲಿಯಾದ, ಕುರುವಂಶದ ಅರಸುಗಳಲ್ಲಿ ಶ್ರೇಷ್ಠನಾದ ಓ ಜನಮೇಜಯರಾಜನೇ, ನೀನು ನನ್ನನ್ನು ಯಾವ ಪ್ರಶ್ನೆಗಳನ್ನು ಕೇಳಿದಿಯೋ, ಅದೇ ಪ್ರಶ್ನೆಗಳನ್ನು ನಾನೂ ಆ ನಾರದಮುನಿಯನ್ನು ಕುರಿತು ಕೇಳಲಾಗಿ, ಅವನು ಹೀಗೆ ಹೇಳಿದನು.

|| ನಾರದ ಉವಾಚ ||

**ವ್ಯಾಸ ಕಿಂ ತೇ ಬ್ರವೀಮ್ಯದ್ಯ ಪುರಾಽಯಂ ಸಂಶಯೋ ಮಮ ।**
**ಉತ್ಪನ್ನೋ ಹೃದಯೇಽತ್ಯರ್ಥಂ ಸಂದೇಹಸಾರಪೀಡಿತಃ ॥೨॥**

ನಾರದಮುನಿಯು ಹೇಳಿದನು—ಎಲೈ ವ್ಯಾಸಮುನಿಯೇ, ಈಗ ನಿನಗೆ ಏನನ್ನು ಹೇಳಲಿ? ಹಿಂದೆ ನನ್ನ ಮನಸ್ಸಿನಲ್ಲಿಯೂ ಈ ಸಂದೇಹವು ತುಂಬಾ ಉಂಟಾಗಿತ್ತು. ಆಗ ನಾನು, ಆ ಸಂಶಯಗಳ ಸುರಿಮಳೆಯಿಂದ ಪೀಡಿಸಲ್ಪಟ್ಟವನಾಗಿ,

**ಗತ್ವಾಽಹಂ ಪಿತರಂ ಸ್ಥಾನೇ ಬ್ರಹ್ಮಾಣಮಮಿತೌಜಸಂ ।**
**ಅಪೃಚ್ಛಂ ಯತ್ತ್ವಯಾ ಪೃಷ್ಟಂ ವ್ಯಾಸಾದ್ಯ ಪ್ರಶ್ನಮುತ್ತಮಂ ॥೩॥**

ಸತ್ಯಲೋಕದಲ್ಲಿರುವ ಮಹಾತೇಜಸ್ವಿಯಾದ ನನ್ನ ತಂದೆಯನ್ನು ಪಡೆದು, ಎಲೈ ವ್ಯಾಸನೇ, ನೀನಾವ ಪ್ರಶ್ನೆಯನ್ನು ಕೇಳಿದೆಯೋ ಅದೇ ಪ್ರಶ್ನೆಯನ್ನೇ ನಾನೂ ಆ ನನ್ನ ತಂದೆಯನ್ನು ಕುರಿತು ಕೇಳಿದನು.

**ಪಿತಃ ಕುತಃ ಸಮುತ್ಪನ್ನಂ ಬ್ರಹ್ಮಾಂಡಮಖಿಲಂ ವಿಭೋ ।**
**ಭವತ್ಕೃತೇನ ವಾ ಸಮ್ಯಕ್ಕಿಂ ವಾ ವಿಷ್ಣುಕೃತಂ ತ್ವಿದಂ ॥೪॥**

ಓ ವ್ಯಾಪಕನಾದ ತಂದೆಯೇ, ಈ ಎಲ್ಲ ಜಗತ್ತೂ ಯಾರಿಂದ ಹುಟ್ಟಿತು? ನಿನ್ನ ವ್ಯಾಪಾರದಿಂದಲೇ ಉಂಟಾಯಿತೋ ಅಥವಾ ವಿಷ್ಣುವಿನಿಂದ ಈ ಜಗತ್ತು ಸೃಷ್ಟಿಸಲ್ಪಟ್ಟಿತೋ?

**ರುದ್ರಕೃತಂ ವಾ ವಿಶ್ವಾತ್ಮನ್ ಬ್ರೂಹಿ ಸತ್ಯಂ ಜಗತ್ಪತೇ ।**
**ಆರಾಧನೀಯಃ ಕಃ ಕಾಮಂ ಸರ್ವೋತ್ಕೃಷ್ಟಶ್ಚ ಕಃ ಪ್ರಭುಃ ॥೫॥**

ದೊಡ್ಡಮನಸ್ಸುಳ್ಳ, ಪ್ರಪಂಚದ ಆತ್ಮಸ್ವರೂಪನಾದ ತಂದೆಯೇ, ಅಥವಾ ಈ ಜಗತ್ತು ಈಶ್ವರನಿಂದ ಸೃಷ್ಟಿಸಲ್ಪಟ್ಟದೆಯೇ? ಎಲೈ ಪ್ರಪಂಚಕ್ಕೆ ಒಡೆಯನಾದ ತಂದೆಯೇ, ನಿಜವಾದುದನ್ನು ಹೇಳು. ನ್ಯಾಯವಾಗಿ ಯಾರನ್ನು ಪೂಜಿಸಬೇಕು? ಈ ಜಗತ್ತಿಗೆ ಎಲ್ಲರಿಗಿಂತಲೂ ಶ್ರೇಷ್ಠನಾದ ಒಡೆಯನಾರು?

**ತತ್ಸರ್ವಂ ವದ ಮೇ ಬ್ರಹ್ಮನ್ ಸಂದೇಹಾಂಶ್ಛಿಂಧಿ ಚಾನಘ ।**
**ನಿಮಗ್ನೋ ಹ್ಯಸ್ಮಿ ಸಂಸಾರೇ ದುಃಖರೂಪೇಽನೃತೋಪಮೇ ॥೬॥**

ಓ ಬ್ರಹ್ಮನೇ, ನಾನು ಕೇಳಿದುದೆಲ್ಲವನ್ನೂ ಹೇಳು. ಮತ್ತು ಪಾಪರಹಿತನಾದ ಓ ಬ್ರಹ್ಮನೇ, ನನ್ನ ಸಂಶಯಗಳನ್ನು ಪರಿಹರಿಸು. ನಾನು ಬರಿಯ ದುಃಖಮಯವಾದ, ನಿಜವಲ್ಲದಂತೆ ಕಾಣುವ ಈ ಸಂಸಾರದಲ್ಲಿ ಮುಳುಗಿರುತ್ತೇನೆ.

**ಸಂದೇಹಾಂದೋಲಿತಂ ಚೇತೋ ನ ಪ್ರಶಾಮ್ಯತಿ ಕುತ್ರಚಿತ್ ।**
**ನ ತೀರ್ಥೇಷು ನ ದೇವೇಷು ಸಾಧನೇಷ್ವಿತರೇಷು ಚ ॥೭॥**

ಸಂಶಯದಿಂದ ತುಂಬಿ ನೆಲೆಗೆ ಬರದೆ, ಹಿಂದಕ್ಕೂ ಮುಂದಕ್ಕೂ ತೂಗಾಡುತ್ತಿರುವ ನನ್ನ ಮನಸ್ಸು ಎಲ್ಲಿಯೂ ಸಮಾಧಾನವನ್ನು ಹೊಂದುವುದಿಲ್ಲ. ತೀರ್ಥ

ಗಳಲ್ಲಿಯಾಗಲೀ, ದೇವತೆಗಳ ಸನ್ನಿಧಿಯಲ್ಲಾಗಲೀ, ಇತರ ಯಾಗವೇ ಮೊದಲಾದ ಸಾಧನಗಳಲ್ಲಿಯಾಗಲಿ ಅದಕ್ಕೆ ನಿಲುಗಡೆ ಇಲ್ಲದೆ ಸಮಾಧಾನವಿಲ್ಲದ್ದಾಗಿದೆ.

**ಅವಿಜ್ಞಾಯ ಪರಂ ತತ್ತ್ವಂ ಕುತಃ ಶಾಂತಿಃ ಪರಂತಪ ।**
**ವಿಕೀರ್ಣಂ ಬಹುಧಾ ಚಿತ್ತಂ ನೈಕತ್ರ ಸ್ಥಿರತಾಂ ವ್ರಜೇತ್ ॥೮॥**

ಮುಖ್ಯವಾದ, ಎಲ್ಲಕ್ಕೂ ಮೇಲಾದ ತತ್ತ್ವವನ್ನು ತಿಳಿಯದೆ ಸಮಾಧಾನ ವೆಲ್ಲಿಂದ ಬಂದೀತು? ದುಷ್ಟರನ್ನು ಶಿಕ್ಷಿಸುವ ಓ ಬ್ರಹ್ಮನೇ, ಅನೇಕರೀತಿಯಾಗಿ ಹೀಗೆ ಚಂಚಲತೆಯನ್ನು ಹೊಂದಿ, ನನ್ನ ಮನಸ್ಸು ಒಂದುಕಡೆಯೂ ಸ್ಥಿರವಾಗಿರ ಲಾರದೆ ಇದೆ.

**ಕಂ ಸ್ಮರಾಮಿ ಯಜೇ ಕಂ ವಾ ಕಂ ವ್ರಜಾಮ್ಯರ್ಚಯಾಮಿ ಕಂ ।**
**ಸ್ತೌಮಿ ಕಂ ನಾಭಿಜಾನಾಮಿ ದೇವಂ ಸರ್ವೇಶ್ವರೇಶ್ವರಂ ॥೯॥**

ನಾನು ಯಾರನ್ನು ಧ್ಯಾನಿಸಲಿ? ಯಾರನ್ನು ಯಜ್ಞಾದಿಗಳಿಂದ ಆರಾಧಿಸಲಿ? ಯಾರನ್ನು ಮರೆಹೊಗಲಿ? ಯಾರನ್ನು ಪೂಜಿಸಲಿ? ಯಾರನ್ನು ಸ್ತೋತ್ರಮಾಡಲಿ? ಎಲ್ಲಕ್ಕೂ ಒಡೆಯರಾದ ತ್ರಿಮೂರ್ತಿಗಳಿಗೂ ಒಡೆಯನಾದ ದೇವದೇವನನ್ನು ನಾನು ತಿಳಿದಿಲ್ಲವು.

**ತತೋ ಮಾಂ ಪ್ರತ್ಯುವಾಚೇದಂ ಬ್ರಹ್ಮಾ ಲೋಕಪಿತಾಮಹಃ ।**
**ಮಯಾ ಸತ್ಯವತೀಸೂನೋ ಕೃತೇ ಪ್ರಶ್ನೇ ಸುದುಸ್ತರೇ ॥೧೦॥**

ಸತ್ಯವತಿಯ ಮಗನಾದ ಎಲೈ ವ್ಯಾಸನೇ, ನಾನು ಹೀಗೆ ಸುಲಭವಾಗಿ ಉತ್ತರ ವನ್ನು ಹೇಳಲು ಅಸಾಧ್ಯವಾದ ಪ್ರಶ್ನೆಯನ್ನು ಮಾಡಲು ಲೋಕಗಳಿಗೆ ಪಿತಾಮಹ ಸ್ವರೂಪನಾದ ಬ್ರಹ್ಮನು ನನ್ನನ್ನು ಕುರಿತು ಹೀಗೆ ಹೇಳಿದನು.

॥ ಬ್ರಹ್ಮೋವಾಚ ॥

**ಕಿಂ ಬ್ರವೀಮಿ ಸುತಾದ್ಯಾಹಂ ದುರ್ಬೋಧಂ ಪ್ರಶ್ನಮುತ್ತಮಂ ।**
**ತ್ವಯಾ ಶಕ್ಯಂ ಮಹಾಭಾಗ ವಿಷ್ಣೋರಪಿ ಸುನಿಶ್ಚಯಾತ್ ॥೧೧॥**

ಎಲೈ ಪುತ್ರನಾದ ನಾರದನೇ, ನಿನ್ನ ಈ ಉತ್ತಮವಾದ ಪ್ರಶ್ನೆಯು ಸುಲಭ ವಾಗಿ ತಿಳಿಯಲಸಾಧ್ಯವಾದುದು. ಆದುದರಿಂದ ನಾನು ಏನನ್ನು ಹೇಳಲಿ? ಓ ಪುಣ್ಯ

ಶಾಲಿಯೇ, ನೀನು ಮಾಡಿದ ಈ ಪ್ರಶ್ನೆಗೆ ಉತ್ತರವನ್ನು ಹೇಳುವುದು ವಿಷ್ಣುವಿಗೂ ಸುಲಭವಾಗಿ ತಿಳಿಸಲು ನಿಶ್ಚಯವಾಗಿ ಅಸಾಧ್ಯವಾದುದು.

**ರಾಗೀ ಕೋಽಪಿ ನ ಜಾನಾತಿ ಸಂಸಾರೇಽಸ್ಮಿನ್ಮಹಾಮತೇ ।**
**ವಿರಕ್ತಶ್ಚ ವಿಜಾನಾತಿ ನಿರೀಹೋ ಯೋ ವಿಮತ್ಸರಃ ॥೧೨॥**

ಎಲೈ ತುಂಬ ಬುದ್ಧಿವಂತನಾದ ನಾರದನೇ, ಈ ಸಂಸಾರದಲ್ಲಿ ರಾಗವುಳ್ಳವನು ಎಂದರೆ ವಿಷಯಾದಿಸುಖಗಳಲ್ಲಿ ಆಸಕ್ತಿಯುಳ್ಳವನು ಇದನ್ನು ತಿಳಿಯಲಾರನು. ನಿಸ್ಪೃಹನಾಗಿಯೂ, ಅಸೂಯೆ ಇಲ್ಲದವನಾಗಿಯೂ, ವಿಷಯಾದಿಗಳಲ್ಲಿ ಆಶೆಯಿಲ್ಲದವನಾಗಿಯೂ ಯಾವನು ಇರುವನೋ ಅಂತಹ ಮನುಷ್ಯನು ಮಾತ್ರ ಇದನ್ನು ತಿಳಿಯಬಲ್ಲನು.

**ಏಕಾರ್ಣವೇ ಪುರಾಜಾತೇ ನಷ್ಟೇ ಸ್ಥಾವರಜಂಗಮೇ ।**
**ಭೂತಮಾತ್ರೇ ಸಮುತ್ಪನ್ನೇ ಸಂಜಜ್ಞೇ ಕಮಲಾದಹಂ ॥೧೩॥**

ಹಿಂದಿನ ಪ್ರಳಯದಲ್ಲಿ ಜಗತ್ತನ್ನೆಲ್ಲಾ ನೀರು ವ್ಯಾಪಿಸಿ ಸಮುದ್ರಮಯವಾಗಲು, ಚರಸ್ಥಿರರೂಪವಾದ ಎಲ್ಲಾ ಪ್ರಪಂಚವೂ ನಾಶವಾಗಲು, ಮೊದಮೊದಲು ಆಕಾಶವೇ ಮೊದಲಾದ ಐದು ಭೂತಗಳ ತನ್ಮಾತ್ರಗಳು ಹುಟ್ಟಿದುವು. ಆ ಮೇಲೆ ನಾನು ವಿಷ್ಣುವಿನ ನಾಭಿಕಮಲದಿಂದ ಹುಟ್ಟಿದೆನು.

**ನಾಪಶ್ಯಂ ತರಣಿಂ ಸೋಮಂ ನ ವೃಕ್ಷಾನ್ನ ಚ ಪರ್ವತಾನ್ ।**
**ಕರ್ಣಿಕಾಯಾಂ ಸಮಾವಿಷ್ಟಶ್ಚಿಂತಾಮಕರವಂ ತದಾ ॥೧೪॥**

ಆಗ ಸೂರ್ಯನನ್ನಾಗಲೀ, ಚಂದ್ರನನ್ನಾಗಲೀ, ವೃಕ್ಷಗಳನ್ನಾಗಲೀ, ಬೆಟ್ಟಗಳನ್ನಾಗಲೀ ನಾನು ನೋಡಲಿಲ್ಲ. ಆಗ ನಾನು ಆ ನಾಭಿಕಮಲದ ಕೇಸರದಲ್ಲಿದ್ದುಕೊಂಡು ಹೀಗೆ ಆಲೋಚಿಸಿದೆನು.

**ಕಸ್ಮಾದಹಂ ಸಮುದ್ಭೂತಃ ಸಲಿಲೇಽಸ್ಮಿನ್ಮಹಾರ್ಣವೇ ।**
**ಕೋ ಮೇ ತ್ರಾತಾ ಪ್ರಭುಃ ಕರ್ತಾ ಸಂಹರ್ತಾ ವಾ ಯುಗಾತ್ಯಯೇ ॥೧೫॥**

ಈ ದೊಡ್ಡ ಸಮುದ್ರದ ನೀರಿನಲ್ಲಿ ನಾನು ಯಾರಿಂದ ಹುಟ್ಟಿದೆನು ? ನನ್ನನ್ನು ರಕ್ಷಿಸುವವನಾರು ? ಸೃಷ್ಟಿಸುವವನಾರು ? ಪ್ರಳಯಕಾಲದಲ್ಲಿ ಸಂಹರಿಸುವವನಾರು ?

**ನ ಚ ಭೂರ್ವಿದ್ಯತೇ ಸ್ಪಷ್ಟಾ ಯದಾಧಾರಂ ಜಲಂ ತ್ವಿದಂ ।**
**ಪಂಕಜಂ ಕಥಮುತ್ಪನ್ನಂ ಪ್ರಸಿದ್ಧಂ ರೂಢಿಯೋಗಯೋಃ ॥೧೬॥**

ಈ ನೀರು ಯಾವ ಭೂಮಿಯ ಆಧಾರದ ಮೇಲೆ ಇರಬಹುದೋ ಆ ಭೂಮಿಯೂ ಸ್ಪಷ್ಟವಾಗಿ ಕಾಣುತ್ತಿಲ್ಲವು. ಕೆಸರಿನಲ್ಲಿ ಹುಟ್ಟತಕ್ಕದ್ದೆಂಬುವ ಯೋಗಾರ್ಥದಿಂದಲೂ, ಕಮಲವೆಂದು ಪ್ರಸಿದ್ಧಿಯಿಂದಲೂ ಕೂಡಿರುವ ನನಗೂ ಆಧಾರವಾಗಿರುವ ಈ ಪಂಕಜವು ಕೆಸರಿಲ್ಲದೆ ಹೇಗೆ ಹುಟ್ಟಿತು ?

**ಪಶ್ಯಾಮ್ಯದ್ಯಾಸ್ಯ ಪಂಕಂ ತಂ ಮೂಲಂ ವೈ ಪಂಕಜಸ್ಯ ಚ ।**
**ಭವಿಷ್ಯತಿ ಧರಾ ತತ್ರ ಮೂಲಂ ನಾಸ್ತ್ಯತ್ರ ಸಂಶಯಃ ॥೧೭॥**

ಪಂಕಜಕ್ಕೆ ಅಥವಾ ಕಮಲಕ್ಕೆ ಉತ್ಪತ್ತಿಕಾರಣವಾದ ಕೆಸರನ್ನೂ ಬುಡವನ್ನೂ ನೋಡಿದರೆ ಅಲ್ಲಿ ಭೂಮಿಯು ಇದ್ದೇ ಇರುವುದು, ಎಂದು ತಿಳಿಯಬಹುದು. ಆದರೆ ಅಂತಹ ಕೆಸರೂ ಬುಡವಿದ್ದರೂ ಕಾಣುತ್ತಿಲ್ಲವು ಇದರಲ್ಲಿ ಸಂಶಯವಿಲ್ಲವು. ಈ ಕಮಲದ ಮೂಲವನ್ನು ಎಂದರೆ ಉತ್ಪತ್ತಿಸ್ಥಾನವನ್ನು ಈಗ ನಾನು ನೋಡುವೆನು.

**ಉತ್ತರನ್ ಸಲಿಲೇ ತತ್ರ ಯಾವದ್ವರ್ಷಸಹಸ್ರಕಂ ।**
**ಅನ್ವೇಷಮಾಣೋ ಧರಣೀಂ ನಾವಾಪಂ ತಾಂ ಯದಾ ತದಾ ॥೧೮॥**

ಹೀಗೆ ಎಂದುಕೊಂಡು, ಆ ನೀರಿನಲ್ಲಿ ಇಳಿದು ಹಾಯುತ್ತಾ, ಒಂದು ಸಾವಿರ ವರ್ಷದವರೆಗೂ ಹುಡುಕಿದರೂ ಸಹ ಅದರ ಬುಡವಾದ ಭೂಮಿಯು ಸಿಕ್ಕದಿರಲು, ಆಗ,

**ತಪಸ್ತಪೇತಿ ಚಾಕಾಶೇ ವಾಗಭೂದಶರೀರಿಣೀ ।**
**ತತೋ ಮಯಾ ತಪಸ್ತಪ್ತಂ ಪದ್ಮೇ ವರ್ಷಸಹಸ್ರಕಂ ॥೧೯॥**

" ತಪಸ್ಸನ್ನು ಆಚರಿಸು " ಎಂದು ಅಶರೀರವಾಣಿಯು ಆಕಾಶದಲ್ಲಿ ಕೇಳಲು, ಆಮೇಲೆ ನಾನು ಒಂದು ಸಾವಿರವರ್ಷಪರ್ಯಂತವಾಗಿ ಆ ಪದ್ಮದಲ್ಲಿ ಕುಳಿತು ತಪಸ್ಸನ್ನು ಮಾಡಿದೆನು. ಪ್ರಕೃತಿಯು ಅನಂತವಾದುದರಿಂದ ಧ್ಯಾನದಿಂದ ತಿಳಿಯಬೇಕು.

**ಸೃಜೇತಿ ಪುನರುದ್ಭೂತಾ ವಾಣೀ ತತ್ರ ಶ್ರುತಾ ಮಯಾ ।**
**ವಿಮೂಢೋಽಹಂ ತದಾಕರ್ಣ್ಯ ಕಿಂ ಸೃಜಾಮಿ ಕರೋಮಿ ಕಿಂ ॥೨೦॥**

ಆಮೇಲೆ ತಿರುಗಿ " ಸೃಷ್ಟಿಸು " ಎಂದು ಉಂಟಾದ ಅಶರೀರವಾಣಿಯು ನನಗೆ ಕೇಳಿಸಿತು. ಯಾವ ವಿಧವಾದ ತಿಳಿವಳಿಕೆಯೂ ಇಲ್ಲದ ನಾನು ಆ ವಾಕ್ಯನ್ನು ಕೇಳಿ, ಏನನ್ನು ಸೃಷ್ಟಿಸಲಿ ? ಏನನ್ನು ಮಾಡಲಿ ? ಎಂದು ಯೋಚಿಸುತ್ತಿದ್ದೆನು.

**ತದಾ ದೈತ್ಯಾವತಿಪ್ರಾಪ್ತೌ ದಾರುಣೌ ಮಧುಕೈಟಭೌ ।**
**ತಾಭ್ಯಾಂ ಬಿಭೀಷಿತಶ್ಚಾಹಂ ಯುದ್ಧಾಯ ಮಕರಾಲಯೇ ॥೨೧॥**

ಅಷ್ಟರಲ್ಲಿ, ತುಂಬ ಭಯಂಕರರಾದ ಮಧುಕೈಟಭರೆಂಬ ಇಬ್ಬರು ರಾಕ್ಷಸರು ನನ್ನ ಸಮೀಪಕ್ಕೆ ಬಂದು, ಮೊಸಳೆಗಳಿಗೆ ಮನೆಯೆಂದು ಹೆಸರಾಗಿರುವ ಆ ಸಮುದ್ರ ದಲ್ಲಿ ತಮ್ಮ ಕೂಡ ಯುದ್ಧಮಾಡಬೇಕೆಂದು ನನ್ನನ್ನು ಬಲಾತ್ಕರಿಸಿ ಹೆದರಿಸಿದರು.

**ತತೋಽಹಂ ನಾಲಮಾಲಂಬ್ಯ ವಾರಿಮಧ್ಯಮವಾತರಂ ।**
**ತದಾ ತತ್ರ ಮಯಾ ದೃಷ್ಟಃ ಪುರುಷಃ ಪರಮಾದ್ಭುತಃ ॥೨೨॥**

ಅನಂತರದಲ್ಲಿ ನಾನು ಆ ಕಮಲದ ನಾಳದ ಮಾರ್ಗವನ್ನು ಅನುಸರಿಸಿ ನೀರಿನ ಮಧ್ಯದಲ್ಲಿ ಇಳಿದೆನು. ಆಗ ಅಲ್ಲಿ ತುಂಬ ಆಶ್ಚರ್ಯಕರನಾದ ಪುರುಷನೊಬ್ಬನನ್ನು ನೋಡಿದೆನು.

**ಮೇಘಶ್ಯಾಮಶರೀರಸ್ತು ಪೀತವಾಸಾಶ್ಚತುರ್ಭುಜಃ ।**
**ಶೇಷಶಾಯೀ ಜಗನ್ನಾಥೋ ವನಮಾಲಾವಿಭೂಷಿತಃ ॥೨೩॥**

ಆ ಪುರುಷನು ಮೇಘದಂತೆ ನೀಲವಾದ ದೇಹವುಳ್ಳವನೂ, ಹಳದೀಬಣ್ಣದ ಬಟ್ಟೆಯನ್ನು ಧರಿಸಿರುವವನೂ, ನಾಲ್ಕು ಬಾಹುಗಳುಳ್ಳವನೂ, ಆದಿಶೇಷನಮೇಲೆ ಮಲಗಿರತಕ್ಕವನೂ ಜಗತ್ತಿಗೆ ಒಡೆಯನಾದವನೂ ಮತ್ತು ತುಲಸೀಹಾರದಿಂದ ಅಲಂಕರಿಸಲ್ಪಟ್ಟವನೂ ಆಗಿದ್ದನು.

**ಶಂಖಚಕ್ರಗದಾಪದ್ಮಾದ್ಯಾಯುಧೈಃ ಸುವಿರಾಜಿತಂ ।**
**ತಮದ್ರಾಕ್ಷಂ ಮಹಾವಿಷ್ಣುಂ ಶೇಷಪರ್ಯಂಕಶಾಯಿನಂ ॥೨೪॥**

ಅಲ್ಲದೆ, ಶಂಖ, ಚಕ್ರ, ಗದೆ, ಪದ್ಮ ಮೊದಲಾದ ಆಯುಧ ಮತ್ತು ಅಲಂಕಾರ ಗಳಿಂದ ತುಂಬ ಪ್ರಕಾಶಿಸುತ್ತಲಿರುವ, ಆದಿಶೇಷನೆಂಬ ಮಂಚದಲ್ಲಿ ಮಲಗಿರುವ ಮಹಾವಿಷ್ಣುವನ್ನು ನೋಡಿದೆನು.

**ಯೋಗನಿದ್ರಾಸಮಾಕ್ರಾಂತಮವಿಸ್ಪಂದಿನಮಚ್ಯುತಂ ।**
**ಶಯಾನಂ ತಂ ಸಮಾಲೋಕ್ಯ ಭೋಗಿಭೋಗೋಪರಿ ಸ್ಥಿತಂ ॥೨೫॥**

ಸರ್ಪದ ಶರೀರದ ಮೇಲೆ ಸುಖವಾಗಿ ಮಂಡಿಸಿರತಕ್ಕ, ಯೋಗನಿದ್ರೆಯಿಂದ ಆವರಿಸಲ್ಪಟ್ಟು ಅಲುಗಾಡದೆ ಮಲಗಿರುವ ಆ ಅಚ್ಯುತನನ್ನು ನೋಡಿ,

**ಚಿಂತಾ ಮಮಾದ್ಭುತಾ ಜಾತಾ ಕಿಂ ಕರೋಮೀತಿ ನಾರದ ।**
**ಮಯಾ ಸ್ಮೃತಾ ತದಾ ದೇವೀ ಸ್ತುತಾ ನಿದ್ರಾಸ್ವರೂಪಿಣೀ ॥೨೬॥**

ನಾನು ಏನನ್ನು ಮಾಡಲಿ ಎಂದು ತುಂಬ ಆಲೋಚಿಸಿದೆನು. ಮತ್ತು ಎಲೈ ನಾರದಮುನಿಯೇ, ಆಗ ನಾನು ಪ್ರಳಯಕಾಲದ ಯೋಗನಿದ್ರೆಯೇ ಸ್ವರೂಪವಾಗಿ ವುಳ್ಳ ದೇವಿಯನ್ನು ಸ್ಮರಿಸಿದೆನು, ಮತ್ತು ಸ್ತೋತ್ರಮಾಡಿದೆನು. ಇಲ್ಲಿ ಯೋಗನಿದ್ರೆ ಎಂದರೆ ಪ್ರಾಕೃತರಾದ ನಮ್ಮಂಥವರ ಅಜ್ಞಾನರೂಪವಾದ ನಿದ್ರೆಯಲ್ಲವು. " ನಿದ್ರಾ ಮುದ್ರಾಂ ನಿಖಿಲಜಗತೀರಕ್ಷಣೇ ಜಾಗರೂಕಾಂ " ಎಂದು ವರ್ಣಿಸಿರುವ ವಿಶ್ರಾಂತಿಯ ವಿವೇಚನೆಯ ಸ್ಥಿತಿಯಾಗಿದೆ. ತ್ರಿಮೂರ್ತಿಸ್ವರೂಪನಾದ ಪರಮೇಶ್ವರನು ತ್ರಿಗುಣಾತ್ಮಕವಾದ ಮಹಾಮಾಯಾ, ಮೂಲಪ್ರಕೃತಿ ಅಥವಾ ಪರಾಶಕ್ತಿ ಎಂಬ ಉಪಾಧಿಯ ಮತ್ತು ಅದರ ಪರಿಣಾಮಗಳ ಭೇದದಿಂದ ಈ ಜಗತ್ತಿನ ಸೃಷ್ಟಿ, ರಕ್ಷಣೆ ಅಥವಾ ಪ್ರಳಯರೂಪವಾದ ಕಾರ್ಯಗಳನ್ನು ನೆರವೇರಿಸುತ್ತಲೇ ಇರುತ್ತಾನೆ. ಈ ಪರಾಶಕ್ತಿಯೇ ದೇವಿಯು. ಈ ವಿಷಯವನ್ನು ದೇವೀಮಾಹಾತ್ಮ್ಯದ ೧೮ನೆಯ ಪುಟದಲ್ಲಿ ವಿವರಿಸಿದೆ. ಈ ಅಂಶವನ್ನೇ " ಏಕಾಪಿ ಶಕ್ತಿಃ ಪರಮೇಶ್ವರಸ್ಯ ಭಿನ್ನಾ ಚತುರ್ಧಾ ವಿನಿಯೋಗ ಕಾಲೇ । ಭೋಗೇ ಭವಾನೀ ಸಮರೇಷು ದುರ್ಗಾ ಕೋಪೇಚ ಕಾಲೀ ತ್ವವನೇ ತು ವಿಷ್ಣುಃ '' ಎಂಬ ಆಗಮವಾಕ್ಯವೂ ವಿವರಿಸುತ್ತದೆ.

**ದೇಹಾನ್ನಿರ್ಗತ್ಯ ಸಾ ದೇವೀ ಗಗನೇ ಸಂಸ್ಥಿತಾ ಶಿವಾ ।**
**ಅವಿತರ್ಕ್ಯಶರೀರಾ ಸಾ ದಿವ್ಯಾಭರಣಮಂಡಿತಾ ॥೨೭॥**

ಆಗ, ಇಂಥಾದ್ದೇ, ಇಷ್ಟೇ ಎಂದು ಊಹಿಸಲಶಕ್ಯವಾದ ಶರೀರವುಳ್ಳ, ಪ್ರಕಾಶ ಮಯವಾದ ಅಲಂಕಾರಗಳಿಂದ ಕೂಡಿದ, ಮತ್ತು ಮಂಗಳಸ್ವರೂಪಳಾದ ಆ ದೇವಿಯು ಆ ವಿಷ್ಣುವಿನ ಶರೀರದಿಂದ ಹೊರಹೊರಟು ಆಕಾಶದಲ್ಲಿ ನಿಂತಳು.

**ವಿಷ್ಣೋರ್ದೇಹಂ ವಿಹಾಯಾಶು ವಿರರಾಜ ನಭಃಸ್ಥಿತಾ ।**
**ಉದತಿಷ್ಠದಮೇಯಾತ್ಮಾ ತಯಾ ಮುಕ್ತೋ ಜನಾರ್ದನಃ ॥೨೮॥**

ಹೀಗೆ ಆ ಯೋಗನಿದ್ರಾದೇವಿಯು ವಿಷ್ಣುವಿನ ಶರೀರವನ್ನು ಬಿಟ್ಟು ಕೂಡಲೇ ಆಕಾಶದಲ್ಲಿ ಪ್ರಕಾಶಿಸಿದಳು. ನಿದ್ರೆಯ ರೂಪಳೂ ಆದ ಆ ದೇವಿಯಿಂದ ಬಿಡಲ್ಪಟ್ಟ ಕೂಡಲೇ, ತಿಳಿಯಲಶಕ್ಯವಾದ ಸ್ವರೂಪವುಳ್ಳ ಆ ವಿಷ್ಣುವು ಎಚ್ಚತ್ತು ಎದ್ದು ನಿಂತನು.

**ಪಂಚವರ್ಷಸಹಸ್ರಾಣಿ ಕೃತವಾನ್ ಯುದ್ಧಮುತ್ತಮಂ ।**
**ತದಾ ವಿಲೋಕಿತೌ ದೈತ್ಯೌ ಹರಿಣಾ ವಿನಿಪಾತಿತೌ ॥೨೯॥**

ಅಲ್ಲದೆ ಐದುಸಾವಿರ ವರ್ಷಗಳ ಪರ್ಯಂತವಾಗಿ ಆ ವಿಷ್ಣುವು ಮಧುಕೈಟಭರೊಡನೆ ಶ್ಲಾಘ್ಯವಾದ ಯುದ್ಧವನ್ನು ಮಾಡಿದನು. ಆಗ ಆ ರಾಕ್ಷಸರು ದೇವಿಯನ್ನು ನೋಡಿ ಮೋಹಗೊಂಡರು. ಆಗ ಅವರು ವಿಷ್ಣುವಿನಿಂದ ಕೊಲ್ಲಲ್ಪಟ್ಟರು.

**ಉತ್ಸಂಗಂ ವಿಮಲಂ ಕೃತ್ವಾ ತತ್ರೈವ ನಿಹತೌ ಚ ತೌ ।**
**ರುದ್ರಸ್ತತ್ರೈವ ಸಂಪ್ರಾಪ್ತೋ ಯತ್ರಾऽऽವಾಂ ಸಂಸ್ಥಿತಾವುಭೌ ॥೩೦॥**

ತೊಡೆಯನ್ನು ಕೊಳೆಯಿಲ್ಲದುದನ್ನಾಗಿ ಮಾಡಿ, ಅಲ್ಲಿಯೇ ಆ ರಾಕ್ಷಸರು ಕೊಲ್ಲಲ್ಪಟ್ಟರು. ಆಗ ನಾವಿಬ್ಬರೂ ಇದ್ದಲ್ಲಿಯೇ ರುದ್ರನೂ ಬಂದನು. ಈ ರುದ್ರನು ಮುಂದೆ ಹೇಳಿರುವಂತೆ ಬ್ರಹ್ಮನ ಲಲಾಟದಿಂದ ಉದ್ಭವಿಸುವ ರುದ್ರನಿಗಿಂತಲೂ ಬೇರೆಯಾದವನು. ತ್ರಿಮೂರ್ತಿಗಳಲ್ಲಿ ಒಬ್ಬನಾದ ರುದ್ರನಿಗಿಂತಲೂ ಬೇರೆಯಾಗಿ ತುರೀಯನಾದ ರುದ್ರನೂ ಉಂಟೆಂಬುದು ಕೂರ್ಮಪುರಾಣದಿಂದಲೂ ತಿಳಿಯುತ್ತದೆ.

**ತ್ರಿಭಿಃ ಸಂವೀಕ್ಷಿತಾಸ್ಮಾಭಿಃ ಸ್ವಸ್ಥಾ ದೇವೀ ಮನೋಹರಾ ।**
**ಸಂಸ್ತುತಾ ಪರಮಾ ಶಕ್ತಿರುವಾಚಾಸ್ಮಾನವಸ್ಥಿತಾನ್ ॥೩೧॥**
**ಕೃಪಾವಲೋಕನೈಃ ಕೃತ್ವಾ ಪಾವನೈರ್ಮುದಿತಾನಥ ॥**

ನಾವು ಮೂವರೂ ಆಕಾಶದಲ್ಲಿರುವ ಮತ್ತು ಮನಸ್ಸನ್ನಪಹರಿಸುವ ಸ್ವರೂಪವುಳ್ಳ ದೇವಿಯನ್ನು ನೋಡಿದೆವು. ಆ ಮೇಲೆ ಅವಳನ್ನು ಸ್ತೋತ್ರಮಾಡುತ್ತಾ ನಿಂತಿರುವ ನಮ್ಮನ್ನು ಕುರಿತು ಆ ಶ್ರೇಷ್ಠಳಾದ ಶಕ್ತಿರೂಪಳೂ ಆದ ಆ ದೇವಿಯು ಪವಿತ್ರವಾದ ತನ್ನ ಕರುಣಾದೃಷ್ಟಿಯಿಂದ ನಮ್ಮನ್ನು ಸಂತುಷ್ಟರನ್ನಾಗಿ ಮಾಡಿ ಆ ಮೇಲೆ ಹೀಗೆ ಹೇಳಿದಳು. ಹೀಗೆ ತ್ರಿಮೂರ್ತಿಗಳ ಕಾರ್ಯನಿರ್ವಾಹಕ್ಕೆ ಆವಶ್ಯಕವಾದ ಈ ಪರಾಶಕ್ತಿಯು ಅವರೆಲ್ಲರಲ್ಲೂ ಸಮಾನವಾಗಿರುವ ಮತ್ತು ಮೇಲಾದ ದೇವೀತತ್ತ್ವವು, ಎಂಬ ಸಿದ್ಧಾಂತವನ್ನು ಬೋಧಿಸಿರುವುದು ಈ ಮಹಾಪುರಾಣದ ವಿಶೇಷ ಗುಣವು. ಇದು ದೇವಿಯ ಪಾರಮ್ಯಕ್ಕೆ ತಕ್ಕುದಾಗಿಯೂ, ವೇದಾಂತದರ್ಶನದ ಉಪಾಂತ್ಯಸ್ಥಿತಿಗೆ ಅನುಗುಣವಾಗಿ ಪ್ರಾಮಾಣಿಕವಾಗಿಯೂ ಇದೆ.

॥ ದೇವ್ಯುವಾಚ ॥

**ಕಾಜೇಶಾಃ ಸ್ವಾನಿ ಕಾರ್ಯಾಣಿ ಕುರುಧ್ವಂ ಸ್ವಮತಂದ್ರಿತಾಃ ॥೩೨॥**
**ಸೃಷ್ಟಿಸ್ಥಿತಿವಿಶಿಷ್ಟಾನಿ ಹತಾವೇತೌ ಮಹಾಸುರೌ ॥**

ಎಲೈ ವಿಷ್ಣುಬ್ರಹ್ಮಮಹೇಶ್ವರರೇ, ನೀವು ಉದಾಸೀನತೆಯಿಲ್ಲದೆ ನಿಮ್ಮ ನಿಮ್ಮ ಪಾಲನಸೃಷ್ಟಿಲಯಗಳೆಂಬ ಈ ವಿಶೇಷಕಾರ್ಯಗಳನ್ನು ಕ್ರಮವಾಗಿ ಮಾಡಿರಿ. ನಿಮ್ಮ ಧರ್ಮಾಚರಣೆಗೆ ಅಡ್ಡಿಯಾಗಿ ಬಂದಿದ್ದ ಈ ದೊಡ್ಡರಾಕ್ಷಸರಿಬ್ಬರೂ ಹತರಾದರು.

**ಕೃತ್ವಾ ಸ್ವಾನಿ ನಿಕೇತಾನಿ ವಸಧ್ವಂ ವಿಗತಜ್ವರಾಃ ॥೩೩॥**
**ಪ್ರಜಾಶ್ಚತುರ್ವಿಧಾಃ ಸರ್ವಾಃ ಸೃಜಧ್ವಂ ಸ್ವವಿಭೂತಿಭಿಃ ।**

ನಿಮ್ಮ ನಿಮ್ಮ ವಾಸಸ್ಥಳಗಳನ್ನು ಮಾಡಿಕೊಂಡು ಯಾವ ಆತಂಕತಾಪಗಳೂ ಇಲ್ಲದೆ ವಾಸವಾಗಿರಿ. ಮೃತ್ಪಾಷಾಣ, ಸಸ್ಯ, ಪ್ರಾಣಿ, ಮಾನವ ಎಂಬ, ಅಥವಾ ಉದ್ಭಿಜ್ಜ, ಸ್ವೇದಜ, ಅಂಡಜ, ಜರಾಯುಜ ಎಂಬ, ಅಥವಾ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಬಗೆಯ ಪ್ರಜೆಗಳನ್ನು ನಿಮ್ಮ ಮಹಿಮೆಯಿಂದ ಸೃಷ್ಟಿಸಿರಿ.

॥ ಬ್ರಹ್ಮೋವಾಚ ॥

**ತಚ್ಛ್ರುತ್ವಾ ವಚನಂ ತಸ್ಯಾಃ ಪೇಶಲಂ ಸುಖದಂ ಮೃದು ॥೩೪॥**
**ಅಬ್ರೂಮ ತಾಮಶಕ್ತಾಃ ಸ್ಮಃ ಕಥಂ ಕುರ್ಮಸ್ತ್ವಿಮಾಃ ಪ್ರಜಾಃ ।**

ಹೀಗೆ ಮನೋಹರವಾದ, ಸುಖವನ್ನು ಕೊಡುವ, ಮೃದುವಾದ ಆ ದೇವಿಯ ಮಾತನ್ನು ಕೇಳಿ ನಾವು ಹೀಗೆ ಹೇಳಿದೆವು—ನಾವು ಶಕ್ತಿಯಿಲ್ಲದವರಾಗಿರುತ್ತೇವೆ. ಈ ಪ್ರಜೆಗಳನ್ನು ಹೇಗೆ ಸೃಷ್ಟಿಸಬಲ್ಲೆವು?

**ನ ಮಹೀ ವಿತತಾ ಮಾತಃ ಸರ್ವತ್ರ ವಿತತಂ ಜಲಂ ॥೩೫॥**
**ನ ಭೂತಾನಿ ಗುಣಾಶ್ಚಾಪಿ ತನ್ಮಾತ್ರಾಣೀಂದ್ರಿಯಾಣಿ ಚ ।**

ಓ ತಾಯಿಯೇ, ವಿಸ್ತಾರವಾದ ಭೂಮಿಯು ಇಲ್ಲವು. ಎಲ್ಲೆಡೆಯಲ್ಲಿಯೂ ಅಪಾರವಾದ ನೀರೇ ಇರುತ್ತದೆ. ಆಕಾಶಾದಿಭೂತಗಳಾಗಲೀ ಶಬ್ದವೇ ಮೊದಲಾದ ಗುಣಗಳಾಗಲೀ, ಸೂಕ್ಷ್ಮಭೂತಗಳಾಗಲೀ, ಇಂದ್ರಿಯಗಳಾಗಲೀ ಉಂಟಾಗಿರುವುದಿಲ್ಲ.

**ತದಾಕರ್ಣ್ಯ ವಚೋಽಸ್ಮಾಕಂ ಶಿವಾ ಜಾತಾ ಸ್ಮಿತಾನನಾ ॥೩೬॥**
**ಝಟಿತ್ಯೇವಾಗತಂ ತತ್ರ ವಿಮಾನಂ ಗಗನಾಚ್ಛುಭಂ ।**

ನಮ್ಮ ಮಾತುಗಳನ್ನು ಕೇಳಿ ದೇವಿಯು ಮಂದಹಾಸವುಳ್ಳವಳಾದಳು. ಆಗ ಆ ಕೂಡಲೇ ಆಕಾಶದಿಂದ ಮಂಗಳಕರವಾದ ವಿಮಾನವೊಂದು ಬಂದಿತು.

**ಸೋವಾಚಾಸ್ಮಿನ್ ಸುರಾಃ ಕಾಮಂ ವಿಶಧ್ವಂ ಗತಸಾಧ್ವಸಾಃ ॥೩೭॥**
**ವಿಮಾನೇ ಬ್ರಹ್ಮವಿಷ್ಣ್ವೀಶಾ ದರ್ಶಯಾಮ್ಯದ್ಯ ಚಾದ್ಭುತಂ ।**

ಆ ದೇವಿಯು ನಮಗೆ ಹೇಳಿದಳು—ಎಲೈ ದೇವತೆಗಳಾದ ಬ್ರಹ್ಮವಿಷ್ಣು ಮಹೇಶ್ವರರೇ, ಈ ವಿಮಾನದಲ್ಲಿ ನೀವು ಯಾವ ಭಯವೂ ಇಲ್ಲದೆ ಪ್ರವೇಶಿಸಿರಿ. ಈಗ ನಿಮಗೆ ಒಂದು ಆಶ್ಚರ್ಯವನ್ನು ತೋರಿಸುವೆನು.

**ತನ್ನಿಶಮ್ಯ ವಚಸ್ತಸ್ಯಾ ಓಮಿತ್ಯುಕ್ತ್ವಾ ಪುನರ್ವಯಂ ॥೩೮॥**
**ಸಮಾರುಹ್ಯೋಪವಿಷ್ಟಾಃ ಸ್ಮೋ ವಿಮಾನೇ ರತ್ನಮಂಡಿತೇ ।**

ಆ ದೇವಿಯ ಮಾತನ್ನು ಕೇಳಿ ನಾವು ಹಾಗೇ ಆಗಲಿ ಎಂದು ರತ್ನಗಳಿಂದ ಅಲಂಕೃತವಾದ ಆ ವಿಮಾನದಲ್ಲಿ ಹತ್ತಿ ಕುಳಿತೆವು.

**ಮುಕ್ತಾದಾಮಸುಸಂವೀತೇ ಕಿಂಕಿಣೀಜಾಲಶಬ್ದಿತೇ ॥೩೯॥**
**ಸುರಸದ್ಮನಿಭೇ ರಮ್ಯೇ ತ್ರಯಸ್ತತ್ರಾವಿಶಂಕಿತಾಃ ॥**

ಮುತ್ತು ಮುತ್ತಿನ ಸರಗಳಿಂದ ಸುತ್ತಿ ಅಲಂಕರಿಸಿರುವ, ಗೆಜ್ಜೆಗಳ ಸಮೂಹ ಗಳಿಂದ ಶ್ರಾವ್ಯವಾದ ಧ್ವನಿಗೈಯ್ಯುತ್ತಿರುವ, ಸ್ವರ್ಗಕ್ಕೆ ಸದೃಶವಾದ ಮನೋಹರವಾದ ಆ ವಿಮಾನದಲ್ಲಿ ಯಾವ ಭಯವೂ ಇಲ್ಲದೆ ನಾವು ಮೂವರೂ ಕುಳಿತೆವು.

**ಸೋಪವಿಷ್ಟಾಂಸ್ತತೋ ದೃಷ್ಟ್ವಾ ದೇವ್ಯಸ್ಮಾನ್ವಿಜಿತೇಂದ್ರಿಯಾನ್ ॥೪೦॥**
**ಸ್ವಶಕ್ತ್ಯಾ ತದ್ವಿಮಾನಂ ವೈ ನೋದಯಾಮಾಸ ಚಾಂಬರೇ ॥**

ಆ ಮೇಲೆ ಆ ದೇವಿಯು, ವಿಮಾನದಲ್ಲಿ ಜಿತೇಂದ್ರಿಯರಾದ ನಾವು ಮೂವರೂ ಕುಳಿತುದನ್ನು ನೋಡಿ, ದೇವಿಯು ತನ್ನ ಶಕ್ತಿಯಿಂದ ಆ ವಿಮಾನವನ್ನು ಆಕಾಶ ದಲ್ಲಿ ನಡೆಯಿಸಿದಳು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ದ್ವಿತೀಯೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

|| ತೃತೀಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ಬ್ರಹ್ಮೋವಾಚ ||

**ವಿಮಾನಂ ತನ್ಮನೋವೇಗಂ ಯತ್ರ ಸ್ಥಾನಾಂತರೇ ಗತಂ ।**
**ನ ಜಲಂ ತತ್ರ ಪಶ್ಯಾಮೋ ವಿಸ್ಮಿತಾಃ ಸ್ಮೋ ವಯಂ ತದಾ ॥೧॥**

ಬ್ರಹ್ಮನು ಹೇಳಿದನು—ಮನೋವೇಗವುಳ್ಳ ಆ ವಿಮಾನವು ಯಾವ ಸ್ಥಳಕ್ಕೆ ಹೋಯಿತೋ ಅಲ್ಲಿ ನಾವು ನೀರನ್ನೇ ಕಾಣಲಿಲ್ಲ. ಆಗ ನಾವು ತುಂಬಾ ಆಶ್ಚರ್ಯಗೊಂಡೆವು.

**ವೃಕ್ಷಾಃ ಸರ್ವಫಲಾ ರಮ್ಯಾಃ ಕೋಕಿಲಾರಾವಮಂಡಿತಾಃ ।**
**ಮಹೀ ಮಹೀಧರಾಃ ಕಾಮಂ ವನಾನ್ಯುಪವನಾನಿ ಚ ॥೨॥**

ಅಲ್ಲಿ ವೃಕ್ಷಗಳು ಎಲ್ಲ ಬಗೆಯ ಫಲಗಳಿಂದ ಕೂಡಿಯೂ, ಕೋಗಿಲೆಗಳ ಶ್ರಾವ್ಯವಾದ ಸ್ವರಗಳಿಂದ ಮನೋಹರವಾಗಿಯೂ ಕಂಗೊಳಿಸುತ್ತಿದ್ದುವು. ಮತ್ತು ಭೂಮಿಯೂ, ಬೆಟ್ಟಗಳೂ, ವಿಶಾಲವಾದ ಅರಣ್ಯಗಳೂ ಉದ್ಯಾನಗಳೂ ಅಲ್ಲಿ ಶೋಭಿಸುತ್ತಿದ್ದುವು.

**ನಾರ್ಯಶ್ಚ ಪುರುಷಾಶ್ಚೈವ ಪಶವಶ್ಚ ಸರಿದ್ವರಾಃ ।**
**ವಾಪ್ಯಃ ಕೂಪಾಸ್ತಡಾಗಾಶ್ಚ ಪಲ್ವಲಾನಿ ಚ ನಿರ್ಝರಾಃ ॥೩॥**

ಅಲ್ಲದೆ, ಸ್ತ್ರೀಯರೂ, ಪುರುಷರೂ, ಪಶುಗಳೂ, ಉತ್ತಮವಾದ ನದಿಗಳೂ, ಇಳಿಯುವ ಭಾವಿಗಳೂ, ಸೇದುವ ಭಾವಿಗಳೂ, ಕೆರೆಗಳೂ, ಕೊಳಗಳೂ ಗಿರಿನದಿಗಳೂ ಅಲ್ಲಿ ಕಂಗೊಳಿಸುತ್ತಿದ್ದುವು.

**ಪುರತೋ ನಗರಂ ರಮ್ಯಂ ದಿವ್ಯಪ್ರಾಕಾರಮಂಡಿತಂ ।**
**ಯಜ್ಞಶಾಲಾಸಮಾಯುಕ್ತಂ ನಾನಾಹರ್ಮ್ಯವಿರಾಜಿತಂ ॥೪॥**

ಅಲ್ಲಿ ನಮ್ಮ ಎದುರಿನಲ್ಲಿಯೇ ಉತ್ತಮವಾದ ಕೋಟೆಯಿಂದ ಸುತ್ತುವರಿಯಲ್ಪಟ್ಟ, ಯಾಗಶಾಲೆಗಳಿಂದ ಕೂಡಿರುವ, ಅನೇಕ ಬಗೆಯ ಮಹಡಿ ಮನೆಗಳಿಂದ ಶೋಭಿಸುತ್ತಲಿರುವ ಒಂದು ಪಟ್ಟಣವು ಕಾಣಿಸಿತು.

**ಪ್ರತ್ಯಭಿಜ್ಞಾ ತದಾ ಜಾತಾಪ್ಯಸ್ಮಾಕಂ ಪ್ರೇಕ್ಷ್ಯ ತತ್ಪುರಂ ।**
**ಸ್ವರ್ಗೋಽಯಮಿತಿ ಕೇನಾಸೌ ನಿರ್ಮಿತೋಽಸ್ತಿ ತದಾದ್ಭುತಂ ॥೫॥**

ಆ ಪಟ್ಟಣವನ್ನು ನೋಡಿ, ಆ ಸ್ವರ್ಗವೇ ಇದೆಂಬ ಬುದ್ಧಿಯು ನಮಗೆ ಉಂಟಾಯಿತು. ಆದರೆ ಇದನ್ನು ಸೃಷ್ಟಿಸಿದವರಾರೆಂದು ಆಗ ನಮಗೆ ಆಶ್ಚರ್ಯವಾಯಿತು.

**ರಾಜಾನಂ ದೇವಸಂಕಾಶಂ ವ್ರಜಂತಂ ಮೃಗಯಾಂ ವನೇ ।**
**ಅಸ್ಮಾಭಿಃ ಸಂಸ್ಥಿತಾ ದೃಷ್ಟಾ ವಿಮಾನೋಪರಿ ಚಾಂಬಿಕಾ ॥೬॥**

ಅಲ್ಲಿ ದೇವತೆಗಳಂತಿರತಕ್ಕ ರಾಜನೊಬ್ಬನು ಬೇಟೆಗಾಗಿ ಹೊರಡುತ್ತಲಿದ್ದುದನ್ನು ನಾವು ನೋಡಿದೆವು. ಅಲ್ಲದೆ ಅಲ್ಲಿಯೂ ವಿಮಾನದ ಮೇಲುಭಾಗದಲ್ಲಿ ಮಂಡಿಸಿರುವಳಾಗಿ ದೇವಿಯು ಕಾಣಿಸಿದಳು.

**ಕ್ಷಣಾಚ್ಚ ಚಾಲ ಗಗನೇ ವಿಮಾನಂ ಪವನೇರಿತಂ ।**
**ಮುಹೂರ್ತಾದ್ವಾ ತತಃ ಪ್ರಾಪ್ತಂ ದೇಶೇ ಚಾನ್ಯೇ ಮನೋಹರೇ ॥೭॥**

ಆ ಮೇಲೆ ಆ ಕೂಡಲೇ ವಿಮಾನವು ಗಾಳಿಯಿಂದ ಪ್ರೇರಿಸಲ್ಪಟ್ಟುದಾಗಿ ಆಕಾಶದಲ್ಲಿ ಹಾರಿತು. ಸುಮಾರು ಎರಡು ಗಳಿಗೆಯಕಾಲ ಹಾರಿ ಅನಂತರ ಅದು ಇನ್ನೊಂದು ಸುಂದರವಾದ ಸ್ಥಳದಲ್ಲಿ ಬಂದು ಸೇರಿತು.

**ನಂದನಂ ಚ ವನಂ ತತ್ರ ದೃಷ್ಟಮಸ್ಮಾಭಿರುತ್ತಮಂ ।**
**ಪಾರಿಜಾತತರುಚ್ಛಾಯಾಸಂಶ್ರಿತಾ ಸುರಭಿಃ ಸ್ಥಿತಾ ॥೮॥**

ಅಲ್ಲಿ ಶ್ರೇಷ್ಠವಾದ ಒಂದು ನಂದನವನವನ್ನು ನಾವು ನೋಡಿದೆವು. ಅದರಲ್ಲಿ ಪಾರಿಜಾತವೃಕ್ಷದ ನೆರಳನ್ನು ಆಶ್ರಯಿಸಿರುವ ಕಾಮಧೇನುವೂ ಇದ್ದಿತು.

**ಚತುರ್ದಂತೋ ಗಜಸ್ತಸ್ಯಾಃ ಸಮೀಪೇ ಸಮವಸ್ಥಿತಃ ।**
**ಅಪ್ಸರಸಾಂ ತತ್ರ ವೃಂದಾನಿ ಮೇನಕಾಪ್ರಭೃತೀನಿ ಚ ॥೯॥**

ಆ ಕಾಮಧೇನುವಿನ ಹತ್ತಿರದಲ್ಲಿಯೇ ನಾಲ್ಕು ಕೊಂಬುಗಳುಳ್ಳ ಐರಾವತವೆಂಬ ಗಜವು ನಿಂತಿದ್ದಿತು. ಅಲ್ಲಿ ಮೇನಕೆಯೇ ಮೊದಲಾದ ಅಪ್ಸರಸ್ತ್ರೀಯರ ಗುಂಪುಗಳೂ ಇದ್ದುವು.

**ಕ್ರೀಡಂತಿ ವಿವಿಧೈರ್ಭಾವೈರ್ಗಾನನೃತ್ಯಸಮನ್ವಿತೈಃ ।**
**ಗಂಧರ್ವಾಃ ಶತಶಸ್ತತ್ರ ಯಕ್ಷಾ ವಿದ್ಯಾಧರಾಸ್ತಥಾ ॥೧೦॥**

ಅಲ್ಲದೆ, ಅಲ್ಲಿ ಗಂಧರ್ವರೂ, ನೂರಾರು ಜನ ಯಕ್ಷರೂ, ವಿದ್ಯಾಧರರೂ ಇವರೆಲ್ಲರೂ ಸಂಗೀತ ಮತ್ತು ನರ್ತನಗಳಿಂದಲೂ, ನಾನಾವಿಧವಾದ ಭೋಗಸಾಮಗ್ರಿಗಳಿಂದಲೂ ಕೂಡಿ ವಿಹರಿಸುತ್ತಲಿದ್ದರು.

**ಮಂದಾರವಾಟಿಕಾಮಧ್ಯೇ ಗಾಯಂತಿ ಚ ರಮಂತಿ ಚ ।**
**ದೃಷ್ಟಃ ಶತಕ್ರತುಸ್ತತ್ರ ಪೌಲೋಮ್ಯಾ ಸಹಿತಃ ಪ್ರಭುಃ ॥೧೧॥**

ಮಂದಾರವೃಕ್ಷಗಳಿಂದ ತುಂಬಿರುವ ಉದ್ಯಾನದ ಮಧ್ಯದಲ್ಲಿ ಅವರೆಲ್ಲರೂ ಹಾಡುತ್ತಲೂ, ಕ್ರೀಡಿಸುತ್ತಲೂ ಇದ್ದರು. ಅಲ್ಲದೆ, ಅಲ್ಲಿ ಶಚೀದೇವಿಯೊಡನೆ ಸ್ವರ್ಗಾಧಿಪತಿಯಾದ ಇಂದ್ರನೂ ಕಾಣಿಸಿದನು.

**ವಯಂ ತು ವಿಸ್ಮಿತಾಶ್ಚಾಸ್ಮ ದೃಷ್ಟ್ವಾತ್ರೈವಿಷ್ಟಪಂ ತದಾ ।**
**ಯಾದಃಪತಿಂ ಕುಬೇರಂ ಚ ಯಮಂ ಸೂರ್ಯಂ ವಿಭಾವಸುಂ ॥೧೨॥**

ಮತ್ತು ಅಲ್ಲಿ ನಾವು ಸ್ವರ್ಗಕ್ಕೆ ಸಂಬಂಧಿಸಿದ್ದಂತೆ, ಕುಬೇರನನ್ನೂ, ಯಮನನ್ನೂ, ಸೂರ್ಯನನ್ನೂ, ಅಗ್ನಿಯನ್ನೂ ನೋಡಿ, ಇವರು ಯಾರು? ಎಲ್ಲಿಂದ ಬಂದರು? ಎಂಬುದನ್ನು ತಿಳಿಯಲಾರದೆ ಆಶ್ಚರ್ಯಪಟ್ಟೆವು.

**ವಿಲೋಕ್ಯ ವಿಸ್ಮಿತಾಶ್ಚಾಸ್ಮ ವಯಂ ತತ್ರ ಸುರಾನ್ ಸ್ಥಿತಾನ್ ।**
**ತದಾ ವಿನಿರ್ಗತೋ ರಾಜಾ ಪುರಾತ್ತಸ್ಮಾತ್ಸುಮಂಡಿತಾತ್ ॥೧೩॥**

ಹೀಗೆ ಅಲ್ಲಿ ಇರತಕ್ಕ ದೇವತೆಗಳನ್ನು ನೋಡಿ ನಾವು ತುಂಬ ಆಶ್ಚರ್ಯಗೊಂಡೆವು. ಆಗ ತುಂಬ ಅಲಂಕಾರಯುಕ್ತವಾದ ಆ ಪಟ್ಟಣದಿಂದ ರಾಜನೊಬ್ಬನು ಹೊರಟನು.

**ದೇವರಾಜ ಇವಾಕ್ಷೋಭ್ಯೋ ನರವಾಹ್ಯಾವನೌ ಸ್ಥಿತಃ ।**
**ವಿಮಾನಸ್ಥಾ ವಯಂ ತಚ್ಚ ಚಚಾಲ ತರಸಾ ಗತಂ ॥೧೪॥**

ಅವನು ದೇವತೆಗಳಿಗೆ ರಾಜನಾದ ಇಂದ್ರನಂತೆ ಗಾಬರಿಗೊಳ್ಳದೆ ಶಾಂತನೂ ಗಂಭೀರನೂ ಆಗಿದ್ದನು. ಮತ್ತು ಮನುಷ್ಯರು ಹೊತ್ತಿರುವ ಪಾಲಕಿಯಲ್ಲಿ ಕುಳಿತಿದ್ದನು. ವಿಮಾನದಲ್ಲಿ ನಾವು ಇದ್ದೆವು. ಆ ವಿಮಾನವು ಮುಂದಕ್ಕೆ ವೇಗದಿಂದ ಹೊರಟಿತು.

**ಬ್ರಹ್ಮಲೋಕಂ ತದಾ ದಿವ್ಯಂ ಸರ್ವದೇವನಮಸ್ಕೃತಂ ।**
**ತತ್ರ ಬ್ರಹ್ಮಾಣಮಾಲೋಕ್ಯ ವಿಸ್ಮಿತೌ ಹರಕೇಶವೌ ॥೧೫॥**

ಆ ವಿಮಾನವು ಮುಂದೆ ಹೋಗುತ್ತಿರಲು, ಎಲ್ಲಾ ದೇವತೆಗಳಿಂದಲೂ ನಮಸ್ಕರಿಸಲ್ಪಡುವ ಮನೋಹರವಾದ ಬ್ರಹ್ಮಲೋಕವು ಕಾಣಿಸಿತು. ಅಲ್ಲಿಯೂ ಒಬ್ಬ ಬ್ರಹ್ಮನನ್ನು ನೋಡಿ, ವಿಷ್ಣುವೂ ಈಶ್ವರನೂ ಆಶ್ಚರ್ಯಗೊಂಡರು.

**ಸಭಾಯಾಂ ತತ್ರ ವೇದಾಶ್ಚ ಸರ್ವೇ ಸಾಂಗಾಃ ಸ್ವರೂಪಿಣಃ ।**
**ಸಾಗರಾಃ ಸರಿತಶ್ಚೈವ ಪರ್ವತಾಃ ಪನ್ನಗೋರಗಾಃ ॥೧೬॥**

ಆ ಬ್ರಹ್ಮನ ಸಭೆಯಲ್ಲಿ, ಶಿಕ್ಷೆಯೇ ಮೊದಲಾದ ಷಡಂಗಗಳಿಂದ ಕೂಡಿದ ಎಲ್ಲಾ ವೇದಗಳೂ, ಸಮುದ್ರಗಳೂ, ನದಿಗಳೂ, ಬೆಟ್ಟಗಳೂ ವಾಸುಕಿ ತಕ್ಷಕ ಮೊದಲಾದ ಸರ್ಪಗಳೂ, ಅವಯವಗಳಿಂದ ಕೂಡಿದ ತಮ್ಮ ತಮ್ಮ ಶರೀರವುಳ್ಳವುಗಳಾಗಿ ಇದ್ದುವು.

**ಮಾಮೂಚತುಶ್ಚತುರ್ವಕ್ತ್ರ ಕೋಽಯಂ ಬ್ರಹ್ಮಾ ಸನಾತನಃ ।**
**ತಾವವೋಚಮಹಂ ನೈವ ಜಾನೇ ಸೃಷ್ಟಿಪತಿಂ ಪತಿಂ ॥೧೭॥**

ಆಗ ವಿಷ್ಣುಮಹೇಶ್ವರರು ನನ್ನನ್ನು ಕುರಿತು, ಎಲೈ ನಾಲ್ಕುಮುಖಗಳುಳ್ಳ ಬ್ರಹ್ಮನೇ, ನಮಗಿಂತಲೂ ಹಿಂದಿನಿಂದ ಇರುವ ಈ ಬ್ರಹ್ಮನಾರು? ಎಂದು ಕೇಳಿದರು. ನಾನವರನ್ನು ಕುರಿತು ಹೀಗೆ ಹೇಳಿದನು—ಸೃಷ್ಟಿಗೆ ಒಡೆಯನಾದ ಈ ಸತ್ಯಲೋಕಾಧಿಪತಿಯನ್ನು ನಾನು ತಿಳಿದಿಲ್ಲವು.

**ಕೋಽಹಂ ಕೋಽಯಂ ಕಿಮಿರ್ಥಂ ವಾ ಭ್ರಮೋಽಯಂ ಮಮ ಚೇಶ್ವರೌ ।**
**ಕ್ಷಣಾದಥ ವಿಮಾನಂ ತಚ್ಚಚಾಲಾಶು ಮನೋಜವಂ ॥೧೮॥**

ಎಲೈ ವಿಷ್ಣುಪರಮೇಶ್ವರರೇ, ನಾನು ಯಾರು ? ಈ ಬ್ರಹ್ಮನಾರು ? ಇವನು ಯಾವ ಕಾರ್ಯಕ್ಕಾಗಿ ಇದ್ದಾನೆ ? ಎಂದು ನನಗೂ ಗೊತ್ತಿಲ್ಲದೆ ಭ್ರಾಂತಿಯುಂಟಾಗಿರುತ್ತದೆ, ಎಂದು ಹೇಳಿದೆನು. ಆಮೇಲೆ ಸ್ವಲ್ಪಹೊತ್ತಿನಲ್ಲಿಯೇ ಮನೋವೇಗಕ್ಕೆ ಸಮನಾದ ವೇಗವುಳ್ಳ ಆ ವಿಮಾನವು ಅಲ್ಲಿಂದ ಚಲಿಸಿತು.

**ಕೈಲಾಸಶಿಖರೇ ಪ್ರಾಪ್ತಂ ರಮ್ಯೇ ಯಕ್ಷಗಣಾನ್ವಿತೇ ।**
**ಮಂದಾರವಾಟಿಕಾರಮ್ಯೇ ಕೀರಕೋಕಿಲಕೂಜಿತೇ ॥೧೯॥**

ಮುಂದೆ ಆ ವಿಮಾನವು ಯಕ್ಷರ ಸಮೂಹದಿಂದ ಕೂಡಿರುವ, ಮಂದಾರ ವೃಕ್ಷಗಳ ಉದ್ಯಾನದಿಂದ ಮನೋಹರವಾದ ಗಿಳಿ, ಕೋಗಿಲೆ ಇವುಗಳ ಶ್ರಾವ್ಯಧ್ವನಿಯಿಂದ ಶೋಭಿಸುತ್ತಿರುವ ಕೈಲಾಸಶಿಖರದಲ್ಲಿ ಬಂದು ನಿಂತಿತು.

**ವೀಣಾಮುರಜವಾದ್ಯೈಶ್ಚ ನಾದಿತೇ ಸುಖದೇ ಶಿವೇ ।**
**ಯದಾ ಪ್ರಾಪ್ತಂ ವಿಮಾನಂ ತತ್ತದೈವ ಸದನಾಚ್ಛುಭಾತ್ ॥೨೦॥**

ವೀಣೆ, ಮದ್ದಳೆ ಮುಂತಾದ ವಾದ್ಯಗಳಿಂದ ಮೊಳಗುತ್ತಿರುವ, ಎಲ್ಲರಿಗೂ ಸುಖವನ್ನುಂಟುಮಾಡುವ ಮತ್ತು ಮಂಗಳಕರವಾದ ಆ ಕೈಲಾಸಶಿಖರದಲ್ಲಿ ವಿಮಾನವು ಬಂದು ನಿಂತಕೂಡಲೇ, ಅಲ್ಲಿರುವ ಮನೋಹರವಾದ, ಒಂದು ದೊಡ್ಡ ಗೃಹದಿಂದ,

**ನಿರ್ಗತೋ ಭಗವಾಂಛಂಭುರ್ವೃಷಾರೂಢಸ್ತ್ರಿಲೋಚನಃ ।**
**ಪಂಚಾನನೋ ದಶಭುಜಃ ಕೃತಸೋಮಾರ್ಧಶೇಖರಃ ॥೨೧॥**

ಮೂರು ಕಣ್ಣುಗಳುಳ್ಳ, ಐದು ಮುಖಗಳುಳ್ಳ, ಹತ್ತು ಬಾಹುಗಳಿಂದ ಕೂಡಿದ ಮತ್ತು ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿರತಕ್ಕ ಪೂಜ್ಯನಾದ ಶಂಭುವು ನಂದೀಶ್ವರನೆಂಬ ವೃಷಭನನ್ನು ಹತ್ತಿಕೊಂಡು ಆ ಗೃಹದಿಂದ ಹೊರಟನು.

**ವ್ಯಾಘ್ರಚರ್ಮಪರೀಧಾನೋ ಗಜಚರ್ಮೋತ್ತರೀಯಕಃ ।**
**ಪಾರ್ಷ್ಣಿರಕ್ಷೌ ಮಹಾವೀರೌ ಗಜಾನನಷಡಾನನೌ ॥೨೨॥**

ಅವನು ಹುಲಿಯ ಚರ್ಮವನ್ನುಟ್ಟುಕೊಂಡು ಆನೆಯ ಚರ್ಮವನ್ನು ಹೊದೆದಿದ್ದನು. ಅವನ ಎಡಬಲಗಳಲ್ಲಿ ರಕ್ಷಕರಂತೆ ಇರುತ್ತಾ ತುಂಬ ವೀರರಾದ ಗಣಪತಿ ಮತ್ತು ಷಣ್ಮುಖರು ನಡೆದಿದ್ದರು.

**ಶಿವೇನ ಸಹ ಪುತ್ರೌ ದ್ವೌ ವ್ರಜಮಾನೌ ವಿರೇಜತುಃ ।**
**ನಂದಿಪ್ರಭೃತಯಃ ಸರ್ವೇ ಗಣಪಾಶ್ಚ ವರಾಶ್ಚ ತೇ ॥೨೩॥**

ಹೀಗೆ ತಂದೆಯಾದ ಶಿವನೊಂದಿಗೆ ಪುತ್ರರಾದ ಅವರಿಬ್ಬರೂ ನಡೆದುಬರುತ್ತಾ ಚನ್ನಾಗಿ ಶೋಭಿಸುತ್ತಿದ್ದರು. ನಂದಿಯೇ ಮೊದಲಾದ ಸಮಸ್ತಗಣಗಳ ಅಧಿಪತಿಗಳೂ, ಶ್ರೇಷ್ಠರಾದ ಕೆಲವರೂ ಸಹ,

**ಜಯಶಬ್ದಂ ಪ್ರಯುಂಜಾನಾ ವ್ರಜಂತಿ ಶಿವಪೃಷ್ಠಗಾಃ ।**
**ತಂ ವೀಕ್ಷ್ಯ ಶಂಕರಂ ಚಾನ್ಯಂ ವಿಸ್ಮಿತಾಸ್ತತ್ರ ನಾರದ ॥೨೪॥**

ಜಯಶಬ್ದವನ್ನು ಮಾಡುತ್ತಾ ಶಿವನನ್ನು ಹಿಂಬಾಲಿಸಿ ಹೋಗುತ್ತಲಿದ್ದರು. ಎಲೈ ನಾರದನೇ, ಆ ಇನ್ನೊಬ್ಬ ಶಂಕರನನ್ನು ನೋಡಿ ನಾವೆಲ್ಲರೂ ಅಲ್ಲಿ ಆಶ್ಚರ್ಯಗೊಂಡೆವು.

**ಮಾತೃಭಿಃ ಸಂಶಯಾವಿಷ್ಟಸ್ತತ್ರಾಹಂ ಽನ್ಯವಸಂ ಮುನೇ ।**
**ಕ್ಷಣಾತ್ತಸ್ಮಾದ್ಗಿರೇಃ ಶೃಂಗಾದ್ವಿಮಾನಂ ವಾತರಂಹಸಾ ॥೨೫॥**

ನಾನೂ ಸಹ ಮಾತೆಯಾದ ಗೌರಿಯೊಂದಿಗೆ ಕೂಡಿರುವ ಶಂಕರನನ್ನು ನೋಡಿ ತುಂಬ ಸಂದೇಹದಿಂದ ಕೂಡಿದವನಾಗಿದ್ದನು. ಆ ಮೇಲೆ, ಎಲೈ ನಾರದಮುನಿಯೇ, ಆ ಕೂಡಲೇ ನಮ್ಮ ವಿಮಾನವು ಆ ಕೈಲಾಸಪರ್ವತದ ಶಿಖರದಿಂದ ಹೊರಟು ಗಾಳಿಯ ವೇಗದಿಂದ,

**ವೈಕುಂಠಸದನಂ ಪ್ರಾಪ್ತಂ ರಮಾರಮಣಮಂದಿರಂ ।**
**ಅಸಂಭಾವ್ಯಾ ವಿಭೂತಿಶ್ಚ ತತ್ರ ದೃಷ್ಟಾ ಮಯಾ ಸುತ ॥೨೬॥**

ಲಕ್ಷ್ಮಿಗೆ ಪತಿಯಾದ ವಿಷ್ಣುವಿನ ವಾಸಸ್ಥಾನವಾದ ವೈಕುಂಠಲೋಕಕ್ಕೆ ಬಂದಿತು. ಎಲೈ ಪುತ್ರನಾದ ನಾರದನೇ, ವರ್ಣನ, ಊಹೆ, ನಂಬಿಕೆಗಳಿಗೂ ಮೀರಿ ಮೇಲಾಗಿರುವ ಐಶ್ವರ್ಯವನ್ನು ನಾನು ಅಲ್ಲಿ ನೋಡಿದೆನು.

**ವಿಸಿಷ್ಮಿಯೇ ತದಾ ವಿಷ್ಣುರ್ದೃಷ್ಟ್ವಾ ತತ್ಪುರಮುತ್ತಮಂ ।**
**ಸದನಾಗ್ರೇ ಯಯೌ ತಾವದ್ಧರಿಃ ಕಮಲಲೋಚನಃ ॥೨೭॥**

ಆಗ ನಮ್ಮೊಡನಿದ್ದ ವಿಷ್ಣುವು ಶ್ರೇಷ್ಠವಾದ ಆ ವೈಕುಂಠನಗರವನ್ನು ನೋಡಿ ತುಂಬ ಆಶ್ಚರ್ಯಪಟ್ಟನು. ಅಷ್ಟರಲ್ಲಿಯೇ ವೈಕುಂಠದಲ್ಲಿ ಕಮಲದಂತೆ ಕಣ್ಣು ಗಳುಳ್ಳ ಇನ್ನೊಬ್ಬ ವಿಷ್ಣುವು ತನ್ನ ಮನೆಯ ಮೇಲ್ಭಾಗಕ್ಕೆ ಹೋದನು.

**ಅತಸೀಕುಸುಮಾಭಾಸಃ ಪೀತವಾಸಾಶ್ಚತುರ್ಭುಜಃ ।**
**ದ್ವಿಜರಾಜಾಧಿರೂಢಶ್ಚ ದಿವ್ಯಾಭರಣಭೂಷಿತಃ ॥೨೮॥**

ಆ ವಿಷ್ಣುವು ಅಗಸೆಯ ಹೂವಿನಂತೆ ನೀಲವರ್ಣನಾಗಿಯೂ, ಹಳದೀವರ್ಣದ ಬಟ್ಟೆಯನ್ನು ಉಟ್ಟವನಾಗಿಯೂ, ನಾಲ್ಕು ಭುಜಗಳುಳ್ಳವನಾಗಿಯೂ, ಪಕ್ಷಿಗಳಿಗೆ ದೊರೆಯಾದ ಗರುಡನನ್ನೇರಿದವನಾಗಿಯೂ, ಮನೋಹರವಾದ ಆಭರಣಗಳಿಂದ ಅಲಂಕರಿಸಲ್ಪಟ್ಟವನಾಗಿಯೂ ಇದ್ದನು.

**ವೀಜ್ಯಮಾನಸ್ತದಾ ಲಕ್ಷ್ಮ್ಯಾ ಕಾಮಿನ್ಯಾ ಚಾಮರೈಃ ಶುಭೈಃ ।**
**ತಂ ವೀಕ್ಷ್ಯ ವಿಸ್ಮಿತಾಸ್ಸರ್ವೇ ವಯಂ ವಿಷ್ಣುಂ ಸನಾತನಂ ॥೨೯॥**

ಅಲ್ಲದೆ, ಆಗ ಅವನು ತನ್ನ ಪತ್ನಿಯಾದ ಸುಂದರಿಯಾದ ಲಕ್ಷ್ಮಿಯಿಂದ ಉತ್ತಮವಾದ ಚಾಮರಗಳಿಂದ ಗಾಳಿಯನ್ನು ಬೀಸಿಸಿಕೊಳ್ಳುತ್ತಿದ್ದನು. ನಮಗಿಂತಲೂ ಹಿಂದಿನವನಾದ, ಅನಾದಿನಿತ್ಯನಾದ ಆ ವಿಷ್ಣುವನ್ನು ನೋಡಿ ನಾವು ಮೂವರೂ ಆಶ್ಚರ್ಯಗೊಂಡೆವು.

**ಪರಸ್ಪರಂ ನಿರೀಕ್ಷಂತಃ ಸ್ಥಿತಾಸ್ತಸ್ಮಿನ್ವರಾಸನೇ ।**
**ತತಶ್ಚಚಾಲ ತರಸಾ ವಿಮಾನಂ ವಾತರಂಹಸಾ ॥೩೦॥**

ನಾವುಗಳು ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾ ಉತ್ತಮವಾದ ಆ ನಮ್ಮ ವಿಮಾನದಲ್ಲಿ ಕುಳಿತುಕೊಂಡಿದ್ದೆವು. ಆ ಮೇಲೆ ನಮ್ಮ ವಿಮಾನವು ಕೂಡಲೇ ಗಾಳಿಯ ವೇಗದಿಂದ ಮುಂದಕ್ಕೆ ಹೊರಟಿತು.

**ಸುಧಾಸಮುದ್ರಃ ಸಂಪ್ರಾಪ್ತೋ ಮಿಷ್ಟವಾರಿಮಹೋರ್ಮಿವಾನ್ ।**
**ಯಾದೋಗಣಸಮಾಕೀರ್ಣಶ್ಚಲದ್ವೀಚಿವಿರಾಜಿತಃ ॥೩೧॥**

ಆ ಮೇಲೆ ಆ ವಿಮಾನವು ಸಿಹಿಯಾದ ಜಲದಿಂದ ಕೂಡಿರುವ, ದೊಡ್ಡದಾದ ಅಲೆಗಳಿಂದಲೂ, ಜಲಚರಪ್ರಾಣಿಗಳಿಂದಲೂ ಕೂಡಿರುವ ಮತ್ತು ಒಂದರ ಹಿಂದೆ

ಮತ್ತೊಂದರಂತೆ ಚಲಿಸುತ್ತಿರುವ ದೊಡ್ಡ ಅಲೆಗಳಿಂದ ಶೋಭಿಸುತ್ತಿರುವ ಕ್ಷೀರ ಸಮುದ್ರದ ಸಮೀಪಕ್ಕೆ ಬಂದು ನಿಂತಿತು.

**ಮಂದಾರಪಾರಿಜಾತಾದ್ಯೈಃ ಪಾದಪೈರತಿಶೋಭಿತಃ ।**
**ನಾನಾಸ್ತರಣಸಂಯುಕ್ತೋ ನಾನಾಚಿತ್ರವಿಚಿತ್ರಿತಃ ॥೩೨॥**

ಆ ಸಮುದ್ರಮಧ್ಯದಲ್ಲಿ, ಮಂದಾರ, ಪಾರಿಜಾತ ಮೊದಲಾದ ವೃಕ್ಷಗಳಿಂದ ಶೋಭಿಸುತ್ತಲಿರುವ, ವಿಹಾರಾರ್ಥವಾಗಿ ಅಲ್ಲಲ್ಲಿ ನಿರ್ಮಿಸಿರುವ ಅನೇಕ ಆಸನಗಳಿಂದ ಒಪ್ಪುತ್ತಲಿರುವ ನಾನಾವಿಧವಾದ ಚಿತ್ರಗಳಿಂದ ಅಲಂಕರಿಸಲ್ಪಟ್ಟಿರುವ, ದ್ವೀಪವು

**ಮುಕ್ತಾದಾಮಪರಿಕ್ಷಿಪ್ತೋ ನಾನಾದಾಮವಿರಾಜಿತಃ ।**
**ಅಶೋಕಬಕುಲಾಖ್ಯೈಶ್ಚ ವೃಕ್ಷೈಃ ಕುರುವಕಾದಿಭಿಃ ॥೩೩॥**

ಮುತ್ತಿನ ಸರಗಳಿಂದ ಕಟ್ಟಿ ಅಲಂಕರಿಸಲ್ಪಟ್ಟ, ಹಾಗೆಯೇ ಅನೇಕಬಗೆಯ ಹಾರಗಳಿಂದ ವಿರಾಜಿಸುತ್ತಿರುವ, ಅಶೋಕ, ಬಕುಲ ಮೊದಲಾದ ಗಿಡಗಳಿಂದಲೂ,

**ಸಂವೃತಃ ಸರ್ವತಃ ಸೌಮ್ಯೈಃ ಕೇತಕೀಚಂಪಕೈರ್ವೃತಃ ।**
**ಕೋಕಿಲಾರಾವಸಂಘುಷ್ಟೋ ದಿವ್ಯಗಂಧಸಮನ್ವಿತಃ ॥೩೪॥**

ನೋಟಕ್ಕೆ ಹಿತವಾಗಿರುವ ಕೇದಿಗೆ ಮತ್ತು ಸಂಪಿಗೆ ವೃಕ್ಷಗಳಿಂದ ಮುಚ್ಚಲ್ಪಟ್ಟಿರುವಂತೆ ಕೂಡಿರುವ, ಎಲ್ಲೆಡೆಯಲ್ಲಿಯೂ ತುಂಬಿದ ಕೋಗಿಲೆಗಳ ಸ್ವರದಿಂದ ಮೊಳಗುತ್ತಿರುವ, ಮನೋಹರವಾದ ಪುಷ್ಪಗಳ ಸುವಾಸನೆಯಿಂದ ಕೂಡಿರುವ

**ದ್ವಿರೇಫಾತಿರಣತ್ಕಾರೈ ರಂಜಿತಃ ಪರಮಾದ್ಭುತಃ ।**
**ತಸ್ಮಿನ್ ದ್ವೀಪೇ ಶಿವಾಕಾರಃ ಪರ್ಯಂಕಃ ಸುಮನೋಹರಃ ॥೩೫॥**

ಭ್ರಮರಗಳ ಹೆಚ್ಚಾದ ಝೇಂಕಾರಧ್ವನಿಗಳಿಂದ ತುಂಬಿರುವ ಮತ್ತು ತುಂಬ ಆಶ್ಚರ್ಯಕರವಾದ ಮಣಿದ್ವೀಪವೆಂಬ ಒಂದು ದ್ವೀಪವು ಇದ್ದಿತು. ಆ ಮಣಿದ್ವೀಪದಲ್ಲಿ ಪವಿತ್ರವೂ ಮಂಗಳಕರವೂ ಆದ ಆಕಾರವುಳ್ಳ, ತುಂಬ ಆಶ್ಚರ್ಯಕರವೂ ಮನೋಹರವೂ ಆದ ಮಂಚವು ಇದ್ದಿತು.

**ರತ್ನಾಲಿಖಚಿತೋತ್ಕೃಷ್ಟೋ ನಾನಾರತ್ನವಿರಾಜಿತಃ ।**
**ದೃಷ್ಟೋಽಸ್ಮಾಭಿರ್ವಿಮಾನಸ್ಥೈರ್ದೂರತಃ ಪರಿಮಂಡಿತಃ ॥೩೬॥**

ಆ ಮಂಚವು ಮೆಟ್ಟಿರತಕ್ಕ ರತ್ನಗಳ ಸಮೂಹದಿಂದ ವ್ಯಾಪ್ತವಾಗಿಯೂ ಮತ್ತು ನಾನಾಬಗೆಯ ನವರತ್ನಗಳಿಂದ ಶೋಭಿಸುತ್ತಲೂ ಇದ್ದಿತು. ನಾವುಗಳು ವಿಮಾನದಲ್ಲಿದ್ದುಕೊಂಡು ಚನ್ನಾಗಿ ಅಲಂಕೃತವಾಗಿದ್ದ ಆ ಮಂಚವನ್ನು ದೂರ ದಲ್ಲಿಯೇ ನೋಡಿದೆವು.

**ನಾನಾಸ್ತರಣಸಂಛನ್ನ ಇಂದ್ರಚಾಪಸಮನ್ವಿತಃ ।**
**ಪರ್ಯಂಕಪ್ರವರೇ ತಸ್ಮಿನ್ನುಪವಿಷ್ಟಾ ವರಾಂಗನಾ ॥೩೭॥**

ಮತ್ತು ಅದರಲ್ಲಿ ಅನೇಕಬಗೆಯ ಮಗ್ಗಲು ಹಾಸಿಗೆಗಳನ್ನು ಹಾಸಲಾಗಿತ್ತು. ನವರತ್ನಗಳ ಕಾಂತಿಯಿಂದ, ಕಾಮನ ಬಿಲ್ಲಿನ ಬಣ್ಣದಿಂದ ಕೂಡಿ ಬೆಳಗುತ್ತಿತ್ತು. ಇಂತಹ ಆ ಉತ್ತಮವಾದ ಮಂಚದಲ್ಲಿ ಓರ್ವ ಶ್ರೇಷ್ಠಳಾದ ದಿವ್ಯಸ್ತ್ರೀಯು ಮಂಡಿಸಿದ್ದಳು.

**ರಕ್ತಮಾಲ್ಯಾಂಬರಧರಾ ರಕ್ತಗಂಧಾನುಲೇಪನಾ ।**
**ಸುರಕ್ತನಯನಾ ಕಾಂತಾ ವಿದ್ಯುತ್ಕೋಟಿಸಮಪ್ರಭಾ ॥೩೮॥**

ಅವಳು ಕೆಂಪುವರ್ಣದ ಹಾರ ಮತ್ತು ವಸ್ತ್ರಗಳನ್ನು ಧರಿಸಿ, ಕೆಂಪುಗಂಧವನ್ನು ಹಚ್ಚಿಕೊಂಡಿದ್ದಳು. ಅವಳು ಚನ್ನಾಗಿ ಕೆಂಪಾದ ಕಣ್ಣುಗಳುಳ್ಳವಳೂ, ತುಂಬ ಮನೋಹರಳೂ ಮತ್ತು ಕೋಟಿ ಮಿಂಚುಗಳಂತೆ ಕಾಂತಿಯುಳ್ಳವಳೂ ಆಗಿದ್ದಳು.

**ಸುಚಾರುವದನಾ ರಕ್ತದಂತಚ್ಛದವಿರಾಜಿತಾ ।**
**ರಮಾಕೋಟ್ಯಧಿಕಾ ಕಾಂತ್ಯಾ ಸೂರ್ಯಬಿಂಬನಿಭಾಖಿಲಾ ॥೩೯॥**

ಮತ್ತು ಅವಳು ಸುಂದರವಾದ ಮುಖವುಳ್ಳವಳಾಗಿಯೂ, ಕೆಂಪಾದ ತುಟಿ ಗಳಿಂದ ಶೋಭಿಸುತ್ತಾ, ಕಾಂತಿಯಲ್ಲಿ ಕೋಟಿಲಕ್ಷ್ಮಿಯರಿಗಿಂತಲೂ ಹೆಚ್ಚಾದವ ಳಾಗಿಯೂ, ಸೂರ್ಯಮಂಡಲದಂತೆ ಪ್ರಕಾಶಿಸುತ್ತಿರುವವಳಾಗಿಯೂ ಇದ್ದಳು.

**ವರಪಾಶಾಂಕುಶಾಭೀಷ್ಟಧರಾ ಶ್ರೀಭುವನೇಶ್ವರೀ ।**
**ಅದೃಷ್ಟಪೂರ್ವಾ ದೃಷ್ಟ್ವಾ ಸಾ ಸುಂದರೀ ಸ್ಮಿತಭೂಷಣಾ ॥೪೦॥**

ಶ್ರೇಷ್ಠವಾದ ಪಾಶ, ಅಂಕುಶ, ಅಭಯ ಮತ್ತು ವರದಮುದ್ರೆ ಇವುಗಳಿಂದ ಕೂಡಿರುವ, ಹಿಂದೆಂದೂ ನಾವು ನೋಡದೆ ಇದ್ದಂತಹ ಸುಂದರಿಯಾದ ಮತ್ತು ಮಂದ ಹಾಸದಿಂದ ಶೋಭಿಸುವ ಭುವನೇಶ್ವರೀದೇವಿಯು ನಮಗೆ ಕಾಣಿಸಿದಳು.

**ಹ್ರೀಂಕಾರಜಪನಿಷ್ಠೈಸ್ತು ಪಕ್ಷಿವೃಂದೈರ್ನಿಷೇವಿತಾ ।**
**ಅರುಣಾ ಕರುಣಾಮೂರ್ತಿಃ ಕುಮಾರೀ ನವಯೌವನಾ    ॥೪೦॥**

ಅವಳು ಹ್ರೀಂಕಾರವನ್ನು ಜಪಿಸುತ್ತಲಿರುವ ಪಕ್ಷಿಗಳ ಸಮೂಹದಿಂದ ಸೇವಿಸಲ್ಪಡುವವಳಾಗಿಯೂ, ಕೆಂಪುವರ್ಣದ ಮತ್ತು ದಯಾಮಯವಾದ ಸ್ವರೂಪವುಳ್ಳವಳಾಗಿಯೂ, ಹೊಸಯೌವನದಿಂದ ಕೂಡಿದ ಯುವತಿಯಾಗಿಯೂ ಇದ್ದಳು.

**ಸರ್ವಶೃಂಗಾರವೇಷಾಢ್ಯಾ ಮಂದಸ್ಮಿತಮುಖಾಂಬುಜಾ ।**
**ಉದ್ಯತ್ಪೀನಕುಚದ್ವಂದ್ವನಿರ್ಜಿತಾಂಭೋಜಕುಟ್ಮಲಾ    ॥೪೨॥**

ಮತ್ತು ಎಲ್ಲ ಬಗೆಯ ಶೃಂಗಾರದ ವೇಷಗಳಿಂದಲೂ ಅಲಂಕೃತಳಾಗಿರುವ ಮುಗುಳುನಗೆಯಿಂದ ಕೂಡಿದ ಮುಖವುಳ್ಳವಳಾದ, ಮೇಲೆಮೇಲೆ ಉಬ್ಬಿ ಬರುತ್ತಲಿರುವ ತುಂಬಿದ ಸ್ತನದ್ವಯದಿಂದ ಕಮಲದ ಮೊಗ್ಗುಗಳ ಅಂದವನ್ನು ಜಯಿಸುತ್ತಲಿರುವವಳಾಗಿಯೂ ಕಾಣುತ್ತಿದ್ದಳು.

**ನಾನಾಮಣಿಗಣಾಕೀರ್ಣಭೂಷಣೈರುಪಶೋಭಿತಾ ।**
**ಕನಕಾಂಗದಕೇಯೂರಕಿರೀಟಪರಿಶೋಭಿತಾ    ॥೪೩॥**

ಅನೇಕರತ್ನಗಳ ಸಮೂಹಗಳಿಂದ ಕೆತ್ತಲ್ಪಟ್ಟ ಅಲಂಕಾರಗಳಿಂದ ಪ್ರಕಾಶಿಸುತ್ತಲೂ ಸುವರ್ಣಮಯವಾದ ಭುಜಕೀರ್ತಿ (ಬಾಹುಪುರಿ) ಕಿರೀಟ ಇವುಗಳಿಂದ ಬೆಳಗುತ್ತಲೂ ಇದ್ದಳು.

**ಕನಚ್ಛ್ರೀಚಕ್ರತಾಟಂಕವಿಟಂಕವದನಾಂಬುಜಾ ।**
**ಹೃಲ್ಲೇಖಾ ಭುವನೇಶೀತಿ ನಾಮಜಾಪಪರಾಯಣೈಃ    ॥೪೪॥**

ಅಲ್ಲದೆ ಹೊಳೆಯುತ್ತಲಿರುವ ಶ್ರೀಚಕ್ರದ ಆಕಾರವುಳ್ಳ ಕುಂಡಲಗಳ ಕಾಂತಿಯಿಂದ ಕೂಡಿರುವ, ಸುಂದರವಾದ ಕಮಲದಂತಿರುವ ಮುಖವುಳ್ಳವಳಾಗಿಯೂ ಇದ್ದಳು. ಅವಳು ಧ್ಯಾನಮಾಡುವವರ ಹೃದಯದಲ್ಲಿ ಗೆರೆಯಂತೆ ಖಚಿತವಾಗಿ ಸ್ಫುರಿಸುವುದರಿಂದ " ಹೃಲ್ಲೇಖಾ " ಎಂದೂ, ಈ ಎಲ್ಲ ಪ್ರಪಂಚಕ್ಕೂ ಒಡೆಯಳಾದುದರಿಂದ " ಭುವನೇಶ್ವರೀ " ಎಂದೂ ನಾಮವನ್ನು ಜಪಿಸುತ್ತಿರುವ,

**ಸಖೀವೃಂದೈಃ ಸ್ತುತಾ ನಿತ್ಯಂ ಭುವನೇಶೀ ಮಹೇಶ್ವರೀ ।**
**ಹೃಲ್ಲೇಖಾದ್ಯಾಭಿರಮರಕನ್ಯಾಭಿಃ ಪರಿವೇಷ್ಟಿತಾ    ॥೪೫॥**

ಸಖಿಯರ ಸಮೂಹದಿಂದ ನಿತ್ಯವೂ ಸ್ತೋತ್ರಮಾಡಲ್ಪಡುತ್ತಿರುವ, ಜಗತ್ತಿಗೇ ಒಡೆಯಳಾದ ಆ ಭುವನೇಶ್ವರಿಯು ಹೃಲ್ಲೇಖೆಯೇ ಮೊದಲಾದ ದೇವಕನ್ಯೆಯರಿಂದ ಸುತ್ತುವರೆಯಲ್ಪಟ್ಟವಳಾಗಿದ್ದಳು.

**ಅನಂಗಕುಸುಮಾದ್ಯಾಭಿರ್ದೇವೀಭಿಃ ಪರಿವೇಷ್ಟಿತಾ ।**
**ದೇವೀ ಷಟ್ಕೋಣಮಧ್ಯಸ್ಥಾ ಯಂತ್ರರಾಜೋಪರಿಸ್ಥಿತಾ ॥೪೬॥**

ಅನಂಗಕುಸುಮೆಯೇ ಮೊದಲಾದ ಪರಿವಾರಶಕ್ತಿರೂಪಿಣಿಯರಾದ ದೇವಿಯರಿಂದ ಸುತ್ತುವರಿಯಲ್ಪಟ್ಟವಳಾಗಿ ಆರು ಮೂಲೆಗಳುಳ್ಳ, ಯಂತ್ರಗಳ ರಾಜನಾದ ಶ್ರೀಚಕ್ರಯಂತ್ರದ ಮೇಲೆ ಆ ದೇವಿಯು ಮಂಡಿಸಿದ್ದಳು.

**ದೃಷ್ಟ್ವಾ ತಾಂ ವಿಸ್ಮಿತಾಃ ಸರ್ವೇ ವಯಂ ತತ್ರ ಸ್ಥಿತಾ ಭವನ್ ।**
**ಕೇಯಂ ಕಾಂತಾ ಚ ಕಿಂ ನಾಮ ನ ಜಾನೀಮೋಽತ್ರ ಸಂಸ್ಥಿತಾ ॥೪೭॥**

ಅಲ್ಲಿ ಆ ದೇವಿಯನ್ನು ನೋಡಿ ನಾವು ಮೂವರೂ ಆಶ್ಚರ್ಯಗೊಂಡವರಾದವು. ಇಲ್ಲಿರುವ ಇವಳಾರು ? ಮನೋಹರಳಾದ ಇವಳ ಹೆಸರೇನು ? ಎಂದು ಮುಂತಾದ ವಿಷಯಗಳು ಇಲ್ಲಿದ್ದರೂ ತಿಳಿಯಲಾರದೆ ಇದ್ದೇವೆ ! ಎಂದುಕೊಂಡೆವು.

**ಸಹಸ್ರನಯನಾ ರಾಮಾ ಸಹಸ್ರಕರಸಂಯುತಾ ।**
**ಸಹಸ್ರವದನಾ ರಮ್ಯಾ ಭಾತಿ ದೂರಾದಸಂಶಯಂ ॥೪೮॥**

ದೂರದಿಂದ ನೋಡಿದರೂ ಸಹ ಸಂಶಯಕ್ಕೆಡೆಯಿಲ್ಲದಂತೆ ಈ ದೇವಿಯು, ಸಾವಿರ ಕಣ್ಣುಗಳುಳ್ಳವಳಾಗಿಯೂ, ಸಾವಿರ ಕೈಗಳುಳ್ಳವಳಾಗಿಯೂ, ಸಾವಿರ ಮುಖಗಳುಳ್ಳವಳಾಗಿಯೂ, ಮನೋಹರಳಾಗಿಯೂ ತೋರುತ್ತಿರುವಳು.

**ನಾಪ್ಸರಾ ನಾಪಿ ಗಂಧರ್ವೀ ನೇಯಂ ದೇವಾಂಗನಾ ಕಿಲ ।**
**ಇತಿ ಸಂಶಯಮಾಪನ್ನಾಸ್ತತ್ರ ನಾರದ ಸಂಸ್ಥಿತಾಃ ॥೪೯॥**

ಎಲೈ ನಾರದನೇ, ಇವಳು ಅಪ್ಸರಸ್ತ್ರೀಯಲ್ಲವು. ಗಂಧರ್ವಸ್ತ್ರೀಯೂ ಅಲ್ಲವು. ದೇವತಾಸ್ತ್ರೀಯೂ ಅಲ್ಲವು ಎಂದು ನಾವು ತುಂಬ ಸಂದೇಹಗೊಂಡವರಾಗಿದ್ದೆವು.

**ತದಾಸೌ ಭಗವಾನ್ವಿಷ್ಣುರ್ದೃಷ್ಟ್ವಾ ತಾಂ ಚಾರುಹಾಸಿನೀಂ ।**
**ಉವಾಚಾಂಬಾಂ ಸ್ವವಿಜ್ಞಾನಾತ್ಕೃತ್ವಾ ಮನಸಿ ನಿಶ್ಚಯಂ ॥೫೦॥**

ಆಗ ಪೂಜ್ಯನಾದ ವಿಷ್ಣುವು, ಮನೋಹರವಾದ ಮುಗುಳುನಗೆಯಿಂದ ಮಿನುಗುತ್ತಿರುವ ಆ ದೇವಿಯನ್ನು ನೋಡಿ, ತನ್ನ ಸ್ಮರಣೆಯಿಂದ ಮನಸ್ಸಿನಲ್ಲಿ ಅವಳು ಎಲ್ಲರಿಗೂ ತಾಯಿಯಾಗಿರುವವಳೆಂದು ನಿಶ್ಚಯವನ್ನು ಮಾಡಿಕೊಂಡು ನಮ್ಮನ್ನು ಸಂಬೋಧಿಸಿ ಹೀಗೆ ಹೇಳಿದನು.

**ಏಷಾ ಭಗವತೀ ದೇವೀ ಸರ್ವೇಷಾಂ ಕಾರಣಂ ಹಿ ನಃ ।**
**ಮಹಾವಿದ್ಯಾ ಮಹಾಮಾಯಾ ಪೂರ್ಣಾ ಪ್ರಕೃತಿರವ್ಯಯಾ ॥೫೧॥**

ಇವಳು ಷಡ್ಗುಣೈಶ್ವರ್ಯವುಳ್ಳ ಮತ್ತು ನಮ್ಮೆಲ್ಲರಿಗೂ ಕಾರಣಳಾದ ದೇವಿಯು ; ಮತ್ತು ಎಲ್ಲಕ್ಕೂ ಮಿಗಿಲಾದ ಬ್ರಹ್ಮವಿದ್ಯೆಯೇ ಸ್ವರೂಪವಾಗಿ ಉಳ್ಳವಳು ; ಎಲ್ಲವನ್ನೂ ಆವರಿಸಿರುವ ಮಹಾಮಾಯೆಯು ; ಪ್ರಪಂಚಕ್ಕೆ ಮುಖ್ಯವಾದ ಕಾರಣಳು; ಎಂದಿಗೂ ನಾಶವೇ ಮುಂತಾದ ವಿಕಾರಗಳಿಲ್ಲದವಳು.

**ದುರ್ಜ್ಞೇಯಾಽಲ್ಪಧಿಯಾಂ ದೇವೀ ಯೋಗಗಮ್ಯಾ ದುರಾಶಯಾ ।**
**ಇಚ್ಛಾ ಪರಾತ್ಮನಃ ಕಾಮಂ ನಿತ್ಯಾನಿತ್ಯಸ್ವರೂಪಿಣೀ ॥೫೨॥**

ಈ ದೇವಿಯು ಸ್ವಲ್ಪಬುದ್ಧಿಯುಳ್ಳವರಿಗೆ ತಿಳಿಯಲಸಾಧ್ಯಳು. ಯೋಗದಿಂದ ಏಕಾಗ್ರವಾಗಿರುವ ಮನಸ್ಸಿನಿಂದ ಮಾತ್ರ ತಿಳಿಯಲ್ಪಡತಕ್ಕವಳು. ಸಾಧಾರಣ ಜನರಿಂದ ತಿಳಿಯಲು ಅಸಾಧ್ಯವಾದ ಅಭಿಪ್ರಾಯವುಳ್ಳವಳು. ಪರಬ್ರಹ್ಮದ ಇಚ್ಛೆಯ ಸ್ವರೂಪಳು. ಅಲ್ಲದೆ, ಇವಳು ನಿತ್ಯವಾದ ಬ್ರಹ್ಮಸ್ವರೂಪಳೂ, ಅನಿತ್ಯವಾದ ಮಾಯಾ ಪರಿಣಾಮಗಳ ಸ್ವರೂಪಳೂ ಹೀಗೆ ಉಭಯಾತ್ಮಳೂ ಆಗಿರುತ್ತಾಳೆ.

**ದುರಾರಾಧ್ಯಾಽಲ್ಪಭಾಗ್ಯೈಶ್ಚ ದೇವೀ ವಿಶ್ವೇಶ್ವರೀ ಶಿವಾ ।**
**ವೇದಗರ್ಭಾ ವಿಶಾಲಾಕ್ಷೀ ಸರ್ವೇಷಾಮಾದಿರೀಶ್ವರೀ ॥೫೩॥**

ಪ್ರಪಂಚಕ್ಕೆ ಒಡೆಯಳಾದ ಮಂಗಳಸ್ವರೂಪಳಾದ ಈ ದೇವಿಯನ್ನು ಸ್ವಲ್ಪ ಅದೃಷ್ಟವುಳ್ಳವರು ಆರಾಧಿಸಿ ಸಿದ್ಧಿಯನ್ನು ಪಡೆಯಲು ಸಾಧ್ಯವಿಲ್ಲವು. ಇವಳು ಕಾಪಾಡಿದ್ದ ವೇದವನ್ನು ಹೊರಹೊಮ್ಮಿಸಿದವಳು ಮತ್ತು ವಿಶಾಲವಾದ ಕಣ್ಣುಗಳುಳ್ಳ ಇವಳು ಎಲ್ಲರಿಗೂ ಮೊದಲಿನವಳೂ ಮತ್ತು ಒಡೆಯಳೂ ಆಗಿದ್ದಾಳೆ.

**ಏಷಾ ಸಂಹೃತ್ಯ ಸಕಲಂ ವಿಶ್ವಂ ಕ್ರೀಡತಿ ಸಂಕ್ಷಯೇ ।**
**ಲಿಂಗಾನಿ ಸರ್ವಜೀವಾನಾಂ ಸ್ವಶರೀರೇ ನಿವೇಶ್ಯ ಚ ॥೫೪॥**

ಈ ದೇವಿಯು ಪ್ರಳಯಕಾಲದಲ್ಲಿ ಎಲ್ಲ ಪ್ರಪಂಚವನ್ನೂ ಉಪಸಂಹರಿಸಿ ಎಲ್ಲ ಜೀವರ ಲಿಂಗಶರೀರಗಳನ್ನು ತನ್ನ ಶರೀರದಲ್ಲಿ ಅಡಗಿಸಿ ಇಟ್ಟುಕೊಂಡು ವಿಹರಿಸುತ್ತಾಳೆ.

**ಸರ್ವಬೀಜಮಯೀ ಹ್ಯೇಷಾ ರಾಜತೇ ಸಾಂಪ್ರತಂ ಸುರೌ ।**
**ವಿಭೂತಯಃ ಸ್ಥಿತಾಃ ಪಾರ್ಶ್ವೇ ಪಶ್ಯತಾಂ(ಃ) ಕೋಟಿಶಃ ಕ್ರಮಾತ್ ॥೫೫॥**

ಓ ಬ್ರಹ್ಮಶಂಕರರೇ, ಇವಳು ಎಲ್ಲಕ್ಕೂ ಕಾರಣಸ್ವರೂಪಳಾಗಿದ್ದು, ಪ್ರಕೃತ ದಲ್ಲಿ ಇಲ್ಲಿ ವಿಶೇಷವಾಗಿ ಮೈದೋರಿ ಪ್ರಕಾಶಿಸುತ್ತಿದ್ದಾಳೆ. ಅವಳ ಐಶ್ವರ್ಯಗಳು ಎಂದರೆ ಸಿದ್ಧಿಗಳು ಶರೀರವನ್ನು ಧರಿಸಿ ಅವಳ ಸಮೀಪದಲ್ಲಿಯೇ ಕೋಟಿಗಟ್ಟಲೆ ಯಾಗಿ ಇರುತ್ತವೆ, ಕ್ರಮವಾಗಿ ಅವರನ್ನೂ ನೋಡಿರಿ.

**ದಿವ್ಯಾಭರಣಭೂಷಾಢ್ಯಾ ದಿವ್ಯಗಂಧಾನುಲೇಪನಾಃ ।**
**ಪರಿಚರ್ಯಾಪರಾಃ ಸರ್ವಾಃ ಪಶ್ಯತಾಂ ಬ್ರಹ್ಮಶಂಕರೌ ॥೫೬॥**

ಓ ಬ್ರಹ್ಮಶಂಕರರೇ, ಆ ಸಿದ್ಧಿಗಳು ಪ್ರಕಾಶಮಾನವಾದ ಆಭರಣಗಳಿಂದ ಅಲಂಕೃತರಾಗಿಯೂ, ಶ್ರೇಷ್ಠವಾದ ಗಂಧವನ್ನು ಹಚ್ಚಿಕೊಂಡಿರುವವರಾಗಿಯೂ, ದೇವಿಯನ್ನು ಸೇವಿಸುವುದರಲ್ಲಿ ಆಸಕ್ತರಾಗಿದ್ದಾರೆ. ಅವರನ್ನೂ ನೋಡಿರಿ.

**ಧನ್ಯಾ ವಯಂ ಮಹಾಭಾಗಾಃ ಕೃತಕೃತ್ಯಾಃ ಸ್ಮ ಸಾಂಪ್ರತಂ ।**
**ಯದತ್ರ ದರ್ಶನಂ ಪ್ರಾಪ್ತಾ ಭಗವತ್ಯಾಃ ಸ್ವಯಂ ತ್ವಿದಂ ॥೫೭॥**

ಓ ಪುಣ್ಯಶಾಲಿಗಳೇ, ಪೂಜ್ಯಳಾದ ದೇವಿಯ ದರ್ಶನವು ಸಾಕ್ಷಾತ್ತಾಗಿ ನಮಗೆ ಇಲ್ಲಿ ತಾನಾಗಿಯೇ ದೊರೆದುದರಿಂದ ನಾವು ಧನ್ಯರಾದೆವು. ಮತ್ತು ಕೃತ ಕೃತ್ಯರಾದೆವು.

**ತಪಸ್ತಪ್ತಂ ಪುರಾ ಯತ್ನಾತ್ತಸ್ಯೇದಂ ಫಲಮುತ್ತಮಂ ।**
**ಅನ್ಯಥಾ ದರ್ಶನಂ ಕುತ್ರ ಭವೇದಸ್ಮಾಕಮಾದರಾತ್ ॥೫೮॥**

ನಾವು ಹಿಂದೆ ತುಂಬಾ ಪ್ರಯತ್ನದಿಂದ ತಪಸ್ಸನ್ನು ಮಾಡಿದ್ದವರಾಗಿರಬೇಕು. ಆದುದರಿಂದಲೇ ಈ ಉತ್ತಮವಾದ ಫಲವು ದೊರೆತಿರುವುದು. ಇಲ್ಲದಿದ್ದರೆ ನಮಗೆ ಈ ದೇವಿಯು ಆದರದಿಂದ ಹೀಗೆ ವಿಶ್ವರೂಪದರ್ಶನವನ್ನು ನಮಗೆಲ್ಲಿ ಕೊಡುತ್ತಿದ್ದಳು ?

**ಪಶ್ಯಂತಿ ಪುಣ್ಯಪುಂಜಾ ಯೇ ಯೇ ವದಾನ್ಯಾಸ್ತಪಸ್ವಿನಃ ।**
**ರಾಗಿಣೋ ನೈವ ಪಶ್ಯಂತಿ ದೇವೀಂ ಭಗವತೀಂ ಶಿವಾಂ ॥೫೯॥**

ಯಾರು ಹೆಚ್ಚಾದ ಪುಣ್ಯವನ್ನು ಮಾಡಿರುವರೋ ಮತ್ತು ದಾನಶಾಲಿಗಳೂ ತಪಸ್ಸನ್ನಾ ಚರಿಸಿದವರೂ ಆಗಿರುವರೋ ಅಂಥವರು ಮಾತ್ರ ದೇವಿಯ ದರ್ಶನವನ್ನು ಪಡೆಯುತ್ತಾರೆ. ರಾಗಿಗಳು ಎಂದರೆ ವಿಷಯಸುಖಗಳಲ್ಲಿ ಮಗ್ನರಾಗಿರುವವರು ಮಂಗಳ ಸ್ವರೂಪಳಾಗಿಯೂ, ಪೂಜ್ಯಳಾಗಿಯೂ ಇರುವ ಈ ದೇವಿಯನ್ನು ನೋಡಲಾರರು.

**ಮೂಲಪ್ರಕೃತಿರೇವೈಷಾ ಸದಾ ಪುರುಷಸಂಗತಾ ।**
**ಬ್ರಹ್ಮಾಂಡಂ ದರ್ಶಯತ್ಯೇಷಾ ಕೃತ್ವಾ ವೈ ಪರಮಾತ್ಮನೇ ॥೬೦॥**

ಇವಳೇ ಜಗತ್ತಿಗೆಲ್ಲಕ್ಕೂ ಆದಿಕಾರಣಳು. ಮತ್ತು ಇವಳು ಪುರುಷನ ಎದುರಿನಲ್ಲಿ ಸಾನ್ನಿಧ್ಯವನ್ನು ಪಡೆದು ಪ್ರಪಂಚವನ್ನು ಸೃಷ್ಟಿಸಿ, ತಿರುಗಿ ಆ ಪರಮಾತ್ಮನಿಗೇ ಅದರ ಸಂಸಾರದ ವ್ಯವಹಾರವನ್ನು ತೋರಿಸುತ್ತಿರುತ್ತಾಳೆ.

**ದ್ರಷ್ಟಾಸೌ ದೃಶ್ಯಮಖಿಲಂ ಬ್ರಹ್ಮಾಂಡಂ ದೇವತಾಸ್ಸುರಾ ।**
**ತಸ್ಯೈಷಾ ಕಾರಣಂ ಸರ್ವಾ ಮಾಯಾ ಸರ್ವೇಶ್ವರೇಶ್ವರೀ ॥೬೧॥**

ಓ ಬ್ರಹ್ಮಶಂಕರರೇ, ಆ ಆತ್ಮನು ನೋಡತಕ್ಕವನು ಎಂದರೆ ಸಾಕ್ಷಿಸ್ವರೂಪನು. ಈ ಎಲ್ಲ ಪ್ರಪಂಚವೂ, ದೇವತೆಗಳೂ ಸಹ ದೃಶ್ಯಗಳು ಎಂದರೆ ನೋಡಲ್ಪಡುವುದಕ್ಕೆ ಯೋಗ್ಯವಾದವುಗಳು ಮತ್ತು ಅನಿತ್ಯಗಳು. ಈ ಎಲ್ಲ ದೃಶ್ಯಪ್ರಪಂಚಕ್ಕೆ ಈ ದೇವಿಯು ಕಾರಣಳೂ, ಆದಿಮಾಯೆಯೂ, ಎಲ್ಲಕ್ಕೂ ಒಡೆಯಳೂ ಮತ್ತು ಮಂಗಳ ಸ್ವರೂಪಳೂ ಆಗಿದ್ದಾಳೆ.

**ಕ್ವಾಹಂ ವಾ ಕ್ವ ಸುರಾಸ್ಸರ್ವೇ ರಮಾದ್ಯಾಃ ಸುರಯೋಷಿತಃ ।**
**ಲಕ್ಷಾಂಶೇನ ತುಲಾಮಸ್ಯಾ ನ ಭವಾಮಃ ಕಥಂಚನ ॥೬೨॥**

ನಾನೆಲ್ಲಿ ? ಸಮಸ್ತದೇವತೆಗಳೆಲ್ಲಿ ? ಲಕ್ಷ್ಮಿಯೇ ಮೊದಲಾದ ದೇವಸ್ತ್ರೀಯರೆಲ್ಲಿ ? ನಾವು ಈ ದೇವಿಯ ಮಹಿಮೆಯಲ್ಲಿ ಲಕ್ಷದಲ್ಲಿ ಒಂದು ಪಾಲಿನಷ್ಟು ಸಾಮ್ಯವನ್ನೂ ಹೇಗೂ ಕೂಡ ಹೊಂದಲಾರೆವು.

**ಸೈಷಾ ವರಾಂಗನಾ ನಾಮ ಯಾ ದೃಷ್ಟಾ ವೈ ಮಹಾರ್ಣವೇ ।**
**ಬಾಲಭಾವೇ ಮಹಾದೇವೀ ದೋಲಯಂತೀವ ಮಾಂ ಮುದಾ ॥೬೩॥**

ಯಾವ ಉತ್ತಮಸ್ತ್ರೀಯನ್ನು ನಾನು ಬಾಲ್ಯದಲ್ಲಿ ಆ ದೊಡ್ಡಸಮುದ್ರದಲ್ಲಿ ನೋಡಿದ್ದೆನೋ ಅವಳೇ ಇವಳು ! ಆಗ ಮಹಾದೇವಿಯಾದ ಇವಳು ಮಗುವಾಗಿದ್ದ ನನ್ನನ್ನು ಸಂತೋಷದಿಂದ ತೂಗುತ್ತಿರುವವಳಂತೆ ಇದ್ದಳು.

**ಶಯಾನಂ ವಟಪತ್ರೇ ಚ ಪರ್ಯಂಕೇ ಸುಸ್ಥಿರೇ ದೃಢೇ ।**
**ಪಾದಾಂಗುಷ್ಠಂ ಕರೇ ಕೃತ್ವಾ ನಿವೇಶ್ಯ ಮುಖಪಂಕಜೇ ॥೬೪॥**

ಅತ್ಯಂತ ದೃಢವಾದ ಮತ್ತು ಸ್ಥಿರವಾದ ಮಂಚದಲ್ಲಿ ಮಂಡಿಸಿರುವ ಇವಳೇ, ಹಿಂದೆ ನಾನು ಆಲದೆಲೆಯಲ್ಲಿ ಮಲಗಿ ಕಾಲಿನ ಹೆಬ್ಬೆಟ್ಟನ್ನು ಕೈಯಿಂದ ಹಿಡಿದು ಬಾಯಿಯಲ್ಲಿಟ್ಟುಕೊಂಡು,

**ಲೇಲಿಹಂತಂ ಚ ಕ್ರೀಡಂತಮನೇಕೈರ್ಬಾಲಚೇಷ್ಟಿತೈಃ ।**
**ರಮಮಾಣಂ ಕೋಮಲಾಂಗಂ ವಟಪತ್ರಪುಟೇ ಸ್ಥಿತಂ ॥೬೫॥**

ಅದನ್ನು ಚೀಪುತ್ತಲಿದ್ದ ಮತ್ತು ಮಕ್ಕಳಿಗೆ ಸಹಜವಾದ ಅನೇಕ ಚೇಷ್ಟೆಗಳಿಂದ ಆಡುತ್ತಲಿದ್ದ, ಮೃದುವಾದ ಶರೀರವುಳ್ಳವನಾಗಿ ಹೀಗೆ ಆ ಆಲದ ಎಲೆಯಲ್ಲಿ ಮಲಗಿರುತ್ತಿದ್ದ ನನ್ನನ್ನು,

**ಗಾಯಂತೀ ದೋಲಯಂತೀ ಚ ಬಾಲಭಾವಾನ್ಮಯಿ ಸ್ಥಿತೇ ।**
**ಸೇಯಂ ಸುನಿಶ್ಚಿತಂ ಜ್ಞಾನಂ ಜಾತಂ ಮೇ ದರ್ಶನಾದಿವ ॥೬೬॥**

ಇವಳೇ, ನಾನು ಮಗುವಾಗಿದ್ದಾಗ ನನ್ನನ್ನು ತಾಯಿಯಂತೆ ತೂಗುತ್ತಲೂ ಹಾಡುತ್ತಲೂ ಅಲ್ಲಿ ಇದ್ದಳು. ಅವಳೇ ಇವಳು. ನನಗೆ ಇವಳ ದರ್ಶನದಿಂದ ಸ್ಮರಣೆಯು ಬಂದು ನಿಶ್ಚಯವಾದ ಇವಳ ಸ್ವರೂಪಜ್ಞಾನವು ಉಂಟಾಯಿತು.

**ಕಾಮಂ ನೋ ಜನನೀ ಸೈಷಾ ಶೃಣುತಾಂ ಪ್ರವದಾಮ್ಯಹಂ ।**
**ಅನುಭೂತಂ ಮಯಾ ಪೂರ್ವಂ ಪ್ರತ್ಯಭಿಜ್ಞಾ ಸಮುತ್ಥಿತಾ ॥೬೭॥**

ಇವಳು, ಆ ನಮ್ಮ ತಾಯಿಯೇ ನಿಶ್ಚಯವು. ಚನ್ನಾಗಿ ಹೇಳುತ್ತೇನೆ, ಕೇಳಿರಿ. ನಾನು ಹಿಂದೆ ಇವಳನ್ನು ಪ್ರತ್ಯಕ್ಷವಾಗಿ ನೋಡಿದ್ದೆನು. ಈಗ ಈ ದೇವಿಯ ದರ್ಶನದಿಂದ ಅವಳೇ ಇವಳೆಂಬ ಅನುಭವದ ಸ್ಮರಣೆಯ ಜ್ಞಾನವುಂಟಾಯಿತು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ತೃತೀಯೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### || ಚತುರ್ಥೋಽಧ್ಯಾಯಃ ||

### ನಾಲ್ಕನೆಯ ಅಧ್ಯಾಯವು

|| ಬ್ರಹ್ಮೋವಾಚ ||

**ಇತ್ಯುಕ್ತ್ವಾ ಭಗವಾನ್ ವಿಷ್ಣುಃ ಪುನರಾಹ ಜನಾರ್ದನಃ ।**
**ವಯಂ ಗಚ್ಛೇಮ ಪಾರ್ಶ್ವೇಽಸ್ಯಾಃ ಪ್ರಣಮಂತಃ ಪುನಃಪುನಃ ॥೧॥**

ಬ್ರಹ್ಮನು ಹೇಳಿದನು--ಹೀಗೆ ಹೇಳಿ, ದುಷ್ಟಜನರನ್ನು ಶಿಕ್ಷಿಸುವ, ಪೂಜ್ಯನಾದ ಆ ವಿಷ್ಣುವು ತಿರುಗಿ ಹೇಳಿದನು—ಎಲೈ ಬ್ರಹ್ಮಶಂಕರರೇ, ನಾವು ಬಾರಿಬಾರಿಗೂ ಬಗ್ಗಿ ನಮಸ್ಕರಿಸುತ್ತಾ ಈ ದೇವಿಯ ಸಮೀಪಕ್ಕೆ ಹೋಗೋಣ.

**ಸೇಯಂ ವರಾ ಮಹಾಮಾಯಾ ದಾಸ್ಯತ್ಯೇಷಾ ವರಾನ್ ಹಿ ನಃ ।**
**ಸ್ತುವಾಮಃ ಸಂನಿಧಿಂ ಪ್ರಾಪ್ಯ ನಿರ್ಭಯಾಶ್ಚರಣಾಂತಿಕೇ ॥೨॥**

ಇವಳೇ ಶ್ರೇಷ್ಠಳಾದ ಆದಿಮಾಯೆಯು. ಇವಳು ನಮಗೆ ವರಗಳನ್ನು ಕೊಡುವಳು. ಭಯವನ್ನು ಬಿಟ್ಟು ಹತ್ತಿರಕ್ಕೆ ಹೋಗಿ ಅವಳ ಪಾದ ಸಮೀಪದಲ್ಲಿ ನಿಂತು ಸ್ತೋತ್ರಮಾಡೋಣ.

**ಯದಿ ನೋ ವಾರಯಿಷ್ಯಂತಿ ದ್ವಾರಸ್ಥಾಃ ಪರಿಚಾರಿಕಾಃ ।**
**ಪಠಿಷ್ಯಾಮಶ್ಚ ತತ್ರಸ್ಥಾಃ ಸ್ತುತಿಂ ದೇವ್ಯಾಃ ಸಮಾಹಿತಾಃ ॥೩॥**

ಬಾಗಿಲಲ್ಲಿ ನಿಂತಿರುವ ಸೇವಿಕೆಯರು ನಮ್ಮನ್ನು ತಡೆದರೆ, ಆಗ ನಾವು ಆ ಬಾಗಿಲಿನಲ್ಲಿಯೇ ನಿಂತು, ಮನಸ್ಸಿನ ಸಮಾಧಾನದಿಂದ ಕೂಡಿದವರಾಗಿ ದೇವಿಯ ಸ್ತೋತ್ರವನ್ನು ಪಠಿಸೋಣ.

|| ಬ್ರಹ್ಮೋವಾಚ ||

**ಇತ್ಯುಕ್ತೇ ಹರಿಣಾ ವಾಕ್ಯೇ ಸುಪ್ರಹೃಷ್ಟೌ ಸುಸಂಸ್ಥಿತೌ ।**
**ಜಾತೌ ಪ್ರಮುದಿತೌ ಕಾಮಂ ನಿಕಟೇ ಗಮನಾಯ ಚ ॥೪॥**

ಬ್ರಹ್ಮನು ಹೇಳಿದನು—ಹೀಗೆ ವಿಷ್ಣುವು ಹೇಳಲು, ನಾನೂ ಶಂಕರನೂ ತುಂಬ ಸಂತುಷ್ಟರಾದೆವು. ಮತ್ತು ದೇವಿಯ ಸಮೀಪಕ್ಕೆ ಹೋಗಲು ತುಂಬ ಸಂತೋಷದಿಂದ ಸಿದ್ಧರಾದೆವು.

**ಓಮಿತ್ಯುಕ್ತ್ವಾ ಹರಿಂ ಸರ್ವೇ ವಿಮಾನಾತ್ತ್ವರಿತಾಸ್ತ್ರಯಃ ।**
**ಉತ್ತೀರ್ಯ ನಿರ್ಗತಾ ದ್ವಾರಿ ಶಂಕಮಾನಾ ಮನಸ್ಯಲಂ ॥೫॥**

ಹಾಗೆಯೇ ಆಗಲಿ ಎಂದು ಹರಿಯನ್ನು ಕುರಿತು ಹೇಳಿ, ನಾವು ಮೂವರೂ ತ್ವರೆಯಿಂದ ವಿಮಾನದಿಂದ ಇಳಿದು, ಅಲ್ಲಿಂದ ಹೊರಟು, ಮನಸ್ಸಿನಲ್ಲಿಯೇ ತುಂಬ ಹೆದರಿಕೊಳ್ಳುತ್ತಾ ಆ ದೇವೀಗೃಹದ ಬಾಗಿಲಿಗೆ ಬಂದೆವು.

**ದ್ವಾರಸ್ಥಾನ್ವೀಕ್ಷ್ಯ ತಾನ್ ಸರ್ವಾನ್ ದೇವೀ ಭಗವತೀ ತದಾ ।**
**ಸ್ಮಿತಂ ಕೃತ್ವಾ ಚಕಾರಾಶು ತಾಂಸ್ತ್ರೀನ್ ಸ್ತ್ರೀರೂಪಧಾರಿಣಃ ॥೬॥**

ಷಡ್ಗುಣೈಶ್ವರ್ಯಸಂಪನ್ನಳಾದ ಆ ದೇವಿಯು ಬಾಗಿಲಲ್ಲಿ ನಿಂತಿರುವ ನಮ್ಮೆಲ್ಲರನ್ನು ನೋಡಿ, ಆಗ ಒಂದು ಮಂದಹಾಸವನ್ನು ಬೀರಿ, ನಮ್ಮನ್ನು ಸ್ತ್ರೀರೂಪವುಳ್ಳ ಹೆಂಗಸರನ್ನಾಗಿ ಮಾಡಿದಳು.

**ವಯಂ ಯುವತಯೋ ಜಾತಾಃ ಸುರೂಪಾಶ್ಚಾರುಭೂಷಣಾಃ ।**
**ವಿಸ್ಮಯಂ ಪರಮಂ ಪ್ರಾಪ್ತಾ ಗತಾಸ್ತತ್ಸನ್ನಿಧಿಂ ಪುನಃ ॥೭॥**

ನಾವು ಮೂವರೂ ಒಳ್ಳೆಯ ರೂಪವುಳ್ಳ ಮತ್ತು ತುಂಬ ಆಭರಣಗಳಿಂದ ಅಲಂಕೃತರಾದ ಸ್ತ್ರೀಯರಾದೆವು! ಇದರಿಂದ ತುಂಬ ಆಶ್ಚರ್ಯವನ್ನು ಹೊಂದಿ ಆಮೇಲೆ ನಾವು ಆ ದೇವಿಯ ಸಮೀಪವನ್ನು ಸೇರಿದೆವು.

**ಸಾ ದೃಷ್ಟ್ವಾ ನಃ ಸ್ಥಿತಾಂಸ್ತತ್ರ ಸ್ತ್ರೀರೂಪಾಂಶ್ಚರಣಾಂತಿಕೇ ।**
**ವ್ಯಲೋಕಯತ ಚಾರ್ವಂಗೀ ಪ್ರೇಮಸಂಪೂರ್ಣಯಾ ದೃಶಾ ॥೮॥**

ಸುಂದರವಾದ ಶರೀರವುಳ್ಳ ಆ ದೇವಿಯು, ತನ್ನ ಪಾದಸಮೀಪದಲ್ಲಿ ನಿಂತಿರುವ ಸ್ತ್ರೀರೂಪಯುಕ್ತರಾದ ನಮ್ಮನ್ನು ಪ್ರೇಮದಿಂದ ಕೂಡಿದ ನೋಟದಿಂದ ನೋಡಿದಳು. ಇಲ್ಲಿ ಪ್ರೇಮವು ವಾತ್ಸಲ್ಯರೂಪವಾದುದು.

**ಪ್ರಣಮ್ಯ ತಾಂ ಮಹಾದೇವೀಂ ಪುರತಃ ಸಂಸ್ಥಿತಾ ವಯಂ ।**
**ಪರಸ್ಪರಂ ಲೋಕಯಂತಃ ಸ್ತ್ರೀರೂಪಾಶ್ಚಾರುಭೂಷಣಾಃ ॥೯॥**

ಆ ಮಹಾದೇವಿಯನ್ನು ನಮಸ್ಕರಿಸಿ, ಹೆಂಗಸಿನ ರೂಪವುಳ್ಳ ಮತ್ತು ಸುಂದರ ವಾದ ಆಭರಣಗಳನ್ನು ಧರಿಸಿರುವ ನಾವು ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾ ಆ ದೇವಿಯ ಎದುರಿಗೆ ಭಯ, ಭಕ್ತಿಭಾವದೊಡನೆ ನಿಂತಿದ್ದೆವು.

**ಪಾದಪೀಠಂ ಪ್ರೇಕ್ಷಮಾಣಾ ನಾನಾಮಣಿವಿಭೂಷಿತಂ ।**
**ಸೂರ್ಯಕೋಟಿಪ್ರತೀಕಾಶಂ ಸ್ಥಿತಾಸ್ತತ್ರ ವಯಂ ತ್ರಯಃ ॥೧೦॥**

ಅನೇಕಬಗೆಯ ರತ್ನಗಳಿಂದ ಪ್ರಕಾಶಿಸುತ್ತಲಿರುವ ಮತ್ತು ಕೋಟಿ ಸೂರ್ಯರಿಗೆ ಸದೃಶವಾದ ಕಾಂತಿಯುಳ್ಳ ದೇವಿಯ ಪಾದಪೀಠವನ್ನು ಎಂದರೆ, ಕಾಲುಗಳನ್ನು ಇಟ್ಟುಕೊಳ್ಳುವ ಚಿಕ್ಕ ಕಾಲುಮಣೆಯನ್ನು, ನೋಡುತ್ತಾ ನಾವು ಮೂವರೂ ಅಲ್ಲಿ ನಿಂತಿದ್ದೆವು.

**ಕಾಶ್ಚಿದ್ರಕ್ತಾಂಬರಾಸ್ತತ್ರ ಸಹಚರ್ಯಃ ಸಹಸ್ರಶಃ ।**
**ಕಾಶ್ಚಿನ್ನೀಲಾಂಬರಾ ನಾರ್ಯಸ್ತಥಾ ಪೀತಾಂಬರಾಃ ಶುಭಾಃ ॥೧೧॥**

ಅಲ್ಲಿ ಆ ದೇವಿಯ ಸುತ್ತಲೂ ಸಾವಿರಾರು ಪರಿಚಾರಿಕೆಯರು ಇದ್ದರು. ಅವರಲ್ಲಿ ಕೆಲವರು ಕೆಂಪುಬಟ್ಟೆಗಳನ್ನು ಧರಿಸಿಯೂ, ಇನ್ನು ಕೆಲವರು ನೀಲವರ್ಣದ ಬಟ್ಟೆಯನ್ನು ಧರಿಸಿದವರಾಗಿಯೂ ಮತ್ತೆ ಕೆಲವರು ಹಳದೀವರ್ಣದ ಪೀತಾಂಬರ ಗಳನ್ನು ಧರಿಸಿರುವವರೂ ಆಗಿ ಶೋಭಿಸುತ್ತಲಿದ್ದರು.

**ದೇವ್ಯಃ ಸರ್ವಾಃ ಶುಭಾಕಾರಾ ವಿಚಿತ್ರಾಂಬರಭೂಷಣಾಃ ।**
**ವಿರೇಜುಃ ಪಾರ್ಶ್ವತಸ್ತಸ್ಯಾಃ ಪರಿಚರ್ಯಾಪರಾಃ ಕಿಲ ॥೧೨॥**

ಪರಿಚಾರಿಕೆಯರಾದ ಆ ಎಲ್ಲ ದೇವಿಯರೂ ಮಂಗಳಕರವಾದ ಆಕಾರವುಳ್ಳವ ರಾಗಿ, ಆಶ್ಚರ್ಯಕರವಾದ ನಾನಾಬಗೆಯ ವಸ್ತ್ರಾಭರಣಗಳಿಂದ ಅಲಂಕೃತರಾಗಿ ದೇವಿಯ ಎಡಬಲಗಳಲ್ಲಿ ಅವಳ ಸೇವೆಯನ್ನು ಮಾಡುತ್ತಾ ಪ್ರಕಾಶಿಸುತ್ತಲಿದ್ದರು.

**ಜಗುಶ್ಚ ನನೃತುಶ್ಚಾನ್ಯಾಃ ಪರ್ಯುಪಾಸಂತ ತಾಃ ಸ್ತ್ರಿಯಃ ।**
**ವೀಣಾಮಾರುತವಾದ್ಯಾನಿ ವಾದಯಂತ್ಯೋ ಮುದಾನ್ವಿತಾಃ ॥೧೩॥**

ಅಲ್ಲಿ ಕೆಲವರು ಸ್ತ್ರೀಯರು ಹಾಡುತ್ತಿದ್ದರು. ಕೆಲವರು ನರ್ತನಮಾಡುತ್ತಿದ್ದರು. ಇನ್ನು ಕೆಲವರು ಸಂತೋಷದಿಂದ ಕೂಡಿದವರಾಗಿ ವೀಣೆ, ಕೊಳಲು, ಖಂಜರಿ ಮುಂತಾದ ವಾದ್ಯಗಳನ್ನು ನುಡಿಯಿಸುತ್ತಾ ಆ ದೇವಿಯನ್ನು ಸೇವಿಸುತ್ತಿದ್ದರು.

**ಶೃಣು ನಾರದ ವಕ್ಷ್ಯಾಮಿ ಯದ್ದೃಷ್ಟಂ ತತ್ರ ಚಾದ್ಭುತಂ ।**
**ನಖದರ್ಪಣಮಧ್ಯೇ ವೈ ದೇವ್ಯಾಶ್ಚರಣಪಂಕಜೇ ॥೧೪॥**

ಎಲೈ ನಾರದನೇ, ಆ ದೇವಿಯ ಕಮಲದಂತಿರುವ ಪಾದದಲ್ಲಿ ಕನ್ನಡಿಯಂತಿರತಕ್ಕ ಉಗುರಿನ ಮಧ್ಯದಲ್ಲಿ ನಾವು ನೋಡಿದ ಇನ್ನೂ ಒಂದು ವಿಶೇಷವಾದ ಆಶ್ಚರ್ಯದ ಸಂಗತಿಯನ್ನು ಹೇಳುವೆನು, ಕೇಳು.

**ಬ್ರಹ್ಮಾಂಡಮಖಿಲಂ ಸರ್ವಂ ತತ್ರ ಸ್ಥಾವರಜಂಗಮಂ ।**
**ಅಹಂ ವಿಷ್ಣುಶ್ಚ ರುದ್ರಶ್ಚ ವಾಯುರಗ್ನಿರ್ಯಮೋ ರವಿಃ ॥೧೫॥**

ಆ ಉಗುರಿನ ಮಧ್ಯದಲ್ಲಿ ಚರಾಚರಾತ್ಮಕವಾದ ಈ ಎಲ್ಲಾ ಪ್ರಪಂಚವೂ, ನಾನೂ (ಬ್ರಹ್ಮನೂ) ವಿಷ್ಣುವೂ, ರುದ್ರನೂ, ವಾಯುವೂ, ಅಗ್ನಿಯೂ, ಯಮಧರ್ಮನೂ, ಸೂರ್ಯನೂ ಇವರೆಲ್ಲರನ್ನೂ ಕಂಡೆವು.

**ವರುಣಃ ಶೀತಗುಸ್ತ್ವಷ್ಟಾ ಕುಬೇರಃ ಪಾಕಶಾಸನಃ ।**
**ಪರ್ವತಾಃ ಸಾಗರಾ ನದ್ಯೋ ಗಂಧರ್ವಾಪ್ಸರಸಸ್ತಥಾ ॥೧೬॥**

ಹಾಗೆಯೇ, ವರುಣನೂ, ಚಂದ್ರನೂ, ವಿಶ್ವಕರ್ಮನೂ, ಕುಬೇರನೂ, ಇಂದ್ರನೂ, ಬೆಟ್ಟಗಳೂ, ಸಮುದ್ರಗಳೂ, ನದಿಗಳೂ, ಗಂಧರ್ವರೂ, ಮತ್ತು ಅಪ್ಸರಸ್ತ್ರೀಯರೂ,

**ವಿಶ್ವಾವಸುಶ್ಚಿತ್ರಕೇತುಃ ಶ್ವೇತಶ್ಚಿತ್ರಾಂಗದಸ್ತಥಾ ।**
**ನಾರದಸ್ತುಂಬುರುಶ್ಚೈವ ಹಾಹಾಹೂಹೂಸ್ತಥೈವ ಚ ॥೧೭॥**

ವಿಶ್ವಾವಸು, ಚಿತ್ರಕೇತು, ಶ್ವೇತ, ಚಿತ್ರಾಂಗದರೆಂಬ ಗಂಧರ್ವೋತ್ತಮರೂ, ನಾರದನೂ, ತುಂಬುರುವೂ, ಹಾಹಾ ಮತ್ತು ಹೂಹೂ ಎಂಬ ಗಾಯಕರಾದ ಗಂಧರ್ವರೂ,

**ಅಶ್ವಿನೌ ವಸವಃ ಸಾಧ್ಯಾಃ ಸಿದ್ಧಾಶ್ಚ ಪಿತರಸ್ತಥಾ ।**
**ನಾಗಾಃ ಶೇಷಾದಯಃ ಸರ್ವೇ ಕಿನ್ನರೋರಗರಾಕ್ಷಸಾಃ ॥೧೮॥**

ಅಲ್ಲದೆ, ಅಶ್ವಿನೀದೇವತೆಗಳೂ, ಅಷ್ಟುವಸುಗಳೂ, ಸಾಧ್ಯರೂ, ಸಿದ್ಧರೂ, ಪಿತೃದೇವತೆಗಳೂ, ಆದಿಶೇಷನೇ ಮೊದಲಾದ ಸರ್ಪಗಳೂ, ಕಿನ್ನರರೂ, ತಕ್ಷಕನೇ ಮೊದಲಾದ ನಾಗದೇವತೆಗಳೂ, ರಾಕ್ಷಸರೂ,

**ವೈಕುಂಠೋ ಬ್ರಹ್ಮಲೋಕಶ್ಚ ಕೈಲಾಸಃ ಪರ್ವತೋತ್ತಮಃ ।**
**ಸರ್ವಂ ತದಖಿಲಂ ದೃಷ್ಟಂ ನಖಮಧ್ಯಸ್ಥಿತಂ ಚ ನಃ ॥೧೯॥**

ಮತ್ತು ವೈಕುಂಠಲೋಕವೂ, ಬ್ರಹ್ಮಲೋಕವೂ, ಪರ್ವತಗಳಲ್ಲಿ ಶ್ರೇಷ್ಠವಾದ ಕೈಲಾಸಪರ್ವತವೂ, ಇವೆಲ್ಲವೂ ಆ ದೇವಿಯ ಕಾಲಿನ ಉಗುರಿನ ಮಧ್ಯದಲ್ಲಿ ಇದ್ದುದನ್ನು ನಾವು ಕಂಡೆವು.

**ಮಜ್ಜನ್ಮಪಂಕಜಂ ತತ್ರ ಸ್ಥಿತೋಽಹಂ ಚತುರಾನನಃ ।**
**ಶೇಷಶಾಯೀ ಜಗನ್ನಾಥಸ್ತಥಾ ಚ ಮಧುಕೈಟಭೌ ॥೨೦॥**

ಆ ಉಗುರಿನ ಮಧ್ಯದಲ್ಲಿ ನನ್ನ ಉತ್ಪತ್ತಿಸ್ಥಾನವಾದ ಕಮಲವೂ ಇದ್ದಿತು. ಅದರಲ್ಲಿ ನಾಲ್ಕು ಮುಖಗಳುಳ್ಳ ನಾನು ಕುಳಿತಿದ್ದೆನು. ಜಗತ್ತಿಗೆ ಒಡೆಯನಾದ ವಿಷ್ಣುವೂ ಆದಿಶೇಷನ ಮೇಲೆ ಮಲಗಿಕೊಂಡಿರುವ ಹಾಗೆಯೇ ಕಾಣಿಸಿದನು. ಮತ್ತು ಮಧುಕೈಟಭರಾಕ್ಷಸರು ಸಹ ಇದ್ದುದು ಕಾಣಿಸಿತು. ಇದು ದೇವಿಯ ವಿಶ್ವರೂಪವು.

॥ ಶ್ರೀಭಗವಾನುವಾಚ ॥

**ಏವಂ ದೃಷ್ಟಂ ಮಯಾ ತತ್ರ ಪಾದಪದ್ಮನಖೇ ಸ್ಥಿತಂ ।**
**ವಿಸ್ಮಿತೋಽಹಂ ತತೋ ವೀಕ್ಷ್ಯ ಕಿಮೇತದಿತಿ ಶಂಕಿತಃ ॥೨೧॥**

ಪೂಜ್ಯನಾದ ಬ್ರಹ್ಮನು ಹೇಳಿದನು—ಈ ರೀತಿಯಾಗಿ ಅಲ್ಲಿ ನಾನು ದೇವಿಯ ಕಮಲದಂತಿರತಕ್ಕ ಕಾಲುಗಳ ಉಗುರಿನಲ್ಲಿರುವ ಜಗತ್ತೆಲ್ಲವನ್ನೂ ನೋಡಿದೆನು. ಆಗ ಇದೇನು ಅದ್ಭುತವು ? ಎಂದು ಸಂದೇಹದಿಂದ ತುಂಬ ಆಶ್ಚರ್ಯಗೊಂಡೆನು.

**ವಿಷ್ಣುಶ್ಚ ವಿಸ್ಮಯಾವಿಷ್ಟಃ ಶಂಕರಶ್ಚ ತಥಾ ಸ್ಥಿತಃ ।**
**ತಾಂ ತದಾ ಮೇನಿರೇ ದೇವೀಂ ವಯಂ ವಿಶ್ವಸ್ಯ ಮಾತರಂ ॥೨೨॥**

ನನ್ನಂತೆಯೇ ವಿಷ್ಣುವೂ, ಶಂಕರನೂ ಆಶ್ಚರ್ಯಗೊಂಡರು. ಅನಂತರದಲ್ಲಿ ಆಗ ನಾವು ಅವಳನ್ನು ಈ ಎಲ್ಲ ಪ್ರಪಂಚಕ್ಕೆ ಮಾತೆಯಾದ ದೇವಿಯೆಂದು ತಿಳಿದೆವು.

**ತತೋ ವರ್ಷಶತಂ ಪೂರ್ಣಂ ವ್ಯತಿಕ್ರಾಂತಂ ಪ್ರಪಶ್ಯತಃ ।**
**ಸುಧಾಮಯೇ ಶಿವೇ ದ್ವೀಪೇ ವಿಹಾರಂ ವಿವಿಧಂ ತದಾ ॥೨೩॥**

ಆ ಮೇಲೆ, ನಾವು ಅಮೃತಮಯವಾದ ಮತ್ತು ಮಂಗಳರೂಪವಾದ ಆ ಮಣಿದ್ವೀಪದಲ್ಲಿ ಅನೇಕಬಗೆಯ ಆ ಕ್ರೀಡೆಗಳನ್ನು ನೋಡುತ್ತಿರುವಂತೆಯೇ ಸಂಪೂರ್ಣವಾಗಿ ನೂರು ವರ್ಷಗಳು ಕಳೆದುವು.

**ಸಖ್ಯ ಇವ ತದಾ ತತ್ರ ಮೇನಿರೇಽಸ್ಮಾನವಸ್ಥಿತಾನ್ ।**
**ದೇವ್ಯಃ ಪ್ರಮುದಿತಾಕಾರಾ ನಾನಾಭರಣಮಂಡಿತಾಃ ॥೨೪॥**

ಆಗ ಸಂತುಷ್ಟವಾದ ಆಕಾರವುಳ್ಳ ಮತ್ತು ಅನೇಕ ಅಲಂಕಾರಗಳಿಂದ ಶೋಭಿಸುತ್ತಿರುವ ಆ ದೇವಿಯರು ಅಲ್ಲಿ ಇರುವ ನಮ್ಮನ್ನೂ ಸಹ ಸಖಿಯರಂತೆ ತಿಳಿದರು.

**ವಯಮುಪ್ಯತಿರಮ್ಯತ್ವಾದ್ಬಭೂವಿಮ ವಿಮೋಹಿತಾಃ ।**
**ಪ್ರಹೃಷ್ಟಮನಸಃ ಸರ್ವೇ ಪಶ್ಯನ್ಭಾವಾನ್ಮನೋರಮಾನ್ ॥೨೫॥**

ನಾವೂ ಸಹ ತುಂಬ ರಮಣೀಯವಾಗಿದ್ದುದರಿಂದ ಅಲ್ಲಿಯ ಎಲ್ಲ ಮನೋಹರವಾದ ಪದಾರ್ಥಗಳನ್ನೂ ನೋಡುತ್ತಾ ತುಂಬ ಸಂತುಷ್ಟವಾದ ಮನಸ್ಸುಳ್ಳವರಾಗಿ ಮೋಹಗೊಂಡೆವು.

**ಏಕದಾ ತಾಂ ಮಹಾದೇವೀಂ ದೇವೀಂ ಶ್ರೀಭುವನೇಶ್ವರೀಂ ।**
**ತುಷ್ಟಾವ ಭಗವಾನ್ವಿಷ್ಣುರ್ಯುವತೀಭಾವಸಂಸ್ಥಿತಃ ॥೨೬॥**

ಹೀಗಿರಲು ಒಂದು ಕಾಲದಲ್ಲಿ ದೇವಿಯರಿಗೆಲ್ಲಾ ಹಿರಿಯಳಾದ ಶ್ರೀಭುವನೇಶ್ವರೀದೇವಿಯನ್ನು ಸ್ತ್ರೀರೂಪದಿಂದಿರುವ ವಿಷ್ಣುವು ಸ್ತೋತ್ರಮಾಡಿದನು.

॥ ಶ್ರೀಭಗವಾನುವಾಚ ॥

**ನಮೋ ದೇವ್ಯೈ ಪ್ರಕೃತ್ಯೈ ಚ ವಿಧಾತ್ರ್ಯೈ ಸತತಂ ನಮಃ ।**
**ಕಲ್ಯಾಣ್ಯೈ ಕಾಮದಾಯೈ ಚ ವೃದ್ಧ್ಯೈ ಸಿದ್ಧ್ಯೈ ನಮೋನಮಃ ॥೨೭॥**

ಪ್ರಪಂಚಕ್ಕೆಲ್ಲ ಮೂಲಕಾರಣಳಾದ ದೇವಿಗೆ ನಮಸ್ಕಾರವು. ಪ್ರಪಂಚವನ್ನು ಸೃಷ್ಟಿಸುತ್ತಲೂ, ಕಾಪಾಡುತ್ತಲೂ ಇರುವ ದೇವಿಗೆ ನಮಸ್ಕಾರವು. ಮಂಗಳರೂಪಳಾದ, ಇಷ್ಟಾರ್ಥವನ್ನು ಕೊಡುವ ವೃದ್ಧಿರೂಪಳಾದ ಮತ್ತು ಸಿದ್ಧಿರೂಪಳಾದ ದೇವಿಗೆ ನಮಸ್ಕಾರವು.

**ಸಚ್ಚಿದಾನಂದರೂಪಿಣ್ಯೈ ಸಂಸಾರಾರಣಯೇ ನಮಃ ।**
**ಪಂಚಕೃತ್ಯವಿಧಾತ್ರ್ಯೈ ತೇ ಭುವನೇಶ್ಯೈ ನಮೋನಮಃ ॥೨೮॥**

ಸತ್ಯಸ್ವರೂಪಳೂ, ಜ್ಞಾನಸ್ವರೂಪಳೂ, ಆನಂದಸ್ವರೂಪಳೂ, ಸಂಸಾರಕ್ಕೆ ಕಾರಣಸ್ವರೂಪಳೂ ಆದ ನಿನಗೆ ನಮಸ್ಕಾರವು. ಮತ್ತು ಸೃಷ್ಟಿಸ್ಥಿತಿಸಂಹಾರ, ತಿರೋಭಾವ (ಅಂತರ್ಧಾನ) ಮತ್ತು ಅನುಗ್ರಹಗಳೆಂಬ ಐದು ಬಗೆಯ ಕಾರ್ಯಗಳನ್ನು ಮಾಡುವ ಮತ್ತು ಪ್ರಪಂಚಕ್ಕೆ ಒಡೆಯಳಾದ ನಿನಗೆ ನಮಸ್ಕಾರಗಳು.

**ಸರ್ವಾಧಿಷ್ಠಾನರೂಪಾಯೈ ಕೂಟಸ್ಥಾಯೈ ನಮೋ ನಮಃ ।**
**ಅರ್ಧಮಾತ್ರಾರ್ಥಭೂತಾಯೈ ಹೃಲ್ಲೇಖಾಯೈ ನಮೋ ನಮಃ ॥೨೯॥**

ಎಲ್ಲ ಪ್ರಪಂಚದ ತೋರಿಕೆಗಳಿಗೂ ಆಧಾರಭೂತಳಾದ, ಕೂಟಸ್ಥದಂತೆ ಎಂದರೆ ಅಡಿಗಲ್ಲಿನಂತೆ ವಿಕಾರಗಳನ್ನು ಹೊಂದದೆ ಇರುವ ನಿನಗೆ ನಮಸ್ಕಾರವು. ಪರಬ್ರಹ್ಮ ಸ್ವರೂಪಳಾದ ಶುದ್ಧಮನಸ್ಸಿನಿಂದ ತಿಳಿಯಲು ಯೋಗ್ಯಳಾದ, ಪ್ರತ್ಯಗಾತ್ಮರೂಪದಿಂದ ಪ್ರಕಾಶಮಾನವಾದ ಸ್ವರೂಪವುಳ್ಳ ನಿನಗೆ ನಮಸ್ಕಾರವು. ಓಂಕಾರವು ಒಳಗೊಂಡಿರುವ ಅಕಾರವು ಬ್ರಹ್ಮನನ್ನೂ, ಉಕಾರವು ವಿಷ್ಣುವನ್ನೂ, ಮಕಾರವು ರುದ್ರನನ್ನೂ ನಾಲ್ಕನೆಯದಾದ ಅರ್ಧಮಾತ್ರೆಯು ಶುದ್ಧಪರಬ್ರಹ್ಮಚೈತನ್ಯವನ್ನೂ ಬೋಧಿಸುತ್ತದೆ ಎಂದು ಶ್ರುತಿಯು ಹೇಳುತ್ತದೆ. ಶುದ್ಧಹೃದಯದಲ್ಲಿ ಗೆರೆಯಂತೆ ಸ್ಪಷ್ಟವಾಗಿ ಗೋಚರವಾಗುವ ಚೈತನ್ಯರೂಪಳಾದ ಬ್ರಹ್ಮರೂಪಿಣಿಯಾದ ದೇವಿಗೆ ನಮಸ್ಕಾರವು.

**ಜ್ಞಾತಂ ಮಯಾಽಖಿಲಮಿದಂ ತ್ವಯಿ ಸನ್ನಿವಿಷ್ಟಂ**
**ತ್ವತ್ತೋಽಸ್ಯ ಸಂಭವಲಯಾವಪಿ ಮಾತರದ್ಯ ।**
**ಶಕ್ತಿಶ್ಚ ತೇಽಸ್ಯ ಕರಣೇ ವಿತತಪ್ರಭಾವಾ**
**ಜ್ಞಾತಾಧುನಾ ಸಕಲಲೋಕಮಯೀತಿ ನೂನಂ ॥೩೦॥**

ದೇವಿಯು ನಿರ್ಗುಣಬ್ರಹ್ಮರೂಪಳೆಂದು ಸ್ತೋತ್ರಮಾಡಿ ಈಗ ಸಗುಣಬ್ರಹ್ಮ ಸ್ವರೂಪಳೂ ಆಗಿದ್ದಾಳೆಂದು ವಿಷ್ಣುವು ವರ್ಣಿಸುತ್ತಾನೆ. ಪ್ರಪಂಚಕ್ಕೆ ಕಾರಣವಾದ

ಮಾತೆಯಾದ ದೇವಿಯೇ, ಈ ಪ್ರಪಂಚವೆಲ್ಲವೂ ನಿನ್ನಲ್ಲಿಯೇ ಇರುತ್ತದೆ. ನಿನ್ನಿಂದಲೇ ಈ ಪ್ರಪಂಚಕ್ಕೆ ಉತ್ಪತ್ತಿಯೂ ನಾಶವೂ ಆಗುತ್ತವೆ ಎಂದು ಈಗ ತಿಳಿದೆನು. ಈ ಪ್ರಪಂಚವನ್ನು ಸೃಷ್ಟಿಸುವ ವಿಸ್ತಾರವಾದ ಮಹಿಮೆಯುಳ್ಳ, ನಿನ್ನ ಮಾಯಾ ರೂಪವಾದ ಶಕ್ತಿಯು, ಈ ಎಲ್ಲ ದೃಶ್ಯಪ್ರಪಂಚರೂಪವಾದುದೆಂದೂ ಹೀಗೆ ನೀನು ಒಬ್ಬಳೇ ಎಲ್ಲಕ್ಕೂ ನಿಮಿತ್ತ ಮತ್ತು ಉಪಾದಾನಕಾರಣಳೆಂದೂ ನಿಜವಾಗಿ ತಿಳಿದೆನು.

ವಿಸ್ತಾರ್ಯ ಸರ್ವಮಖಿಲಂ ಸದಸದ್ವಿಕಾರಂ
ಸಂದರ್ಶಯಸ್ಯವಿಕಲಂ ಪುರುಷಾಯ ಕಾಲೇ ।
ತತ್ತ್ವೈಶ್ಚ ಷೋಡಶಭಿರೇವ ಚ ಸಪ್ತಭಿಶ್ಚ
ಭಾಸೀಂದ್ರಜಾಲಮಿವ ನಃ ಕಿಲ ರಂಜನಾಯ ॥೩೦॥

ಹೀಗೆ ಕಾರಣಬ್ರಹ್ಮರೂಪಳಾದ ದೇವಿಯನ್ನು ವರ್ಣಿಸಿ ಈಗ ಮಾಯಾಶಕ್ತಿ ರೂಪಳಾದ ದೇವಿಯನ್ನು ವರ್ಣಿಸುತ್ತಾರೆ–ಅಲ್ಲದೆ, ಆಕಾಶ, ವಾಯುಗಳಿಂದಾಗುವ ಸತ್ಕಾರ್ಯರೂಪವಾದ ಮತ್ತು ತೇಜಸ್ಸು, ಜಲ, ಪೃಥಿವಿಗಳಿಂದ ಆಗುವ ಅಸತ್ಕಾರ್ಯ ರೂಪವಾದ ಸಮಸ್ತಪ್ರಪಂಚವನ್ನೂ ಭೋಗಕಾಲದಲ್ಲಿ ಭೋಕ್ತೃವಾದ ಪುರುಷನಿಗೆ ನಾನಾರೀತಿಯಿಂದ ಸಂಭೋಗಿಸಲು ತೋರಿಸುತ್ತೀಯೆ. ಮತ್ತು ಮಹತ್ತತ್ತ್ವವೇ ಮೊದಲಾದ ಇಪ್ಪತ್ತುಮೂರು ತತ್ತ್ವಗಳಿಂದಲೇ ನಮಗೆ ಇಂದ್ರಜಾಲ ಎಂದರೆ ಕಣ್ಣು ಕಟ್ಟಿಂಬ ವಿದ್ಯೆಯಂತೆ ತೋರುತ್ತಾ ಪ್ರಕಾಶಿಸುತ್ತೀಯೆ. ಪುರುಷ, ಮೂಲಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಭೂತತನ್ಮಾತ್ರೆಗಳು, ಮನಸ್ಸು, ಐದು ಸ್ಥೂಲಭೂತಗಳು, "ಮೂಲಪ್ರಕೃತಿ ರವಿಕೃತಿರ್ಮಹದಾದ್ಯಾಃ ಪ್ರಕೃತಿವಿಕೃತಯಸ್ಸಪ್ತ। ಷೋಡಶಕಶ್ಚ ವಿಕಾರಃ ನ ಪ್ರಕೃತಿರ್ನ ವಿಕೃತಿಃ ಪುರುಷಃ ॥" ಎಂದು ಸಾಂಖ್ಯಶಾಸ್ತ್ರದಲ್ಲಿ ಹೇಳಿದೆ. ಪುರುಷ, ಮೂಲಪ್ರಕೃತಿ ಸೇರಿದರೆ ಒಟ್ಟು ಇಪ್ಪತ್ತೈದು ತತ್ತ್ವಗಳು. ಇವೆರಡೂ ವಿಕಾರಿಯಾಗದ ತತ್ತ್ವಗಳು.

ನ ತ್ವಾಮೃತೇ ಕಿಮಪಿ ವಸ್ತುಗತಂ ವಿಭಾತಿ
ವ್ಯಾಪ್ಯೈವ ಸರ್ವಮಖಿಲಂ ತ್ವಮವಸ್ಥಿತಾಽಸಿ ।
ಶಕ್ತಿಂ ವಿನಾ ವ್ಯವಹೃತೌ ಪುರುಷೋಽಪ್ಯಶಕ್ತೋ
ಬಂಭಣ್ಯತೇ ಜನನಿ ಬುದ್ಧಿಮತಾ ಜನೇನ ॥೩೧॥

ನಿನ್ನನ್ನು ಬಿಟ್ಟು ಯಾವ ವಸ್ತುವೂ ಸ್ವತಂತ್ರವಾಗಿ ಇರುವುದಿಲ್ಲವು. ನೀನು ಎಲ್ಲೆಡೆಗಳಲ್ಲಿರುವ ಎಲ್ಲ ವಸ್ತುಗಳನ್ನೂ ವ್ಯಾಪಿಸಿಕೊಂಡಿರುವೆ. ಓ ತಾಯಿಯೇ, ಬುದ್ಧಿವಂತರಾದ ಜನಗಳು ಶಕ್ತಿರೂಪಳಾದ ನಿನ್ನನ್ನು ಬಿಟ್ಟು ಪುರುಷನು ಯಾವ ವ್ಯವಹಾರವನ್ನೂ ಮಾಡಲಾರನು ಎಂದು ಹೇಳುತ್ತಾರೆ.

ಪ್ರೀಣಾಸಿ ವಿಶ್ವಮಖಿಲಂ ಸತತಂ ಪ್ರಭಾವೈಃ
ಸ್ವೈಸ್ತೇಜಸಾ ಚ ಸಕಲಂ ಪ್ರಕಟೀಕರೋಷಿ ।
ಅತ್ಸ್ಯೇವ ದೇವಿ ತರಸಾ ಕಿಲ ಕಲ್ಪಕಾಲೇ
ಕೋ ವೇದ ದೇವಿ ಚರಿತಂ ತವ ವೈಭವಸ್ಯ ॥೩೩॥

ಓ ದೇವಿಯೇ, ನೀನು ಸಕಲಪ್ರಪಂಚವನ್ನೂ ನಿನ್ನ ಮಹಿಮೆಯಿಂದ ಅನುಗ್ರಹಿಸಿರುವ ಸ್ವಭಾವಗಳಿಂದ ಯಾವಾಗಲೂ ಸಂತೋಷಪಡಿಸುತ್ತೀಯೆ. ನಿನ್ನ ತೇಜಸ್ಸಿನಿಂದ (ಸಾಮರ್ಥ್ಯದಿಂದ) ಎಲ್ಲವನ್ನೂ ಪ್ರಕಟಿಸುತ್ತೀಯೆ ಎಂದರೆ ಸೃಷ್ಟಿ ಮಾಡುತ್ತೀಯೆ. ಪ್ರಳಯಕಾಲದಲ್ಲಿ ವೇಗದಿಂದ ಆ ಪ್ರಪಂಚವನ್ನು ತಿನ್ನುತ್ತೀಯೆ, ಎಂದರೆ, ನಾಶಮಾಡುತ್ತೀಯೆ, ಅಥವಾ ನಿನ್ನಲ್ಲಿ ಅಡಗಿಸಿಕೊಳ್ಳುತ್ತೀಯೆ. ನಿನ್ನ ಇಂತಹ ಸಾಮರ್ಥ್ಯದ ಐಶ್ವರ್ಯದ ನಡೆವಳಿಯನ್ನು ಯಾವನು ತಾನೇ ತಿಳಿದಾನು?

ತ್ರಾತಾ ವಯಂ ಜನನಿ ತೇ ಮಧುಕೈಟಭಾಭ್ಯಾಂ
ಲೋಕಾಶ್ಚ ತೇ ಸುವಿತತಾಃ ಖಲು ದರ್ಶಿತಾ ವೈ ।
ನೀತಾಃ ಸುಖಸ್ಯ ಭವನೇ ಪರಮಾಂ ಚ ಕೋಟಿಂ
ಯದ್ದರ್ಶನಂ ತವ ಭವಾನಿ ಮಹಾಪ್ರಭಾವಂ ॥೩೪॥

ಓ ಮಾತೆಯೇ, ನೀನು ನಮ್ಮನ್ನು ಮಧುಕೈಟಭರ ಹಾವಳಿಯಿಂದ ರಕ್ಷಿಸಿರುತ್ತೀಯೆ. ನಾವು ನೋಡದಿದ್ದ ವಿಸ್ತಾರವಾದ, ಬ್ರಹ್ಮಾಂಡಗಳ ಲೋಕಗಳೆಲ್ಲವೂ ನಮಗೆ ತೋರಿಸಲ್ಪಟ್ಟವು. ಆನಂದಕರವಾದ ಈ ಮಣಿದ್ವೀಪಕ್ಕೆ ಕರೆದುಕೊಂಡು ಬಂದು ದೊಡ್ಡ ಪದವಿಗೇರಿಸಲ್ಪಟ್ಟೆವು. ಓ ಭವಾನಿ, ಈಶ್ವರನ ಶಕ್ತಿಯೇ, ಹೀಗೆ ನಿನ್ನ ದರ್ಶನವು ಬಹುಫಲಗಳಿಂದ ತುಂಬ ಮಹಿಮೆಯುಳ್ಳದ್ದಾಗಿದೆ. ಆದುದರಿಂದ ನೀನು ನಮ್ಮ ವಿಷಯದಲ್ಲಿ ವಿಶೇಷವಾದ ಕರುಣೆಯನ್ನು ತೋರಿಸಿ ಅನುಗ್ರಹಿಸುತ್ತಿರುವೆ.

ನಾಹಂ ಭವೋ ನ ಚ ವಿರಿಂಚಿ ವಿವೇದ ಮಾತಃ ।
ಕೋಽನ್ಯೋ ಹಿ ವೇತ್ತಿ ಚರಿತಂ ತವ ದುರ್ವಿಭಾವ್ಯಂ ।

**ಕಾನೀಹ ಸಂತಿ ಭುವನಾನಿ ಮಹಾಪ್ರಭಾವೇ**
**ಹ್ಯಸ್ಮಿನ್ ಭವಾನಿ ಚರಿತೇ ರಚನಾಕಲಾಪೇ** ॥೩೫॥

ಓ ಮಾತೆಯೇ, ನಾನೂ, ಈಶ್ವರನೂ, ಬ್ರಹ್ಮನೂ ಸಹ ಊಹಿಸಿ ತಿಳಿಯಲೂ ಅಸಾಧ್ಯವಾದ ನಿನ್ನ, ಚರಿತ್ರೆಯನ್ನು ಅರಿಯಲಾರೆವು. ಹೀಗಿರುವಲ್ಲಿ ಇನ್ನಾವನು ತಾನೇ ನಿನ್ನ ಚರಿತೆಯನ್ನು ಚನ್ನಾಗಿಯೂ ಪೂರ್ಣವಾಗಿಯೂ ತಿಳಿಯಬಲ್ಲನು ? ಮತ್ತು ಓ ಭವಾನಿಯೇ, ತುಂಬ ಮಹಿಮೆಯುಳ್ಳ ನಿನ್ನ ಪ್ರಪಂಚಗಳ ಸೃಷ್ಟಿಸ್ಥಿತಿ ಲಯರೂಪವಾದ ಚರಿತೆಯಲ್ಲಿ ಇನ್ನೆಷ್ಟು ಇಂತಹ ಲೋಕಗಳು ಉಂಟಾಗಿ ಇರುವವೋ, ಯಾರುತಾನೇ ತಿಳಿಯಬಲ್ಲರು ?

**ಅಸ್ಮಾಭಿರತ್ರ ಭುವನೇ ಹರಿರನ್ಯ ಏವ**
**ದೃಷ್ಟಃ ಶಿವಃ ಕಮಲಜಃ ಪ್ರಥಿತಪ್ರಭಾವಃ ।**
**ಅನ್ಯೇಷು ದೇವಿ ಭುವನೇಷು ನ ಸಂತಿ ಕಿಂ ತೇ**
**ಕಿಂ ವಿದ್ಮ ದೇವಿ ವಿತತಂ ತವ ಸುಪ್ರಭಾವಂ** ॥೩೬॥

ಓ ದೇವಿಯೇ, ನಾವು ನೋಡಿದ ಈ ಲೋಕಗಳಲ್ಲಿ ಬೇರೆ ಬೇರೆ ವಿಖ್ಯಾತವಾದ ಮಹಿಮೆಯುಳ್ಳ ವಿಷ್ಣುವನ್ನೂ, ಶಿವನನ್ನೂ, ಬ್ರಹ್ಮನನ್ನೂ ನೋಡಿದೆವು. ಹಾಗೆಯೇ ಉಳಿದ ಲೋಕಗಳಲ್ಲಿಯೂ ಅಂತಹ ಬ್ರಹ್ಮವಿಷ್ಣುಮಹೇಶ್ವರರು ಇರುವುದಿಲ್ಲವೇನು ? ಆದುದರಿಂದ ನಿನ್ನ ಅಪಾರವಾದ ಮಹಿಮೆಯನ್ನು ನಾವೇನು ತಿಳಿಯಬಲ್ಲೆವು ?

**ಯಾಚೇಽಮ್ಬ ತೇಽಙ್ಘ್ರಿಕಮಲಂ ಪ್ರಣಿಪತ್ಯ ಕಾಮಂ**
**ಚಿತ್ತೇ ಸದಾ ವಸತು ರೂಪಮಿದಂ ತವೈತತ್ ।**
**ನಾಮಾಪಿ ವಕ್ತ್ರಕುಹರೇ ಸತತಂ ತವೈವ**
**ಸಂದರ್ಶನಂ ತವ ಪದಾಂಬುಜಯೋಃ ಸದೈವ** ॥೩೭॥

ಓ ತಾಯಿಯೇ, ಕಮಲದಂತಿರುವ ನಿನ್ನ ಪಾದಗಳನ್ನು ಚನ್ನಾಗಿ ನಮಸ್ಕರಿಸಿ ಹೀಗೆ ಕೇಳಿಕೊಳ್ಳುತ್ತೇನೆ. ನಿನ್ನ ರೂಪವು ನನ್ನ ಮನಸ್ಸಿನಲ್ಲಿ ಯಾವಾಗಲೂ ತೋರುತ್ತಿರಲಿ. ನಿನ್ನ ಹೆಸರು ನನ್ನ ಮುಖದಲ್ಲಿ ಯಾವಾಗಲೂ ಉಚ್ಚರಿಸಲ್ಪಡುತ್ತಿರಲಿ. ಮತ್ತು ನಿನ್ನ ಪಾದಕಮಲಗಳ ದರ್ಶನವು ನನಗೆ ಯಾವಾಗಲೂ ಆಗುತ್ತಿರಲಿ.

ಭೃತ್ಯೋಽಯಮಸ್ತಿ ಸತತಂ ಮಯಿ ಭಾವನೀಯಂ
ತ್ವಾಂ ಸ್ವಾಮಿನೀತಿ ಮನಸಾ ನನು ಚಿಂತಯಾಮಿ ।
ಏಷಾವಯೋರವಿರತಾ ಕಿಲ ದೇವಿ ಭೂಯಾ-
ದ್ವ್ಯಾಪ್ತಿಃ ಸದೈವ ಜನನೀಸುತಯೋರಿವಾರ್ಯೇ ॥೩೮॥

ಓ ಪೂಜ್ಯಳಾದ ಮಾತೆಯೇ, ಇವನು ನನ್ನ ಸೇವಕನು ಎಂಬ ಬುದ್ಧಿಯು ನಿನಗೆ ನನ್ನ ವಿಷಯದಲ್ಲಿ ಯಾವಾಗಲೂ ಇರಲಿ. ನಾನು ನಿನ್ನನ್ನು ಒಡೆಯಳೆಂದು ಚಿಂತಿಸುತ್ತಿರುತ್ತೇನೆ. ಓ ಪೂಜ್ಯಳಾದ ದೇವಿಯೇ, ನಮ್ಮಿಬ್ಬರಿಗೆ ಸ್ವಾಮಿ ಸೇವಕರೆಂಬ ನಿಯತವಾದ ಸಂಬಂಧವು ತಾಯಿ ಮತ್ತು ಮಕ್ಕಳಿಗಿರುವಂತೆ ಯಾವಾಗಲೂ ಇರಲಿ.

ತ್ವಂ ವೇತ್ಸಿ ಸರ್ವಮಖಿಲಂ ಭುವನಪ್ರಪಂಚಂ
ಸರ್ವಜ್ಞತಾಪರಿಸಮಾಪ್ತಿನಿತಾಂತಭೂಮಿಃ ।
ಕಿಂ ಪಾಮರೇಣ ಜಗದಂಬ ನಿವೇದನೀಯಂ
ಯದ್ಯುಕ್ತಮಾಚರ ಭವಾನಿ ತವೇಂಗಿತಂ ಸ್ಯಾತ್ ॥೩೯॥

ನೀನು ಎಲ್ಲ ಪ್ರಪಂಚಗಳ ವಿವರಗಳೆಲ್ಲವನ್ನೂ ತಿಳಿದಿರುವೆ. ಮತ್ತು, ಸರ್ವಜ್ಞತೆಗೆ ಎಂದರೆ ಎಲ್ಲವನ್ನೂ ತಿಳಿದಿರುವಿಕೆಗೆ ಕೊನೆಯ ಗಡಿಯಾಗಿರುವೆ. ನಿನಗಿಂತಲೂ ಹೆಚ್ಚಿನ ಸರ್ವಜ್ಞನಿಲ್ಲವು. ಏನೂ ತಿಳಿವಳಿಕೆ ಇಲ್ಲದ ನಾನು ಏನನ್ನು ವಿಜ್ಞಾಪಿಸಲಿ? ಆದುದರಿಂದ ಜಗತ್ತಿಗೆ ತಾಯಿಯಾದ ಓ ದೇವಿಯೇ, ಯಾವುದು ಯುಕ್ತವೆಂದು ನಿನಗೆ ತೋರುವುದೋ ಮತ್ತು ನಿನಗೆ ಇಷ್ಟವಾದುದೋ ಆದನ್ನು ಮಾಡು.

ಬ್ರಹ್ಮಾ ಸೃಜತ್ಯವತಿ ವಿಷ್ಣುರುಮಾಪತಿಶ್ಚ
ಸಂಹಾರಕಾರಕ ಇಯಂ ತು ಜನೇ ಪ್ರಸಿದ್ಧಿಃ ।
ಕಿಂ ಸತ್ಯಮೇತದಪಿ ದೇವಿ ತವೇಚ್ಛಯಾ ವೈ
ಕರ್ತುಂ ಕ್ಷಮಾ ವಯಮಜೇ ತವ ಶಕ್ತಿಯುಕ್ತಾಃ ॥೪೦॥

ಬ್ರಹ್ಮನು ಸೃಷ್ಟಿಮಾಡುತ್ತಾನೆ, ವಿಷ್ಣುವು ಕಾಪಾಡುತ್ತಾನೆ, ಈಶ್ವರನು ಸಂಹರಿಸುತ್ತಾನೆ ಎಂದು ಜನಗಳಲ್ಲಿ ಪ್ರಸಿದ್ಧಿಯಿರುತ್ತದೆ. ಉತ್ಪತ್ತಿಯಿಲ್ಲದ ಓ

ದೇವಿಯೇ, ಈ ಪ್ರಸಿದ್ಧಿಯು ನಿಜವಾದುದೇ? ಏಕೆಂದರೆ, ನಿನ್ನ ಇಚ್ಛೆಯಿಂದಲೇ, ನಿನ್ನ ಅನುಗ್ರಹದಿಂದ ಉಂಟಾದ ಶಕ್ತಿಯಿಂದ ಕೂಡಿದವರಾಗಿ ನಾವು ಸೃಷ್ಟಿಯೇ ಮೊದಲಾದ ಕಾರ್ಯಗಳನ್ನು ಮಾಡಲು ಸಮರ್ಥರಾಗಿರುತ್ತೇವೆ. ನಮ್ಮಲ್ಲಿರುವ ಶಕ್ತಿ ಸಾಮರ್ಥ್ಯಗಳೆಲ್ಲವೂ ನಿನ್ನ ಶಕ್ತಿಯ ಅಂಶಗಳಾಗಿವೆಯೇ ಹೊರತು ಬೇರೆ ಇಲ್ಲವು.

**ಧಾತ್ರೀ ಧರಾಧರಸುತೇನ ಜಗದ್ಬಿಭರ್ತಿ**
**ಆಧಾರಶಕ್ತಿರಖಿಲಂ ತವ ವೈ ಬಿಭರ್ತಿ ।**
**ಸೂರ್ಯೋಽಪಿ ಭಾತಿ ವರದೇ ಪ್ರಭಯಾ ಯುತಸ್ತೇ**
**ತ್ವಂ ಸರ್ವಮೇತದಖಿಲಂ ವಿರಜಾ ವಿಭಾಸಿ ॥೪೧॥**

ಭೂಮಿಯು ಪರ್ವತಗಳ ಸಹಾಯದಿಂದ ಜಗತ್ತನ್ನು ಧರಿಸುತ್ತದೆ, ಎನ್ನುತ್ತಾರೆ. ಆದರೆ, ಅದು ವಾಸ್ತವವಲ್ಲವು. ಪರ್ವತಪುತ್ರೀರೂಪಳಾದ ಆದಿಶಕ್ತಿಯೇ, ಎಲ್ಲವನ್ನೂ ಧರಿಸುವ ನಿನ್ನ ಆಧಾರಶಕ್ತಿಯು ಸಮಸ್ತಪ್ರಪಂಚವನ್ನೂ ಧರಿಸಿರುತ್ತದೆ. ಮತ್ತು ಎಲ್ಲರಿಗೂ ಅವರವರ ಕೋರಿಕೆಗಳನ್ನು ನೆರವೇರಿಸಿಕೊಡುವ ಓ ದೇವಿಯೇ, ಬ್ರಹ್ಮಚೈತನ್ಯರೂಪಳಾದ ನೀನು ಶುದ್ಧಸತ್ವರೂಪಳಾಗಿ ಮೊದಲು ಪ್ರಕಾಶಿಸುತ್ತೀಯೆ. ನಿನ್ನ ತೇಜಸ್ಸಿನಿಂದಲೇ ಸೂರ್ಯನೂ ಪ್ರಕಾಶಿಸುತ್ತಾನೆ. ನೀನು ವಾಸ್ತವವಾಗಿ ರಜಸ್ಸು ಮುಂತಾದ ಗುಣಗಳ ಸಂಪರ್ಕವಿಲ್ಲದವಳಾದರೂ, ಈ ಚರಾಚರಾತ್ಮಕವಾದ ಜಗತ್ತೆಲ್ಲವನ್ನೂ ಪ್ರಕಾಶಗೊಳಿಸುತ್ತಿರುತ್ತೀಯೆ. '' ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ '' ಎಂದು ಉಪನಿಷತ್ತಿನಲ್ಲಿ ಹೇಳಿದೆ.

**ಬ್ರಹ್ಮಾಹಮೀಶ್ವರವರಃ ಕಿಲ ತೇ ಪ್ರಭಾವಾ-**
**ತ್ಸರ್ವೇ ವಯಂ ಜನಿಯುತಾ ನ ಯದಾ ತು ನಿತ್ಯಾಃ ।**
**ಕೇಽನ್ಯೇ ಸುರಾಃ ಶತಮುಖಪ್ರಮುಖಾಶ್ಚ ನಿತ್ಯಾ**
**ನಿತ್ಯಾ ತ್ವಮೇವ ಜನನೀ ಪ್ರಕೃತಿಃ ಪುರಾಣೀ ॥೪೨॥**

ಬ್ರಹ್ಮನೂ, ನಾನೂ, ಈಶ್ವರನೂ ಸಹ ನಿನ್ನ ಪ್ರಭಾವದಿಂದಲೇ ಜನಿಸಿದವರು. ನಾವುಗಳೂ ನಿತ್ಯರಲ್ಲವು. ಎಂದಮೇಲೆ ಇನ್ನುಳಿದ ಇಂದ್ರನೇ ಮೊದಲಾದ ದೇವತೆಗಳು ಹೇಗೆ ನಿತ್ಯರಾದಾರು? ಆದುದರಿಂದ ಮೂಲಕಾರಣಳಾದ, ಅನಾದಿಯಾಗಿರುವ ಮತ್ತು ಜಗತ್ತಿಗೆ ಮಾತೆಯಾದ ನೀನೇ ನಿತ್ಯಳಾಗಿರುವವಳು ಎಂದರೆ ಆದ್ಯಂತವಿಲ್ಲದವಳು.

**ತ್ವಂ ಚೇದ್ಭವಾನಿ ದಯಸೇ ಪುರುಷಂ ಪುರಾಣಂ**
**ಜಾನೇಽಹಮದ್ಯ ತವ ಸಂನಿಧಿಗಃ ಸದೈವ ।**
**ನೋ ಚೇದಹಂ ವಿಭುರನಾದಿರನೀಹ ಈಶೋ**
**ವಿಶ್ವಾತ್ಮಧೀರಿತಿ ತಮಃಪ್ರಕೃತಿಃ ಸದೈವ ॥೪೩॥**

ಓ ಭವಾನಿಯೇ, ನೀನು ಅನುಗ್ರಹ ಮಾಡಿದುದೇ ಆದರೆ, ಎಂದರೆ ಬ್ರಹ್ಮಾಕಾರವಾದ ಮನೋವೃತ್ತಿ ಎಂಬ ಬ್ರಹ್ಮವಿದ್ಯೆಯನ್ನು ನನ್ನಲ್ಲಿ ಕರುಣಿಸಿದರೆ ಅನಾದಿಯಾದ ಪರಮಾತ್ಮನ ಸ್ವರೂಪವನ್ನು ಪರಮಪುರುಷನಂತೆಯೇ ನಾನೂ ತಿಳಿದುಕೊಂಡೇನು. ಇದನ್ನು ನಾನು ನಿನ್ನ ಸನ್ನಿಧಿಯಲ್ಲಿದ್ದುಕೊಂಡು ಈಗ ನಿಶ್ಚಯಿಸಿರುತ್ತೇನೆ. ಇಲ್ಲದಿದ್ದರೆ, ಆ ಪುರುಷನು ಪರಮಾತ್ಮರೂಪನಾದರೂ ತಾನು ವಿಭುವು ಎಂದರೆ ವಿಶ್ವವ್ಯಾಪಕನು, ಆದಿಯಿಲ್ಲದವನು, ನಿಸ್ಸ್ಪೃಹನು, ಈಶ್ವರನು ಮತ್ತು ಸರ್ವಜ್ಞನು—ಎಂಬ ತಿಳಿವಳಿಕೆಯನ್ನು ಪಡೆಯದೆ ಅಹಂಕಾರದಿಂದ ಕೂಡಿದವನು ಆಗುವಂತೆ ನಾನೂ ಅಜ್ಞಾನಸ್ವಭಾವವುಳ್ಳವನೇ ಆಗುತ್ತೇನೆ.

**ವಿದ್ಯಾ ತ್ವಮೇವ ನನು ಬುದ್ಧಿಮತಾಂ ನರಾಣಾಂ**
**ಶಕ್ತಿಸ್ತ್ವಮೇವ ಕಿಲ ಶಕ್ತಿಮತಾಂ ಸದೈವ ।**
**ತ್ವಂ ಕೀರ್ತಿಕಾಂತಿಕಮಲಾಮಲತುಷ್ಟಿರೂಪಾ**
**ಮುಕ್ತಿಪ್ರದಾ ವಿರತಿರೇವ ಮನುಷ್ಯಲೋಕೇ ॥೪೪॥**

ನೀನು ಬುದ್ಧಿವಂತರಾದ ಜನಗಳಿಗೆ ಇರುವ ವಿದ್ಯೆಯ ಸ್ವರೂಪಳು. ಶಕ್ತಿವಂತರಾದವರಲ್ಲಿರುವ ಶಕ್ತಿಸ್ವರೂಪಳು. ಮತ್ತು ನೀನು ಕೀರ್ತಿರೂಪಳೂ ಕಾಂತಿರೂಪಳೂ, ಲಕ್ಷ್ಮೀಸ್ವರೂಪಳೂ, ಶುದ್ಧವಾದ ಸಂತೋಷಸ್ವರೂಪಳೂ ಆಗಿರುತ್ತೀಯೆ. ಅಲ್ಲದೆ, ಭೂಲೋಕದಲ್ಲಿ ಜ್ಞಾನಿಗಳಾಗಿರುವವರಿಗೆ ಮುಕ್ತಿಗೆ ಸಾಧನವಾದ ವೈರಾಗ್ಯಸ್ವರೂಪಳೂ ಆಗಿರುತ್ತೀಯೆ.

**ಗಾಯತ್ರ್ಯಪಿ ಪ್ರಥಮವೇದಕಲಾ ತ್ವಮೇವ**
**ಸ್ವಾಹಾ ಸ್ವಧಾ ಭಗವತೀ ಸುಗುಣಾರ್ಧಮಾತ್ರಾ ।**
**ಆಮ್ನಾಯ ಏವ ವಿಹಿತೋ ನಿಗಮೋ ಭವತ್ಯಾ**
**ಸಂಜೀವನಾಯ ಸತತಂ ಸುರಪೂರ್ವಜಾನಾಂ ॥೪೫॥**

ಅಲ್ಲದೆ, ನೀನು ಗಾಯತ್ರಿಯ ಸ್ವರೂಪಳು. ವೇದವಿದ್ಯೆಯೂ ನೀನೇ. ನೀನೇ ದೇವಯಜ್ಞದ ಹೋಮದಲ್ಲಿ ಸ್ವಾಹಾರೂಪಳು ಮತ್ತು ಪಿತೃಯಜ್ಞದಲ್ಲಿ ಸ್ವಧಾರೂಪಳು. ಮತ್ತು ಪೂಜ್ಯಳಾದ ನೀನು ಈ ಪ್ರಪಂಚದ ಸೃಷ್ಟಿ ಮುಂತಾದ ವ್ಯವಹಾರದಲ್ಲಿರುವಾಗ ಗುಣಗಳ ಸಂಬಂಧವುಳ್ಳವಳು, ತ್ರಿಮೂರ್ತಿಸ್ವರೂಪಳು. ಅಲ್ಲದೆ ಆ ಓಂಕಾರದ ಅರ್ಧಮಾತ್ರೆಯು ಸೂಚಿಸುವ ಬ್ರಹ್ಮಸ್ವರೂಪಳು. ದೇವತೆಗಳೇ ಮೊದಲಾದವರನ್ನು ಬದುಕಿಸಲು ಎಂದರೆ ಉದ್ಧರಿಸಲು ಜ್ಞಾನವನ್ನು ಕೊಟ್ಟು ಅಜ್ಞಾನವನ್ನು ಹೋಗಲಾಡಿಸಿ ಕಾಪಾಡಲು ಅವರಿಗೆ ಶಾಸ್ತ್ರವನ್ನೂ ವೇದಗಳನ್ನೂ ನೀನೇ ಹೇಳಿಕೊಟ್ಟಿರುತ್ತೀಯೆ.

**ಮೋಕ್ಷಾರ್ಥಮೇವ ರಚಯಸ್ಯಖಿಲಂ ಪ್ರಪಂಚಂ**
**ತೇಷಾಂ ಗತಾಃ ಖಲು ಯತೋ ನನು ಜೀವಭಾವಂ ।**
**ಅಂಶಾ ಅನಾದಿನಿಧನಸ್ಯ ಕಿಲಾನಘಸ್ಯ**
**ಪೂರ್ಣಾರ್ಣವಸ್ಯ ವಿತತಾ ಹಿ ಯಥಾ ತರಂಗಾಃ** ॥೪೬॥

ಉತ್ಪತ್ತಿ ಮತ್ತು ನಾಶರಹಿತನಾದ ಮತ್ತು ಶುದ್ಧಸ್ವರೂಪನಾದ ಬ್ರಹ್ಮನ ಅಂಶಗಳೇ, ತುಂಬಿದ ಸಮುದ್ರದ ಅಂಶಗಳೇ ವಿಸ್ತಾರವಾದ ಕೊನೆ ಮೊದಲಿಲ್ಲದ ಅಲೆಗಳಾಗಿರುವಂತೆ, ಜೀವಸ್ವರೂಪವನ್ನು ಹೊಂದಿರುತ್ತವೆ. ಕಡೆಗೆ ಆ ಜೀವರ ಮೋಕ್ಷಕ್ಕಾಗಿಯೇ ನೀನು ಸಮಸ್ತಪ್ರಪಂಚವನ್ನೂ ಸೃಷ್ಟಿಸಿ, ರಕ್ಷಣ, ಸಂಹಾರ ಮುಂತಾದ ಕಾರ್ಯಗಳನ್ನೂ ನೆರವೇರಿಸುತ್ತೀಯೆ.

**ಜೀವೋ ಯದಾ ತು ಪರಿವೇತ್ತಿ ತವೈವ ಕೃತ್ಯಂ**
**ತ್ವಂ ಸಂಹರಸ್ಯಖಿಲಮೇತದಿತಿ ಪ್ರಸಿದ್ಧಂ ।**
**ನಾಟ್ಯಂ ನಟೀವ ರಚಿತಂ ವಿತಥೇಽನ್ತರಂಗೇ**
**ಕಾರ್ಯೇ ಕೃತೇ ವಿರಮಸೇ ಪ್ರಥಿತಪ್ರಭಾವಾ** ॥೪೭॥

ಯಾವಾಗ ಜೀವನು, ಕಾರ್ಯವೆಲ್ಲವನ್ನೂ ವಾಸ್ತವವಾಗಿ ನಡೆಸತಕ್ಕವಳು ನೀನೇ ಎಂದೂ, ಮತ್ತು ಎಲ್ಲ ಪ್ರಪಂಚವನ್ನೂ ನೀನೇ ಸಂಹರಿಸತಕ್ಕವಳು, ನನ್ನದೇನೂ ಇರುವುದಿಲ್ಲವೆಂದೂ ತಿಳಿಯುವನೋ ಆಗ ಅವನಿಂದ, ನಿಜವಲ್ಲದ ಮತ್ತು ಚಮತ್ಕಾರವಾದ ಈ ಪ್ರಪಂಚದಲ್ಲಿನ ಸಂಸಾರದ ಕೆಲಸವು ಮುಗಿಯಲು,

ಆ ನಟನು ಅಭಿನಯದಿಂದ ನೆರವೇರಿಸತಕ್ಕ ಅಂತಹ ತೋರಿಕೆಯ ನಾಟ್ಯಕಾರ್ಯವು ಮುಗಿದಮೇಲೆ ಹೇಗೆ ಶಾಂತನಾಗುವುನೋ, ಅದರಂತೆಯೇ ಪ್ರಸಿದ್ಧವಾದ ಮಹಿಮೆಯುಳ್ಳ ನೀನೂ ನಿನ್ನ ಮಾಯಾರೂಪವಾದ ಕಾರ್ಯಗಳಿಂದ ಶಾಂತಳಾಗಿರುತ್ತೀಯೆ.

**ತ್ರಾತಾ ತ್ವಮೇವ ಮಮ ಮೋಹಮಯಾದ್ಭವಾಬ್ಧೇ-**
**ಸ್ತ್ವಾಮಂಬಿಕೇ ಸತತಮೇಮಿ ಮಹಾರ್ತಿದೇ ಚ ।**
**ರಾಗಾದಿಭಿರ್ವಿರಚಿತೇ ವಿತಥೇ ಕಿಲಾಂತೇ**
**ಮಾಮೇವ ಪಾಹಿ ಬಹುದುಃಖಕರೇ ಚ ಕಾಲೇ ॥೪೮॥**

ಓ ಮಾತೆಯೇ, ಈ ಮೋಹರೂಪವಾದ ಸಂಸಾರವೆಂಬ ಸಮುದ್ರದಿಂದ ನನ್ನನ್ನು ದಾಟಿಸಿ ಕಾಪಾಡತಕ್ಕವಳು ನೀನೇ. ಆದುದರಿಂದ ನಿನ್ನನ್ನು ಶರಣಳನ್ನಾಗಿ ಪಡೆದಿರುತ್ತೇನೆ. ರಾಗವೇ ಮೊದಲಾದವುಗಳಿಂದುಂಟಾದ ಮತ್ತು ಕಡೆಗೆ ಮಿಥ್ಯಾರೂಪವಾದ ತುಂಬ ದುಃಖವನ್ನು ಕೊಡುವ ಈ ಸಂಸಾರದಲ್ಲಿರುವ ನನ್ನನ್ನು ಕೊನೆಯ ಎಂದರೆ ಪ್ರಳಯದ ಕಾಲದಲ್ಲಿ ತಕ್ಕ ಸಮಯದಲ್ಲಿ ಕಾಪಾಡು. ಅಲ್ಲದೆ,

**ನಮೋ ದೇವಿ ಮಹಾವಿದ್ಯೇ ನಮಾಮಿ ಚರಣೌ ತವ ।**
**ಸದಾ ಜ್ಞಾನಪ್ರಕಾಶಂ ಮೇ ದೇಹಿ ಸರ್ವಾರ್ಥದೇ ಶಿವೇ ॥೪೯॥**

ಬ್ರಹ್ಮವಿದ್ಯೆಯ ಸ್ವರೂಪಳಾದ ಓ ದೇವಿಯೇ, ನಿನಗೆ ನಮಸ್ಕಾರವು. ನಿನ್ನ ಪಾದಗಳನ್ನು ನಮಸ್ಕರಿಸುತ್ತೇನೆ. ಎಲ್ಲ ಇಷ್ಟಾರ್ಥವನ್ನೂ ಕೊಡುವ ಮತ್ತು ಮಂಗಳರೂಪಳಾದ ಓ ದೇವಿಯೇ, ನನಗೆ ಯಾವಾಗಲೂ ಜ್ಞಾನವೆಂಬ ದೀಪದ ಪ್ರಕಾಶವನ್ನು ಅನುಗ್ರಹಿಸು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಚತುರ್ಥೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

|| ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ಬ್ರಹ್ಮೋವಾಚ ||

**ಇತ್ಯುಕ್ತ್ವಾ ವಿರತೇ ವಿಷ್ಣೌ ದೇವದೇವೇ ಜನಾರ್ದನೇ ।**
**ಉವಾಚ ಶಂಕರಃ ಶರ್ವಃ ಪ್ರಣತಃ ಪುರತಃ ಸ್ಥಿತಃ** ||೧||

ಬ್ರಹ್ಮನು ಹೇಳಿದನು—ದೇವತೆಗಳಿಗೂ ದೇವನಾದ ಮತ್ತು ದುಷ್ಟರನ್ನು ಶಿಕ್ಷಿಸುವ ವಿಷ್ಣುವು ಹೀಗೆ ಹೇಳಿ ಸ್ತೋತ್ರವನ್ನು ಮುಗಿಯಿಸಿ ಸುಮ್ಮನಾಗಲು, ಸಕಲ ಜನಗಳಿಗೂ ಸುಖವನ್ನು ಕೊಡುವ ಪರಮೇಶ್ವರನು ದೇವಿಯನ್ನು ನಮಸ್ಕರಿಸಿ ಅವಳ ಎದುರಿಗೆ ನಿಂತು ಸ್ತೋತ್ರಮಾಡಲು ಉದ್ದೇಶಿಸಿ ಹೀಗೆ ಹೇಳಿದನು—

|| ಶಿವ ಉವಾಚ ||

**ಯದಿ ಹರಿಸ್ತವ ದೇವಿ ವಿಭಾವಜ-**
**ಸ್ತದನು ಪದ್ಮಜ ಏವ ತವೋದ್ಭವಃ ।**
**ಕಿಮಹಮತ್ರ ತವಾಪಿ ನ ಸದ್ಗುಣಃ**
**ಸಕಲಲೋಕವಿಧೌ ಚತುರಾ ಶಿವೇ** ||೨||

ಓ ದೇವಿಯೇ, ಸತ್ವಗುಣವುಳ್ಳ ವಿಷ್ಣುವು ನಿನ್ನ ಮಹಿಮೆಯಿಂದ ಹುಟ್ಟಿದವನಾದರೆ, ಆ ಮೇಲೆ ರಜೋಗುಣವುಳ್ಳ ಬ್ರಹ್ಮನೂ ಸಹ ನಿನ್ನ ಮಹಿಮೆಯಿಂದಲೇ ಉಂಟಾದವನಾದರೆ, ತಮೋಗುಣವುಳ್ಳವನಾದ ನಾನೂ ಸಹ ನಿನ್ನ ಮಹಿಮೆಯಿಂದ ಉಂಟಾಗಲಿಲ್ಲವೇನು? ಏಕೆಂದರೆ, ಓ ಮಂಗಳರೂಪಳಾದ ದೇವಿಯೇ, ನೀನು

ನಮ್ಮನ್ನೂ ಒಳಗೊಂಡಿರುವ ಈ ಪ್ರಪಂಚವೆಲ್ಲವನ್ನೂ ಸೃಷ್ಟಿಸುವುದರಲ್ಲಿ ಚತುರ ಳಾಗಿರುವೆ. ಮತ್ತು ಗುಣತ್ರಯಸ್ವರೂಪಳೂ ಆಗಿರುವೆ.

**ತ್ವಮಸಿ ಭೂಸಲಿಲಂ ಪವನಸ್ತಥಾ**
**ಖಮಸಿ ವಹ್ನಿಗುಣಶ್ಚ ತಥಾ ಪುನಃ ।**
**ಜನನಿ ತಾನಿ ಪುನಃ ಕರಣಾನಿ ಚ**
**ತ್ವಮಸಿ ಬುದ್ಧಿಮನೋಽಪ್ಯಥಹಂಕೃತಿಃ ॥೩॥**

ನೀನು ಪೃಥ್ವೀಸ್ವರೂಪಳು, ಜಲಸ್ವರೂಪಳು, ವಾಯುಸ್ವರೂಪಳು, ಆಕಾಶ ಸ್ವರೂಪಳು. ನಿನ್ನಲ್ಲಿ ಅಗ್ನಿಯ ಗುಣಗಳಿರುತ್ತವೆ, ಎಂದರೆ ಅಗ್ನಿಯ ಸ್ವರೂಪಳೂ ನೀನೇ ಆಗಿರುವೆ. ಓ ಮಾತೆಯೇ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಸ್ವರೂಪಳೂ ಮತ್ತು ನಿಶ್ಚಯಾತ್ಮಕವಾದ ಬುದ್ಧಿ ಮತ್ತು ಸಂಕಲ್ಪ ವಿಕಲ್ಪಗಳ ಸ್ವರೂಪವಾದ ಮನಸ್ಸು ಇವುಗಳ ಸ್ವರೂಪಳೂ, ಅಹಂಕಾರಸ್ವರೂಪಳೂ ನೀನೇ ಆಗಿರುವೆ.

**ನ ಚ ವಿದಂತಿ ವದಂತಿ ಚ ಯೇಽನ್ಯಥಾ**
**ಹರಿಹರಾಜಕೃತಂ ನಿಖಿಲಂ ಜಗತ್ ।**
**ತವ ಕೃತಾಸ್ತ್ರಯ ಏವ ಸದೈವ ತೇ**
**ವಿರಚಯಂತಿ ಜಗತ್ಸಚರಾಚರಂ ॥೪॥**

ಯಾರು, ಈ ಜಗತ್ತೆಲ್ಲವೂ ಬ್ರಹ್ಮವಿಷ್ಣುಮಹೇಶ್ವರರಿಂದ ಕ್ರಮವಾಗಿ ಸೃಷ್ಟಿಸಿ, ಕಾಪಾಡಿ, ಸಂಹರಿಸಲ್ಪಟ್ಟದ್ದೆಂದು ಹೇಳುತ್ತಾರೆಯೋ ಅವರಿಗೆ ಏನೂ ತಿಳಿವಳಿಕೆ ಯಿಲ್ಲವು. ಏಕೆಂದರೆ, ಯಾವಾಗಲೂ ಆ ಬ್ರಹ್ಮವಿಷ್ಣುಮಹೇಶ್ವರರು ಮೂವರೂ ಸಹ ನಿನ್ನಿಂದಲೇ ಸೃಷ್ಟಿಸಲ್ಪಟ್ಟವರಾಗಿ ಚರಾಚರಾತ್ಮಕವಾದ ಈ ಜಗತ್ತನ್ನು ಸೃಷ್ಟಿಸಿ ಕಾಪಾಡಿ ಉಪಸಂಹರಿಸುತ್ತಾರೆ.

**ಅವನಿವಾಯುಖವಹ್ನಿಜಲಾದಿಭಿಃ**
**ಸವಿಷಯೈಃ ಸಗುಣೈಶ್ಚ ಜಗದ್ಭವೇತ್ ।**
**ಯದಿ ತದಾ ಕಥಮದ್ಯ ಚ ತತ್ಸ್ಫುಟಂ**
**ಪ್ರಭವತೀತಿ ತವಾಂಬ ಕಲಾಮೃತೇ ॥೫॥**

ಓ ಮಾತೆಯೇ, ವಿಷಯಗಳಿಂದಲೂ, ಶಬ್ದ, ಸ್ಪರ್ಶ, ರೂಪ, ರಸ, ಗಂಧವೇ ಮೊದಲಾದ ಗುಣಗಳಿಂದಲೂ ಕೂಡಿರುವ ಭೂಮಿ, ಗಾಳಿ, ಆಕಾಶ, ಬೆಂಕಿ, ನೀರು ಇವುಗಳೆಂಬ ಪಂಚಭೂತಗಳಿಂದಲೇ ಈ ಜಗತ್ತು ಆಗುವುದಾದರೆ ಈಗಲೂ ಇಲ್ಲಿಯೂ ಆ ಜಗತ್ತು ನಿನ್ನ ಚಿತ್ಕಲೆಯ ಪ್ರೇರಣರೂಪವಾದ ಅಂಶದ ಸಂಬಂಧ ವಿಲ್ಲದೆ ಏಕೆ ಪ್ರಕಾಶವನ್ನು ಪಡೆಯದೆ ಇದ್ದೀತು? ಕರ್ತೃವಿನ ಪ್ರೇರಣೆ ಇಲ್ಲದೆ ಕಾರ್ಯವು ಹೇಗಾದೀತು ?

**ಭವಸಿ ಸರ್ವಮಿದಂ ಸಚರಾಚರಂ ।**
**ತ್ವಮಜವಿಷ್ಣುಶಿವಾಕೃತಿಕಲ್ಪಿತಂ ।**
**ವಿವಿಧವೇಷವಿಲಾಸಕುತೂಹಲೈ-**
**ರ್ವಿರಮಸೇ ರಮಸೇಽಮ್ಬ ಯಥಾರುಚಿ** ॥೬॥

ಓ ತಾಯಿಯೇ, ನೀನು ಬ್ರಹ್ಮವಿಷ್ಣುಮಹೇಶ್ವರರೆಂದು ಮುಂತಾದ ಆಕಾರ ಗಳಿಂದ ಮಾಡಲ್ಪಟ್ಟ ಈ ಚಲಿಸತಕ್ಕ ಪ್ರಾಣಿವರ್ಗಗಳ ಮತ್ತು ಚಲನರಹಿತವಾದ ಪರ್ವತ ವೃಕ್ಷ ಮುಂತಾದ ಅಚಲವಸ್ತುಗಳ ಸಮೂಹದಿಂದ ಕೂಡಿರುವ ಈ ಜಗತ್ತಿನ ರೂಪವೂ ಆಗಿರುವೆ. ಮತ್ತು ನಿನ್ನ ಇಚ್ಛೆಯಂತೆ ಅನೇಕಬಗೆಯ ವೇಷಗಳಿಂದ ಕ್ರೀಡಿ ಸಲು ಆಸಕ್ತಿಯನ್ನು ಸೃಷ್ಟಿಕಾಲದಲ್ಲಿ ಹೊಂದಿರುತ್ತೀಯೆ. ಮತ್ತು ಆಮೇಲೆ ಪ್ರಳಯ ಕಾಲದಲ್ಲಿ ಅಂತಹ ಆಸಕ್ತಿಯಿಲ್ಲದವಳೂ ಆಗಿರುತ್ತೀಯೆ. ನಿನಗೆ " ಲೋಕವತ್ತು ಲೀಲಾಕೈವಲ್ಯಂ " ಎಂಬುದು ಸ್ವಭಾವವಾಗಿದೆ.

**ಸಕಲಲೋಕಸಿಸೃಕ್ಷುರಹಂ ಹರಿಃ**
**ಕಮಲಭೂಶ್ಚ ಭವಾಮ ಯದಾಂಬಿಕೇ ।**
**ತವ ಪದಾಂಬುಜಪಾಂಸುಪರಿಗ್ರಹಂ**
**ಸಮಧಿಗಮ್ಯ ತದಾ ನನು ಚಕ್ರಿಮ** ॥೭॥

ಓ ಮಾತೆಯೇ, ನಾನೂ, ಬ್ರಹ್ಮನೂ, ವಿಷ್ಣುವೂ ಯಾವಾಗ ಎಲ್ಲ ಲೋಕ ಗಳನ್ನು ಸೃಷ್ಟಿಸಬೇಕೆಂಬ ಇಚ್ಛೆಯುಳ್ಳವರಾಗುತ್ತೇವೆಯೋ ಆಗ ನಾವುಗಳು ನಿನ್ನ ಕಮಲದಂತಿರುವ ಪಾದಗಳ ಧೂಳಿಗಳನ್ನು ಸ್ವೀಕರಿಸಿಯೇ ಆಯಾ ಕಾರ್ಯಗಳನ್ನು ಕುಂಬಾರನು ಮಣ್ಣಿನಿಂದ ಮಡಕೆಗಳನ್ನು ಮಾಡುವಂತೆ ಮಾಡಿರುತ್ತೇವಲ್ಲವೇ ?

**ಯದಿ ದಯಾರ್ದ್ರಮನಾ ನ ಸದಾಂಬಿಕೇ**
**ಕಥಮಹಂ ವಿಹಿತಶ್ಚ ತಮೋಗುಣಃ ।**
**ಕಮಲಜಶ್ಚ ರಜೋಗುಣಸಂಭವಃ**
**ಸುವಿಹಿತಃ ಕಿಮು ಸತ್ತ್ವಗುಣೋ ಹರಿಃ ॥೮॥**

ಓ ಜಗನ್ಮಾತೆಯೇ, ನೀನು ಯಾವಾಗಲೂ ದಯೆಯಿಂದ ಕರಗಿದ ಮನಸ್ಸುಳ್ಳವಳು. ಇಲ್ಲದಿದ್ದರೆ, ನಾನು ಕಡೆಗೆ ನೆರವೇರಿಸಬೇಕಾದ ಉಪಸಂಹಾರಕಾರ್ಯಕ್ಕೆ ಅನುಕೂಲವಾಗುವಂತೆ ತಮೋಗುಣಪ್ರಧಾನನಾಗಿ ಹೇಗೆ ಮಾಡಲ್ಪಟ್ಟೆನು ? ಬ್ರಹ್ಮನು ಮೊದಲು ಮಾಡಬೇಕಾದ ಸೃಷ್ಟಿಕಾರ್ಯಕ್ಕೆ ತಕ್ಕಂತೆ ರಜೋಗುಣಸ್ವರೂಪನು ಹೇಗೆ ಆದನು ? ಮತ್ತು ವಿಷ್ಣುವು ನೆರವೇರಿಸಬೇಕಾದ ರಕ್ಷಣ ಕಾರ್ಯಕ್ಕೆ ತಕ್ಕಂತೆ ಆವಶ್ಯಕವಾದ ಸತ್ತ್ವಗುಣವುಳ್ಳವನು ಹೇಗೆ ಆದನು ?

**ಯದಿ ನತೇ ವಿಷಮಾ ಮತಿರಂಬಿಕೇ**
**ಕಥಮಿದಂ ಬಹುಧಾ ವಿಹಿತಂ ಜಗತ್ ।**
**ಸಚಿವಭೂಪತಿಭೃತ್ಯಜನಾವೃತಂ**
**ಬಹುಧನೈರಧನೈಶ್ಚ ಸಮಾಕುಲಂ ॥೯॥**

ಓ ಮಾತೆಯೇ, ನಿನಗೆ ವಿಷಮ ಎಂದರೆ ಭೇದಗಳಿಂದ ಕೂಡಿದ ಬುದ್ಧಿಯು ಇಲ್ಲದಿದ್ದರೆ, ಈ ಜಗತ್ತಿನಲ್ಲಿ ಮಂತ್ರಿ, ರಾಜ, ಸೇವಕ, ಶ್ರೀಮಂತ, ದರಿದ್ರ ಇವೇ ಮೊದಲಾದ ಅನೇಕಭೇದಗಳು ಹೇಗೆ ಮಾಡಲ್ಪಟ್ಟುವು ? ಈ ನಿನ್ನ ಬುದ್ಧಿಯೂ ಸೃಜ್ಯಮಾನಪ್ರಾಣಿಗಳ ಕರ್ಮಕ್ಕೆ ಅನುಸಾರವಾಗಿರುತ್ತದೆ. ಆದುದರಿಂದ ನಿನಗೆ ಪಕ್ಷಪಾತವೂ ಕಾಠಿನ್ಯವೂ ಇಲ್ಲವು.

**ತವ ಗುಣಾಸ್ತ್ರಯ ಏವ ಸದಾ ಕ್ಷಮಾಃ**
**ಪ್ರಕಟನಾವನಸಂಹರಣೇಷು ವೈ ।**
**ಹರಿಹರದ್ರುಹಿಣಾಶ್ಚ ಕ್ರಮಾತ್ತ್ವಯಾ**
**ವಿರಚಿತಾಸ್ತ್ರಿಜಗತಾಂ ಕಿಲ ಕಾರಣಂ ॥೧೦॥**

ಮತ್ತು ನಿನ್ನ ಸತ್ತ್ವರಜಸ್ತಮೋಗುಣಗಳೇ ಜಗತ್ತನ್ನು ಸೃಷ್ಟಿಸುವುದಕ್ಕೂ, ಪಾಲಿಸುವುದಕ್ಕೂ, ಸಂಹರಿಸುವುದಕ್ಕೂ ಯಾವಾಗಲೂ ಶಕ್ತವಾಗಿರುತ್ತವೆ. ಆದುದ

ರಿಂದಲೇ ಬ್ರಹ್ಮವಿಷ್ಣುಮಹೇಶ್ವರರು ಕ್ರಮವಾಗಿ ನಿನ್ನಿಂದ ಸ್ವರ್ಗ ಮರ್ತ್ಯ ಪಾತಾಳ ವೆಂಬ ಮೂರು ಲೋಕಗಳುಳ್ಳ ಈ ಜಗತ್ತಿನ ಸೃಷ್ಟಿ, ರಕ್ಷಣೆ, ಲಯ ಇವುಗಳಿಗೆ ಕಾರಣರಾಗಿ ಸೃಷ್ಟಿಸಲ್ಪಟ್ಟಿರುತ್ತಾರೆಯಲ್ಲವೇ ?

**ಪರಿಚಿತಾನಿ ಮಯಾ ಹರಿಣಾ ತಥಾ**
**ಕಮಲಜೇನ ವಿಮಾನಗತೇನ ವೈ ।**
**ಪಥಿ ಗತೈರ್ಭುವನಾನಿ ಕೃತಾನಿ ವಾ**
**ಕಥಯ ಕೇನ ಭವಾನಿ ನವಾನಿ ಚ** ॥೧೧॥

ಓ ಭವಾನಿಯೇ, ನಾನೂ, ಬ್ರಹ್ಮನೂ, ವಿಷ್ಣುವೂ ಸಹ ವಿಮಾನದಲ್ಲಿ ಬರುತ್ತಿರುವಾಗ ದಾರಿಯಲ್ಲಿ ಅನೇಕ ಹೊಸಹೊಸ ಲೋಕಗಳನ್ನು ನೋಡಿದವು. ಆ ಲೋಕಗಳು ನಿನ್ನಿಂದಲ್ಲದೆ ಇನ್ನಾರಿಂದ ಸೃಷ್ಟಿಸಲ್ಪಟ್ಟವು ? ಹೇಳು.

**ಸೃಜಸಿ ಪಾಸಿ ಜಗಜ್ಜಗದಂಬಿಕೇ**
**ಸ್ವಕಲಯಾ ಕಿಯದಿಚ್ಛಸಿ ನಾಶಿತುಂ ।**
**ರಮಯಸೇ ಸ್ವಪತಿಂ ಪುರುಷಂ ಸದಾ**
**ತವ ಗತಿಂ ನಹಿ ವಿದ್ಮ ವಯಂ ಶಿವೇ** ॥೧೨॥

ಜಗತ್ತಿಗೆ ಮಾತೆಯಾದ ಓ ದೇವಿಯೇ, ನೀನು ಜಗತ್ತನ್ನು ಸೃಷ್ಟಿಸುವೆ, ಮತ್ತು ಪಾಲಿಸುತ್ತೀಯೆ. ಅಲ್ಲದೆ ಎಷ್ಟನ್ನು ನಾಶಮಾಡಬೇಕೆಂದು ಇಚ್ಛಿಸುವೆಯೋ ಅಷ್ಟೇ ಅಂಶವನ್ನು ನಾಶಮಾಡುತ್ತೀಯೆ. ಈ ಎಲ್ಲಾ ಕೃತ್ಯಗಳಿಂದಲೂ ನಿನ್ನ ಪತಿ ಯಾದ ಪುರುಷನನ್ನು ಸುತೋಷಪಡಿಸುತ್ತೀಯೆ. ಇಂತಹ ನಿನ್ನ ರೀತಿಕ್ರಮಗಳ ಲೀಲೆಯನ್ನು ಓ ಮಂಗಳಸ್ವರೂಪಳೇ, ನಾವು ಸಂಪೂರ್ಣವಾಗಿ ತಿಳಿಯಲಾರೆವು.

**ಜನನಿ ದೇಹಿ ಪದಾಂಬುಜಸೇವನಂ**
**ಯುವತಿಭಾವಗತಾನಪಿ ನಃ ಸದಾ ।**
**ಪುರುಷತಾಮಧಿಗಮ್ಯ ಪದಾಂಬುಜಾ-**
**ದ್ವಿರಹಿತಾಃ ಕ್ವ ಲಭೇಮ ಸುಖಂ ಸ್ಫುಟಂ** ॥೧೩॥

ಓ ಮಾತೆಯೇ, ಸ್ತ್ರೀರೂಪದಿಂದಲಾದರೂ ನಮಗೆ ಕಮಲದಂತಿರತಕ್ಕ ನಿನ್ನ ಪಾದಗಳ ಸೇವೆಯನ್ನು ಕರುಣಿಸು. ನಾವು ಪುರುಷಸ್ವಭಾವವನ್ನು ಹೊಂದಿದರೂ ನಿನ್ನ ಪಾದಕಮಲಗಳನ್ನು ಬಿಟ್ಟು ನಿಜವಾದ ಸುಖವನ್ನು ಎಲ್ಲಿತಾನೇ ಪಡೆಯಬಲ್ಲೆವು?

**ನ ರುಚಿರಸ್ತಿ ಮಮಾಂಬ ಪದಾಂಬುಜಂ**
**ತವ ವಿಹಾಯ ಶಿವೇ ಭುವನೇಷ್ವಲಂ ।**
**ನಿವಸಿತುಂ ನರದೇಹಮವಾಪ್ಯ ಚ**
**ತ್ರಿಭುವನಸ್ಯ ಪತಿತ್ವಮವಾಪ್ಯ ವೈ** ॥೧೪॥

ಓ ಮಾತೆಯೇ, ಮತ್ತು ಮಂಗಳಸ್ವರೂಪಳೇ, ನಿನ್ನ ಪಾದಕಮಲವನ್ನು ಬಿಟ್ಟು, ಪುರುಷತ್ವವನ್ನು ಪಡೆದರೂ, ಮೂರು ಲೋಕಗಳ ಒಡೆಯತನವು ಸಿಕ್ಕಿದರೂ, ಮಾನವಶರೀರವನ್ನು ಪಡೆದು ಆ ಭುವನಗಳಲ್ಲಿರಲು ಅಂತಹ ಪದವಿಗಳನ್ನೂ ಅನುಭವಿಸಲು ನಾನು ಇಷ್ಟಪಡಲಾರೆನು.

**ಸುದತಿ ನಾಸ್ತಿ ಮನಾಗಪಿ ಮೇ ರತಿ-**
**ರ್ಯುವತಿಭಾವಮವಾಪ್ಯ ತವಾಂತಿಕೇ ।**
**ಪುರುಷತಾ ಕ್ವ ಸುಖಾಯ ಭವತ್ಯಲಂ**
**ತವ ಪದಂ ನ ಯದೀಕ್ಷಣಗೋಚರಃ** ॥೧೫॥

ಸುಂದರವಾದ ದಂತಪಂಕ್ತಿಯುಳ್ಳ ಓ ದೇವಿಯೇ, ನಿನ್ನ ಸಮೀಪದಲ್ಲಿ ಸ್ತ್ರೀರೂಪವನ್ನು ಪಡೆದೂ ನನಗೆ ನಿನ್ನ ಪಾದಕಮಲಗಳ ದರ್ಶನವಿಲ್ಲದಿದ್ದರೆ ಸ್ವಲ್ಪವೂ ಸುಖವಿರುವುದಿಲ್ಲವು. ಆದುದರಿಂದ ನಿನ್ನ ಪಾದಕಮಲಗಳ ದರ್ಶನವಿಲ್ಲದ ಪುರುಷ ಭಾವವು ಏನು ಸುಖವನ್ನುಂಟುಮಾಡೀತು?

**ತ್ರಿಭುವನೇಷು ಭವತ್ವಿಯಮಂಬಿಕೇ**
**ಮಮ ಸದೈವ ಹಿ ಕೀರ್ತಿರನಾವಿಲಾ ।**
**ಯುವತಿಭಾವಮವಾಪ್ಯ ಪದಾಂಬುಜಂ**
**ಪರಿಚಿತಂ ತವ ಸಂಸೃತಿನಾಶನಂ** ॥೧೬॥

ಓ ಮಾತೆಯೇ, ಮೂರು ಲೋಕಗಳಲ್ಲಿಯೂ ನನಗೆ ಬೇಕಾದುದು ಇದೇ. ಯಾವಾಗಲೂ ಸ್ತ್ರೀರೂಪದಿಂದಲಾದರೂ ನಿನ್ನ ಪಾದಕಮಲವನ್ನು ಪಡೆದು ಆ ಪಾದ

ಕಮಲಗಳ ಸೇವೆಯೂ, ಆ ಸೇವೆಯಿಂದ ನಿರ್ಮಲವಾದ ಕೀರ್ತಿಯೂ ಲಭಿಸುತ್ತಿರಲೆಂಬುವುದೇ ನನ್ನ ಬಯಕೆಯಾಗಿದೆ. ಏಕೆಂದರೆ, ಇದು ಈ ಸಂಸಾರದ ಚಕ್ರದಲ್ಲಿ ಸಿಕ್ಕಿಕೊಂಡು ಸುತ್ತುತ್ತಿರಬೇಕೆಂಬ ನಿರ್ಬಂಧದ ದುಃಖವನ್ನು ನಿವಾರಿಸುತ್ತದೆಂಬುದು ಗೊತ್ತಾಗಿದೆ. ಹಾಗಲ್ಲದೆ ನನ್ನ ಪದವಿಯಿಂದ ಉಂಟಾಗುವ ಕೀರ್ತಿಯು ಇಷ್ಟು ಉತ್ತಮವಲ್ಲವು !

ಭುವಿ ವಿಹಾಯ ತವಾಂತಿಕಸೇವನಂ
ಕ ಇಹ ವಾಂಛತಿ ರಾಜ್ಯಮಕಂಟಕಂ ।
ತ್ರುಟಿರಸೌ ಕಿಲ ಯಾತಿ ಯುಗಾತ್ಮತಾಂ
ನ ವಿಕಟಂ ಯದಿ ತೇಽಂಘ್ರಿಸರೋರುಹಂ ॥೧೭॥

ನಿನ್ನ ಸಮಾಪದಲ್ಲಿ ಸೇವೆಯನ್ನು ಬಿಟ್ಟು ಭೂಮಿಯಲ್ಲಿ ಅದಾವನು ಯಾವ ತೊಂದರೆಯೂ ಇಲ್ಲದಿರುವ ರಾಜ್ಯಾಧಿಪತ್ಯವನ್ನು ತಾನೇ ಬಯಸುವನು ? ನಿನ್ನ ಪಾದ ಕಮಲದ ಸಮಾಪದಲ್ಲಿ ಇರದಿದ್ದರೆ ಒಂದೊಂದು ನಿಮಿಷವೂ ಒಂದೊಂದು ಯುಗದಂತೆ ಭಾಸವಾಗುತ್ತದೆ !

ತಪಸಿ ಯೇ ನಿರತಾ ಮುನಯೋಽಮಲಾ-
ಸ್ತವ ವಿಹಾಯ ಪದಾಂಬುಜಪೂಜನಂ ।
ಜನನಿ ತೇ ವಿಧಿನಾ ಕಿಲ ವಂಚಿತಾಃ
ಪರಿಭವೋ ವಿಭವೇ ಪರಿಕಲ್ಪಿತಃ ॥೧೮॥

ಓ ಮಾತೆಯೇ ಯಾವ ಮುನಿಗಳು ಶುದ್ಧರಾದರೂ ನಿನ್ನ ಪಾದಕಮಲದ ಪೂಜೆಯನ್ನು ಬಿಟ್ಟು ತಪಸ್ಸಿನಲ್ಲಿ ಯುಕ್ತಿಪೂರ್ವಕವಾಗಿ ಸಿದ್ಧಾಂತಗಳ ವಿಮರ್ಶೆಯಲ್ಲಿ ಮಾತ್ರ ಆಸಕ್ತರಾಗಿರುವರೋ ಅವರು ಅದೃಷ್ಟದಿಂದ ವಂಚಿತರಾದವರು ಎಂದರೆ ಭಾಗ್ಯಹೀನರಾದವರು. ನಿನ್ನ ಪೂಜೆಯಲ್ಲಿ ಉದಾಸೀನರಾದರೆ ಅವರ ತಪಸ್ಸಿಗೆ ದೊರೆಯಬೇಕಾದ ಮುಕ್ತಿರೂಪವಾದ ಅತಿಶಯದ ಸೌಕರ್ಯಗಳ ಸಂಪತ್ತು ಇದ್ದರೂ ಫಲವು ದೊರೆಯದೆ ಅವಮಾನವಾಗಿ ವೃಥಾ ಶ್ರಮವೇ ಲಭಿಸುತ್ತದೆ. ಯುಕ್ತಿ ವಿಮರ್ಶೆಯೂ ನಂಬಿಕೆಯಿಂದ ಧರ್ಮಾಚರಣೆಯೂ ಈ ಎರಡೂ ಆವಶ್ಯಕವಾದುವು.

ನ ತಪಸಾ ನ ದಮೇನ ಸಮಾಧಿನಾ
ನ ಚ ತಥಾ ವಿಹಿತೈಃ ಕ್ರತುಭಿರ್ಯಥಾ ।
ತವ ಪದಾಬ್ಜಪರಾಗನಿಷೇವಣಾ-
ದ್ಭವತಿ ಮುಕ್ತಿರಜೇ ಭವಸಾಗರಾತ್ ॥೧೯॥

ಉತ್ಪತ್ತಿಯಿಲ್ಲದ ಓ ಮಾತೆಯೇ, ಕೇವಲವಾದ ತಪಸ್ಸಿನಿಂದಾಗಲೀ, ಇಂದ್ರಿಯ ನಿಗ್ರಹದಿಂದಾಗಲೀ, ಸಮಾಧಿಯಿಂದಾಗಲೀ ಮತ್ತು ಯಾಗವನ್ನು ಮಾಡುವುದರಿಂದ ಲಾಗಲೀ ಮುಕ್ತಿಯು ದೊರೆಯಲಾರದು. ನಿನ್ನ ಪಾದಕಮಲಗಳ ಮಕರಂದರಸದ ಸೇವನೆಯಿಂದ ಮಾತ್ರವೇ ಸಂಸಾರವೆಂಬ ಸಮುದ್ರದಿಂದ ಮುಕ್ತಿ ಎಂದರೆ ಬಿಡುಗಡೆಯು ಉಂಟಾಗುತ್ತದೆ.

ಕುರು ದಯಾಂ ದಯಸೇ ಯದಿ ದೇವಿ ಮಾಂ
ಕಥಯ ಮಂತ್ರಮನಾವಿಲಮದ್ಭುತಂ ।
ಸಮಭವಂ ಪ್ರಜಪನ್ ಸುಖಿತೋ ಹ್ಯಹಂ
ಸುವಿಶದಂ ಚ ನವಾರ್ಣಮನುತ್ತಮಂ ॥೨೦॥

ಓ ದೇವಿಯೇ, ನಿನಗೆ ನನ್ನಲ್ಲಿ ದಯೆಯಿದ್ದಲ್ಲಿ ಅನುಗ್ರಹವನ್ನು ಮಾಡು. ಆಶ್ಚರ್ಯಕರವಾದ ಮತ್ತು ಶುದ್ಧವಾದ ನವಾರ್ಣವೆಂಬ ಒಂಭತ್ತು ಅಕ್ಷರಗಳುಳ್ಳ ಶ್ರೇಷ್ಠಮಂತ್ರವನ್ನು ನನಗೆ ಸ್ಪಷ್ಟವಾಗಿ ಉಪದೇಶಿಸು. ನಾನು ಅದನ್ನು ಜಪಿಸುತ್ತಾ ಸುಖವನ್ನು ಹೊಂದುವೆನು.

ಪ್ರಥಮಜನ್ಮನಿ ಚಾಧಿಗತೋ ಮಯಾ
ತದಧುನಾ ನ ವಿಭಾತಿ ನವಾಕ್ಷರಃ ।
ಕಥಯ ಮಾಂ ಮನುಮದ್ಯ ಭವಾರ್ಣವಾ-
ಜ್ಜನನಿ ತಾರಯ ತಾರಯ ತಾರಕೇ ॥೨೧॥

ಹಿಂದಿನ ಜನ್ಮದಲ್ಲಿ ಆ ನಿನ್ನ ನವಾರ್ಣಮಂತ್ರವನ್ನು ಪಡೆದಿದ್ದೆನು. ಈಗ ಅದು ಮರೆತುಹೋಗಿರುವುದರಿಂದ ಸ್ಮರಣೆಗೆ ಬರುವುದಿಲ್ಲವು. ಓ ಮಾತೆಯೇ, ಭಕ್ತರನ್ನು ನೀನು ಉದ್ಧರಿಸುವವಳಾದುದರಿಂದ ಆ ಮಂತ್ರವನ್ನು ಈಗಲೂ ಉಪದೇಶಿಸಿ ನನ್ನನ್ನು ಸಂಸಾರಸಮುದ್ರದಿಂದ ಪಾರುಮಾಡಿ ಉದ್ಧರಿಸು.

॥ ಬ್ರಹ್ಮೋವಾಚ ॥

**ಇತ್ಯುಕ್ತ್ವಾ ಸಾ ಮಹಾದೇವೀ ಶಿವೇನಾದ್ಭುತತೇಜಸಾ ।**
**ಉಚ್ಚಚಾರಾಂಬಿಕಾಮಂತ್ರಂ ಪ್ರಸ್ಫುಟಂ ಚ ನವಾಕ್ಷರಂ ॥೨೨॥**

ಬ್ರಹ್ಮನು ಹೇಳಿದನು—ಆ ಮಹಾದೇವಿಯು ಅತ್ಯಾಶ್ಚರ್ಯಕರವಾದ, ಮಹಾತೇಜಸ್ಸುಳ್ಳ ಈಶ್ವರನಿಂದ ಈ ರೀತಿ ಪ್ರಾರ್ಥಿಸಲ್ಪಟ್ಟವಳಾಗಿ, ತನ್ನ ನವಾಕ್ಷರ ಮಂತ್ರವನ್ನು ಸ್ಪಷ್ಟವಾಗಿ ಉಚ್ಚರಿಸಿದಳು.

**ತಂ ಗೃಹೀತ್ವಾ ಮಹಾದೇವಃ ಪರಾಂ ಮುದಮವಾಪ ಹ ।**
**ಪ್ರಣಮ್ಯ ಚರಣೌ ದೇವ್ಯಾಸ್ತತ್ರೈವಾವಸ್ಥಿತಃ ಶಿವಃ ॥೨೩॥**

ಮಹಾದೇವನು ಆ ಮಂತ್ರವನ್ನು ಸ್ವೀಕರಿಸಿ ತುಂಬ ಸಂತೋಷವನ್ನು ಹೊಂದಿದನು. ಆ ಮೇಲೆ, ಆ ದೇವಿಯ ಪಾದಗಳನ್ನು ವಂದಿಸಿ ಆ ಶಿವನು ಅಲ್ಲಿಯೇ ಒಂದೆಡೆಯಲ್ಲಿ ನಿಂತಿದ್ದನು.

**ಜಪನ್ನವಾಕ್ಷರಂ ಮಂತ್ರಂ ಕಾಮದಂ ಮೋಕ್ಷದಂ ತಥಾ ।**
**ಬೀಜಯುಕ್ತಂ ಶುಭೋಚ್ಚಾರಂ ಶಂಕರಸ್ತತ್ರ ಸ್ಥಿವಾಂಸ್ತದಾ ॥೨೪॥**

ಮತ್ತು ಆ ಶಂಕರನು, ಇಷ್ಟಾರ್ಥಗಳೆಲ್ಲವನ್ನೂ ಕೊಡುವ, ಹಾಗೆಯೇ ಮುಕ್ತಿಯನ್ನೂ ಕೊಡುವ ಮತ್ತು ಮಧುರವಾದ ಉಚ್ಚಾರಣೆಯುಳ್ಳ ಆ ದೇವಿಯ ನವಾಕ್ಷರೀಮಂತ್ರವನ್ನು ಬೀಜಾಕ್ಷರಸಹಿತವಾಗಿ ಜಪಿಸುತ್ತಾ ಅಲ್ಲಿಯೇ ಇದ್ದನು.

**ತಂ ತಥಾಽವಸ್ಥಿತಂ ದೃಷ್ಟ್ವಾ ಶಂಕರಂ ಲೋಕಶಂಕರಂ ।**
**ಅವೋಚಂ ತಾಂ ಮಹಾಮಾಯಾಂ ಸಂಸ್ಥಿತೋಽಹಂ ಪದಾಂತಿಕೇ ॥೨೫॥**

ಪ್ರಪಂಚಕ್ಕೆಲ್ಲ ಸುಖವನ್ನುಂಟುಮಾಡುವ ಶಂಕರನು ಆರೀತಿಯಾಗಿ ದೇವೀ ಮಂತ್ರಜಪದಲ್ಲಿ ನಿರತನಾಗಿರುವುದನ್ನು ನೋಡಿ, ನಾನು ಆದಿಮಾಯೆಯಾದ ಆ ದೇವಿಯನ್ನು ಕುರಿತು ಅವಳ ಪಾದಗಳ ಸಮೀಪದಲ್ಲಿ ನಿಂತು ಅವಳ ಮಹಿಮೆಯನ್ನು ವರ್ಣಿಸುವ ಸ್ತೋತ್ರವನ್ನು ಹೀಗೆ ಹೇಳಿದೆನು.

**ನ ವೇದಾಸ್ತ್ವಾಮೇವಂ ಕಲಯಿತುಮಿಹಾಸನ್ನಪಟವೋ**
**ಯತಸ್ತೇನೋಚುಸ್ತ್ವಾಂ ಸಕಲಜನಧಾತ್ರೀಮವಿಕಲಾಂ ।**
**ಸ್ವಾಹಾಭೂತಾ ದೇವೀ ಸಕಲಮಖಹೋಮೇಷು ವಿಹಿತಾ**
**ತದಾ ತ್ವಂ ಸರ್ವಜ್ಞಾ ಜನನಿ ಖಲು ಜಾತಾ ತ್ರಿಭುವನೇ ॥೨೬॥**

ಓ ತಾಯಿಯೇ, ವೇದಗಳೂ ಇಂತಹ ನಿನ್ನನ್ನು ತಿಳಿಯಲು ಸಮರ್ಥಗಳಾಗಿಲ್ಲ ವೆಂದಲ್ಲವು, ತಿಳಿದೇ ತಿಳಿದಿರುತ್ತವೆ. ಏಕೆಂದರೆ ಆ ವೇದಗಳೂ ನಿನ್ನನ್ನು ಪರಿಪೂರ್ಣ ಸ್ವರೂಪಳೆಂದೂ ಸರ್ವಜ್ಞಳೆಂದೂ ಮತ್ತು ಎಲ್ಲ ಜನಗಳನ್ನೂ ಪೋಷಿಸುವವಳೆಂದೂ ಹೇಳಿರುತ್ತವೆ. ಅಲ್ಲದೆ, ನಿನ್ನ ಶಕ್ತಿಯ ಏಕದೇಶವಾದ ಸ್ವಾಹಾರೂಪದಿಂದಲೂ ಪವಿತ್ರವಾದ ಯಾಗ ಮತ್ತು ಹೋಮಗಳಲ್ಲಿಯೂ ನಿನ್ನನ್ನೇ ಹೇಳಿರುತ್ತವೆಯಲ್ಲವೇ? ಆದುದರಿಂದ ನೀನು ಮೂರು ಲೋಕಗಳಲ್ಲಿಯೂ ಎಲ್ಲರಿಗಿಂತಲೂ ಉತ್ಕೃಷ್ಟಳೂ ಸರ್ವಜ್ಞಳೂ ಆದ ತಾಯಿಯಾಗಿ ಇರುವೆ.

**ಕರ್ತಾಹಂ ಪ್ರಕರೋಮಿ ಸರ್ವಮಖಿಲಂ ಬ್ರಹ್ಮಾಂಡಮತ್ಯದ್ಭುತಂ**
**ಕೋಽನ್ಯೋಽಸ್ತೀಹ ಚರಾಚರೇ ತ್ರಿಭುವನೇ ಮತ್ತಃ ಸಮರ್ಥಃ ಪುಮಾನ್ ।**
**ಧನ್ಯೋಽಸ್ಮ್ಯತ್ರ ನ ಸಂಶಯಃ ಕಿಲ ಯದಾ ಬ್ರಹ್ಮಾಸ್ಮಿ ಲೋಕಾತಿಗೋ**
**ಮಗ್ನೋಽಹಂ ಭವಸಾಗರೇ ಪ್ರವಿತತೇ ಗರ್ವಾಭಿವೇಶಾದಿತಿ ॥೨೭॥**

ಓ ಜಗನ್ಮಾತೆಯೇ, "ನಾನು ಕರ್ತೃವು, ನಾನೇ ಅತ್ಯಾಶ್ಚರ್ಯಕರವಾದ ಎಲ್ಲ ಪ್ರಪಂಚವನ್ನೂ ಸೃಷ್ಟಿಮಾಡುತ್ತೇನೆ. ಈ ಚರಾಚರಾತ್ಮಕವಾದ ಪ್ರಪಂಚದಲ್ಲಿ ನನಗಿಂತಲೂ ಶಕ್ತರಾದ ಪುರುಷರು ಯಾರು ಇರುತ್ತಾರೆ? ಹೀಗೆ ಉತ್ತಮವಾದ ಮಹಾಕಾರ್ಯವನ್ನು ನೆರವೇರಿಸಿರುವ ನಾನೇ ಧನ್ಯನು. ಏಕೆಂದರೆ, ಲೋಕದಲ್ಲಿ ತುಂಬ ಶ್ರೇಷ್ಠವಾದ ಎಲ್ಲರನ್ನೂ ಮೀರಿಸಿರುವ ಬ್ರಹ್ಮನೇ ನಾನಾಗಿರುತ್ತೇನೆ. ಇದರಲ್ಲಿ ಸಂಶಯವಿಲ್ಲವು" ಎಂದು ಮುಂತಾಗಿ ಭಾವಿಸುತ್ತಾ ಅಹಂಕಾರದ ಆವರಣದಿಂದ ಅತಿವಿಸ್ತಾರವಾದ ಈ ಸಂಸಾರವೆಂಬ ಸಮುದ್ರದಲ್ಲಿ ನಾನು ಮುಳುಗಿದ್ದೆನು.

**ಅದ್ಯಾಹಂ ತವ ಪಾದಪಂಕಜಪರಾಗಾದಾನಗರ್ವೇಣ ವೈ**
**ಧನ್ಯೋಽಸ್ಮೀತಿ ಯಥಾರ್ಥವಾದನಿಪುಣೋ ಜಾತಃ ಪ್ರಸಾದಾಚ್ಚ ತೇ ।**
**ಯಾಚೇ ತ್ವಾಂ ಭವಭೀತಿನಾಶಚತುರಾಂ ಮುಕ್ತಿಪ್ರದಾಂ ಚೇಶ್ವರೀಂ**
**ಹಿತ್ವಾ ಮೋಹಕೃತಂ ಮಹಾರ್ತಿನಿಗಡಂ ತ್ವದ್ಭಕ್ತಿಯುಕ್ತಂ ಕುರು ॥೨೮॥**

ಓ ಭಕ್ತವತ್ಸಲಳೇ, ಈಗಲಾದರೋ ನಿನ್ನ ಪಾದಕಮಲದ ಧೂಳಿಯನ್ನು ಸ್ವೀಕಾರಮಾಡಿದುದರಿಂದ ಉಂಟಾಗಿರುವ ಹೆಮ್ಮೆಯಿಂದ ನಾನು ನಿನ್ನ ಅನುಗ್ರಹ ದಿಂದಲೇ ಧನ್ಯನಾಗಿರುವೆನೆಂದು ನಿಜಸ್ಥಿತಿಯನ್ನು ಚನ್ನಾಗಿ ಮನಗಂಡವನಾಗಿದ್ದೇನೆ. ಅಲ್ಲದೆ ಆದುದರಿಂದಲೇ ಈ ಸಂಸಾರಭಯವನ್ನು ಹೋಗಲಾಡಿಸುವುದರಲ್ಲಿ ಸಮರ್ಥ ಳಾದ, ಮುಕ್ತಿಯನ್ನು ಕೊಡುವ, ಮತ್ತು ಎಲ್ಲರಿಗೂ ಒಡೆಯಳಾದ ನಿನ್ನನ್ನು ತಿಳಿಯದೆ ಅಜ್ಞಾನದಿಂದ ಬಂದಿರುವ ದೊಡ್ಡದಾದ ದುಃಖವೆಂಬ ಬಂಧನರೂಪವಾದ ಈ ಅಧಿಕಾರದ ಸಂಕೋಲೆಯ ಸರಪಣಿಯನ್ನು ಹೋಗಲಾಡಿಸಿ ನಿನ್ನಲ್ಲಿ ಭಕ್ತಿ ಯುಳ್ಳವನನ್ನಾಗಿ ಮಾಡು ಎಂದು ಪ್ರಾರ್ಥಿಸುತ್ತೇನೆ.

**ಅತೋಽಹಂ ಚ ಜಾತೋ ವಿಮುಕ್ತಃ ಕಥಂ ಸ್ಯಾಂ**
**ಸರೋಜಾದಮೇಯಾತ್ತ್ವದಾವಿಷ್ಕೃತಾದ್ವೈ ।**
**ತವಾಜ್ಞಾಕರಃ ಕಿಂಕರೋಽಸ್ಮೀತಿ ನೂನಂ**
**ಶಿವೇ ಪಾಹಿ ಮಾಂ ಮೋಹಮಗ್ನಂ ಭವಾಬ್ಧೌ** ॥೨೯॥

ಮಂಗಳಸ್ವರೂಪಳಾದ ಓ ದೇವಿಯೇ, ನಿನ್ನಿಂದಲೇ ಪ್ರಕಟಿಸಲ್ಪಟ್ಟ, ಊಹಿಸ ಲಶಕ್ಯವಾದ ನಾಭಿಕಮಲದಿಂದ ಹುಟ್ಟಿದವನಾದ ನಾನು ಮೋಕ್ಷವನ್ನು ಹೇಗೆ ಪಡೆದೇನು ? ಮತ್ತು ದೇವಿಯ ಆಜ್ಞೆಯನ್ನು ಪಾಲಿಸುವ ಸೇವಕನು ಹೇಗೆ ಆಗು ವೆನು ? ಎಂದು ಚಿಂತಿಸುತ್ತಿರುವ ಸಂಸಾರಸಮುದ್ರದಲ್ಲಿ ಮುಳುಗಿರುವ ನಿನ್ನ ಸೇವಕ ನಾದ ನನ್ನನ್ನು ಕಾಪಾಡು.

**ನ ಜಾನಂತಿ ಯೇ ಮಾನವಾಸ್ತೇ ವದಂತಿ**
**ಪ್ರಭುಂ ಮಾಂ ತವಾದ್ಯಂ ಚರಿತ್ರಂ ಪವಿತ್ರಂ ।**
**ಯಜಂತೀಹ ಯೇ ಯಾಜಕಾಃ ಸ್ವರ್ಗಕಾಮಾ**
**ನ ತೇ ತೇ ಪ್ರಭಾವಂ ವಿದಂತ್ಯೇವ ಕಾಮಂ** ॥೩೦॥

ಯಾರು ನಿನ್ನ ಪವಿತ್ರವಾದ ಚರಿತ್ರೆಯನ್ನು ತಿಳಿದಿಲ್ಲವೋ ಅಂತಹ ಮನುಷ್ಯರು ನನ್ನನ್ನು ಜಗತ್ತಿಗೆ ಒಡೆಯನೆಂದು ಹೇಳುತ್ತಾರೆ. ಮತ್ತು ಸ್ವರ್ಗವನ್ನು ಪಡೆಯಬೇಕೆಂಬ ಇಚ್ಛೆಯಿಂದ ಯಾರು ಯಾರು ಯಾಗವನ್ನು ಮಾಡುವರೋ ಅವರೂ ನಿನ್ನ ಈ ಮಹಿಮೆಯನ್ನು ಖಂಡಿತವಾಗಿಯೂ ತಿಳಿದಿಲ್ಲವು.

**ತ್ವಯಾ ನಿರ್ಮಿತೋಽಹಂ ವಿಧಿತ್ವೇ ವಿಹಾರಂ**
**ವಿಕರ್ತುಂ ಚತುರ್ಧಾ ವಿಧಾಯಾದಿಸರ್ಗಂ ।**
**ಅಹಂ ವೇದ್ಮಿ ಕೋಽನ್ಯೋ ವಿವೇದಾದಿಮಾಯೇ**
**ಕ್ಷಮಸ್ವಾಪರಾಧಂ ತ್ವಹಂಕಾರಜಂ ಮೇ ॥೩೦॥**

ಸೃಷ್ಟಿರೂಪವಾದ ವಿಹಾರವನ್ನು ಲೀಲೆಯಿಂದ ಆಯಾಸವಿಲ್ಲದಂತೆ ಮಾಡಲು ನೀನೇ ನನ್ನನ್ನು ಸೃಷ್ಟಿಸಿ ಬ್ರಹ್ಮಪದವಿಗೇರಿಸಿರುತ್ತೀಯೆ. ಆದರೆ ನಾನು ನಾಲ್ಕು ವಿಧವಾದ ಸೃಷ್ಟಿಯನ್ನು ಎಂದರೆ ಅಂಡಜ ಅಥವಾ ಮೊಟ್ಟೆಯಿಂದ ಹುಟ್ಟತಕ್ಕ ಪ್ರಾಣಿವರ್ಗವು, ಸ್ವೇದಜ ಅಥವಾ ಬೆವರಿನಿಂದ ಉಂಟಾಗುವ ಕ್ರಿಮಿಕೀಟಾದಿಗಳು, ಜರಾಯುಜ ಅಥವಾ ಗರ್ಭದಿಂದ ಹೊರಹೊಮ್ಮುವ ಮನುಷ್ಯಾದಿಗಳು, ಉದ್ಭಿಜ್ಜ ಅಥವಾ ಭೂಮಿಯನ್ನು ಒಡೆದುಕೊಂಡು ಮೇಲಕ್ಕೆ ಎದ್ದುಬರುವ ಸಸ್ಯವರ್ಗವು, ಈ ನಾಲ್ಕು ವರ್ಗರೂಪವಾದ ಸೃಷ್ಟಿಯನ್ನು ಮಾಡಿ, ಆ ಗರ್ವದಿಂದ ಮತ್ತನಾಗಿ ನನಗಿಂತಲೂ ತಿಳಿವಳಿಕೆಯುಳ್ಳವನು ಯಾರಿರುವರೆಂದು ಗರ್ವಪಡುತ್ತಿದ್ದೆನು. ಆದಿ ಮಾಯಾಸ್ವರೂಪಳಾದ ಓ ದೇವಿಯೇ, ಈ ನನ್ನ ಅಹಂಕಾರದಿಂದ ಉಂಟಾದ ಅಪರಾಧವನ್ನು ಕ್ಷಮಿಸು.

**ಶ್ರಮಂ ಯೇಽಷ್ಟಧಾ ಯೋಗಮಾರ್ಗೇ ಪ್ರವೃತ್ತಾಃ**
**ಪ್ರಕುರ್ವಂತಿ ಮೂಢಾಃ ಸಮಾಧೌ ಸ್ಥಿತಾ ವೈ ।**
**ನ ಜಾನಂತಿ ತೇ ನಾಮ ಮೋಕ್ಷಪ್ರದಂ ವಾ**
**ಸಮುಚ್ಚಾರಿತಂ ಜಾತು ಮಾತರ್ಮಿಷೇಣ ॥೩೧॥**

ಓ ಮಾತೆಯೇ, ಯಾವ ನಿನ್ನ ನಾಮವು ಆಕಸ್ಮಾತ್ತಾಗಿ ಯಾವ ನೆವದಿಂದಲಾದರೂ ಉಚ್ಚಾರಮಾಡಿದರೂ ಮೋಕ್ಷವನ್ನು ಕೊಡುವುದೋ ಅಂತಹ ನಿನ್ನ ನಾಮವು ಇದ್ದರೂ ಅದನ್ನು ಬಿಟ್ಟು ಯಾರು ಮೂಢರಾಗಿ ಅಷ್ಟಾಂಗಯೋಗಗಳಿಂದ ಕೂಡಿರುವ ಚಿತ್ತವೃತ್ತಿನಿರೋಧದ ಮಾರ್ಗದಲ್ಲಿ ಶ್ರಮಪಡುತ್ತಾ ನಿರತರಾಗಿರುತ್ತಾರೆಯೋ ಅಂತಹವರು ಏನೂ ತಿಳಿವಳಿಕೆಯಿಲ್ಲದವರು.

**ವಿಚಾರೇ ಪರೇ ತತ್ತ್ವಸಂಖ್ಯಾವಿಧಾನೇ**
**ಪದೇ ಮೋಹಿತಾ ನಾಮ ತೇ ಸಂವಿಹಾಯ ।**
**ನ ಕಿಂ ತೇ ವಿಮೂಢಾ ಭವಾಬ್ಧೌ ಭವಾನಿ**
**ತ್ವಮೇವಾಸಿ ಸಂಸಾರಮುಕ್ತಿಪ್ರದಾ ವೈ ॥೩೩॥**

ಓ ಭವಾನಿಯೇ, ನೀನೇ ಜನರಿಗೆ ಸಂಸಾರಬಂಧನದಿಂದ ಬಿಡುಗಡೆಯನ್ನು ಉಂಟುಮಾಡುವವಳು. ಹೀಗಿರುವಾಗ, ಯಾರು ನಿನ್ನ ನಾಮಜಪವನ್ನು ಬಿಟ್ಟು ಮಹತ್ತತ್ತ್ವ ಮೊದಲಾದ ತತ್ತ್ವಗಳ ಲೆಕ್ಕಾಚಾರದಲ್ಲಿ ಜಿಜ್ಞಾಸೆಗಳಿಂದ ಕೂಡಿರುವ ಶಾಸ್ತ್ರದಲ್ಲಿ ಮೋಹದಿಂದ ಆಸಕ್ತರಾಗಿರುವರೋ ಅಂತಹವರು ಸಂಸಾರಸಮುದ್ರದಲ್ಲಿ ಮುಳುಗಿರುವ ಮೂಢರಲ್ಲದೇ ಮತ್ತೇನು ?

**ಪರಂ ತತ್ತ್ವವಿಜ್ಞಾನಮಾದ್ಯೈರ್ಜನೈರ್ಯೈ**
**ರಜೇ ಚಾನುಭೂತಂ ತ್ಯಜಂತ್ಯೇವ ತೇ ಕಿಂ ।**
**ನಿಮೇಷಾರ್ಧಮಾತ್ರಂ ಪವಿತ್ರಂ ಚರಿತ್ರಂ**
**ಶಿವಾ ಚಾಂಬಿಕಾ ಶಕ್ತಿರೀಶೇತಿ ನಾಮ** ॥೩೪॥

ಉತ್ಪತ್ತಿಯಿಲ್ಲದ ಓ ಮಾತೆಯೇ, ಪೂರ್ವಿಕರಾದ, ಎಲ್ಲಕ್ಕಿಂತಲೂ ಮೊದಲು ಉಂಟಾದವರಾದ, ಮೂಲಶಕ್ತಿಯಾದ ನಿನ್ನಿಂದಲೇ ಸಾಕ್ಷಾತ್ತಾಗಿ ಸೃಷ್ಟಿಸಲ್ಪಟ್ಟವರಾದ ಹರಿಯೇ ಮೊದಲಾದವರು ಪರತತ್ತ್ವವಿಜ್ಞಾನವನ್ನು ಎಂದರೆ ನಿಜವಾದ ನಿನ್ನ ಸ್ವರೂಪವನ್ನು ತಿಳಿದು ಆನಂದವನ್ನು ಅನುಭವಿಸಿರುವರೋ ಅಂತಹವರು ನಿನ್ನ ಪವಿತ್ರವಾದ ಚರಿತ್ರೆಯನ್ನೂ ನಿನ್ನ ನಾಮಗಳಾದ ಶಿವಾ ಎಂದರೆ ಮಂಗಳಸ್ವರೂಪಳು, ಅಂಬಿಕಾ ಎಂದರೆ ಮಾತೆಯು, ಶಕ್ತಿಸ್ವರೂಪಳು ಮತ್ತು ಈಶಾ ಎಂದರೆ ಒಡೆಯಳು ಎಂದು ಮುಂತಾದ ಹೆಸರುಗಳ ಚರಿತ್ರೆಯನ್ನು ಅರ್ಧನಿಮಿಷವಾದರೂ ಬಿಟ್ಟಿರುವರೇನು?

**ನ ಕಿಂ ತ್ವಂ ಸಮರ್ಥಾಽಸಿ ವಿಶ್ವಂ ವಿಧಾತುಂ**
**ದೃಶೈವಾಶು ಸರ್ವಂ ಚತುರ್ಧಾ ವಿಭಕ್ತಂ ।**
**ವಿನೋದಾರ್ಥಮೇವಂ ವಿಧಿಂ ಮಾಂ ವಿಧಾಯಾ-**
**ದಿಸರ್ಗೇ ಕಿಲೇದಂ ಕರೋಷೀತಿ ಕಾಮಂ** ॥೩೫॥

ಅಂಡಜವೇ ಮೊದಲಾದ ನಾಲ್ಕು ವಿಧವಾದ ಪ್ರಾಣಿವರ್ಗಗಳಿಂದ ಕೂಡಿರುವ ಈ ಪ್ರಪಂಚವನ್ನು ನೀನು ನಿನ್ನ ದೃಷ್ಟಿಮಾತ್ರದಿಂದಲೇ ಸೃಷ್ಟಿಸಲು ಶಕ್ತಳಲ್ಲವೇನು ? ಆದರೂ ಸೃಷ್ಟಿಯನ್ನು ಮಾಡುವುದಕ್ಕೆಂದು ನನ್ನನ್ನು ಬ್ರಹ್ಮನನ್ನಾಗಿ ಮೊದಲು ಸೃಷ್ಟಿಸಿರುವುದು ಸುಮ್ಮನೆ ವಿನೋದಕ್ಕಾಗಿಯಲ್ಲದೆ ಮತ್ತೇನು ?

**ಹರಿಃ ಪಾಲಕಃ ಕಿಂ ತ್ವಯಾಸೌ ಮಧೋರ್ವಾ ।**
**ತಥಾ ಕೈಟಭಾದ್ರಕ್ಷಿತಃ ಸಿಂಧುಮಧ್ಯೇ ।**

ಹರಃ ಸಂಹೃತಃ ಕಿಂ ತ್ವಯಾಸೌ ನ ಕಾಲೇ
ಕಥಂ ಮೇ ಭ್ರುವೋರ್ಮಧ್ಯದೇಶಾತ್ಸ ಜಾತಃ ॥೩೭॥

ವಿಷ್ಣುವು ಜಗತ್ಪಾಲನಕಾರ್ಯದಲ್ಲಿ ಸಮರ್ಥನಾಗಿದ್ದರೆ, ಆ ಸಮುದ್ರಮಧ್ಯದಲ್ಲಿ ಮಧುಕೈಟಭರನ್ನು ತಾನು ಸ್ವತಃ ಜಯಿಸಲಾರದೆ ಹೋದಾಗ ನಿನ್ನಿಂದೇಕೆ ರಕ್ಷಿಸಲ್ಪಟ್ಟನು ? ಹಾಗೆಯೇ ಈಶ್ವರನೇ ಸಂಹಾರಕರ್ತನಾದರೆ, ಅವನು ಪ್ರಳಯಕಾಲದಲ್ಲಿ ನಿನ್ನಿಂದ ಹೇಗೆ ಸಂಹರಿಸಲ್ಪಟ್ಟನು ? ಒಂದುವೇಳೆ ಅವನು ಸಂಹರಿಸಲ್ಪಡಲಿಲ್ಲವೆಂದರೆ ಅವನು ನನ್ನ ಲಲಾಟದಿಂದ ತಿರುಗಿ ಹೇಗೆ ಹುಟ್ಟಿದನು ?

ನ ತೇ ಜನ್ಮ ಕುತ್ರಾಪಿ ದೃಷ್ಟಂ ಶ್ರುತಂ ವಾ
ಕುತಃ ಸಂಭವಸ್ತೇನ ಕೋಽಪೀಹ ವೇದ ।
ಕಿಲಾದ್ಯಾಪಿ ಶಕ್ತಿಸ್ತ್ವಮೇಕಾ ಭವಾನಿ
ಸ್ವತಂತ್ರೈಃ ಸಮಸ್ತೈರತೋ ಬೋಧಿತಾಸಿ ॥೩೭॥

ಓ ದೇವಿಯೇ, ನಿನಗೆ ಉತ್ಪತ್ತಿಯು ಇಲ್ಲವು. ಅದನ್ನು ನಾನು ನೋಡಲೂ ಇಲ್ಲ. ಕೇಳಲೂ ಇಲ್ಲವು. ನಮ್ಮ ಮತ್ತು ಇತರರ ವಿಷಯದಲ್ಲಿ ಹೇಗೋ ಹಾಗೆ, ನೀನು ಹೇಗೆ ಹುಟ್ಟಿದೆಯೆಂಬುದು, ಯಾರಿಗೂ ಗೊತ್ತಿಲ್ಲವು. ಈ ಕಾರಣದಿಂದ ನೀನೊಬ್ಬಳೇ ಆದಿಶಕ್ತಿಯಾಗಿರುವೆ. ಓ ಭವಾನಿಯೇ, ಆದುದರಿಂದಲೇ ಸ್ವತಂತ್ರಗಳಾದ ವೇದಗಳೂ ಸಹ ನಿನ್ನನ್ನು ಉತ್ಪತ್ತಿರಹಿತಳೆಂದೇ ಹೇಳುತ್ತವೆ.

ತ್ವಯಾ ಸಂಯುತೋಽಹಂ ವಿಕರ್ತುಂ ಸಮರ್ಥೋ
ಹರಿಸ್ತ್ರಾತುಮಂಬ ತ್ವಯಾ ಸಂಯುತಶ್ಚ ।
ಹರಃ ಸಂಪ್ರಹರ್ತುಂ ತ್ವಯೈವೇಹ ಯುಕ್ತಃ
ಕ್ಷಮಾ ನಾದ್ಯ ಸರ್ವೇ ತ್ವಯಾ ವಿಪ್ರಯುಕ್ತಾಃ ॥೩೮॥

ಓ ತಾಯಿಯೇ, ಶಕ್ತಿರೂಪಳಾದ ನಿನ್ನಿಂದ ಕೂಡಿಯೇ ನಾನು ಈ ಜಗತ್ತೆಲ್ಲವನ್ನೂ ಸೃಷ್ಟಿಸುವುದಕ್ಕೂ, ಹರಿಯು ರಕ್ಷಿಸುವುದಕ್ಕೂ, ಹರನು ಅದನ್ನು ಉಪಸಂಹರಿಸುವುದಕ್ಕೂ ಸಮರ್ಥರಾಗಿರುತ್ತೇವೆ. ನಿನ್ನನ್ನು ಬಿಟ್ಟು ನಾವು ಎಲ್ಲರೂ ಯಾವ ಕಾರ್ಯವನ್ನು ಮಾಡಲೂ ಶಕ್ತರಲ್ಲವು.

**ಯಥಾಹಂ ಹರಿಃ ಶಂಕರಃ ಕಿಂ ತಥಾನ್ಯೇ**
**ನ ಜಾತಾ ನ ಸಂತೀಹ ನೋ ವಾ ಭವಿಷ್ಯನ್ ।**
**ನ ಮುಹ್ಯಂತಿ ಕೇಽಸ್ಮಿಂಸ್ತವಾತ್ಯಂತಚಿತ್ರೇ**
**ವಿನೋದೇ ವಿವಾದಾಸ್ಪದೇಽಲ್ಪಾಶಯಾನಾಂ ॥೩೯॥**

ನಾನೂ, ವಿಷ್ಣುವೂ, ಶಂಕರನೂ ಹೇಗೆ ನಿಯುಕ್ತರಾಗಿರುತ್ತೇವೆಯೋ ಹಾಗೆ ಇನ್ನಾರೂ ಹಿಂದೆ ಈ ಪ್ರಪಂಚದ ಸೃಷ್ಟಿ ಮುಂತಾದ ಕಾರ್ಯಗಳಲ್ಲಿ ನಿಯುಕ್ತರಾಗಿ ಇರಲಿಲ್ಲವೇ? ಈಗ ಇಲ್ಲವೇ? ಮುಂದೆ ಆಗುವುದಿಲ್ಲವೇ? ಪರಿಮಿತವಾದ ಬುದ್ಧಿ ಯುಳ್ಳವರ ಚರ್ಚೆಗೆ ವಿಷಯವಾದ ಅತಿವಿಚಿತ್ರವಾದ ಈ ನಿನ್ನ ಪ್ರಪಂಚವೆಂಬ ಆಟದಲ್ಲಿ ಯಾರು ತಾನೇ ಮೋಹಗೊಳ್ಳುವುದಿಲ್ಲ?

**ಅಕರ್ತಾಗುಣಸ್ಸ್ಪೃಷ್ಟ ಏವಾದ್ಯ ದೇವೋ**
**ನಿರೀಹೋಽನುಪಾಧಿಃ ಸದೈವಾಕಲಶ್ಚ ।**
**ತಥಾಪೀಶ್ವರಸ್ತೇ ವಿತೀರ್ಣಂ ವಿನೋದಂ**
**ಸುಸಂಪಶ್ಯತೀತ್ಯಾಹುರೇವಂ ವಿಧಿಜ್ಞಾಃ ॥೪೦॥**

ಕರ್ತೃತ್ವದ ಅಭಿಮಾನವಿಲ್ಲದ ಮತ್ತು ಸತ್ತ್ವವೇ ಮೊದಲಾದ ಯಾವ ಗುಣಗಳ ಸಂಬಂಧವೂ ವಾಸ್ತವವಾಗಿ ಇಲ್ಲದ, ನಿಸ್ಸ್ಪೃಹವಾದ ತಾನೇ ತೋರುವ ಚೈತನ್ಯಜ್ಯೋತಿಯ ಪ್ರಕಾಶಸ್ವರೂಪನಾದ, ಪ್ರಾಣವೇ ಮೊದಲಾದ ಕಲೆಗಳ ಸಂಬಂಧ ವಿಲ್ಲದ ಮತ್ತು ಸದ್ರೂಪನಾದ ಈಶ್ವರನೂ ಸಹ, ಈಗಲೂ ನೀನು ಕಲ್ಪಿಸಿ ತೋರಿಸು ತ್ತಿರುವ ನಿನ್ನ ಈ ಆಟವನ್ನು ಕೇವಲ ಸಾಕ್ಷಿರೂಪನಾಗಿರುತ್ತಾ ನೋಡುತ್ತಾನೆಂದು ಶಾಸ್ತ್ರಜ್ಞರು ಹೇಳುತ್ತಾರೆ.

**ದೃಷ್ಟಾದೃಷ್ಟವಿಭೇದೇಽಸ್ಮಿನ್ ಪ್ರಾಕ್ತ್ವತ್ತೋ ವೈ ಪುಮಾನ್ ಪರಃ ।**
**ನಾನ್ಯಃಕೋಽಪಿ ತೃತೀಯೋಽಸ್ತಿ ಪ್ರಮೇಯೇ ಸುವಿಚಾರಿತೇ ॥೪೧॥**

ದೃಷ್ಟ ಎಂದರೆ ಕಣ್ಣಿಗೆ ಗೋಚರವಾಗುವ ಪೃಥಿವೀ ಮೊದಲಾದವು ಮತ್ತು ಅದೃಷ್ಟ ಎಂದರೆ ಕಣ್ಣಿಗೆ ಕಾಣಿಸದಿರುವ ಆಕಾಶ ಮೊದಲಾದವು, ಇವುಗಳಿಂದ ನಾನಾಬಗೆಯುಳ್ಳ ಈ ಪ್ರಪಂಚದಲ್ಲಿ ನಿನಗಿಂತಲೂ ಮೊದಲು ಪರಮಾತ್ಮನು ಇರ ತಕ್ಕವನು. ಆಮೇಲೆ ನೀನು. ಮತ್ತೆಯಾರೂ ಮೊದಲು ಇರುವುದಿಲ್ಲ. ಹೀಗೆ

ತತ್ತ್ವವನ್ನು ವಿಚಾರಮಾಡಿದರೆ ಮೇಲೆ ಹೇಳಿದ ನೀವು ಇಬ್ಬರು ಹೊರತು ಮೂರ ನೆಯದೊಂದೂ ಇರುವುದಿಲ್ಲ.

**ನ ಮಿಥ್ಯಾ ವೇದವಾಕ್ಯಂ ವೈ ಕಲ್ಪನೀಯಂ ಕದಾಚನ ।**
**ವಿರೋಧೋಽಯಂ ಮಯಾತ್ಯಂತಂ ಹೃದಯೇ ತು ವಿಶಂಕಿತಃ ॥೪೨॥**

ವೇದವಾಕ್ಯಗಳು ಸುಳ್ಳನ್ನು ಹೇಳುತ್ತವೆಂದು ಎಂದಿಗೂ ಒಪ್ಪಿಕೊಳ್ಳಲು ಆಗುವುದಿಲ್ಲ. ನನ್ನ ಮನಸ್ಸಿನಲ್ಲಿ ಈ ವೇದಾರ್ಥಕ್ಕೆ ವಿರೋಧ ಬಂತೆಂದು ಅನುಮಾನ ಉಂಟಾಗಿದೆ. ಹೇಗೆಂದರೆ—" ಏಕಮೇವಾದ್ವಿತೀಯಂ " ಎಂದರೆ, ಬ್ರಹ್ಮವೊಂದರ ಹೊರತು ಮಿಕ್ಕ ಯಾವ ಸ್ವತಂತ್ರ ವಸ್ತುವೂ ಎಂದರೆ ಬ್ರಹ್ಮಭಿನ್ನವಾದ ವಸ್ತುವೂ ಇಲ್ಲವೆಂದು ಶ್ರುತಿಯಲ್ಲಿ ಹೇಳಿರುವುದಕ್ಕೂ ಇಲ್ಲಿ ಪುರುಷನಾದ ಪರಮಾತ್ಮನೂ, ಶಕ್ತಿ ರೂಪಳಾದ ದೇವಿಯೂ ಇಬ್ಬರಿರುವರೆಂದು ಹೇಳಿರುವುದಕ್ಕೂ ಒಂದಕ್ಕೊಂದು ವಿರೋಧವಾಗಿರುವುದರಿಂದ ಇದು ಹೇಗೆ ಸಮಂಜಸವಾಗುವುದೆಂದು ನನ್ನ ಮನಸ್ಸಿ ನಲ್ಲಿ ದೊಡ್ಡ ಅನುಮಾನ ಉಂಟಾಗಿದೆಯೆಂದು ಅಭಿಪ್ರಾಯವು.

**ಏಕಮೇವಾದ್ವಿತೀಯಂ ಯದ್ಬ್ರಹ್ಮ ವೇದಾ ವದಂತಿ ವೈ ।**
**ಸಾ ಕಿಂ ತ್ವಂ ವಾಸ್ಯಸೌ ವಾ ಕಿಂ ಸಂದೇಹಂ ವಿನಿವರ್ತಯ ॥೪೩॥**

ಏಕೆಂದರೆ, ವೇದಗಳು " ಬ್ರಹ್ಮವೊಂದೇ ಎಂದರೆ ತತ್ತ್ವ ಒಂದೇ ಇರುವುದು, ಎರಡನೆಯ ಪದಾರ್ಥವು ಇಲ್ಲವು " ಎಂದು ಹೇಳುತ್ತವೆ. ಎಂದರೆ, ಸಜಾತೀಯಭೇದ ವಿಜಾತೀಯಭೇದ, ಸ್ವಗತಭೇದ ಎಂಬ ಮೂರು ಬಗೆಯ ಭೇದವೂ ಇಲ್ಲದ್ದೆಂದು ಭಾವವು. ಆದುದರಿಂದ ನೀನು ಆ ಆತ್ಮರೂಪಳೋ ಅಥವಾ ಆ ಆತ್ಮನು ನಿನ್ನ ಸ್ವರೂಪನೋ ಎಂಬ ಈ ಸಂದೇಹವನ್ನು ಹೋಗಲಾಡಿಸು.

**ನಿಃಸಂಶಯಂ ನ ಮೇ ಚೇತಃ ಪ್ರಭವತ್ಯವಿಶಂಕಿತಂ ।**
**ದ್ವಿತ್ವೈಕತ್ವವಿಚಾರೇಽಸ್ಮಿನ್ನಿಮಗ್ನಂ ಕ್ಷುಲ್ಲಕಂ ಮನಃ ॥೪೪॥**

ನನ್ನ ಮನಸ್ಸು ಯಾವ ಸಂದೇಹದ ಕಲ್ಪನೆಯೂ ಇಲ್ಲದಂತೆ ನಿಶ್ಚಯವನ್ನು ಈಗ ಹೊಂದಿರುವುದಿಲ್ಲ. ಏಕೆಂದರೆ, ಅಲ್ಪವಾದ ಈ ಮನಸ್ಸು ಪ್ರಪಂಚದಲ್ಲಿರುವ ಪದಾರ್ಥವು ಒಂದೋ ಅಥವಾ ಎರಡು ಪದಾರ್ಥಗಳೋ ಎಂಬ ಈ ವಿಚಾರದಲ್ಲಿ

ಮುಳುಗಿಬಿಟ್ಟಿರುತ್ತದೆ. ಸಂದೇಹವು ಇರುವಾಗ ನಿಶ್ಚಯಬುದ್ಧಿಯು ಉಂಟಾಗಲಾರ ದೆಂದು ತಾತ್ಪರ್ಯವು.

**ಸ್ವಮುಖೇನಾಪಿ ಸಂದೇಹಂ ಛೇತ್ತುಮರ್ಹಸಿ ಮಾಮಕಂ ।**
**ಪುಣ್ಯಯೋಗಾಚ್ಚ ಮೇ ಪ್ರಾಪ್ತಾ ಸಂಗತಿಸ್ತವ ಪಾದಯೋಃ ॥೪೫॥**

ನೀನು ನಿನ್ನ ಮುಖದಿಂದಲೇ ಸಾಕ್ಷಾತ್ತಾಗಿ ಈ ನನ್ನ ಸಂದೇಹವನ್ನು ಪರಿ ಹರಿಸು. ನನ್ನ ಪೂರ್ವಕೃತಪುಣ್ಯಪರಿಪಾಕದಿಂದಲೇ ನಿನ್ನ ಪಾದಗಳ ದರ್ಶನಲಾಭವು ನನಗೆ ಆಗಿರುತ್ತದೆ.

**ಪುಮಾನಸಿ ತ್ವಂ ಸ್ತ್ರೀವಾಸಿ ವದ ವಿಸ್ತರತೋ ಮಮ ।**
**ಜ್ಞಾತ್ವಾಹಂ ಪರಮಾಂ ಶಕ್ತಿಂ ಮುಕ್ತಃ ಸ್ಯಾಂ ಭವಸಾಗರಾತ್ ॥೪೬॥**

ನೀನು ಪುರುಷನೋ ಅಥವಾ ಸ್ತ್ರೀಯೋ ಎಂಬುವುದನ್ನೂ ನನಗೆ ವಿಸ್ತಾರ ವಾಗಿ ತಿಳಿಯಹೇಳು. ಈ ಎಲ್ಲ ವಿಷಯಗಳನ್ನೂ ಮತ್ತು ಉತ್ಕೃಷ್ಟವಾದ ಶಕ್ತಿಯ ಸ್ವರೂಪವನ್ನೂ ತಿಳಿದು ನಾನು ಸಂಸಾರಸಮುದ್ರದಿಂದ ಬಿಡುಗಡೆಯನ್ನು ಹೊಂದುವೆನು.

ಈ ಪ್ರಪಂಚವು ನಾನಾಬಗೆಯ ಕಾರ್ಯರೂಪವಾಗಿ ತೋರುತ್ತಿದೆ. ಇವೆಲ್ಲಕ್ಕೂ ಕಾರಣವಾದ ವ್ಯಾಪಕವೂ, ದೊಡ್ಡದೂ, ಸೂಕ್ಷ್ಮವೂ, ಆದ ತತ್ತ್ವವು ಒಂದು ಎಂದು ವೇದಾಂತವಿಚಾರದಿಂದ ಗೊತ್ತಾಗುತ್ತದೆ. ಆಮೇಲೆ ಅದಕ್ಕೂ ಕಾರಣವಾವು ದೆಂದು ವಿಮರ್ಶೆಯು ಮುಂದುವರಿಯುವುದಿಲ್ಲವು. ಹಾಗೆ ಮಾಡಿದರೆ ಕೊನೆ ಇಲ್ಲದ, ನಿಷ್ಫಲವಾದ, ಅನವಸ್ಥಾದೋಷವು ಗಂಟುಬೀಳುತ್ತದೆ. ಅದರಂತೆಯೇ ಸಂಹಾರದ ವಿಷಯದಲ್ಲೂ ತಿಳಿಯಬಹುದು. ಹೇಗೆಂದರೆ ಸಂಹಾರ ಅಥವಾ ಲಯವೆಂದರೆ ಕಾರ್ಯವು ಪುನಃ ಕಾರಣಸ್ಥಿತಿಗೆ ಹಿಂತಿರುಗುವುದೇ ಆಗಿದೆ. ಉತ್ಪತ್ತಿಗೆ ಮುಂಚೆ ಹೇಗೋ ಹಾಗೆಯೇ ಸಂಹಾರವಾದಮೇಲೂ ಕಾರ್ಯವು ಕಾರಣರೂಪಕ್ಕೆ ಬರುತ್ತದೆ. ಎಲ್ಲ ಉತ್ಪತ್ತಿಗೂ ಮೂಲಕಾರಣವು ಒಂದು, ಎಂದು ಮನಗಂಡಂತೆ, ಎಲ್ಲ ಸಂಹಾ ರಕ್ಕೂ ಅದೇ ಮೂಲಕಾರಣವೆಂದೂ, ಅದು ಒಂದೇ ಎಂದೂ, ಗೊತ್ತಾಗಿ ವಿಚಾರವು ಅಲ್ಲಿಗೆ ನಿಲ್ಲುತ್ತದೆ. ಇಲ್ಲದಿದ್ದರೆ ಪುನಃ ಅದೇ ಅನವಸ್ಥಾದೋಷವು ಗಂಟುಬೀಳು ತ್ತದೆ. ಈ ಮೂಲತತ್ತ್ವವೇ ಬ್ರಹ್ಮವು. ಈ ಸೃಷ್ಟಿಲಯಗಳಿಗೆ ಕಾರಣವಾದ

ತತ್ತ್ವವೇ ಶಕ್ತಿಯು. ಈ ಬ್ರಹ್ಮವೂ ಶಕ್ತಿಯೂ ಅವಿನಾಭಾವದಿಂದ ಒಂದೇ ತತ್ತ್ವವಾಗಿದೆ ಎಂಬುದೇ ತಾತ್ಪರ್ಯವು.

**ಇತಿ ಶ್ರೀ ದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಪಂಚಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಐದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

|| ಷಷ್ಠೋಽಧ್ಯಾಯಃ ||

### ಆರನೆಯ ಅಧ್ಯಾಯವು

|| ಬ್ರಹ್ಮೋವಾಚ ||

**ಇತಿ ಪೃಷ್ಟಾ ಮಯಾ ದೇವೀ ವಿನಯಾವನತೇನ ಚ ।**
**ಉವಾಚ ವಚನಂ ಶ್ಲಕ್ಷ್ಣಮಾದ್ಯಾ ಭಗವತೀ ಹಿ ಸಾ ॥೧॥**

ಬ್ರಹ್ಮನು ಹೇಳಿದನು—ಹೀಗೆ ವಿನಯಪೂರ್ವಕವಾಗಿ ನಾನು ಕೇಳಲು ಆಗ ಎಲ್ಲರಿಗಿಂತಲೂ ಮೊದಲಿನವಳೂ, ಎಲ್ಲವನ್ನೂ ತಿಳಿದ ಮಹಾಮಹಿಮೆಯುಳ್ಳವಳೂ ಆದ ಆ ದೇವಿಯು ನನ್ನನ್ನು ಕುರಿತು ಇಂಪಾದ ಮಾತನ್ನು ಹೀಗೆ ಹೇಳಿದಳು.

|| ದೇವ್ಯುವಾಚ ||

**ಸದೇಕತ್ವಂ ನ ಭೇದೋಽಸ್ತಿ ಸರ್ವದೈವ ಮಮಾಸ್ಯ ಚ ।**
**ಯೋಽಸೌ ಸಾಹಮಹಂ ಯೋಽಸೌ ಭೇದೋಽಸ್ತಿ ಮತಿವಿಭ್ರಮಾತ್ ॥೨॥**

ದೇವಿಯು ಹೇಳಿದಳು—ನನಗೂ ಪುರುಷನಿಗೂ ಭೇದವಿಲ್ಲವು. ಯಾವಾಗಲೂ ನಾನೂ ಪುರುಷನೂ ಒಂದು. ಆ ಪರಮಾತ್ಮನೇ ನಾನು. ನಾನೇ ಪುರುಷನು. ನನಗೂ ಅವನಿಗೂ ಭೇದವಿರುವಂತೆ ತೋರುತ್ತದೆಂಬುದು ಬರಿಯ ಭ್ರಾಂತಿ ಮೂಲಕವಾದುದು. ಅಗ್ನಿಗೂ ದಾಹಶಕ್ತಿಗೂ ಭೇದವಿಲ್ಲವು.

**ಆವಯೋರಂತರಂ ಸೂಕ್ಷ್ಮಂ ಯೋ ವೇದ ಮತಿಮಾನ್ ಹಿ ಸಃ ।**
**ವಿಮುಕ್ತಃ ಸ ತು ಸಂಸಾರಾನ್ಮುಚ್ಯತೇ ನಾತ್ರ ಸಂಶಯಃ ॥೩॥**

ಯಾವನು ಹೀಗೆ ನಮ್ಮಿಬ್ಬರಿಗೂ ಇರುವ ಭೇದವು ಭ್ರಾಂತಿಯಿಂದ ಬಂದುದು ಎಂದು ತಿಳಿಯುವನೋ ಅವನೇ ಬುದ್ಧಿವಂತನು. ಅವನು ಈ ಸಂಸಾರದಿಂದ ಮುಕ್ತಿಯನ್ನು ಹೊಂದುತ್ತಾನೆ. ಶಕ್ತಿಯೂ ಶಕ್ತನೂ ಒಂದೇ ತತ್ತ್ವವು. ಇದರಲ್ಲಿ ಸಂಶಯವಿಲ್ಲವು.

**ಏಕಮೇವಾದ್ವಿತೀಯಂ ವೈ ಬ್ರಹ್ಮ ನಿತ್ಯಂ ಸನಾತನಂ ।**
**ದ್ವೈತಭಾವಂ ಪುನರ್ಯಾತಿ ಕಾಲ ಉತ್ಪಿತ್ಸುಸಂಜ್ಞಕೇ ॥೪॥**

ಸಜಾತೀಯವಾದ, ವಿಜಾತೀಯವಾದ ಮತ್ತು ಸ್ವಗತವಾದ ಮೂರು ಬಗೆಯ ಭೇದಗಳೂ ಇಲ್ಲದ ಬ್ರಹ್ಮಸ್ವರೂಪ ಒಂದೇ ಇರುವುದು. ಎರಡನೆಯ ಪದಾರ್ಥವು ವಾಸ್ತವವಾಗಿಲ್ಲವು. ಆ ಬ್ರಹ್ಮತತ್ತ್ವವೇ ಸತ್ಯವಾದುದು ಎಂದರೆ ಹಿಂದೆಯೂ ಮುಂದೆಯೂ ಈಗಲೂ ಬಾಧೆ ಇಲ್ಲದೆ ಇರುವುದು. ಮತ್ತು ಅದು ಅನಾದಿಯು ಎಂದರೆ ಉತ್ಪತ್ತಿಯಿಲ್ಲದ್ದು. ಅದೇ ಬ್ರಹ್ಮವು. ಸೃಷ್ಟಿಸುವ ಇಚ್ಛೆಯುಳ್ಳದ್ದಾಗಿ ಸೃಷ್ಟಿ ಕಾಲದಲ್ಲಿ ಸೃಷ್ಟಿಸಲ್ಪಡುವ ಪ್ರಾಣಿಗಳ ಕರ್ಮಗಳಿಗೆ ಅನುಸಾರವಾಗಿ ಈ ಪ್ರಪಂಚ ಸ್ವರೂಪವನ್ನು ಹೊಂದಿರುವಂತೆ ತೋರುತ್ತಿರುವುದು.

**ಯಥಾ ದೀಪಸ್ತಥೋಪಾಧೇರ್ಯೋಗಾತ್ಸಂಜಾಯತೇ ದ್ವಿಧಾ ।**
**ಛಾಯೇವಾದರ್ಶಮಧ್ಯೇ ವಾ ಪ್ರತಿಬಿಂಬಂ ತಥಾವಯೋಃ ॥೫॥**

ಹೇಗೆ ದೀಪವು ಒಂದೇ ಆದರೂ ನಾನಾಬಗೆಯ ಉಪಾಧಿಯ ಸಂಬಂಧದಿಂದ ಅನೇಕವಾಗಿ ತೋರುವಂತೆ ಆಗುತ್ತದೆಯೋ ಮತ್ತು ಹಲವು ಬಗೆಯ ಕನ್ನಡಿರೂಪವಾದ ಉಪಾಧಿಯಲ್ಲಿ ಹೇಗೆ ಹಲವು ಬಗೆಯ ಪ್ರತಿಬಿಂಬಗಳು ಪ್ರತ್ಯೇಕವಾಗಿ ತೋರುತ್ತಿರುವುವೋ ಅದರಂತೆಯೇ ನನಗೂ ಪುರುಷನಿಗೂ ಮಾಯೆ ಮತ್ತು ಅದರ ಕಾರ್ಯಗಳೆಂಬ ಉಪಾಧಿಗಳ ಸಂಬಂಧದಿಂದ ಪ್ರತಿಬಿಂಬದ ಸ್ವರೂಪವುಂಟಾಗುವಂತೆ ತೋರುತ್ತದೆ.

**ಭೇದ ಉತ್ಪತ್ತಿಕಾಲೇ ವೈ ಸರ್ಗಾರ್ಥಂ ಪ್ರಭವತ್ಯಜ ।**
**ದೃಶ್ಯಾದೃಶ್ಯವಿಭೇದೋಽಯಂ ದ್ವೈವಿಧ್ಯೇ ಸತಿ ಸರ್ವಥಾ ॥೬॥**

ಉತ್ಪತ್ತಿಕಾಲದಲ್ಲಿಯೇ ಈ ಭೇದವ್ಯವಹಾರವು ಸೃಷ್ಟಿ ಮುಂತಾದ ಕಾರ್ಯಗಳನ್ನು ನಿರ್ವಹಿಸುವುದಕ್ಕೋಸ್ಕರ ಆಗುತ್ತದೆ. ಭೇದವಿದ್ದರೆ ದೃಶ್ಯ ಎಂದರೆ ಕಣ್ಣಿಗೆ ಗೋಚರವಾಗುವ ಪೃಥಿವ್ಯಾದಿಗಳು, ಅದೃಶ್ಯ ಎಂದರೆ ಕಣ್ಣಿಗೆ ಕಾಣಿಸದಿರುವ

ಆಕಾಶಾದಿಗಳು ಎಂಬ ವ್ಯತ್ಯಾಸದ ಅರಿವೂ, ಅದನ್ನು ಅನುಸರಿಸಿ ವ್ಯಾಪಾರವೂ ಉಂಟಾಗುತ್ತದೆ.

**ನಾಹಂ ಸ್ತ್ರೀ ನ ಪುಮಾಂಶ್ಚಾಹಂ ನ ಕ್ಲೀಬಂ ಸರ್ಗಸಂಕ್ಷಯೇ ।**
**ಸರ್ಗೇ ಸತಿ ವಿಭೇದಃ ಸ್ಯಾತ್ಕಲ್ಪಿತೋಽಯಂ ಧಿಯಾ ಪುನಃ ॥೭॥**

ಪ್ರಳಯಕಾಲದಲ್ಲಿ ಈ ಪ್ರಪಂಚದ ಸೃಷ್ಟಿ ಮುಂತಾದ ವ್ಯಾಪಾರವಿಲ್ಲದಿರುವಾಗ ನನ್ನ ಶುದ್ಧವಾದ ನಿಜಸ್ವರೂಪದಲ್ಲಿ ಲಿಂಗರೂಪಗಳನ್ನು ಮೀರಿರುವುದರಿಂದ ನಾನು ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ, ನಪುಂಸಕಸ್ವರೂಪವೂ ಅಲ್ಲ. ಆದರೆ ಸೃಷ್ಟಿಕಾಲ ದಲ್ಲಿ ಮಾತ್ರ ನಾನೇ ಬುದ್ಧಿಪೂರ್ವಕವಾಗಿ ಈ ಭೇದಗಳನ್ನೆಲ್ಲಾ ಕಲ್ಪಿಸಿಕೊಂಡು ತೋರಿಸುತ್ತಿರುತ್ತೇನೆ.

**ಅಹಂ ಬುದ್ಧಿರಹಂ ಶ್ರೀಶ್ಚ ಧೃತಿಃ ಕೀರ್ತಿಃ ಸ್ಮೃತಿಸ್ತಥಾ ।**
**ಶ್ರದ್ಧಾ ಮೇಧಾ ದಯಾ ಲಜ್ಜಾ ಕ್ಷುಧಾ ತೃಷ್ಣಾ ತಥಾ ಕ್ಷಮಾ ॥೮॥**

ಅದು ಹೇಗೆಂದರೆ, ನಾನು ಬುದ್ಧಿಸ್ವರೂಪಳು, ಎಂದರೆ ಜನರಲ್ಲಿ ಅವರ ಸಂಸ್ಕೃತಿಯ ಮಟ್ಟಕ್ಕೆ ತಕ್ಕಂತೆ ಧರ್ಮವನ್ನು ಆಚರಿಸಬೇಕೆಂಬ, ಅಧರ್ಮವನ್ನು ಆಚರಿಸಬಾರದೆಂಬ ಮನೋವೃತ್ತಿಯು ಇರುತ್ತದೆ; ನಾನು ಲಕ್ಷ್ಮಿಯು, ಎಂದರೆ ಎಲ್ಲ ಬಗೆಯ ಸಂಪದ್ರೂಪಳು; ಧೈರ್ಯಸ್ವರೂಪಳು, ಮನಸ್ಸಿನ ಸ್ಥೈರ್ಯರೂಪಳು; ಕೀರ್ತಿಯು, ಒಳ್ಳೆಯ ಹೆಸರು; ಸ್ಮೃತಿಸ್ವರೂಪಳು, ಅನುಭವಿಸಿದುದನ್ನೂ ಬೋಧಿ ಸಿದುದನ್ನೂ ಜ್ಞಾಪಕದಲ್ಲಿಟ್ಟಿರುವ ಶಕ್ತಿಯು; ಶ್ರದ್ಧಾ, ಎಂದರೆ ಧರ್ಮಾಚರಣೆಯಲ್ಲಿ ಆದರ; ಮೇಧಾಸ್ವರೂಪಳು; ದಯಾ; ಲಜ್ಜಾ ಅಥವಾ ನಾಚಿಕೆ; ಕ್ಷುಧಾ ಅಥವಾ ಹಸಿವೆಯ ಸ್ವರೂಪಳು; ತೃಷ್ಣಾ ಅಥವಾ ಇಚ್ಛೆಯು; ಕ್ಷಮಾ ಅಥವಾ ಸಹನ ಸ್ವಭಾವವುಳ್ಳವಳು.

**ಕಾಂತಿಃ ಶಾಂತಿಃ ಪಿಪಾಸಾ ಚ ನಿದ್ರಾ ತಂದ್ರಾ ಜರಾಽಜರಾ ।**
**ವಿದ್ಯಾಽವಿದ್ಯಾಸ್ಪೃಹಾ ವಾಂಛಾ ಶಕ್ತಿಶ್ಚಾಶಕ್ತಿರೇವ ಚ ॥೯॥**

ಮತ್ತು ನಾನು ಕಾಂತಿಸ್ವರೂಪಳು; ಶಾಂತಿಸ್ವರೂಪಳು; ಪಾನಾಭಿಲಾಷೆಯ ಸ್ವರೂಪಳು; ನಿದ್ರೆಯ ಸ್ವರೂಪಳು; ಆಲಸ್ಯದ ಸ್ವರೂಪಳು; ಮುಪ್ಪು ಮತ್ತು ಯೌವನಸ್ವರೂಪಳು; ವಿದ್ಯೆ ಮತ್ತು ಅಜ್ಞಾನದ ಸ್ವರೂಪಳು; ಸ್ಪೃಹೆ ಮತ್ತು

ವಾಂಛೆಗಳೆಂಬ ಇಚ್ಛೆಯ ವಿಶೇಷಸ್ವರೂಪಳು; ಬಲ ಮತ್ತು ಬಲವಿಲ್ಲದಿರುವಿಕೆ ಇವುಗಳ ಸ್ವರೂಪಳೂ ಆಗಿರುವೆನು.

**ವಸಾ ಮಜ್ಜಾ ಚ ತ್ವಕ್ಚಾಹಂ ದೃಷ್ಟಿರ್ವಾಗನೃತಾನೃತಾ ।**
**ಪರಾ ಮಧ್ಯಾ ಚ ಪಶ್ಯಂತೀ ನಾಡ್ಯೋಽಹಂ ವಿವಿಧಾಶ್ಚ ಯಾಃ ॥೧೦॥**

ಮತ್ತು ನಾನು ವಸಾ ಎಂದರೆ ಹೃದಯಕೋಶದ ಮಾಂಸದ ಸ್ವರೂಪಳು; ಮಜ್ಜಾ ಎಂದರೆ ಎಲುಬಿನ ಸಾರದ ಸ್ವರೂಪಳು; ಚರ್ಮದ ಸ್ವರೂಪಳು; ದೃಷ್ಟಿಯ ಸ್ವರೂಪಳು; ಸುಳ್ಳು ಮತ್ತು ನಿಜವಾದ ವಾಕ್ಯಗಳ ಸ್ವರೂಪಳು; ಪರಾ, ಮಧ್ಯಾ ಮತ್ತು ಪಶ್ಯಂತೀ ಎಂದು ಮೊದಲಾದ ನಾಡಿಗಳ ಸ್ವರೂಪಳೂ ನಾನು; ಅಥವಾ ಪರಾ, ಪಶ್ಯಂತೀ ಮಧ್ಯಮಾ, ವೈಖರೀ ಎಂಬ ಧ್ವನಿಯ ಅವ್ಯಕ್ತ ಮತ್ತು ವ್ಯಕ್ತಸ್ವರೂಪಳೂ ನಾನೇ ಆಗಿರುತ್ತೇನೆ. ಇದನ್ನು ಪಂಚೋಪನಿಷತ್ತಿನ ೧೩-೧೬ ಪುಟಗಳಲ್ಲಿ ವಿವರಿಸಿದೆ.

**ಕಿಂ ನಾಹಂ ಪಶ್ಯ ಸಂಸಾರೇ ಮದ್ವಿಯುಕ್ತಂ ಕಿಮಸ್ತಿ ಹಿ ।**
**ಸರ್ವಮೇವಾಹಮಿತ್ಯೇವಂ ನಿಶ್ಚಯಂ ವಿದ್ಧಿ ಪದ್ಮಜ ॥೧೧॥**

ಓ ಬ್ರಹ್ಮನೇ, ನೋಡು. ಈ ಪ್ರಪಂಚದ ಸಂಸಾರದಲ್ಲಿ ನಾನು ಯಾವುದಲ್ಲವು? ಎಲ್ಲವೂ ನಾನೇ ಆಗಿರುವೆನು. ನನ್ನಿಂದ ಬಿಡಲ್ಪಟ್ಟು ಯಾವ ವಸ್ತುವಿರುತ್ತದೆ? ಆದುದರಿಂದ ನನ್ನನ್ನು ಬಿಟ್ಟು ಏನೂ ಇಲ್ಲವೆಂಬುದು ನಿಶ್ಚಯವೆಂದು ತಿಳಿ.

**ಏತೈರ್ನಿರ್ಮೇ ನಿಶ್ಚಿತೈ ರೂಪೈರ್ವಿಹೀನಂ ಕಿಂ ವದಸ್ವ ಮೇ ।**
**ತಸ್ಮಾದಹಂ ವಿಧೇ ಚಾಸ್ಮಿನ್ಸರ್ಗೇ ವೈ ವಿತತಾಽಭವಂ ॥೧೨॥**

ಮೇಲೆ ಹೇಳಿದ ನನ್ನ ಖಚಿತವಾದ ರೂಪಗಳಿಂದ ಬಿಡಲ್ಪಟ್ಟುದು ಯಾವುದು ತಾನೇ ಇರುವುದು? ನನಗೆ ಅಂತಹ ಉದಾಹರಣೆಯನ್ನು ಹೇಳು. ಆದುದರಿಂದ ಓ ಬ್ರಹ್ಮನೇ, ನಾನು ಈ ಸೃಷ್ಟಿಯಲ್ಲಿರುವ ಎಲ್ಲದರಲ್ಲಿಯೂ ವ್ಯಾಪಿಸಿಕೊಂಡಿರುತ್ತೇನೆ.

**ನೂನಂ ಸರ್ವೇಷು ದೇವೇಷು ನಾನಾನಾಮಧರಾ ಹ್ಯಹಂ ।**
**ಭವಾಮಿ ಶಕ್ತಿರೂಪೇಣ ಕರೋಮಿ ಚ ಪರಾಕ್ರಮಂ ॥೧೩॥**

ಅಲ್ಲದೆ, ನಾನು ಎಲ್ಲ ದೇವತೆಗಳಲ್ಲಿಯೂ ಅನೇಕಬಗೆಯ ಹೆಸರನ್ನು ಶಕ್ತಿಯ ರೂಪದಿಂದ ಧರಿಸಿ ಇರುತ್ತೇನೆ. ಮತ್ತು ಅವರವರಿಗೆ ಅನುಕೂಲವಾಗಿ ಬಲಪ್ರದರ್ಶನವನ್ನೂ ಮಾಡುತ್ತಿರುವಂತೆ ತೋರುತ್ತಿರುತ್ತೇನೆ.

**ಗೌರೀ ಬ್ರಾಹ್ಮೀ ತಥಾ ರೌದ್ರೀ ವಾರಾಹೀ ವೈಷ್ಣವೀ ಶಿವಾ ।**
**ವಾರುಣೀ ಚಾಥ ಕೌಬೇರೀ ನಾರಸಿಂಹೀ ಚ ವಾಸವೀ ॥೧೪॥**

ಅದು ಹೇಗೆಂದರೆ, ನಾನು ಗೌರಿಯ ಸ್ವರೂಪಳೂ, ಬ್ರಾಹ್ಮೀ ಎಂದರೆ ಬ್ರಹ್ಮನ ಶಕ್ತಿಯ ಸ್ವರೂಪಳೂ, ವರಾಹಾವತಾರದ ಶಕ್ತಿಯ ಸ್ವರೂಪಳೂ, ವಿಷ್ಣುಶಕ್ತಿಯ ಸ್ವರೂಪಳೂ ಆಗಿದ್ದೇನೆ. ಶಿವನ ಶಕ್ತಿಯೂ, ವರುಣನ ಶಕ್ತಿಯೂ, ಕುಬೇರನ ಶಕ್ತಿಯೂ, ನರಸಿಂಹನ ಶಕ್ತಿಯೂ, ಇಂದ್ರನ ಶಕ್ತಿಯೂ ನಾನೇ ಆಗಿರುವೆನು.

**ಉತ್ಪನ್ನೇಷು ಸಮಸ್ತೇಷು ಕಾರ್ಯೇಷು ಪ್ರವಿಶಾಮಿ ತಾನ್ ।**
**ಕರೋಮಿ ಸರ್ವಕಾರ್ಯಾಣಿ ನಿಮಿತ್ತಂ ತಂ ವಿಧಾಯ ವೈ ॥೧೫॥**

ಅಲ್ಲದೆ, ನಾನು ಎಲ್ಲ ಪದಾರ್ಥಗಳನ್ನೂ ಉಂಟುಮಾಡಿ ಆ ಪದಾರ್ಥಗಳಲ್ಲಿ ಪ್ರವೇಶಿಸಿರುವೆನು. ಆಯಾಯ ಪುರುಷರನ್ನು ನಿಮಿತ್ತಮಾಡಿಕೊಂಡು ನಾನೇ ಎಲ್ಲ ಕೆಲಸಗಳನ್ನೂ ನಡೆಯಿಸುತ್ತೇನೆ. " ತತ್ಸೃಷ್ಟ್ವಾ ತದೇವಾನುಪ್ರಾವಿಶತ್ " ಎಂದು ಶ್ರುತಿಯೂ ಹೇಳುತ್ತದೆ.

**ಜಲೇ ಶೀತಂ ತಥಾ ವಹ್ನಾವೌಷ್ಣ್ಯಂ ಜ್ಯೋತಿರ್ದಿವಾಕರೇ ।**
**ನಿಶಾನಾಥೇ ಹಿ ಮಾ ಕಾಮಂ ಪ್ರಭವಾಮಿ ಯಥಾ ತಥಾ ॥೧೬॥**

ನೀರಿನಲ್ಲಿ ಶೈತ್ಯವೂ ಹಾಗೆಯೇ ಅಗ್ನಿಯಲ್ಲಿ ಉಷ್ಣವೂ, ಸೂರ್ಯನಲ್ಲಿ ಪ್ರಕಾಶವೂ, ಚಂದ್ರನಲ್ಲಿ ಶೀತಲವಾದ ಮತ್ತು ಆಹ್ಲಾದಕರವಾದ ಬೆಳದಿಂಗಳೂ ಈ ಮೊದಲಾದ ಗುಣಗಳಿಂದ ನನ್ನಿಷ್ಟಾನುಸಾರ ನಾನಾರೂಪಳು ಆಗುತ್ತೇನೆ.

**ಮಯಾ ತ್ಯಕ್ತಂ ವಿಧೇ ನೂನಂ ಸ್ಪಂದಿತುಂ ನ ಕ್ಷಮಂ ಭವೇತ್ ।**
**ಜೀವಜಾತಂ ಚ ಸಂಸಾರೇ ನಿಶ್ಚಯೋಽಯಂ ಬ್ರುವೇ ತ್ವಯಿ ॥೧೭॥**

ಓ ಬ್ರಹ್ಮನೇ, ಶಕ್ತಿರೂಪಳಾದ ನನ್ನಿಂದ ಬಿಡಲ್ಪಟ್ಟುದೇ ಆದರೆ ಈ ಸಂಸಾರದಲ್ಲಿ ಯಾವ ಪ್ರಾಣಿಯೂ ಅಲುಗಾಡಲೂ ಸಹ ಸಾಮರ್ಥ್ಯವುಳ್ಳುದು ಆಗುವುದಿಲ್ಲವು. ಇದನ್ನು ನಿನಗೆ ಖಂಡಿತವಾಗಿ ಹೇಳುತ್ತೇನೆ:

**ಅಶಕ್ತಃ ಶಂಕರೋ ಹಂತುಂ ದೈತ್ಯಾನ್ಕಿಲ ಮಯೋಜ್ಝಿತಃ ।**
**ಶಕ್ತಿಹೀನಂ ನರಂ ಬ್ರೂತೇ ಲೋಕಶ್ಚೈವಾತಿದುರ್ಬಲಂ ॥೧೮॥**

ಶಂಕರನೂ ಸಹ ನನ್ನಿಂದ ರಹಿತನಾದರೆ ರಾಕ್ಷಸರನ್ನು ಸಂಹರಿಸಲು ಅಸಮರ್ಥನು. ಆದುದರಿಂದಲೇ ಶಕ್ತಿಯಿಲ್ಲದ ಪುರುಷನನ್ನು ಜನಗಳು ಬಲವಿಲ್ಲದವನೆಂದು ಎಂದರೆ ಯಾವ ಕೆಲಸಕ್ಕೂ ಬಾರದವನೆಂದು ಹೇಳುತ್ತಾರೆ.

**ರುದ್ರಹೀನಂ ವಿಷ್ಣುಹೀನಂ ನ ವದಂತಿ ಜನಾಃ ಕಿಲ ।**
**ಶಕ್ತಿಹೀನಂ ಯಥಾ ಸರ್ವೇ ಪ್ರವದಂತಿ ನರಾಧಮಂ ॥೧೯॥**

ಶಕ್ತಿಯಿಂದ ಬಿಡಲ್ಪಟ್ಟವನನ್ನು ಹೇಗೆ ಕೈಲಾಗದ ಅಥವಾ ಕೆಲಸಕ್ಕೆ ಬಾರದ ಮನುಷ್ಯನೆನ್ನುತ್ತಾರೆಯೋ ಅದರಂತೆ ವಿಷ್ಣುವಿನಿಂದಾಗಲೀ, ರುದ್ರನಿಂದಲಾಗಲೀ ಬಿಡಲ್ಪಟ್ಟವನನ್ನು ಹಾಗೆ ಅನ್ನುವುದಿಲ್ಲವು.

**ಪತಿತಃ ಸ್ಖಲಿತೋ ಭೀತಃ ಶಾಂತಃ ಶತ್ರುವಶಂಗತಃ ।**
**ಅಶಕ್ತಃ ಪ್ರೋಚ್ಯತೇ ಲೋಕೇ ನಾರುದ್ರಃ ಕೋऽಪಿ ಕಥ್ಯತೇ ॥೨೦॥**

ಕೆಳಗೆ ಬಿದ್ದವನು, ಎಡವಿ ಜಾರಿದವನು, ಹೆದರಿಕೊಂಡವನು, ಏನೂ ಕೆಲಸ ಮಾಡಲಾರದ ಸುಮ್ಮನೆ ತಣ್ಣಗಾದವನು, ವೈರಿಯ ಸೆರೆಗೆ ಸಿಕ್ಕಿದವನು ಈ ಮುಂತಾದವರನ್ನು ಲೋಕದಲ್ಲಿ ಜನಗಳು ಅಶಕ್ತ ಎಂದರೆ ಶಕ್ತಿಯಿಲ್ಲದವನು ಎಂದು ಮುಂತಾಗಿ ಹೇಳುತ್ತಾರೆ. ಆದರೆ ರುದ್ರನಿಂದ ಬಿಡಲ್ಪಟ್ಟವನೆಂದಾಗಲಿ ವಿಷ್ಣುವಿನಿಂದ ಬಿಡಲ್ಪಟ್ಟವನೆಂದಾಗಲಿ ಯಾರನ್ನೂ ಹಾಗೆನ್ನುವುದಿಲ್ಲವು.

**ತದ್ವಿದ್ಧಿ ಕಾರಣಂ ಶಕ್ತಿರ್ಯಥಾ ತ್ವಂ ಚ ಸಿಸೃಕ್ಷಸಿ ।**
**ಭವಿತಾ ಚ ಯದಾ ಯುಕ್ತಃ ಶಕ್ತ್ಯಾಃ ಕರ್ತಾ ತದಾಖಿಲಂ ॥೨೧॥**

ಆದುದರಿಂದ ಎಲ್ಲಕ್ಕೂ ಕಾರಣವು ಶಕ್ತಿಯು. ಅಲ್ಲದೆ, ನೀನೂ ಸೃಷ್ಟಿಸುವುದನ್ನಪೇಕ್ಷಿಸುತ್ತೀಯಷ್ಟೆ? ಆದರೆ ನೀನು ಯಾವಾಗ ಶಕ್ತಿಯಿಂದ ಕೂಡಿದವನಾಗುತ್ತೀಯೋ ಆಗಲೇ ಎಲ್ಲವನ್ನೂ ಸೃಷ್ಟಿಸಬಲ್ಲವನಾಗುತ್ತೀಯೆ.

**ತಥಾ ಹರಿಸ್ತಥಾ ಶಂಭುಸ್ತಥೇಂದ್ರೋऽಥ ವಿಭಾವಸುಃ ।**
**ಶಶೀ ಸೂರ್ಯೋ ಯಮಸ್ತ್ವಷ್ಟಾ ವರುಣಃ ಪವನಸ್ತಥಾ ॥೨೨॥**

ಅದರಂತೆಯೇ ವಿಷ್ಣುವೂ, ಈಶ್ವರನೂ, ದೇವೇಂದ್ರನೂ, ಅಗ್ನಿಯೂ, ಚಂದ್ರನೂ, ಸೂರ್ಯನೂ, ಯಮಧರ್ಮನೂ, ವಿಶ್ವಕರ್ಮನೂ, ವರುಣವಾಯುಗಳೂ ಶಕ್ತಿಯಿಂದ ಕೂಡಿಯೇ ತಮ್ಮ ತಮ್ಮ ಕಾರ್ಯಗಳನ್ನು ಮಾಡಬಲ್ಲವರಾಗುವರು.

**ಧರಾ ಸ್ಥಿರಾ ತದಾ ಧರ್ತುಂ ಶಕ್ತಿಯುಕ್ತಾ ಯದಾ ಭವೇತ್ ।**
**ಅನ್ಯಥಾ ಚೇದಶಕ್ತಾ ಸ್ಯಾತ್ಪರಮಾಣೋಶ್ಚ ಧಾರಣೇ ॥೨೩॥**

ಹಾಗೆಯೇ ಭೂಮಿಯೂ ಶಕ್ತಿಯಿಂದ ಕೂಡಿದರೆ ಮಾತ್ರ ಎಲ್ಲವನ್ನೂ ಧರಿಸಲು ಸಮರ್ಥಳಾಗುತ್ತಾಳೆ. ಇಲ್ಲದಿದ್ದರೆ ಒಂದು ಪರಮಾಣುವನ್ನೂ ಧರಿಸಲಾರಳು.

**ತಥಾ ಶೇಷಸ್ತಥಾ ಕೂರ್ಮೋ ಯೇಽನ್ಯೇ ಸರ್ವೇ ಚ ದಿಗ್ಗಜಾಃ ।**
**ಮದ್ಯುಕ್ತಾ ವೈ ಸಮರ್ಥಾಶ್ಚ ಸ್ವಾನಿ ಕಾರ್ಯಾಣಿ ಸಾಧಿತುಂ ॥೨೪॥**

ಅದರಂತೆಯೇ ಆದಿಶೇಷನೂ, ಆದಿಕೂರ್ಮವೂ, ಎಲ್ಲ ದಿಗ್ಗಜಗಳೂ, ಸರ್ವಶಕ್ತಿರೂಪಳಾದ ನನ್ನ ಶಕ್ತಿಯ ಬೆಂಬಲದಿಂದ ಕೂಡಿಯೇ ತಮ್ಮ ತಮ್ಮ ಕಾರ್ಯಗಳನ್ನು ಮಾಡಬಲ್ಲರು. ಆದುದರಿಂದ ಶಕ್ತಿಯೇ ಎಲ್ಲದರಲ್ಲಿಯೂ ವ್ಯಾಪಿಸಿದೆ.

**ಜಲಂ ಪಿಬಾಮಿ ಸಕಲಂ ಸಂಹರಾಮಿ ವಿಭಾವಸುಂ ।**
**ಪವನಂ ಸ್ತಂಭಯಾಮ್ಯದ್ಯ ಯದಿಚ್ಛಾಮಿ ತಥಾ ಚರಂ ॥೨೫॥**

ನಾನೀಗ ಇಚ್ಛೆಪಟ್ಟರೆ ಈ ಲೋಕದಲ್ಲಿರುವ ನೀರನ್ನೆಲ್ಲಾ ಕುಡಿಯಬಲ್ಲೆನು. ಅಗ್ನಿಯನ್ನೂ ನಾಶಮಾಡಬಲ್ಲೆನು. ಹಾಗೆಯೇ ಯಾವಾಗಲೂ ಚಲಿಸುವ ವಾಯುವನ್ನೂ ತಡೆಯಬಲ್ಲೆನು. ಈ ಎಲ್ಲ ಕಾರ್ಯಗಳಿಗೂ ಕಾರಣವೂ ಶಕ್ತಿಯೇ.

**ತತ್ತ್ವಾನಾಂ ಚೈವ ಸರ್ವೇಷಾಂ ಕದಾಪಿ ಕಮಲೋದ್ಭವ ।**
**ಅಸತಾಂ ಭಾವಸಂದೇಹಃ ಕರ್ತವ್ಯೋ ನ ಕದಾಚನ ॥೨೬॥**

ಎಲೈ ಕಮಲದಲ್ಲಿ ಹುಟ್ಟಿರುವ ಬ್ರಹ್ಮನೇ, ಯಾವರೀತಿಯಲ್ಲೂ ಇಲ್ಲದಿರುವ ಈ ಎಲ್ಲ ಪದಾರ್ಥಗಳೂ ಹುಟ್ಟುತ್ತವೆಯೆಂದು ಯಾವಾಗಲೂ ಸಂದೇಹಗೊಳ್ಳಬೇಡ. ಏಕೆಂದರೆ, ಈ ಎಲ್ಲ ತತ್ತ್ವಗಳೂ ಕಾರಣರೂಪದಲ್ಲಿದ್ದೇ ಕಾರ್ಯರೂಪದಲ್ಲಿ ತೋರುತ್ತಿರುತ್ತವೆ.

**ಕದಾಚಿತ್ಪ್ರಾಗಭಾವಃ ಸ್ಯಾತ್ಪ್ರಧ್ವಂಸಾಭಾವ ಏವ ವಾ ।**
**ಮೃತ್ಪಿಂಡೇಷು ಕಪಾಲೇಷು ಘಟಾಭಾವೋ ಯಥಾ ತಥಾ ॥೨೭॥**

ಆದುದರಿಂದ, ಹೇಗೆ ಮಣ್ಣಿನ ಮುದ್ದೆಯಲ್ಲಿ ಮಡಕೆಗೆ ಅವಶ್ಯಕವಾದ ವಸ್ತುವು ಅಂತರ್ಗತವಾಗಿ ಇದ್ದರೂ ಮಡಕೆಯಂತೆ ತೋರದೇ ಇರುವುದೋ,

ಅನಂತರದಲ್ಲಿ ಆ ಮಣ್ಣಿನಿಂದ ಮಡಕೆಯು ರಚಿತವಾಗಿ ಅದು ಚೂರುಚೂರಾಗಿ ಒಡೆದುಹೋದಮೇಲೆ ಮಡಕೆಯು ನಾಶವಾಗಿಹೋಯಿತೆಂದು ಹೇಳಲ್ಪಡುವುದೋ ಹಾಗೆಯೇ ಸಮಸ್ತತತ್ತ್ವಗಳೂ ಎಂದರೆ ಪ್ರಪಂಚದಲ್ಲಿರುವ ವಸ್ತುಗಳೆಲ್ಲವೂ ಕಾರಣ ರೂಪದಲ್ಲಿದ್ದು ಸೃಷ್ಟಿಕಾಲದಲ್ಲಿ ಕಾರ್ಯರೂಪವನ್ನು ಹೊಂದಿ ಅನೇಕವಸ್ತುಗಳಂತೆ ತೋರಿ ಪುನಃ ಪ್ರಳಯಕಾಲದಲ್ಲಿ ತಿರೋಭಾವವನ್ನು ಎಂದರೆ ಲಯವನ್ನು (ಹಿಂದಿದ್ದ ಕಾರಣರೂಪವನ್ನೇ) ಹೊಂದುವುವು ಎಂದು ಅಭಿಪ್ರಾಯವು. ಎಂದರೆ ಸಂಪೂರ್ಣ ವಾಗಿ ಇಲ್ಲದ್ದು ಹೊಸದಾಗಿ ಹುಟ್ಟುವುದಿಲ್ಲ. ಇದ್ದದ್ದು ಸಂಪೂರ್ಣವಾಗಿ ನಾಶವೂ ಆಗುವುದಿಲ್ಲ. ಇದೇ ಸತ್ಕಾರ್ಯವಾದವು.

**ಅದ್ಯಾತ್ರ ಪೃಥಿವೀ ನಾಸ್ತಿ ಕ್ವ ಗತೇತಿ ವಿಚಾರಣೇ ।**
**ಸಂಜಾತಾ ಇತಿ ವಿಜ್ಞೇಯಾ ಅಸ್ಯಾಸ್ತು ಪರಮಾಣವಃ ॥೨೮॥**

ಈಗ ಪ್ರಳಯಕಾಲದಲ್ಲಿ ಪೃಥಿವಿಯು ನಾಶವಾಗಿ ಕಾಣುತ್ತಿಲ್ಲವಷ್ಟೆ? ಅದು ಎಲ್ಲಿ ಹೋಯಿತೆಂದು ವಿಚಾರಿಸಿದರೆ, ಭೂಮಿಯೆಲ್ಲವೂ ಪರಮಾಣುಗಳಾಗಿ ಹೋಯಿತು ಎಂದು ತಿಳಿಯುತ್ತದೆ. ಅದರಂತೆಯೇ ಎಲ್ಲ ಪದಾರ್ಥಗಳಿಗೂ ನಾಶವೆಂಬುದು ಇಲ್ಲವು. ನಷ್ಟವಾದಂತೆ ತೋರಿದರೂ ಕಾರಣರೂಪವಾಗಿರುತ್ತದೆ. ಎಲ್ಲಕ್ಕೂ ಮೂಲಕಾರಣವು ವ್ಯಾಪಕವೂ, ದೊಡ್ಡದೂ, ಸೂಕ್ಷ್ಮವೂ ಆಗಿರುವುದು ಬ್ರಹ್ಮರೂಪವು.

**ಶಾಶ್ವತಂ ಕ್ಷಣಿಕಂ ಶೂನ್ಯಂ ನಿತ್ಯಾನಿತ್ಯಂ ಸಕರ್ತೃಕಂ ।**
**ಅಹಂಕಾರಾಗ್ರಿಮಂ ಚೈವ ಸಪ್ತಭೇದೈರ್ವಿವಕ್ಷಿತಂ ॥೨೯॥**

ಆದುದರಿಂದ ಓ ಬ್ರಹ್ಮನೇ, ಮಹತ್ತತ್ತ್ವವೂ, ಅಹಂಕಾರವೂ ಮತ್ತು ಐದು ಸೂಕ್ಷ್ಮಭೂತತನ್ಮಾತ್ರೆಗಳೂ ಈ ಏಳೂ ಕಾರಣರೂಪದಲ್ಲಿ ಶಾಶ್ವತವೂ ನಿತ್ಯವೂ ಆಗಿವೆ. ಕಾರ್ಯರೂಪದಲ್ಲಿ ಕ್ಷಣಿಕವೂ, ಶೂನ್ಯವೂ, ಅನಿತ್ಯವೂ, ಸಕರ್ತೃಕವೂ ಆಗಿರುತ್ತವೆ. ಹೀಗೆ ದೃಷ್ಟಿಭೇದದಿಂದ ಈ ಧರ್ಮಗಳಿಗೆ ಪರಸ್ಪರವಾಗಿ ವಿರೋಧ ವಿಲ್ಲವೆಂದು ತಿಳಿಯಬೇಕು. ಆದುದರಿಂದ ಈ ಭೇದವೆಲ್ಲವೂ ವಿವಕ್ಷಾಧೀನವಾಗಿದೆ.

**ಗೃಹಾಣಾಜ ಮಹತ್ತತ್ತ್ವಮಹಂಕಾರಸ್ತದುದ್ಭವಃ ।**
**ತತಃ ಸರ್ವಾಣಿ ಭೂತಾನಿ ರಚಯಸ್ವ ಯಥಾ ಪುರಾ ॥೩೦॥**

ಓ ಬ್ರಹ್ಮನೇ, ಆದುದರಿಂದ ಮಹತ್ತತ್ತ್ವವು ಇಂತಹ ಸ್ವಭಾವವುಳ್ಳದು ದಾಗಿರುತ್ತದೆ. ಇದನ್ನು ನೀನು ಪರಿಗ್ರಹಿಸು. ಇದರಿಂದ ಅಹಂಕಾರತತ್ತ್ವವು ಉಂಟಾ

ಗುತ್ತದೆ. ಈಗ ನೀನು ಇದರಿಂದ ಹಿಂದಿನ ಕಲ್ಪದಂತೆ ಈಗಲೂ ಪಾಂಚಭೌತಿಕವಾದ ಎಲ್ಲ ಪ್ರಪಂಚವನ್ನೂ ಸೃಷ್ಟಿಸು.

**ವ್ರಜಂತು ಸ್ವಾನಿ ಧಿಷ್ಣ್ಯಾನಿ ವಿರಚ್ಯ ನಿವಸಂತು ವಃ ।**
**ಸ್ವಾನಿ ಸ್ವಾನಿ ಚ ಕಾರ್ಯಾಣಿ ಕುರ್ವಂತು ದೈವಭಾವಿತಾಃ ॥೩೦॥**

ಒಳ್ಳೆಯ ಅದೃಷ್ಟದಿಂದ ರಕ್ಷಿತರಾದ ಓ ಬ್ರಹ್ಮವಿಷ್ಣುಮಹೇಶ್ವರರೇ, ನೀವು ಈಗ ಇಲ್ಲಿಂದ ಹೊರಟುಹೋಗಿರಿ. ನಿಮ್ಮ ನಿಮ್ಮ ಅಧಿಕಾರ ಆಡಳಿತಗಳಿಗೆ ತಕ್ಕ ವಾಸಸ್ಥಾನಗಳನ್ನು ಕಲ್ಪಿಸಿಕೊಂಡು ನಿಮ್ಮ ನಿಮ್ಮ ಸೃಷ್ಟಿಯೇ ಮೊದಲಾದ ಕಾರ್ಯಗಳನ್ನು ಮಾಡಿಕೊಂಡಿರಿ.

**ಗೃಹಾಣೇಮಾಂ ವಿಧೇ ಶಕ್ತಿಂ ಸುರೂಪಾಂ ಚಾರುಹಾಸಿನೀಂ ।**
**ಮಹಾಸರಸ್ವತೀಂ ನಾಮ್ನಾ ರಜೋಗುಣಯುತಾಂ ವರಾಂ ॥೩೨॥**

ಓ ಬ್ರಹ್ಮನೇ, ಸುಂದರಿಯಾದ ಮತ್ತು ಮನೋಹರವಾದ ಮಂದಹಾಸವುಳ್ಳ ಈ ಶಕ್ತಿಯನ್ನು ಸ್ವೀಕರಿಸು. ಇವಳ ಹೆಸರು ' ಮಹಾಸರಸ್ವತೀ ' ಎಂದು. ಇವಳು ರಜೋಗುಣವೇ ಪ್ರಧಾನವಾಗಿ ಉಳ್ಳ ಉತ್ತಮಸ್ತ್ರೀಶಕ್ತಿಯು.

**ಶ್ವೇತಾಂಬರಧರಾಂ ದಿವ್ಯಾಂ ದಿವ್ಯಭೂಷಣಭೂಷಿತಾಂ ।**
**ವರಾಸನಸಮಾರೂಢಾಂ ಕ್ರೀಡಾರ್ಥಂ ಸಹಚಾರಿಣೀಂ ॥೩೩॥**

ಬಿಳಿಯ ವಸ್ತ್ರಗಳನ್ನು ಧರಿಸಿರುವ, ಪ್ರಕಾಶಮಾನವಾದ ಒಡವೆಗಳಿಂದ ಅಲಂಕೃತಳಾಗಿರುವ ಮತ್ತು ಶ್ರೇಷ್ಠವಾದ ಆಸನದಲ್ಲಿ ಕುಳಿತಿರುವ ಮನೋಹರಳಾದ ಈ ಮಹಾಸರಸ್ವತಿಯನ್ನು ನಿನ್ನ ವಿಹಾರಕ್ಕೆ ಮತ್ತು ಕಾರ್ಯನಿರ್ವಾಹಕ್ಕೆ ಒಡನಾಡಿಯಾದ ಮತ್ತು ಸಹಕರಿಸುವ ಪತ್ನಿಯನ್ನಾಗಿ ಸ್ವೀಕರಿಸು.

**ಏಷಾ ಸಹಚರೀ ನಿತ್ಯಂ ಭವಿಷ್ಯತಿ ವರಾಂಗನಾ ।**
**ನಾವಮಂಸ್ಥಾ ವಿಭೂತಿಂ ಮೇ ಮತ್ವಾ ಪೂಜ್ಯತಮಾಂ ಪ್ರಿಯಾಂ ॥೩೪॥**

ಉತ್ತಮಸ್ತ್ರೀಯಾದ ಇವಳು ಯಾವಾಗಲೂ ಸಹಕರಿಸುವ ನಿನ್ನ ಒಡನಾಡಿಯಾಗಿರುವಳು. ಮತ್ತು ಮರ್ಯಾದೆಗೆ ತುಂಬ ಯೋಗ್ಯಳೆಂದೂ, ನನ್ನ ಮಹಿಮೆಯ ಅಂಶರೂಪಳೆಂದೂ, ಮತ್ತು ನನಗೆ ತುಂಬಾ ಇಷ್ಟಳೆಂದೂ ತಿಳಿದು ಇವಳನ್ನು ತಿರಸ್ಕರಿಸಬೇಡ.

**ಗಚ್ಛ ತ್ವಮನಯಾ ಸಾರ್ಧಂ ಸತ್ಯಲೋಕಂ ಬತಾಶು ವೈ ।**
**ಬೀಜಾಚ್ಚತುರ್ವಿಧಂ ಸರ್ವಂ ಸಮುತ್ಪಾದಯ ಸಾಂಪ್ರತಂ ॥೩೫॥**

ಓ ಬ್ರಹ್ಮನೇ, ಇವಳೊಂದಿಗೆ ಕೂಡಲೇ ಸತ್ಯಲೋಕಕ್ಕೆ ಈಗ ಜಾಗ್ರತೆಯಾಗಿ ಹೊರಡು. ಮತ್ತು ಮಹತ್ತತ್ತ್ವವೆಂಬ ಬೀಜ ಮೂಲಕಾರಣದಿಂದ ಅಂಡಜವೇ ಮೊದಲಾಗಿ ನಾಲ್ಕು ವಿಧವಾಗಿರುವ ಎಲ್ಲ ಪ್ರಪಂಚವನ್ನೂ ಸೃಷ್ಟಿಸು.

**ಲಿಂಗಕೋಶಾಶ್ಚ ಜೀವೈಸ್ತೈಃ ಸಹಿತಾಃ ಕರ್ಮಭಿಸ್ತಥಾ ।**
**ವರ್ತಂತೇ ಸಂಸ್ಥಿತಾಃ ಕಾಲೇ ತಾನ್ಕುರು ತ್ವಂ ಯಥಾ ಪುರಾ ॥೩೬॥**

ಹಾಗೆಯೇ, ಕರ್ಮಸಂಸ್ಕಾರಗಳೊಡನೆ ಕೂಡಿದ ಲಿಂಗಶರೀರಗಳೂ ಜೀವರೊಡನೆ ಶೇರಿರುತ್ತವೆ. ಆಯಾಕಾಲದಲ್ಲಿ ಅವೆಲ್ಲವನ್ನೂ ಮೊದಲಿನಂತೆಯೇ ಸೃಷ್ಟಿಸು.

**ಕಾಲಕರ್ಮಸ್ವಭಾವಾಖ್ಯೈಃ ಕಾರಣೈಃ ಸಕಲಂ ಜಗತ್ ।**
**ಸ್ವಭಾವಸ್ವಗುಣೈರ್ಯುಕ್ತಂ ಪೂರ್ವವತ್ಸಚರಾಚರಂ ॥೩೭॥**

ಕಾಲ ಕರ್ಮ ಮತ್ತು ಸ್ವಭಾವಗಳೆಂಬ ಮೂರು ಕಾರಣಗಳಿಂದ ಎಲ್ಲ ಜಗತ್ತೂ ಉಂಟಾಗುತ್ತದೆ. ಆದುದರಿಂದ ಸ್ವಭಾವದಿಂದಲೂ ಆಯಾಯ ವಸ್ತುಗಳ ಸತ್ತ್ವವೇ ಮೊದಲಾದ ಗುಣಗಳಿಂದಲೂ ಸಹ ಕೂಡಿರುವ, ಈ ಚರ ಎಂದರೆ ಚಲಿಸತಕ್ಕ ಮತ್ತು ಅಚರ ಎಂದರೆ ಚಲಿಸದಿರುವ ವಸ್ತುಗಳಿಂದ ತುಂಬಿರುವ ಈ ಪ್ರಪಂಚವನ್ನು ಹಿಂದಿನ ಕಲ್ಪದಂತೆಯೇ ಈಗಲೂ ಸೃಷ್ಟಿಸು.

**ಮಾನನೀಯಸ್ತ್ವಯಾ ವಿಷ್ಣುಃ ಪೂಜನೀಯಶ್ಚ ಸರ್ವದಾ ।**
**ಸತ್ತ್ವಗುಣಪ್ರಧಾನತ್ವಾದಧಿಕಃ ಸರ್ವತಃ ಸದಾ ॥೩೮॥**

ಅಲ್ಲದೆ, ನೀನು ವಿಷ್ಣುವನ್ನು ಯಾವಾಗಲೂ ಗೌರವಿಸಬೇಕು, ಮತ್ತು ಪೂಜಿಸಬೇಕು. ಏಕೆಂದರೆ, ಅವನು ಸತ್ತ್ವಗುಣವೇ ಮುಖ್ಯವಾಗಿ ಉಳ್ಳವನಾದುದರಿಂದ ಯಾವಾಗಲೂ ಎಲ್ಲರಿಗಿಂತಲೂ ಶ್ರೇಷ್ಠನು.

**ಯದಾ ಯದಾ ಹಿ ಕಾರ್ಯಂ ವೋ ಭವಿಷ್ಯತಿ ದುರತ್ಯಯಂ ।**
**ಕರಿಷ್ಯತಿ ಪೃಥಿವ್ಯಾಂ ವೈ ಅವತಾರಂ ತದಾ ಹರಿಃ ॥೩೯॥**

ಯಾವಾಗ ನಿಮ್ಮಿಂದ ನಡೆಸಲು ಅಸಾಧ್ಯವಾದ ಕಾರ್ಯವು ಬಂದೊದಗು ವುದೋ ಆಗ ಈ ವಿಷ್ಣುವು ಆ ಕಾರ್ಯಸಾಧನೆಗಾಗಿ ಭೂಮಿಯಲ್ಲಿ ಅವತಾರವನ್ನು ಮಾಡುತ್ತಿರುತ್ತಾನೆ.

**ತಿರ್ಯಗ್ಯೋನಾವಥಾನ್ಯತ್ರ ಮಾನುಷೀಂ ತನುಮಾಶ್ರಿತಃ ।**
**ದಾನವಾನಾಂ ವಿನಾಶಂ ವೈ ಕರಿಷ್ಯತಿ ಜನಾರ್ದನಃ ॥೪೦॥**

ಮತ್ಸ್ಯವೇ ಮೊದಲಾದ ಇತರ ತಿರ್ಯಕ್ಪ್ರಾಣಿಗಳ ರೂಪದಿಂದಲೂ ರಾಮನೇ ಮೊದಲಾದ ಮನುಷ್ಯರೂಪದಿಂದಲೂ ಅವತಾರಮಾಡಿ, ದುಷ್ಟರನ್ನು ಶಿಕ್ಷಿಸುವ ಈ ವಿಷ್ಣುವು, ರಾಕ್ಷಸರ ನಾಶವನ್ನು ಮಾಡುವನು.

**ಭವೋಽಯಂ ತೇ ಸಹಾಯಶ್ಚ ಭವಿಷ್ಯತಿ ಮಹಾಬಲಃ ।**
**ಸಮುತ್ಪಾದ್ಯ ಸುರಾನ್ಸರ್ವಾನ್ವಿಹರಸ್ವ ಯಥಾಸುಖಂ ॥೪೧॥**

ತುಂಬ ಬಲಶಾಲಿಯಾದ ಈ ರುದ್ರನೂ ನಿನಗೆ ಸಹಾಯಕನಾಗಿರುವನು. ಎಲ್ಲ ದೇವತೆಗಳನ್ನೂ ಸೃಷ್ಟಿಸಿ, ತುಂಬ ಸಂತೋಷಕರವಾಗಿರುವಂತೆ ವಿಹರಿಸು.

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ನಾನಾಯಜ್ಞೈಃ ಸದಕ್ಷಿಣೈಃ ।**
**ಯಜಿಷ್ಯಂತಿ ವಿಧಾನೇನ ಸರ್ವಾನ್ವಃ ಸುಸಮಾಹಿತಾಃ ॥೪೨॥**

ಬ್ರಾಹ್ಮಣರೂ, ಕ್ಷತ್ರಿಯರೂ, ಮತ್ತು ವೈಶ್ಯರೂ, ಸಮಾಧಾನಚಿತ್ತರಾಗಿ ನಿಮ್ಮೆಲ್ಲರನ್ನೂ ದಕ್ಷಿಣಪ್ರದಾನಾದಿಗಳಿಂದ ಸಹಿತವಾದ, ಅನೇಕವಿಧವಾದ, ಯಜ್ಞ, ಯಾಗ, ಧರ್ಮಗಳಿಂದ ಶಾಸ್ತ್ರದಲ್ಲಿ ವಿಧಿಸಿರುವ ನಿಯಮದಂತೆ ಆರಾಧಿಸುವರು.

**ಮನ್ನಾಮೋಚ್ಚಾರಣಾತ್ಸರ್ವೇ ಮಖೇಷು ಸಕಲೇಷು ಚ ।**
**ಸದಾ ತೃಪ್ತಾಶ್ಚ ಸಂತುಷ್ಟಾ ಭವಿಷ್ಯಧ್ವಂ ಸುರಾಃ ಕಿಲ ॥೪೩॥**

ಆ ಎಲ್ಲ ಯಜ್ಞಗಳಲ್ಲಿಯೂ ನೀವೆಲ್ಲರೂ ನನ್ನ ಹೆಸರಾದ "ಸ್ವಾಹಾ" ಎಂಬ ಶಬ್ದವನ್ನು ಉಚ್ಚಾರಮಾಡುವುದರಿಂದ ಯಾವಾಗಲೂ ತೃಪ್ತಿಸಂತೋಷಗಳನ್ನು ಹೊಂದಿದವರು ಆಗುವಿರಿ.

**ಶಿವಶ್ಚ ಮಾನನೀಯೋ ವೈ ಸರ್ವಥಾ ಯತ್ತಮೋಗುಣಃ ।**
**ಯಜ್ಞಕಾರ್ಯೇಷು ಸರ್ವೇಷು ಪೂಜನೀಯಃ ಪ್ರಯತ್ನತಃ ॥೪೪॥**

ಅಲ್ಲದೆ ನೀವು ಸದಾಶಿವನನ್ನು ಯಾವಾಗಲೂ ಗೌರವಿಸಬೇಕು. ಅವನು ನನ್ನ ಸಂಬಂಧಿಯಾದ ತಮೋಗುಣವೇ ಪ್ರಧಾನವಾಗಿ ಉಳ್ಳವನು. ಮತ್ತು ಎಲ್ಲ ಬಗೆಯ ಯಾಗವೇ ಮೊದಲಾದ ಕರ್ಮಗಳಲ್ಲಿ ತುಂಬ ಆದರದಿಂದ ಕೂಡಿರುವ ಪ್ರಯತ್ನದಿಂದ ಅವನನ್ನು ಆರಾಧಿಸಬೇಕು.

**ಯದಾ ಪುನಃ ಸುರಾಣಾಂ ವೈ ಭಯಂ ದೈತ್ಯಾದ್ಭವಿಷ್ಯತಿ ।**
**ಶಕ್ತಯೋ ಮೇ ತದೋತ್ಪನ್ನಾ ಹರಿಷ್ಯಂತಿ ಸುವಿಗ್ರಹಾಃ ॥೪೫॥**

ತಿರುಗಿ ಯಾವಾಗ ದೇವತೆಗಳಿಗೆ ರಾಕ್ಷಸರಿಂದ ಭಯವು ಉಂಟಾಗುವುದೋ, ಆಗ ನನ್ನ ಶಕ್ತಿಗಳು ಮನೋಹರವಾದ ಶರೀರವುಳ್ಳವರಾಗಿ ಅವತರಿಸಿ ಆ ರಾಕ್ಷಸರನ್ನು ನಾಶಮಾಡುವರು.

**ವಾರಾಹೀ ವೈಷ್ಣವೀ ಗೌರೀ ನಾರಸಿಂಹೀ ಸದಾಶಿವಾ ।**
**ಏತಾಶ್ಚಾನ್ಯಾಶ್ಚ ಕಾರ್ಯಾಣಿ ಕುರು ತ್ವಂ ಕಮಲೋದ್ಭವ ॥೪೬॥**

ವಾರಾಹೀ, ವೈಷ್ಣವೀ, ಗೌರೀ, ನಾರಸಿಂಹೀ, ಸದಾಶಿವನ ಶಕ್ತಿ ಇವುಗಳೂ, ಇನ್ನೂ ನನ್ನ ಇತರ ಶಕ್ತಿಗಳೂ ಸೇರಿ ನಿಮ್ಮ ಭಯವನ್ನು ಹೋಗಲಾಡಿಸುವರು. ಎಲೈ ಕಮಲದಲ್ಲಿ ಹುಟ್ಟಿದ ಬ್ರಹ್ಮನೇ, ನಿನ್ನ ಕೆಲಸವನ್ನು ನೀನು ಮಾಡು.

**ನವಾಕ್ಷರಮಿಮಂ ಮಂತ್ರಂ ಬೀಜಧ್ಯಾನಯುತಂ ಸದಾ ।**
**ಜಪನ್ ಸರ್ವಾಣಿ ಕಾರ್ಯಾಣಿ ಕುರು ತ್ವಂ ಕಮಲೋದ್ಭವ ॥೪೭॥**

ಈಗ ರುದ್ರನಿಗೆ ಉಪದೇಶಿಸಿದ ನನ್ನ ನವಾಕ್ಷರೀಮಂತ್ರವನ್ನು ಬೀಜ, ಮಂತ್ರ, ಧ್ಯಾನಗಳೊಡನೆ ಯಾವಾಗಲೂ ಜಪಿಸುತ್ತಾ, ಎಲೈ ಬ್ರಹ್ಮನೇ, ಎಲ್ಲ ಕಾರ್ಯಗಳನ್ನೂ ನೆರವೇರಿಸು.

**ಮಂತ್ರಾಣಾಮುತ್ತಮೋಽಯಂ ವೈ ತ್ವಂ ಜಾನೀಹಿ ಮಹಾಮತೇ ।**
**ಹೃದಯೇ ತೇ ಸದಾ ಧಾರ್ಯಃ ಸರ್ವಕಾಮಾರ್ಥಸಿದ್ಧಯೇ ॥೪೮॥**

ತುಂಬ ಬುದ್ಧಿವಂತನಾದ ಎಲೈ ಬ್ರಹ್ಮನೇ, ಈ ಮಂತ್ರವು ಇತರ ಎಲ್ಲಾ ಮಂತ್ರಗಳಿಗಿಂತಲೂ ತುಂಬ ಶ್ರೇಷ್ಠವಾದುದು ಎಂದು ತಿಳಿ. ಆದುದರಿಂದ ಈ

ಮಂತ್ರವನ್ನು ಮನಸ್ಸಿನಲ್ಲಿ ಯಾವಾಗಲೂ ಧರಿಸಿರಬೇಕು. ಅದರಿಂದ ಎಲ್ಲ ಕೆಲಸಗಳೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳೂ ಸಿದ್ಧಿಸುವುವು.

**ಇತ್ಯುಕ್ತ್ವಾ ಮಾಂ ಜಗನ್ಮಾತಾ ಹರಿಂ ಪ್ರಾಹ ಶುಚಿಸ್ಮಿತಾ ।**
**ವಿಷ್ಣೋ ವ್ರಜ ಗೃಹಾಣೇಮಾಂ ಮಹಾಲಕ್ಷ್ಮೀಂ ಮನೋಹರಾಂ ॥೪೯॥**

ಹೀಗೆ ನನ್ನನ್ನು ಕುರಿತು ಹೇಳಿ, ಜಗತ್ತಿಗೆ ಮಾತೆಯಾದ ಆ ದೇವಿಯು ತಿರುಗಿ ವಿಷ್ಣುವನ್ನು ಕುರಿತು ಹೇಳಿದಳು--ಓ ವಿಷ್ಣುವೇ, ಮನಸ್ಸಿಗೆ ಸಂತೋಷವನ್ನುಂಟುಮಾಡುವ ಈ ಮಹಾಲಕ್ಷ್ಮಿಯನ್ನು ನೀನು ಸ್ವೀಕರಿಸಿ ಹೊರಡು.

**ಸದಾ ವಕ್ಷಃಸ್ಥಲೇ ಸ್ಥಾನೇ ಭವಿತಾ ನಾತ್ರ ಸಂಶಯಃ ।**
**ಕ್ರೀಡಾರ್ಥಂ ತೇ ಮಯಾ ದತ್ತಾ ಶಕ್ತಿಃ ಸರ್ವಾರ್ಥದಾ ಶಿವಾ ॥೫೦॥**

ಇವಳು ನಿನ್ನ ಹೃದಯದಲ್ಲಿ ಯಾವಾಗಲೂ ನೆಲಸಿರುವಳು. ಇದರಲ್ಲಿ ಸಂಶಯವಿಲ್ಲವು. ಎಲ್ಲ ಕೋರಿಕೆಗಳನ್ನೂ ಪೂರಯಿಸತಕ್ಕ ಮತ್ತು ಮಂಗಳರೂಪಳಾದ ಈ ಶಕ್ತಿಯನ್ನು ನಿನಗೆ ವಿಹಾರಕ್ಕೋಸ್ಕರ ಕೊಟ್ಟಿರುತ್ತೇನೆ.

**ತ್ವಯೇಯಂ ನಾವಮಂತವ್ಯಾ ಮಾನನೀಯಾ ಚ ಸರ್ವದಾ ।**
**ಲಕ್ಷ್ಮೀನಾರಾಯಣಾಖ್ಯೋಯಂ ಯೋಗೋ ವೈ ವಿಹಿತೋ ಮಯಾ ॥೫೧॥**

ಇವಳನ್ನು ನೀನು ತಿರಸ್ಕರಿಸಬಾರದು. ಯಾವಾಗಲೂ ಗೌರವಿಸಬೇಕು. ಲಕ್ಷ್ಮೀ ಮತ್ತು ನಾರಾಯಣರ ಈ ಅತಿಶಯದ ಸಂಬಂಧವು ನನ್ನಿಂದಲೇ ಮಾಡಲ್ಪಟ್ಟಿರುತ್ತದೆ. ಇದೊಂದು ಸುಯೋಗವಿಶೇಷವು.

**ಜೀವನಾರ್ಥಂ ಕೃತಾ ಯಜ್ಞಾ ದೇವಾನಾಂ ಸರ್ವಥಾ ಮಯಾ ।**
**ಅವಿರೋಧೇನ ಸಂಗೇನ ವರ್ತಿತವ್ಯಂ ತ್ರಿಭಿಃ ಸದಾ ॥೫೨॥**

ದೇವತೆಗಳ ಜೀವನಕ್ಕಾಗಿ ಯಜ್ಞಗಳನ್ನು ಕಲ್ಪಿಸಿರುತ್ತೇನೆ. ನೀವು ಮೂರು ಜನಗಳೂ ಯಾವಾಗಲೂ ವಿರೋಧವಿಲ್ಲದಂತೆ ಸಹಕಾರಸಂಬಂಧದಿಂದ ಇರಬೇಕು.

**ತ್ವಂ ಚ ವೇಧಾಃ ಶಿವಸ್ತ್ವೇತೇ ದೇವಾ ಮದ್ಗುಣಸಂಭವಾಃ ।**
**ಮಾನ್ಯಾಃ ಪೂಜ್ಯಾಶ್ಚ ಸರ್ವೇಷಾಂ ಭವಿಷ್ಯಂತಿ ನ ಸಂಶಯಃ ॥೫೩॥**

ನೀನೂ ಬ್ರಹ್ಮನೂ, ಈಶ್ವರನೂ ಮತ್ತೆ ಎಲ್ಲ ದೇವತೆಗಳೂ ನನ್ನ ಗುಣಗಳಿಂದಲೇ ಹುಟ್ಟಿನವರು. ಆದುದರಿಂದ ನೀವೆಲ್ಲರೂ ಲೋಕದಲ್ಲಿ ಗೌರವಶಾಲಿಗಳೂ, ಎಲ್ಲರಿಂದಲೂ ಪೂಜಿಸಲ್ಪಡಲು ಯೋಗ್ಯರೂ ಆಗುವಿರಿ. ಇದರಲ್ಲಿ ಸಂಶಯವಿಲ್ಲವು.

**ಯೇ ವಿಭೇದಂ ಕರಿಷ್ಯಂತಿ ಮಾನವಾ ಮೂಢಚೇತಸಃ ।**
**ನಿರಯಂ ತೇ ಗಮಿಷ್ಯಂತಿ ವಿಭೇದಾನ್ನಾತ್ರ ಸಂಶಯಃ ॥೫೪॥**

ನಿಮ್ಮ ಮೂವರಿಗೂ ಪರಸ್ಪರ ಹೆಚ್ಚು ಕಡಿಮೆ ಎಂದು ಮುಂತಾದ ಭೇದವನ್ನು ಯಾರು ಮಾಡುತ್ತಾರೋ ತಿಳಿವಳಿಕೆಯಿಲ್ಲದ ಆ ಮೂರ್ಖರು ನರಕವನ್ನು ಪಡೆಯುತ್ತಾರೆ. ಇದರಲ್ಲಿ ಸಂಶಯವಿಲ್ಲವು.

**ಯೋ ಹರಿಃ ಸ ಶಿವಃ ಸಾಕ್ಷಾದ್ಯಃ ಶಿವಃ ಸ ಸ್ವಯಂ ಹರಿಃ ।**
**ಏತಯೋರ್ಭೇದಮಾತಿಷ್ಠನ್ನರಕಾಯ ಭವೇನ್ನರಃ ॥೫೫॥**

ಈ ಹರಿಯೇ ಶಿವನು. ಈ ಶಿವನೇ ಸಾಕ್ಷಾತ್ ಹರಿಯು. ಇವರಿಬ್ಬರಲ್ಲಿ ಮೇಲು ಕೀಳೆಂಬ ಭೇದವನ್ನು ಕಲ್ಪಿಸಿ ವ್ಯವಹರಿಸುವವನು ನರಕವನ್ನು ಪಡೆಯುತ್ತಾನೆ.

**ತಥೈವ ದ್ರುಹಿಣೋ ಜ್ಞೇಯೋ ನಾತ್ರ ಕಾರ್ಯಾ ವಿಚಾರಣಾ ।**
**ಅಪರೋ ಗುಣಭೇದೋಽಸ್ತಿ ಶೃಣು ವಿಷ್ಣೋ ಬ್ರವೀಮಿ ತೇ ॥೫೬॥**

ಅದರಂತೆ ಬ್ರಹ್ಮನೂ ವಿಷ್ಣುಶಿವರಿಂದ ಭಿನ್ನನಲ್ಲವು. ಇದರಲ್ಲಿ ವಿಮರ್ಶೆ ಮಾಡತಕ್ಕ ಅವಶ್ಯಕತೆ ಇಲ್ಲವು. ಆದರೆ ನಿಮಗೆ ಪರಸ್ಪರ ಗುಣದಿಂದ ಬಂದಿರತಕ್ಕ ಭೇದವಿರುತ್ತದೆ. ಎಲೈ ವಿಷ್ಣುವೇ ಕೇಳು, ಅದನ್ನು ನಿನಗೆ ಹೇಳುತ್ತೇನೆ.

**ಮುಖ್ಯಃ ಸತ್ತ್ವಗುಣಸ್ತೇಽಸ್ತು ಪರಮಾತ್ಮವಿಚಿಂತನೇ ।**
**ಗೌಣತ್ವೇಽಪಿ ಪರೌ ಖ್ಯಾತೌ ರಜೋಗುಣತಮೋಗಣೌ ॥೫೭॥**

ನಿನಗೆ ಪರಮಾತ್ಮನನ್ನು ಧ್ಯಾನಿಸುವುದರಲ್ಲಿ ಸತ್ತ್ವಗುಣವೇ ಮುಖ್ಯಗುಣವಾಗಲಿ. ಉಳಿದ ರಜಸ್ಸು ಮತ್ತು ತಮಸ್ಸುಗಳೆಂಬ ಗುಣಗಳು ನಿನಗೆ ಮುಖ್ಯವಲ್ಲವಾದರೂ ಅವೂ ನಿನಗೆ ತುಂಬ ಆವಶ್ಯಕ ಮತ್ತು ಶ್ರೇಷ್ಠವಾದವುಗಳೆಂದು ತಿಳಿ.

**ಲಕ್ಷ್ಮ್ಯಾ ಸಹ ವಿಕಾರೇಷು ನಾನಾಭೇದೇಷು ಸರ್ವದಾ ।**
**ರಜೋಗುಣಯುತೋ ಭೂತ್ವಾ ವಿಹರಸ್ವಾನಯಾ ಸಹ ॥೫೮॥**

ಲಕ್ಷ್ಮಿಯೊಂದಿಗೆ ಅನೇಕ ಬಗೆಯಾದ ವಿಹಾರ ಮತ್ತು ಧರ್ಮರಕ್ಷಣಕಾರ್ಯಗಳನ್ನು ಮಾಡುವ ಕಾಲಗಳಲ್ಲಿ ರಜೋಗುಣದಿಂದ ಕೂಡಿ ಇವಳೊಡನೆ ಕ್ರೀಡಿಸು.

**ವಾಗ್ಬೀಜಂ ಕಾಮರಾಜಂ ಚ ಮಾಯಾಬೀಜಂ ತೃತೀಯಕಂ ।**
**ಮಂತ್ರೋಽಯಂ ತ್ವಂ ರಮಾಕಾಂತ ಮದ್ದತ್ತಃ ಪರಮಾರ್ಥದಃ ॥೫೯॥**

ವಾಙ್ಮಯಕ್ಕೆ ಬೀಜವಾದ ವರ್ಣಮಂತ್ರವುಳ್ಳ, ಮತ್ತು ಕಾಮರಾಜಮಂತ್ರ, ಮಾಯಾಬೀಜಮಂತ್ರ ಇವುಗಳುಳ್ಳ, ಈ ಮಂತ್ರವು ನನ್ನಿಂದ ಕೊಡಲ್ಪಟ್ಟಿದೆ. ಎಲೈ ಲಕ್ಷ್ಮಿಯ ಪತಿಯಾದ ವಿಷ್ಣುವೇ, ಈ ಮಂತ್ರವು ಎಲ್ಲ ಉತ್ತಮವಾದ ಇಷ್ಟಾರ್ಥವನ್ನೂ ನೆರವೇರಿಸುವುದು.

**ಗೃಹೀತ್ವಾ ಜಪ ತಂ ನಿತ್ಯಂ ವಿಹರಸ್ವ ಯಥಾಸುಖಂ ।**
**ನ ತೇ ಮೃತ್ಯುಭಯಂ ವಿಷ್ಣೋ ನ ಕಾಲಪ್ರಭವಂ ಭಯಂ ॥೬೦॥**

ಓ ವಿಷ್ಣುವೇ, ಈ ಮಂತ್ರವನ್ನು ಸ್ವೀಕರಿಸಿ ನಿತ್ಯವೂ ಜಪಿಸು. ನಿನಗೆ ಸುಖವಾಗುವಂತೆ ವಿಹರಿಸು. ಈ ಮಂತ್ರದ ಉಚ್ಚಾರಣೆಯಿಂದ ನಿನಗೆ ಮರಣದ ಹೆದರಿಕೆಯಿಲ್ಲವು. ಅಲ್ಲದೆ ಪ್ರಳಯಕಾಲದ ಮತ್ತು ಯಮನ ಭಯವೂ ಉಂಟಾಗಲಾರದು.

**ಯಾವದೇಷ ವಿಹಾರೋ ಮೇ ಭವಿಷ್ಯತಿ ಸುನಿಶ್ಚಯಃ ।**
**ಸಂಹರಿಷ್ಯಾಮ್ಯಹಂ ಸರ್ವಂ ಯದಾ ವಿಶ್ವಂ ಚರಾಚರಂ ॥೬೧॥**

ಈ ನನ್ನ ಪ್ರಪಂಚದಲ್ಲಿ ವ್ಯವಹಾರರೂಪವಾದ ಆಟವು ಯಾವಾಗ ಮುಗಿಯುವುದೋ ಮತ್ತು ನಾನು ಯಾವಾಗ ಈ ಎಲ್ಲ ಜಗತ್ತನ್ನೂ ಉಪಸಂಹರಿಸುವೆನೋ

**ಭವಂತೋಽಪಿ ತದಾ ನೂನಂ ಮಯಿ ಲೀನಾ ಭವಿಷ್ಯಥ ।**
**ಸ್ಮರ್ತವ್ಯೋಽಯಂ ಸದಾ ಮಂತ್ರಃ ಕಾಮದೋ ಮೋಕ್ಷದಸ್ತಥಾ ॥೬೨॥**

ಆಗ ನೀವೂ ಕೂಡ ನನ್ನಲ್ಲಿಯೇ ಐಕ್ಯರಾಗುವಿರಿ. ಅಲ್ಲಿಯವರಿವಿಗೂ ನಾನು ಉಪದೇಶಿಸಿದ, ಎಲ್ಲ ಇಷ್ಟಾರ್ಥವನ್ನೂ ಕೊಡುವ, ಹಾಗೆಯೇ ಕಡೆಗೆ ಮುಕ್ತಿಯನ್ನು ಪಡೆಯಿಸುವ ಈ ಮಂತ್ರವನ್ನು ನೀವು ಮರೆಯದೆ ಬಿಡದೆ ಧ್ಯಾನಿಸುತ್ತಿರಬೇಕು.

**ಉದ್ಗೀಥೇನ ಚ ಸಂಯುಕ್ತಃ ಕರ್ತವ್ಯಃ ಶುಭಮಿಚ್ಛತಾ ।**
**ಕಾರಯಿತ್ವಾಥ ವೈಕುಂಠಂ ವಸ್ತವ್ಯಂ ಪುರುಷೋತ್ತಮ ॥೬೩॥**

ಒಳ್ಳೆಯದಾಗಬೇಕೆನ್ನುವ ಪ್ರತಿಯೊಬ್ಬನೂ ಈ ಮಂತ್ರವನ್ನು ಓಂಕಾರ ಪೂರ್ವಕವಾಗಿ ಜಪಿಸಬೇಕು. ಪುರುಷರಲ್ಲಿ ಉತ್ತಮನಾದ ಓ ವಿಷ್ಣುವೇ, ನೀನು ವೈಕುಂಠಲೋಕವನ್ನು ಮಾಡಿಸಿಕೊಂಡು ಅಲ್ಲಿ ವಾಸವಾಗಿರು.

**ವಿಹರಸ್ವ ಯಥಾಕಾಮಂ ಚಿಂತಯನ್ಮಾಂ ಸನಾತನೀಂ ॥**

ಅಲ್ಲಿ ನಿಮ್ಮೆಲ್ಲರಿಗೂ ಮೊದಲಿನವಳಾದ ನನ್ನನ್ನು ಧ್ಯಾನಿಸುತ್ತಾ ಬೇಕಾದಂತೆ ವಿಹರಿಸುತ್ತಿರು.

॥ ಬ್ರಹ್ಮೋವಾಚ ॥

**ಇತ್ಯುಕ್ತ್ವಾ ವಾಸುದೇವಂ ಸಾ ತ್ರಿಗುಣಾ ಪ್ರಕೃತಿಃ ಪರಾ ॥೬೪॥**
**ನಿರ್ಗುಣಾ ಶಂಕರಂ ದೇವಮವೋಚದಮೃತಂ ವಚಃ ।**

ಹೀಗೆ ವಿಷ್ಣುವನ್ನು ಕುರಿತು ಹೇಳಿ ಸತ್ತ್ವ ರಜಸ್ಸು ತಮಸ್ಸುಗಳೆಂಬ ಮೂರು ಗುಣಗಳುಳ್ಳ, ಜಗತ್ತಿಗೆ ಆದಿಕಾರಣಳಾದ ಮತ್ತು ವಾಸ್ತವಸ್ವರೂಪದಲ್ಲಿ ಆ ಸತ್ತ್ವವೇ ಮೊದಲಾದ ಗುಣಗಳ ಸಂಬಂಧವಿಲ್ಲದ ಆ ದೇವಿಯು ತಿರುಗಿ ಜ್ಞಾನಜ್ಯೋತಿಯ ಪ್ರಕಾಶಸ್ವರೂಪನಾದ ಶಂಕರನನ್ನು ಕುರಿತು ಅಮೃತದಂತೆ ಮನೋಹರವಾದ ವಾಕ್ಯಗಳನ್ನು ಹೀಗೆ ಹೇಳಿದಳು.

॥ ದೇವ್ಯುವಾಚ ॥

**ಗೃಹಾಣ ಹರ ಗೌರೀಂ ತ್ವಂ ಮಹಾಕಾಲೀಂ ಮನೋಹರಾಂ ॥೬೫॥**

ಎಲೈ ಈಶ್ವರನೇ, ತುಂಬಾ ಶುಭ್ರವಾದ ಕಾಂತಿಯುಳ್ಳ, ಸುಂದರಿಯಾದ ಮತ್ತು ಮನಸ್ಸನ್ನು ಆಕರ್ಷಿಸಿ ಅಪಹರಿಸುವ ಈ ಮಹಾಕಾಲಿಯನ್ನು ನೀನು ಸ್ವೀಕರಿಸು. ಇಲ್ಲಿ ಮಹಾಕಾಲನೆಂದರೆ ಈಶ್ವರನು. ಅವನ ಹೆಂಡತಿಯು ಮಹಾ ಕಾಲಿಯೆಂದು ಶಬ್ದಾರ್ಥವು.

**ಕೈಲಾಸಂ ಕಾರಯಿತ್ವಾ ಚ ವಿಹರಸ್ವ ಯಥಾಸುಖಂ ।**
**ಮುಖ್ಯಸ್ತಮೋಗುಣಸ್ತೇऽಸ್ತು ಗೌಣೌ ಸತ್ತ್ವರಜೋಗುಣೌ ॥೬೬॥**

ನೀನು ಕೈಲಾಸಪರ್ವತವನ್ನು ವಾಸಸ್ಥಾನವಾಗಿ ಮಾಡಿಕೊಂಡು ಸುಖವಾಗಿ ವಿಹರಿಸು. ನಿನ್ನಲ್ಲಿ ತಮೋಗುಣವೇ ಪ್ರಧಾನವಾಗಿ ಇರಲಿ. ನಿನಗೆ ಉಳಿದ ಸತ್ತ್ವ ಮತ್ತು ರಜೋಗುಣಗಳು ಮುಖ್ಯಗಳಾಗಿಲ್ಲದೆ ಸಹಾಯಕಗಳು ಆಗಿರಲಿ.

**ವಿಹಾರಾಸುರನಾಶಾರ್ಥಂ ರಜೋಗುಣತಮೋಗುಣೌ ।**
**ತಪಸ್ತಪ್ತುಂ ತಥಾ ಕರ್ತುಂ ಸ್ಮರಣಂ ಪರಮಾತ್ಮನಃ ॥೬೭॥**

ಓ ಈಶ್ವರನೇ, ಕ್ರೀಡೆ ಮತ್ತು ರಾಕ್ಷಸರ ಸಂಹಾರ ಇವುಗಳಿಗಾಗಿ ರಜಸ್ಸು ಮತ್ತು ತಮಸ್ಸುಗಳೆಂಬ ಗುಣಗಳು ಬೇಕು. ಹಾಗೆಯೇ ತಪಸ್ಸನ್ನಾಚರಿಸಲೂ, ಪರಮಾತ್ಮನ ಸ್ಮರಣೆಯನ್ನು ಮಾಡುವುದಕ್ಕೂ, .

**ಶರ್ವ ಸತ್ತ್ವಗುಣಃ ಶಾಂತೋ ಗೃಹೀತವ್ಯಃ ಸದಾನಘ ।**
**ಸರ್ವಥಾ ತ್ರಿಗುಣಾ ಯೂಯಂ ಸೃಷ್ಟಿಸ್ಥಿತ್ಯಂತಕಾರಕಾಃ ॥೬೮॥**

ಓ ಶಿವನೇ, ಶಾಂತಿಸ್ವರೂಪವಾದ ಸತ್ತ್ವಗುಣವನ್ನೇ ಸ್ವೀಕರಿಸಬೇಕು. ಪ್ರಧಾನವಾಗಲಿ, ಇಲ್ಲದಿರಲಿ ಹೇಗಾದರೂ ನೀವು ಮೂವರೂ ಸತ್ತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳಿಂದಲೂ ಕೂಡಿಯೇ ಸೃಷ್ಟಿ, ಪಾಲನೆ, ಸಂಹಾರ, ಇವುಗಳನ್ನು ನೀವು ಕ್ರಮವಾಗಿ ಮಾಡುತ್ತಿರಲು ಶಕ್ತರಾಗಿರುವಿರಿ.

**ಏಭಿರ್ವಿಹೀನಂ ಸಂಸಾರೇ ವಸ್ತು ನೈವಾತ್ರ ಕುತ್ರಚಿತ್ ।**
**ವಸ್ತುಮಾತ್ರಂ ತು ಯದ್ದೃಶ್ಯಂ ಸಂಸಾರೇ ತ್ರಿಗುಣಂ ಹಿ ತತ್ ॥೬೯॥**

ಈ ಮೂರು ಗುಣಗಳಿಂದ ಬಿಡಲ್ಪಟ್ಟ ಯಾವ ವಸ್ತುವೂ ಈ ಪ್ರಪಂಚದಲ್ಲಿ ಇಲ್ಲವು. ಕಣ್ಣಿಗೆ ಕಾಣುವ ಎಲ್ಲ ವಸ್ತುಗಳೂ ಈ ಚರಾಚರ ಜಗತ್ತಿನ ವ್ಯವಹಾರದಲ್ಲಿ ಈ ಮೂರು ಗುಣಗಳಿಂದ ಕೂಡಿಯೇ ಇರುತ್ತವೆ.

**ದೃಶ್ಯಂ ಚ ನಿರ್ಗುಣಂ ಲೋಕೇ ನ ಭೂತಂ ನೋ ಭವಿಷ್ಯತಿ ।**
**ನಿರ್ಗುಣಃ ಪರಮಾತ್ಮಾsಸೌ ನ ತು ದೃಶ್ಯಃ ಕದಾಚನ ॥೭೦॥**

ಈ ಪ್ರಪಂಚದಲ್ಲಿ ಕಣ್ಣಿಗೆ ಕಾಣುವಂತಹ ಯಾವ ಪದಾರ್ಥವೂ ಈವರೆಗೆ ಈ ಗುಣಗಳಿಂದ ರಹಿತವಾಗಿ ಹುಟ್ಟಿಲ್ಲವು. ಇನ್ನು ಮುಂದೆ ಹುಟ್ಟುವುದೂ ಇಲ್ಲವು. ಈ ಗುಣಗಳ ಸಂಬಂಧವಿಲ್ಲದವನು ಪರಮಾತ್ಮನೊಬ್ಬನೇ. ಆದುದರಿಂದಲೇ ಅವನು ಯಾವಾಗಲೂ ಕಣ್ಣು ಮೊದಲಾದ ಇಂದ್ರಿಯಗಳಿಗೆ ಗೋಚರಿಸತಕ್ಕವನಲ್ಲವು.

**ಸಗುಣಾ ನಿರ್ಗುಣಾ ಚಾಹಂ ಸಮಯೇ ಶಂಕರೋತ್ತಮಾ ।**
**ಸದಾಹಂ ಕಾರಣಂ ಶಂಭೋ ನ ಚ ಕಾರ್ಯಂ ಕದಾಚನ ॥೭೧॥**

ಸುಖಕ್ಕೆ ಕಾರಣನಾದ ಓ ಶಂಭುವೇ, ಆದರೆ ನಾನು ಈ ಜಗತ್ತಿನ ಸೃಷ್ಟಿ-ಸ್ಥಿತಿಗಳ ಸಮಯದಲ್ಲಿ ತ್ರಿಗುಣಗಳ ಸಂಬಂಧವುಳ್ಳವಳೂ ಮತ್ತು ಪ್ರಳಯದ ಎಂದರೆ ಗುಣತ್ರಯಸಾಮ್ಯಾವಸ್ಥಾರೂಪವಾದ ಸಮಾಧಿಯ ಕಾಲದಲ್ಲಿ ಆ ಗುಣಗಳಿಂದ ಬಿಡಲ್ಪಟ್ಟವಳೂ ಆಗಿರುತ್ತೇನೆ. ಶ್ರೇಷ್ಠನಾದ ಓ ಶಂಕರನೇ, ನಾನು ಜಗತ್ತನ್ನು ಹುಟ್ಟಿಸುವ ಕಾರಣರೂಪಳೇ ವಿನಾ ನಾನು ಹುಟ್ಟತಕ್ಕ ಕಾರ್ಯರೂಪಳಲ್ಲವು. ನಾನು ಅನಾದಿಯಾಗಿಯೂ ನಿತ್ಯಳಾಗಿಯೂ ಇರುತ್ತೇನೆ. ಆದುದರಿಂದ ನಾನು ಯಾವಾಗಲೂ ಕಾರಣರೂಪಳೇ ಹೊರತು ನನಗೆ ಕಾರಣವಾದ ಬೇರೊಂದು ವಸ್ತುವಿಲ್ಲವು.

**ಸಗುಣಾ ಕಾರಣತ್ವಾದ್ವೈ ನಿರ್ಗಣಾ ಪುರುಷಾಂತಿಕೇ ।**
**ಮಹತ್ತತ್ತ್ವಮಹಂಕಾರೋ ಗುಣಾಃ ಶಬ್ದಾದಯಸ್ತಥಾ ॥೭೨॥**

ಸತ್ತ್ವರಜಸ್ತಮೋಗುಣಗಳಲ್ಲಿ ಯಾವುದಾದರೂ ಒಂದು ಗುಣವು ಮುಂದಾಗಿ ಉಳಿದ ಎರಡೂ ಹಿಂದಾಗಿದ್ದರೆ ಇಂತಹ ಸ್ಥಿತಿಗೆ ವಿಷಮಸ್ಥಿತಿ ಎಂದೂ ಆ ಮೂರು ಗುಣಗಳೂ ಒಂದೇ ಸಮನಾಗಿದ್ದರೆ ಅದಕ್ಕೆ ಸಾಮ್ಯಾವಸ್ಥೆ ಎಂದೂ ಹೆಸರು. ಈ ವೈಷಮ್ಯದ ಅವಸ್ಥೆಯಲ್ಲಿ ಅನಂತವಾಗಿ ಪರಿಣಾಮಗಳಾಗುತ್ತವೆ. ಆಯಾ ಪ್ರಾಣಿಗಳ ಕರ್ಮಾನುಸಾರವಾಗಿ ಪದಾರ್ಥಗಳು ನಾನಾಬಗೆಯಲ್ಲಿ ಉಂಟಾಗುತ್ತಿರುತ್ತವೆ. ತ್ರಿಗುಣಾತ್ಮಕವೂ ಪರಿಣಾಮಶೀಲವೂ ಆಗಿರುವ ಮೂಲಪ್ರಕೃತಿ ಅಥವಾ ಮಹಾಮಾಯೆಯು ಪರಮಾತ್ಮನಿಗೆ ಉಪಾಧಿಯೂ, ಈ ಜಗತ್ತಿಗೆ ಉಪಾದಾನಕಾರಣವೂ ಆಗಿದೆ.

ಆದರೆ, ಮಹಾಮಾಯಾಸ್ವರೂಪಳಾದ ನನಗೆ ಯಾವಾಗಲೂ ನಿರ್ಗುಣತ್ವವೇ ನಿಯತವಲ್ಲವು. ಮತ್ತೇನೆಂದರೆ, ಸೃಷ್ಟಿಗೆ ಅಭಿಮುಖನಾದ ಪರಮಾತ್ಮನ ಸಾನ್ನಿಧ್ಯದಿಂದ ನಾನು ಈ ಚರಾಚರ ಜಗತ್ತಿಗೆ ಕಾರಣಳಾಗುವುದರಿಂದ ಗುಣಗಳ ಸಂಬಂಧವುಳ್ಳವಳೂ, ನಿರ್ಗುಣನಾದ ಎಂದರೆ ಸೃಷ್ಟಿಗೆ ವಿಮುಖನಾಗಿರುವ ಪುರುಷನ ವಿಷಯದಲ್ಲಿ ಗುಣಗಳ ಸಂಬಂಧವಿಲ್ಲದವಳೂ ಆಗಿರುತ್ತೇನೆ. ಪ್ರಾಣಿಕರ್ಮವಶದಿಂದ ಸೃಷ್ಟಿಯು ಆಗುವಾಗ ಮಹಾಮಾಯಾಸ್ವರೂಪಳಾದ ನನ್ನಿಂದ ಮಹತ್ತತ್ತ್ವ, ಅಹಂಕಾರ ಮತ್ತು ಶಬ್ದಸ್ಪರ್ಶರೂಪರಸಗಂಧ ಮೊದಲಾದ ಗುಣಗಳು ಕ್ರಮವಾಗಿ ಉಂಟಾಗುತ್ತವೆ.

**ಕಾರ್ಯಕಾರಣರೂಪೇಣ ಸಂಸರಂತೇ ತ್ವಹರ್ನಿಶಂ ।**

ಮೇಲೆ ಹೇಳಿದ ವಸ್ತುಗಳಲ್ಲಿ ಮೊದಲು ಹೇಳಿರುವವು ಮುಂದುಮುಂದಿನ ವಸ್ತುಗಳಿಗೆ ಕಾರಣಗಳು. ಆಮೇಲೆ ಹೇಳಿರುವುವು ಕಾರ್ಯಗಳು. ಹೀಗೆ ಈ ಪ್ರಪಂಚ ದಲ್ಲಿರುವ ಎಲ್ಲ ಪದಾರ್ಥಗಳೂ ಕಾರ್ಯಕಾರಣಸಂಬಂಧವುಳ್ಳವುಗಳಾಗಿ ಉಂಟಾಗಿ ಪರಿಣಮಿಸುತ್ತಾ ಹಗಲಿರುಳುಗಳಲ್ಲಿಯೂ ಎಡಬಿಡದೆ ಮುಂದುವರಿಯುತ್ತಿರುತ್ತವೆ. ಗುಣಗಳು ವೈಷಮ್ಯದಿಂದ ಉದ್ಭೂತರೂಪವನ್ನು ಪಡೆದು, ಒಂದು ಗುಣವು ಉಳಿದ ಎರಡನ್ನೂ ಮೆಟ್ಟಿ ಮುಂದಾದಾಗ ಸೃಷ್ಟಿಯಾಗುತ್ತದೆ. ಆಗ ಶಕ್ತಿರೂಪಳಾದ ದೇವಿಯು ಸಗುಣಳು. ಸಾಮ್ಯಾವಸ್ಥೆಯಲ್ಲಿ ಗುಣಗಳು ಅಡಗಿರುವಾಗ ಅವು ಅನುದ್ಭೂತಸ್ಥಿತಿಯಲ್ಲಿರಲು ಆಗ ಶಕ್ತಿರೂಪಳಾದ ದೇವಿಯು ನಿರ್ಗುಣಳೂ ಆಗಿರುತ್ತಾ ಬ್ರಹ್ಮಚೈತನ್ಯಕ್ಕಿಂತ ಬೇರೆ ತೋರದೆ ಅವಿನಾಭಾವದಿಂದಲೂ ಅಪೃಥಗ್ರೂಪದಿಂದಲೂ ಬ್ರಹ್ಮಾಭಿನ್ನಳಾಗಿರುತ್ತಾಳೆಂದು ಭಾವವು.

**ಸದುದ್ಭೂತಸ್ತ್ವಹಂಕಾರಸ್ತೇನಾಹಂ ಕಾರಣಂ ಶಿವಾ** ॥೭೩॥

ಅಹಂಕಾರತತ್ತ್ವವು ಸದ್ವಸ್ತುವಿನಿಂದ ಉಂಟಾಗುತ್ತದೆ. ಆದುದರಿಂದ ಮಹಾ ಮಾಯಾಸ್ವರೂಪಳೂ, ಪರಾಶಕ್ತಿಸ್ವರೂಪಳೂ, ಮಂಗಳಕರಳೂ, ಆದ ನಾನು ಎಲ್ಲಕ್ಕೂ ಕಾರಣಳಾಗಿರುತ್ತೇನೆ. ಅಹಂಕಾರವು ಎರಡು ಬಗೆಯಾಗಿದೆ. ಒಂದಕ್ಕೆ ಪರಾಹಂಕಾರ ಎಂದು ಹೆಸರು. ಎರಡನೆಯದು ಮಹತ್ತತ್ತ್ವದಿಂದ ಉಂಟಾ ಗುವ ಅಹಂಕಾರವು. ಸೃಷ್ಟಿಯಾಗುವಾಗ ಮೊಟ್ಟಮೊದಲು ಸದ್ರೂಪವಾದ ಬ್ರಹ್ಮ ತತ್ತ್ವಕ್ಕೆ ಸಿಸೃಕ್ಷಾ, ಎಂದರೆ ಸೃಷ್ಟಿಮಾಡಬೇಕೆಂಬ ಇಚ್ಛೆಯುಂಟಾಗುತ್ತದೆ. ಆಗ ಮೊದಲು 'ಸೋ ವೇದಾಹಂ ಬ್ರಹ್ಮಾಸ್ಮಿ' ಎಂದರೆ ಆ ಬ್ರಹ್ಮತತ್ತ್ವವು—ನಾನು ಸದ್ರೂಪವಾದ ಬ್ರಹ್ಮತತ್ತ್ವವೆಂದು ತಿಳಿಯುತ್ತದೆ. ಆಗ ನಾನು ಇದ್ದೇನೆ ಎಂಬ ವೃತ್ತಿಯುಂಟಾಗುತ್ತದೆ, ಎಂದು ಬೃಹದಾರಣ್ಯಕದಲ್ಲಿ ಹೇಳಿದೆ. 'ಸದೇವ ಸೌಮ್ಯೇದ ಮಗ್ರ ಆಸೀತ್' ಎಂದು ಛಾಂದೋಗ್ಯೋಪನಿಷತ್ತಿನಲ್ಲೂ ಹೇಳಿರುವ ಸತ್ತತ್ತ್ವವೂ ಸಚ್ಚಿದಾನಂದಬ್ರಹ್ಮವೂ ಇದೇ ಆಗಿದೆ. ಆಮೇಲೆ 'ಸೋಽಕಾಮಯತ । ಬಹುಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಂ ಸರ್ವಮಸೃಜತ । ಯದಿದಂ ಕಿಂಚ । ತತ್ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನು ಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ ॥' ಎಂದು ತೈತ್ತಿರೀಯೋಪನಿಷತ್ತಿನಲ್ಲೂ, 'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ನಾನ್ಯತ್ಕಿಂಚ ನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ । ಸ ಇಮಾನ್ ಲೋಕಾನಸೃಜತ' ಎಂದು ಐತರೇಯೋಪನಿಷತ್ತಿನಲ್ಲೂ,

ಇದರಂತೆಯೇ ಕೆಲವು ವಿವರಗಳ ಹೆಚ್ಚುಕಡಿಮೆಗಳೊಡನೆ ಇತರ ಉಪನಿಷತ್ತುಗಳಲ್ಲೂ ಹೇಳಿದೆ. ಎಂದರೆ, ಆ ಬ್ರಹ್ಮವು, ನಾನು ಅನೇಕವಾಗಿ ಆಗಬೇಕು ಎಂದು ಆಲೋಚಿಸಿ, ಈ ಪ್ರಪಂಚದಲ್ಲಿ ಮುಖ್ಯಭಾಗದ ಸೃಷ್ಟಿಯನ್ನು ಸಾಕ್ಷಾತ್ತಾಗಿ ತಾನೂ, ಉಳಿದುದನ್ನು ಪರಂಪರೆಯಾಗಿ ತ್ರಿಮೂರ್ತಿಗಳೇ ಮುಂತಾದ ಇತರ ದೇವತೆಗಳಿಂದಲೂ ಒಟ್ಟು ಸೃಷ್ಟಿಯನ್ನು ನೆರವೇರಿಸಿ, ಅದೆಲ್ಲವನ್ನೂ ತಾನು ಅನುಪ್ರವೇಶಮಾಡಿ ಅದೆಲ್ಲವೂ ತಾನೇ ಆಯಿತು. ಅದು ಈ ಲೋಕಗಳನ್ನೂ, ಲೋಕಪಾಲಕರನ್ನೂ ಸೃಷ್ಟಿಸಬೇಕೆಂದೂ, ಅವರಿಗೆ ಅನ್ನವನ್ನೂ ಸೃಷ್ಟಿಸಬೇಕೆಂದೂ ಇಚ್ಛಿಸಿ, ಹಾಗೇ ಮಾಡಿ ಎಲ್ಲವನ್ನೂ ನೆರವೇರಿಸಿತು. ಎಂದು ಹೇಳಿದೆ.

ಈ ಸದ್ರೂಪವಾದ ಬ್ರಹ್ಮತತ್ತ್ವದಿಂದ ಮೊದಲು ಅಹಂಕಾರವು ಉಂಟಾಯಿತು. ಈ ಅಹಂಕಾರತತ್ತ್ವವು ಎರಡು ಬಗೆಯಾಗಿದೆ. ಬ್ರಹ್ಮಚೈತನ್ಯದ ಮೊಟ್ಟಮೊದಲಿನ ನಾನು ಎಂಬ ಅಹಂವೃತ್ತಿಗೂ ಮತ್ತು ಸೃಷ್ಟಿಕಾಮನೆಯ ಇಚ್ಛಾವೃತ್ತಿಗೂ ಪರಾಹಂತಾ ಎಂದರೆ, ಪರಾ-ಮೇಲಾದ ಅಹಂಕಾರ ಎಂದು ಹೆಸರು. ಈ ತತ್ತ್ವದಿಂದ ಮಹತ್ತತ್ತ್ವವೂ, ಅದರಿಂದ ಎರಡನೆಯ ಅಹಂಕಾರವೂ ಉಂಟಾಗುತ್ತವೆ. ಈ ಪ್ರಕ್ರಿಯೆಯು ಸಾಂಖ್ಯದರ್ಶನದ ಪ್ರಕ್ರಿಯೆಗಿಂತ ಭಿನ್ನವಾಗಿದೆ. ಭಗವದ್ಗೀತೆಯಲ್ಲಿ ಪ್ರಸಿದ್ಧವಾಗಿರುವ ಪರಪ್ರಕೃತಿ ಅಪರಪ್ರಕೃತಿ ಎಂಬ ವ್ಯವಹಾರದಂತೆ ಈ ಎರಡನೆಯ ಅಹಂಕಾರವನ್ನು ಅಪರಾಹಂಕಾರ ಅಥವಾ ಅಪರಾಹಂತಾ ಎಂದು ಹೇಳಬಹುದೆಂದು ತೋರುತ್ತದೆ.

ಮೇಲೆ ಹೇಳಿದ ಪರಾಹಂತಾತತ್ತ್ವವೇ ಬ್ರಹ್ಮಚೈತನ್ಯದ ಪರಾಶಕ್ತಿ ಅಥವಾ ಪರಾವಾಣೀ ಅಥವಾ ಪರಾವಾಕ್ ರೂಪವಾದುದು. ಇದೇ ಪ್ರಥಮಸ್ಪಂದರೂಪವಾದುದು. ಇದೇ ಪರಾಶಕ್ತಿಯ ಮೊದಲನೆಯ ವ್ಯಕ್ತಪರಿಣಾಮ ಅಥವಾ ಕಾರ್ಯವಾಗಿದೆ. ಈ ಪರಾಶಕ್ತಿ ಅಥವಾ ಮಹಾಮಾಯೆಯಿಂದ ಸಂವಳಿತವಾದ ಪರಬ್ರಹ್ಮವೇ ಹಿರಣ್ಯಗರ್ಭಬ್ರಹ್ಮವೆಂದು ವೇದಾಂತಶಾಸ್ತ್ರದೃಷ್ಟಿಯಿಂದ ಹೇಳಬಹುದು. ಈ ಪರಾಹಂತೆಯೇ ಪ್ರಥಮವಾದ ಭಾವಪದಾರ್ಥವು. ಈ ಪರಾಹಂತಾತತ್ತ್ವಕ್ಕೂ ದೇವಿಯೇ ಕಾರಣವಾಗಿದ್ದಾಳೆಂದು ತಾತ್ಪರ್ಯವು. ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂದು ಪ್ರಸಿದ್ಧವಾಗಿರುವ ಶಬ್ದತತ್ತ್ವದ ಅವ್ಯಕ್ತರೂಪವೂ ಪರಾಶಕ್ತಿಯ ಕಾರ್ಯವೇ ಆಗಿದೆ ಎಂದು ಗಮನಿಸಬೇಕು. ಈ ಅಂಶವನ್ನು ಪಂಚೋಪನಿಷತ್ತಿನಲ್ಲೂ ಸೂಚಿಸಿದೆ.

**ಅಹಂಕಾರಶ್ಚ ಮೇ ಕಾರ್ಯಂ ತ್ರಿಗುಣೋಽಸೌ ಪ್ರತಿಷ್ಠಿತಃ ।**
**ಅಹಂಕಾರಾನ್ಮಹತ್ತತ್ತ್ವಂ ಬುದ್ಧಿಃ ಸಾ ಪರಿಕೀರ್ತಿತಾ ॥೬೪॥**

ಆ ಪರಾಹಂತಾರೂಪವಾದ ಅಹಂಕಾರವೂ ಕ್ರಮವಾಗಿ ನನ್ನಿಂದಲೇ ಹುಟ್ಟು ವುದು. ಮತ್ತು ಅದು ಸತ್ತ್ವವೇ ಮೊದಲಾದ ಮೂರುಗುಣಗಳುಳ್ಳದ್ದು. ಆ ಅಹಂಕಾರದಿಂದ ಮಹತ್ತತ್ತ್ವವು ಹುಟ್ಟುತ್ತದೆ. ಮಹತತ್ತ್ವವೆಂದರೆ ಸಮಷ್ಟಿಬುದ್ಧಿ ಯೆಂದು ತಿಳಿಯಬೇಕು.

**ಮಹತ್ತತ್ತ್ವಂ ಹಿ ಕಾರ್ಯಂ ಸ್ಯಾದಹಂಕಾರೋ ಹಿ ಕಾರಣಂ ।**
**ತನ್ಮಾತ್ರಾಣಿ ತ್ವಹಂಕಾರಾದುತ್ಪದ್ಯಂತೇ ಸದೈವ ಹಿ ॥೭೫॥**

ಆದುದರಿಂದ ಆ ಪರಾಹಂತಾರೂಪವಾದ ಅಹಂಕಾರದಿಂದ ಮಹತ್ತತ್ತ್ವವು ಹುಟ್ಟುವುದು. ಅಹಂಕಾರವು ಮಹತ್ತತ್ತ್ವಕ್ಕೆ ಕಾರಣವು. ಈ ಮಹತ್ತತ್ತ್ವದಿಂದ ಎರಡನೆಯ ಅಹಂಕಾರವು ಎಂದರೆ ಅಪರಾಹಂತಾರೂಪವಾದುದು ಉಂಟಾಗುತ್ತದೆ. ಈ ಅಹಂಕಾರದಿಂದಲೇ ಪೃಥಿವೀ ಮೊದಲಾದ ಸ್ಥೂಲ ಪಂಚಭೂತಗಳಿಗೆ ಕಾರಣ ಗಳಾದ ಸೂಕ್ಷ್ಮವಾದ ಪಂಚಭೂತಗಳೆಂಬ ತನ್ಮಾತ್ರೆಗಳು ಹುಟ್ಟುತ್ತವೆ.

**ಕಾರಣಂ ಪಂಚಭೂತಾನಾಂ ತಾನಿ ಸರ್ವಸಮುದ್ಭವೇ ।**
**ಕರ್ಮೇಂದ್ರಿಯಾಣಿ ಪಂಚೈವ ಪಂಚ ಜ್ಞಾನೇಂದ್ರಿಯಾಣಿ ಚ ॥೭೬॥**

ಆ ಐದು ಸೂಕ್ಷ್ಮಭೂತಗಳ ಪಂಚೀಕರಣದಿಂದ ಸ್ಥೂಲವಾದ ಮಹಾಭೂತ ಗಳು ಹುಟ್ಟುತ್ತವೆ. ಈ ಪೃಥಿವಿಯೇ ಮೊದಲಾದ ಮಹಾಭೂತಗಳಿಂದ ಎಲ್ಲ ವಸ್ತುಗಳ ಉತ್ಪತ್ತಿಯ ಸಮಯದಲ್ಲಿ ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬ ಕರ್ಮೇಂದ್ರಿಯಗಳೂ, ಶ್ರೋತ್ರ, ನಾಸಿಕಾ, ರಸನಾ, ತ್ವಕ್, ಚಕ್ಷುಸ್ ಎಂಬ ಜ್ಞಾನವನ್ನುಂಟುಮಾಡುವ ಐದು ಇಂದ್ರಿಯಗಳೂ ಉಂಟಾಗುತ್ತವೆ. ಪಂಚಭೂತಗಳ ಸಾತ್ತ್ವಿಕಾಂಶಗಳಿಂದ ಪಂಚಜ್ಞಾನೇಂದ್ರಿಯಗಳೂ, ರಾಜಸಾಂಶಗಳಿಂದ ಕರ್ಮೇಂದ್ರಿ ಯಗಳೂ, ಆ ಸಾತ್ತ್ವಿಕಾಂಶಗಳ ಒಟ್ಟಿನಿಂದ ಮನಸ್ಸೂ ಕ್ರಮವಾಗಿ ಉಂಟಾಗುತ್ತವೆ ಎಂದು ತಿಳಿಯಬೇಕು.

**ಮಹಾಭೂತಾನಿ ಪಂಚೈವ ಮನಃ ಷೋಡಶಮೇವ ಚ ।**
**ಕಾರ್ಯಂ ಚ ಕಾರಣಂ ಚೈವ ಗಣೋಽಯಂ ಷೋಡಶಾತ್ಮಕಃ ॥೭೭॥**

ಮೇಲೆ ಹೇಳಿದ ಕರ್ಮೇಂದ್ರಿಯಗಳು ಐದು, ಜ್ಞಾನೇಂದ್ರಿಗಳು ಐದು, ಮಹಾಭೂತಗಳು ಐದು, ಮನಸ್ಸು ಇವು ಹದಿನಾರು ಒಂದು ಗುಂಪು. ಇವುಗಳಲ್ಲಿ ಕೆಲವು ಕಾರಣಗಳಾಗಿಯೂ, ಎಲ್ಲವೂ ಕಾರ್ಯಗಳಾಗಿಯೂ ಇರುತ್ತವೆ.

**ಪರಮಾತ್ಮಾ ಪುಮಾನಾದ್ಯೋ ನ ಕಾರ್ಯಂ ನ ಚ ಕಾರಣಂ ।**
**ಏವಂ ಸಮುದ್ಭವಃ ಶಂಭೋ ಸರ್ವೇಷಾಮಾದಿಸಂಭವೇ ॥೭೮॥**

ಆದಿಪುರುಷನಾದ ಪರಮಾತ್ಮನು ಕಾರ್ಯವೂ ಎಂದರೆ ಹುಟ್ಟತಕ್ಕವನೂ ಅಲ್ಲ. ಯಾವುದೊಂದು ವಸ್ತುವನ್ನೂ ಕುರಿತು ಸಮವಾಯಿ ಕಾರಣನೂ ಅಲ್ಲ. ಓ ಶಂಭುವೇ, ಸೃಷ್ಟಿಯ ಮೊದಲಿನಲ್ಲಿ ಎಲ್ಲಕ್ಕೂ ನನ್ನಿಂದಲೇ ಉತ್ಪತ್ತಿಯು.

**ಸಂಕ್ಷೇಪೇಣ ಮಯಾ ಪ್ರೋಕ್ತಸ್ತವ ತತ್ರ ಸಮುದ್ಭವಃ ।**
**ವ್ರಜಂತ್ವದ್ಯ ವಿಮಾನೇನ ಕಾರ್ಯಾರ್ಥಂ ಮಮ ಸತ್ತಮಾಃ ॥೭೯॥**

ಎಲೈ ಶ್ರೇಷ್ಠರಾದ ಬ್ರಹ್ಮವಿಷ್ಣುಮಹೇಶ್ವರರೇ, ನಿಮಗೆ ಸಂಗ್ರಹವಾಗಿ ಸೃಷ್ಟಿ ಕ್ರಮವನ್ನು ಹೇಳಿರುತ್ತೇನೆ. ಈಗ ನೀವೆಲ್ಲರೂ ನಿಮ್ಮ ನಿಮ್ಮ ಕಾರ್ಯಗಳನ್ನು ನೆರವೇರಿಸಲು ಈ ವಿಮಾನದಿಂದಲೇ ಹೊರಡಿರಿ.

**ಸ್ಮರಣಾದ್ದರ್ಶನಂ ತುಭ್ಯಂ ದಾಸ್ಯೇಽಹಂ ವಿಷಮೇ ಸ್ಥಿತೇ ।**
**ಸ್ಮರ್ತವ್ಯಾಹಂ ಸದಾ ದೇವಾಃ ಪರಮಾತ್ಮಾ ಸನಾತನಃ ॥೮೦॥**

ಕಷ್ಟಕಾಲವು ಬಂದೊದಗಿದರೆ ನನ್ನನ್ನು ಸ್ಮರಿಸಿದಲ್ಲಿ ನಿಮಗೆ ದರ್ಶನವನ್ನು ಕೊಡುವೆನು. ಮತ್ತು ಎಲೈ ಬ್ರಹ್ಮನೇ ಮೊದಲಾದ ದೇವತೆಗಳಿರಾ, ನೀವು ನನ್ನನ್ನು ಯಾವಾಗಲೂ ಧ್ಯಾನಿಸುತ್ತಲಿರಬೇಕು. ಹಾಗೆಯೇ ಅನಾದಿಯಾದ ಪರಮಾತ್ಮನನ್ನೂ ಸ್ಮರಿಸಬೇಕು.

**ಉಭಯೋಃ ಸ್ಮರಣಾದೇವ ಕಾರ್ಯಸಿದ್ಧಿರಸಂಶಯಂ ॥**

ನಮ್ಮಿಬ್ಬರನ್ನೂ ಸ್ಮರಣೆಮಾಡುವುದರಿಂದಲೇ ನಿಶ್ಚಯವಾಗಿ ಎಲ್ಲ ಕಾರ್ಯಗಳೂ ನೆರವೇರುವುವು.

॥ ಬ್ರಹ್ಮೋವಾಚ ॥

**ಇತ್ಯುಕ್ತ್ವಾ ವಿಸಸರ್ಜಾಸ್ಮಾನ್ ದತ್ವಾ ಶಕ್ತೀಃ ಸುಸಂಸ್ಕೃತಾನ್ ॥೮೧॥**

ಬ್ರಹ್ಮನು ಹೇಳಿದನು— ಹೀಗೆ ತಿಳಿಯಹೇಳಿ ಆ ದೇವಿಯು ಶ್ರೇಷ್ಠರಾದ ಗೌರಿಯೇ ಮೊದಲಾದ ಶಕ್ತಿಗಳನ್ನು ನಮಗೆ ಅನುಗ್ರಹಿಸಿ ನಮ್ಮನ್ನು ಬೀಳ್ಕೊಟ್ಟಳು.

**ವಿಷ್ಣವೇಽಥ ಮಹಾಲಕ್ಷ್ಮೀಂ ಮಹಾಕಾಲೀಂ ಶಿವಾಯ ಚ ।**
**ಮಹಾಸರಸ್ವತೀಂ ಮಹ್ಯಂ ಸ್ಥಾನಾತ್ತಸ್ಮಾದ್ವಿಸರ್ಜಿತಾಃ ॥೮೨॥**

ವಿಷ್ಣುವಿಗೆ ಮಹಾಲಕ್ಷ್ಮಿಯನ್ನೂ, ಶಿವನಿಗೆ ಮಹಾಕಾಲಿಯನ್ನೂ, ನನಗೆ ಮಹಾಸರಸ್ವತಿಯನ್ನೂ ಕೊಟ್ಟು ಆ ದೇವಿಯು ನಮ್ಮನ್ನು ಕಳುಹಿಸಿದಳು. ನಾವು ಆ ಸ್ಥಳವನ್ನು ಬಿಟ್ಟು ಹೊರಟೆವು.

**ಸ್ಥಲಾಂತರಂ ಸಮಾಸಾದ್ಯ ತೇ ಜಾತಾಃ ಪುರುಷಾ ವಯಂ ।**
**ಚಿಂತಯಂತಃ ಸ್ವರೂಪಂ ತತ್ಪ್ರಭಾವಂ ಪರಮಾದ್ಭುತಂ ॥೮೩॥**

ನಾವು ಅಲ್ಲಿಂದ ಹೊರಟು ಬೇರೆ ಸ್ಥಳಕ್ಕೆ ಬಂದಮೇಲೆ ಹಿಂದಿನಂತೆಯೇ ನಾವು ಪುರುಷರೂಪವುಳ್ಳವರಾದೆವು. ಮತ್ತು ಆ ದೇವಿಯ ರೂಪವನ್ನೂ ತುಂಬ ಆಶ್ಚರ್ಯಕರವಾದ ಅವಳ ಮಹಿಮೆಯನ್ನೂ ಸ್ಮರಿಸುತ್ತಾ ಇದ್ದೆವು.

**ವಿಮಾನಂ ತತ್ಸಮಾಸಾದ್ಯ ಸಂರೂಢಾಸ್ತತ್ರ ವೈ ತ್ರಯಃ ।**
**ನ ದ್ವೀಪೋಽಸೌ ನ ಸಾ ದೇವೀ ಸುಧಾಸಿಂಧುಸ್ತಥೈವ ಚ ॥**
**ಪುನರ್ದೃಷ್ಟಂ ವಿಮಾನಂ ವೈ ತತ್ರಾಸ್ಮಾಭಿರ್ನ ಚಾನ್ಯಥಾ ॥೮೪॥**

ಮೊದಲು ಏರಿಬಂದ ಆ ವಿಮಾನವನ್ನು ಸೇರಿ ನಾವು ಮೂವರೂ ಅದರಲ್ಲಿ ಹತ್ತಿ ಕುಳಿತೆವು. ಆಗ ಹಿಂತಿರುಗಿ ನೋಡಲಾಗಿ ಅಲ್ಲಿ ಆ ಮಣಿದ್ವೀಪವಾಗಲೀ, ಆ ದೇವಿಯಾಗಲೀ, ಆ ಅಮೃತಸಮುದ್ರವಾಗಲೀ ಯಾವುದೂ ಕಾಣಿಸಲಿಲ್ಲವು. ನಾವು ಏರಿರುವ ವಿಮಾನವೊಂದೇ ಕಾಣಿಸುತ್ತಿತ್ತೇ ವಿನಾ ಅಲ್ಲಿ ಇನ್ನಾವುದೂ ಕಾಣಿಸಲಿಲ್ಲವು.

**ಆಸಾದ್ಯ ತಸ್ಮಿನ್ನಿತತೇ ವಿಮಾನೇ**
**ಪ್ರಾಪ್ತಾ ವಯಂ ಪಂಕಜಸಂನಿಧೌ ಚ ।**
**ಮಹಾರ್ಣವೇ ಯತ್ರ ಹತೌ ದುರತ್ಯಯೌ**
**ಮುರಾರಿಣಾ ತೌ ಮಧುಕೈಟಭಾಖ್ಯೌ ॥೮೫॥**

ಮುಂದೆ ಆ ವಿಸ್ತಾರವಾದ ವಿಮಾನವನ್ನೇರಿ ಹಿಂದೆ ಎಲ್ಲಿ ಸಂಹರಿಸಲಸಾಧ್ಯರಾಗಿದ್ದ ಮಧುಕೈಟಭರೆಂಬ ರಾಕ್ಷಸರನ್ನು ವಿಷ್ಣುವು ಸಂಹರಿಸಿದನೋ ಅಲ್ಲಿ, ನನ್ನ ಉತ್ಪತ್ತಿಸ್ಥಾನವಾದ ಸಮುದ್ರಮಧ್ಯದಲ್ಲಿರುವ ಕಮಲದ ಸಮೀಪಕ್ಕೆ ಬಂದೆವು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಷಷ್ಠೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### ॥ ಸಪ್ತಮೋಽಧ್ಯಾಯಃ ॥

### ಏಳನೆಯ ಅಧ್ಯಾಯವು

॥ ಬ್ರಹ್ಮೋವಾಚ ॥

**ಏವಂಪ್ರಭಾವಾ ಸಾ ದೇವೀ ಮಯಾ ದೃಷ್ಟಾಽಥ ವಿಷ್ಣುನಾ ।**
**ಶಿವೇನಾಪಿ ಮಹಾಭಾಗ ತಾಸ್ತಾ ದೇವ್ಯಃ ಪೃಥಕ್ಪೃಥಕ್ ॥೧॥**

ಬ್ರಹ್ಮನು ಹೇಳಿದನು—ಎಲೈ ತುಂಬ ಪುಣ್ಯಶಾಲಿಯಾದ ನಾರದನೇ, ಆ ದೇವಿಯು ಇಂತಹ ಅತಿಶಯವಾದ ಮಹಿಮೆಯುಳ್ಳವಳು. ಆ ದೇವಿಯನ್ನು ನಾನೂ, ವಿಷ್ಣುವೂ, ಶಿವನೂ ನೋಡಿದೆವು. ಮತ್ತು ಅವಳ ಪರಿವಾರದೇವಿಯರನ್ನೂ ಬೇರೆ ಬೇರೆಯಾಗಿ ನೋಡಿದೆವು.

॥ ವ್ಯಾಸ ಉವಾಚ ॥

**ಇತ್ಯಾಕರ್ಣ್ಯ ಪಿತುರ್ವಾಕ್ಯಂ ನಾರದೋ ಮುನಿಸತ್ತಮಃ ।**
**ಪಪ್ರಚ್ಛ ಪರಮಪ್ರೀತಃ ಪ್ರಜಾಪತಿಮಿದಂ ವಚಃ ॥೨॥**

ಈ ರೀತಿಯಾಗಿ ತನ್ನ ತಂದೆಯಾದ ಬ್ರಹ್ಮನ ಮಾತನ್ನು ಕೇಳಿ, ಮುನಿ ಶ್ರೇಷ್ಠನಾದ ನಾರದಮುನಿಯು ತುಂಬ ಸಂತೋಷಗೊಂಡು ತಿರುಗಿ ಆ ಬ್ರಹ್ಮನನ್ನು ಕುರಿತು ಮುಂದೆ ಹೇಳುವ ರೀತಿಯಲ್ಲಿ ಕೇಳಿದನು.

॥ ನಾರದ ಉವಾಚ ॥

**ಪುಮಾನಾದ್ಯೋಽವಿನಾಶೀ ಯೋ ನಿರ್ಗುಣೋಽಚ್ಯುತಿರವ್ಯಯಃ ।**
**ದೃಷ್ಟಶ್ಚೈವಾನುಭೂತಶ್ಚ ತದ್ವದಸ್ವ ಪಿತಾಮಹ ॥೩॥**

ಓ ಪಿತಾಮಹನೇ, ನಾಶರಹಿತವಾದ, ಯಾವ ಗುಣಗಳ ಸಂಬಂಧವೂ ಇಲ್ಲದ ಅಪಕ್ಷಯರಹಿತನಾದ ಮತ್ತು ನಿತ್ಯನಾದ ಯಾವ ಆದಿಪುರುಷನನ್ನು ನೀನು ನೋಡಿಯೂ, ಅವನ ಮಹಿಮೆಯನ್ನು ಅನುಭವಿಸಿಯೂ ಇರುವೆಯೋ ಅಂಥವನ ಸ್ವರೂಪವನ್ನು ನನಗೆ ವಿವರಿಸಿ ಹೇಳು.

**ತ್ರಿಗುಣಾ ವೀಕ್ಷಿತಾ ಶಕ್ತಿರ್ನಿರ್ಗುಣಾ ಕೀದೃಶೀ ಪಿತಃ ।**
**ತಸ್ಯಾಃ ಸ್ವರೂಪಂ ಮೇ ಬ್ರೂಹಿ ಪುರುಷಸ್ಯ ಚ ಪದ್ಮಜ ॥೪॥**

ಮೂರು ಗುಣಗಳುಳ್ಳ ಸ್ಥೂಲಶಕ್ತಿಯನ್ನು ನೀನು ನೋಡಿರುತ್ತೀಯೆ. ನಿರ್ಗುಣವಾದ ಶಕ್ತಿಯನ್ನೂ ನೋಡಿರುತ್ತೀಯೆ. ಇವರಲ್ಲಿ ಗುಣಗಳ ಸಂಬಂಧವಿಲ್ಲದ ಆ ಶಕ್ತಿಯ ಸ್ವರೂಪವೆಂತಹುದು ಎಂಬುದನ್ನು ವಿವರಿಸಿ ಹೇಳು. ಮತ್ತು ಕಮಲದಲ್ಲಿ ಉದ್ಭವಿಸಿದ ಎಲೈ ಬ್ರಹ್ಮನೇ, ಆ ಪುರುಷನ ಸ್ವರೂಪವನ್ನೂ ನನಗೆ ತಿಳಿಯಹೇಳು.

**ಯದರ್ಥಂ ಚ ಮಯಾ ತಪ್ತಂ ಶ್ವೇತದ್ವೀಪೇ ಮಹಾತಪಃ ।**
**ದೃಷ್ಟಾಸ್ಸಿದ್ಧಾ ಮಹಾತ್ಮಾನಸ್ತಾಪಸಾ ಗತಮನ್ಯವಃ ॥೫॥**

ಯಾವ ಪರಮಾತ್ಮನ ಸ್ವರೂಪವನ್ನು ತಿಳಿಯಲೋಸುಗ ನಾನು ಹಿಂದೆ ಶ್ವೇತದ್ವೀಪದಲ್ಲಿ ತುಂಬ ತಪಸ್ಸನ್ನಾಚರಿಸಿದೆನೋ ಅಂತಹ ಬ್ರಹ್ಮನ ಸ್ವರೂಪವನ್ನು ವಿವರಿಸಿ ಹೇಳು. ಅಲ್ಲದೆ ಅಲ್ಲಿ ಕೋಪವನ್ನು ಬಿಟ್ಟಿರುವ, ತುಂಬ ತಿಳಿವಳಿಕೆಯುಳ್ಳ ಮತ್ತು ಸಿದ್ಧಿಯನ್ನು ಪಡೆದಿದ್ದ ತಪಸ್ವಿಗಳನ್ನೂ ನಾನು ನೋಡಿದೆನು.

**ಪರಮಾತ್ಮಾ ನ ಸಂಪ್ರಾಪ್ತೋ ಮಯಾಸೌ ದೃಷ್ಟಿಗೋಚರಃ ।**
**ಪುನಃ ಪುನಸ್ತಪಸ್ತೀವ್ರಂ ಕೃತಂ ತತ್ರ ಪ್ರಜಾಪತೇ ॥೬॥**

ಪರಮಾತ್ಮನನ್ನು ನಾನು ಪಡೆಯಲಿಲ್ಲವು. ಅವನು ನನಗೆ ಪ್ರತ್ಯಕ್ಷನಾಗಲಿಲ್ಲವು. ಓ ಬ್ರಹ್ಮನೇ, ಹೀಗಾಗಲು, ನಾನು ಪುನಃ ಪುನಃ ಉಗ್ರವಾದ ತಪಸ್ಸನ್ನು ಆಚರಿಸಿದೆನು.

**ಭವತಾ ಸಗುಣಾ ಶಕ್ತಿರ್ದೃಷ್ಟಾ ತಾತ ಮನೋರಮಾ ।**
**ನಿರ್ಗುಣಾ ನಿರ್ಗುಣಶ್ಚೈವ ಕೀದೃಶೌ ತೌ ವದಸ್ವ ಮೇ ॥೭॥**

ಓ ತಂದೆಯೇ, ನೀನು ಮಣಿದ್ವೀಪದಲ್ಲಿ ಮನೋಹರಳಾದ ಸಗುಣಳಾದ ಮತ್ತು ಗುಣಗಳ ಸಂಬಂಧವಿಲ್ಲದ ಶಕ್ತಿಯನ್ನೂ, ನಿರ್ಗುಣವಾದ ಪರಮಾತ್ಮಸ್ವರೂಪವನ್ನೂ ನೋಡಿರುವೆಯಷ್ಟೆ. ಅದನ್ನು ನನಗೆ ತಿಳಿಯಹೇಳು.

॥ ವ್ಯಾಸ ಉವಾಚ ॥

**ಇತಿ ಪೃಷ್ಟಃ ಪಿತಾ ತೇನ ನಾರದೇನ ಪ್ರಜಾಪತಿಃ ।**
**ಉವಾಚ ವಚನಂ ತಥ್ಯಂ ಸ್ಮಿತಪೂರ್ವಂ ಪಿತಾಮಹಃ ॥೮॥**

ವ್ಯಾಸಮುನಿಯು ಹೇಳಿದನು—ಹೀಗೆಂದು ನಾರದಮುನಿಯು ತನ್ನ ತಂದೆಯಾದ ಬ್ರಹ್ಮನನ್ನು ಕೇಳಲು, ಪ್ರಜೆಗಳಿಗೆ ಒಡೆಯನಾದ ಆ ಪಿತಾಮಹನು ನಾರದನನ್ನು ಕುರಿತು ಮಂದಹಾಸದಿಂದ ಕೂಡಿ, ಸತ್ಯವಾದ ಮಾತನ್ನು ಹೀಗೆ ಹೇಳಿದನು.

॥ ಬ್ರಹ್ಮೋವಾಚ ॥

**ನಿರ್ಗುಣಸ್ಯ ಮುನೇ ರೂಪಂ ನ ಭವೇದ್ದೃಷ್ಟಿಗೋಚರಃ ।**
**ದೃಶ್ಯಂ ಚ ನಶ್ವರಂ ಯಸ್ಮಾದರೂಪಂ ದೃಶ್ಯತೇ ಕಥಂ ॥೯॥**

ಓ ನಾರದಮುನಿಯೇ, ನಿರ್ಗುಣವಾದ ವಸ್ತುವಿನ ಸ್ವರೂಪವು ಕಾಣಿಸುವುದಿಲ್ಲವು. ಹಾಗೆ ಕಾಣಿಸುವುದಾದರೆ ಆ ವಸ್ತುವು ದೃಶ್ಯವಾಗಿರುತ್ತಾ ಎಂದಿಗೂ ನಿತ್ಯವಾಗಲಾರದು, ಅದು ಕಡೆಗೆ ನಾಶವಾಗಬೇಕಾಗುತ್ತದೆ. ಆದುದರಿಂದ ನಿತ್ಯವಾದ ಮತ್ತು ರೂಪವಿಲ್ಲದ ಪರಮಾತ್ಮವಸ್ತುವು ಕಣ್ಣಿಗೆ ಕಾಣುವ ಬಗೆಯೆಂತು ?

**ನಿರ್ಗುಣಾ ದುರ್ಗಮಾ ಶಕ್ತಿರ್ನಿರ್ಗುಣಶ್ಚ ತಥಾ ಪುಮಾನ್ ।**
**ಜ್ಞಾನಗಮ್ಯೌ ಮುನೀನಾಂ ತು ಭಾವನೀಯೌ ತಥಾ ಪುನಃ ॥೧೦॥**

ಶಕ್ತಿಯು ಸತ್ತ್ವವೇ ಮೊದಲಾದ ಗುಣಗಳಿಲ್ಲದವಳು. ಆದುದರಿಂದಲೇ ಅವಳನ್ನು ತಿಳಿಯುವುದು ಕಷ್ಟಸಾಧ್ಯವು. ಪುರುಷನೂ (ಪರಬ್ರಹ್ಮನು) ಗುಣಗಳ ಸಂಬಂಧವಿಲ್ಲದವನು. ಆದರೆ ವಿಚಾರಪರರಾದ ಮುನಿಗಳು ಅವರಿಬ್ಬರನ್ನೂ ಜ್ಞಾನದಿಂದಲೂ, ಅನುಮಾನಾದಿಯುಕ್ತಿಯಿಂದಲೂ ಊಹಿಸಿ ತಿಳಿಯಬಲ್ಲರು.

**ಅನಾದಿನಿಧನೌ ವಿದ್ಧಿ ಸದಾ ಪ್ರಕೃತಿಪೂರುಷೌ ।**
**ವಿಶ್ವಾಸೇನಾಭಿಗಮ್ಯೌ ತೌ ನಾವಿಶ್ವಾಸೇನ ಕರ್ಹಿಚಿತ್ ॥೧೧॥**

ಪ್ರಕೃತಿ ಮತ್ತು ಪುರುಷರು ಯಾವಾಗಲೂ, ಉತ್ಪತ್ತಿ ಮತ್ತು ನಾಶ ಇವುಗಳಿಲ್ಲದವರೆಂದು ತಿಳಿ. ವೇದದ ಉಪದೇಶದಲ್ಲಿ ನಂಬಿಕೆಯನ್ನಿಟ್ಟು ಅವರು ಇರುವರೆಂದು ತಿಳಿಯಬೇಕು. ನಂಬಿಕೆಯಿಲ್ಲದಿದ್ದರೆ ಯಾವಾಗಲೂ ತಿಳಿಯಲಾಗುವುದಿಲ್ಲವು.

**ಚೈತನ್ಯಂ ಸರ್ವಭೂತೇಷು ಯತ್ತದ್ವಿದ್ಧಿ ಪರಾತ್ಮಕಂ ।**
**ತೇಜಃ ಸರ್ವತ್ರಗಂ ನಿತ್ಯಂ ನಾನಾಭಾವೇಷು ನಾರದ ॥೧೨॥**

ಓ ನಾರದನೇ, ಎಲ್ಲಾ ಪ್ರಾಣಿಗಳಲ್ಲೂ ಯಾವ ಜೀವರೂಪವಾದ ಚೈತನ್ಯವು ಇರುವುದೋ ಅದು ಪರಬ್ರಹ್ಮಸ್ವರೂಪವೇ ಆಗಿರುವುದೆಂದು ತಿಳಿ. ಪ್ರಕಾಶಸ್ವರೂಪ ವಾದ ಮತ್ತು ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವ ಆ ಬ್ರಹ್ಮಚೈತನ್ಯವು ಅನೇಕ ಚರಾಚರ ಶರೀರಗಳಲ್ಲಿ ಜೀವರೂಪದಿಂದ ಇರುತ್ತದೆ.

**ತಂ ಚ ತಾಂ ಚ ಮಹಾಭಾಗ ವ್ಯಾಪಕೌ ವಿದ್ಧಿ ಸರ್ವಗೌ ।**
**ತಾಭ್ಯಾಂ ವಿಹೀನಂ ಸಂಸಾರೇ ನ ಕಿಂಚಿದ್ವಸ್ತು ವಿದ್ಯತೇ ॥೧೩॥**

ಜ್ಞಾನಸ್ವರೂಪನಾದ ಆ ಬ್ರಹ್ಮನೂ, ಶಕ್ತಿಯೂ ಇಬ್ಬರೂ ಎಲ್ಲೆಡೆಯಲ್ಲಿಯೂ ವ್ಯಾಪಿಸಿಕೊಂಡಿರುವರು. ಆದುದರಿಂದಲೇ ಅವರಿಂದ ಬಿಡಲ್ಪಟ್ಟ ಎಂದರೆ ಅವರಿಲ್ಲದ ಯಾವ ವಸ್ತುವೂ ಈ ಸಂಸಾರದಲ್ಲಿ ಇರುವುದಿಲ್ಲವು.

**ತೌ ವಿಚಿಂತ್ಯೌ ಸದಾ ದೇಹೇ ಮಿಶ್ರೀಭೂತೌ ಸದಾಽವ್ಯಯೌ ।**
**ಏಕರೂಪೌ ಚಿದಾತ್ಮಾನೌ ನಿರ್ಗುಣೌ ನಿರ್ಮಲಾವುಭೌ ॥೧೪॥**

ದೇಹದಲ್ಲಿ ಅವರಿಬ್ಬರೂ ಪರಸ್ಪರ ಸೇರಿಕೊಂಡು ಇರುವುದರಿಂದ ಎಂದಿಗೂ ನಾಶವಿಲ್ಲದ ಅವರನ್ನು ಬೇರೆಬೇರೆಯಾಗಿ ಉಪಾಸನೆಮಾಡದೆ ಒಟ್ಟಿಗೆ ಎಂದರೆ ಮಾಯೆಯಿಂದ ಕೂಡಿದ ಬ್ರಹ್ಮನನ್ನು ಉಪಾಸನೆಮಾಡಬೇಕು. ಅವರಿಬ್ಬರೂ ಒಂದೇ ಸ್ವರೂಪವುಳ್ಳವರು ಮತ್ತು ಜ್ಞಾನಸ್ವರೂಪರು, ಅವರ ವಾಸ್ತವರೂಪದಲ್ಲಿ ಗುಣಗಳಿಲ್ಲ ದವರೂ, ಶುದ್ಧರೂ ಆಗಿರುವರು.

**ಯಾ ಶಕ್ತಿಃ ಪರಮಾತ್ಮಾಽಸೌ ಯೋಽಸೌ ಸಾ ಪರಮಾ ಮತಾ ।**
**ಅಂತರಂ ನೈತಯೋಃ ಕೋಽಪಿ ಸೂಕ್ಷ್ಮಂ ವೇದ ಚ ನಾರದ ॥೧೫॥**

ಓ ನಾರದನೇ, ಮಾಯಾರೂಪವಾದ ಶಕ್ತಿಯೇ ಪರಮಾತ್ಮನು. ಪರಮಾತ್ಮನೇ ಶಕ್ತಿಯು. ಬೆಂಕಿಯಲ್ಲಿರುವ ಸುಡುವ ಶಕ್ತಿಯು ಹೇಗೆ ಬೆಂಕಿಗಿಂತಲೂ ಬೇರೆಯಲ್ಲವೋ ಅದರಂತೆ ಪರಮಾತ್ಮನಲ್ಲಿರುವ ಶಕ್ತಿರೂಪವಾದ ಮಾಯೆಯು ಪರಮಾತ್ಮನಿಗಿಂತಲೂ ಬೇರೆಯಲ್ಲವು. ಆದುದರಿಂದ ಮಾಯಾ ಮತ್ತು ಪರಮಾತ್ಮರಿಗೆ ಭೇದವನ್ನು ಸ್ವಲ್ಪವೂ ಯಾರೂ ತಿಳಿಯಲಾರರು, ಮತ್ತು ಯಾರೂ ತಿಳಿಯಲೂಬಾರದು.

**ಅಧೀತ್ಯ ಸರ್ವಶಾಸ್ತ್ರಾಣಿ ವೇದಾನ್‌ಸಾಂಗಾಂಶ್ಚ ನಾರದ ।**
**ನ ಜಾನಾತಿ ತಯೋಃ ಸೂಕ್ಷ್ಮಮಂತರಂ ವಿರತಿಂ ವಿನಾ ॥೧೬॥**

ಓ ನಾರದಮುನಿಯೇ, ಎಲ್ಲ ಶಾಸ್ತ್ರಗಳನ್ನು ಓದಿದರೂ, ಸಾಂಗವಾಗಿ ವೇದಾಧ್ಯಯನವನ್ನು ಮಾಡಿದರೂ ಸಹ ವೈರಾಗ್ಯವಿಲ್ಲದಿದ್ದರೆ ಈ ಬರಿಯ ಹೆಸರಿನಿಂದ ಮಾತ್ರ ಬಂದಿರತಕ್ಕ ಸೂಕ್ಷ್ಮವಾದ ಭೇದವನ್ನು ಯಾರೂ ತಿಳಿಯಲಾರರು. ಎಂದರೆ ಬರಿಯ ಹೆಸರಿನಿಂದ ಬಂದ ಭೇದವನ್ನು ವೈರಾಗ್ಯವಿಲ್ಲದ ಮೂಢರು ನಿಜವಾಗಿ ಇರುವ ಭೇದವೆಂದು ತಿಳಿಯುತ್ತಾರೆ. ವೈರಾಗ್ಯವುಳ್ಳವನು, ಅವು ಬರಿಯ ಎರಡು ಹೆಸರುಗಳೇ ವಿನಾ, ಬ್ರಹ್ಮ ಮತ್ತು ಶಕ್ತಿಗಳಿಗೆ ನಿಜವಾಗಿ ಸ್ವರೂಪಭೇದವಿರುವುದಿಲ್ಲವೆಂದು ತಿಳಿಯುತ್ತಾನೆ. ಇದೇ ಭೇದದ ಸೂಕ್ಷ್ಮತನವು.

**ಅಹಂಕಾರಕೃತಂ ಸರ್ವಂ ವಿಶ್ವಂ ಸ್ಥಾವರಜಂಗಮಂ ।**
**ಕಥಂ ತದ್ರಹಿತಂ ಪುತ್ರ ಭವೇತ್ಕಲ್ಪಶತೈರಪಿ ॥೧೭॥**

ಓ ಪುತ್ರನಾದ ನಾರದನೇ, ಸ್ಥಾವರ ಎಂದರೆ ಚಲಸದಿರುವ ಕಲ್ಲು, ಮಣ್ಣು, ಬಳ್ಳಿ, ಗಿಡ, ಮರ ಮೊದಲಾದುವು; ಜಂಗಮ ಎಂದರೆ ಚಲಿಸುವ ಹುಳು, ಮೃಗ, ಪಕ್ಷಿ, ಮನುಷ್ಯ, ದೇವ ಮೊದಲಾದುವು; ಇವುಗಳಿಂದ ಯುಕ್ತವಾದ ಪ್ರಪಂಚವೆಲ್ಲವೂ ಅಹಂಕಾರದಿಂದ ಒಳಗೆಲ್ಲಾ ವ್ಯಾಪಿಸಲ್ಪಟ್ಟಿದೆ. ಎಂದಮೇಲೆ ನೂರು ಕಲ್ಪ ಪ್ರಮಾಣದಷ್ಟು ಕಾಲವು ಗತಿಸಿದರೂ ಆ ಅಹಂಕಾರವು ಹೋಗುವುದು ಹೇಗೆ? ಆದುದರಿಂದಲೇ ಜನಗಳು ಆ ಅಹಂಕಾರದಿಂದ ಮೂಢರಾಗಿ ಬ್ರಹ್ಮ ಮತ್ತು ಮಾಯೆ ಇವು ಬೇರೆ ಬೇರೆ ಎರಡು ವಸ್ತುಗಳೆಂದು ತಿಳಿಯುತ್ತಾರೆ. ಬ್ರಹ್ಮ ಮಾಯೆಗಳೆಂದು ಎರಡು ಹೆಸರುಗಳೇ ಹೊರತು ಸ್ವರೂಪವು ಒಂದೇ ಎಂದು ತಿಳಿಯಲು ಸಾಧನವಾದ ವೈರಾಗ್ಯವು ಆ ಅಹಂಕಾರದ ದೆಸೆಯಿಂದ ಉಂಟಾಗುವುದಿಲ್ಲ.

**ನಿರ್ಗುಣಂ ಸಗುಣಃ ಪುತ್ರ ಕಥಂ ಪಶ್ಯತಿ ಚಕ್ಷುಷಾ ।**
**ಸಗುಣಂ ಚ ಮಹಾಬುದ್ಧೇ ಚೇತಸಾ ಸಂವಿಚಾರಯ ॥೧೮॥**

ಓ ಪುತ್ರನಾದ ನಾರದಮುನಿಯೇ, ಅಹಂಕಾರಾದಿಗುಣಗಳಿಂದ ಕೂಡಿದವನು ನಿರ್ಗುಣನಾದ ಬ್ರಹ್ಮನನ್ನು ಹೇಗೆ ಕಣ್ಣಿನಿಂದ ನೋಡಿಯಾನು? ಆದುದರಿಂದ ಎಲೈ ಮಹಾಬುದ್ಧಿಶಾಲಿಯೇ, ಗುಣವಿಶಿಷ್ಟವಾದ ರೂಪದಿಂದಲೇ ಬ್ರಹ್ಮನನ್ನು

ಮನಸ್ಸಿನಿಂದ ಉಪಾಸನೆಮಾಡು. ಅದರಿಂದ ನಿರ್ಗುಣಬ್ರಹ್ಮನ ಉಪಾಸನೆಗೆ ಯೋಗ್ಯತೆ ಯುಂಟಾಗುತ್ತದೆ.

**ಪಿತ್ತೇನಾಚ್ಛಾದಿತಾ ಜಿಹ್ವಾ ಚಕ್ಷುಶ್ಚ ಮುನಿಸತ್ತಮ ।**
**ಕಟುಪೀತಂ ವಿಜಾನಾತಿ ರಸಂ ರೂಪಂ ನ ತತ್ತ್ವಥಾ ॥೧೯॥**

ಎಲೈ ಮುನಿಶ್ರೇಷ್ಠನೇ, ಪಿತ್ತದೋಷದಿಂದ ವ್ಯಾಪ್ತವಾದ ನಾಲಿಗೆಯೂ ನಯನವೂ ಸಹ ಸಮಸ್ತರಸವನ್ನು ಕಾರವಾಗಿರುವಂತೆಯೂ, ಸಮಸ್ತ ಪದಾರ್ಥಗಳೂ ಹಳದಿಯ ಬಣ್ಣವಾಗಿರುವಂತೆಯೂ ತಿಳಿಯುತ್ತವೆ. ಅವು ನಿಜವಾದ ರೂಪರಸಗಳನ್ನು ತಿಳಿಯುವುದಿಲ್ಲ.

**ಗುಣೈಃ ಸಮಾವೃತಂ ಚೇತಃ ಕಥಂ ಜಾನಾತಿ ನಿರ್ಗುಣಂ ।**
**ಅಹಂಕಾರೋದ್ಭವಂ ತಚ್ಚ ತದ್ವಿಹೀನಂ ಕಥಂ ಭವೇತ್ ॥೨೦॥**

ಅದರಂತೆಯೇ, ಅಹಂಕಾರ ಮೊದಲಾದ ದೋಷಗಳಿಂದ ವ್ಯಾಪಿಸಲ್ಪಟ್ಟ ಮನಸ್ಸು ನಿರ್ಗುಣಸ್ವರೂಪವಾದ ಬ್ರಹ್ಮನನ್ನು ಹೇಗೆ ತಿಳಿದೀತು? ಆ ಮನಸ್ಸು ಅಹಂಕಾರವೆಂಬ ಕಾರಣದಿಂದಲೇ ಹುಟ್ಟಿದುದು. ಹೇಗೆ ಆ ಗುಣದಿಂದ ಬಿಡಲ್ಪಟ್ಟೀತು?

**ಯಾವನ್ನ ಗುಣವಿಚ್ಛೇದಸ್ತಾವತ್ತದ್ದರ್ಶನಂ ಕುತಃ ।**
**ತಂ ಪಶ್ಯತಿ ತದಾ ಚಿತ್ತೇ ಯದಾಽಹಂಕಾರವರ್ಜಿತಃ ॥೨೧॥**

ಎಲ್ಲಿಯವರೆವಿಗೆ ಆ ಗುಣಗಳ ಸಂಬಂಧವು ತಪ್ಪುವುದಿಲ್ಲವೋ ಅಲ್ಲಿಯವರಿವಿಗೂ ಬ್ರಹ್ಮಸ್ವರೂಪವನ್ನು ತಿಳಿಯಲಾಗುವುದಿಲ್ಲ. ಯಾವಾಗ ಮನಸ್ಸಿನಲ್ಲಿರುವ ಅಹಂಕಾರವು ತೊಲಗುವುದೋ ಆಗ ಆ ಬ್ರಹ್ಮವಸ್ತುವನ್ನು ತಿಳಿಯಬಹುದು.

॥ ನಾರದ ಉವಾಚ ॥

**ಸ್ವರೂಪಂ ದೇವ ದೇವೇಶ ತ್ರಯಾಣಾಮೇವ ವಿಸ್ತರಾತ್ ।**
**ಗುಣಾನಾಂ ಯತ್ಸ್ವರೂಪೋಽಸ್ತಿ ಹ್ಯಹಂಕಾರಸ್ತ್ರಿರೂಪಕಃ ॥೨೨॥**

ಜ್ಞಾನಜ್ಯೋತಿಯ ಸ್ವರೂಪನೂ, ದೇವತೆಗಳಿಗೆ ಒಡೆಯನೂ ಆದ ಓ ಬ್ರಹ್ಮನೇ, ಸತ್ವವೇ ಮೊದಲಾದ ಮೂರು ಗುಣಗಳ ಸ್ವರೂಪವನ್ನು ವಿಸ್ತಾರವಾಗಿ ಹೇಳು.

ಏಕೆಂದರೆ, ಆ ಅಹಂಕಾರವು ಈ ಮೂರು ಗುಣಗಳ ಸ್ವರೂಪವುಳ್ಳದ್ದಾಗಿ ಹೇಗೆ ಮೂರು ರೂಪದಿಂದಿರುತ್ತದೆ?

**ಸಾತ್ತ್ವಿಕೋ ರಾಜಸಶ್ಚೈವ ತಾಮುಸಶ್ಚ ತಥಾ ಪರಃ ।**
**ವಿಭೇದೇನ ಸ್ವರೂಪಾಣಿ ವದಸ್ವ ಪುರುಷೋತ್ತಮ ॥೨೩॥**

ಅದು ಹೇಗೆಂದರೆ, ಸಾತ್ತ್ವಿಕ ಅಹಂಕಾರವೆಂದೂ, ರಾಜಸಾಹಂಕಾರವೆಂದೂ, ತಾಮಸಾಹಂಕಾರವೆಂದೂ ಸತ್ತ್ವರಜಸ್ತಮೋಗುಣಗಳಿಂದ ಕೂಡಿ ಹೇಗೆ ಅಹಂಕಾರವು ಮೂರು ಭೇದವನ್ನು ಹೊಂದುತ್ತದೆ. ಆದುದರಿಂದ ಓ ಪುರುಷಶ್ರೇಷ್ಠನೇ, ಅಹಂಕಾರದ ಸ್ವರೂಪ, ಭೇದ ಇವುಗಳನ್ನೂ ಹೇಳು.

**ಯಜ್ಜ್ಞಾತ್ವಾ ವಿಪ್ರಮುಚ್ಯೇಽಹಂ ಜ್ಞಾನಂ ತದ್ವದ ಮೇ ಪ್ರಭೋ ।**
**ಗುಣಾನಾಂ ಲಕ್ಷಣಾನ್ಯೇವ ವಿತತಾನಿ ವಿಭಾಗಶಃ ॥೨೪॥**

ಓ ಸ್ವಾಮಿಯಾದ ಬ್ರಹ್ಮನೇ, ಯಾವುದರಿಂದ ನಾನು ಮೋಕ್ಷವನ್ನು ಹೊಂದಲು ಸಾಧಕವಾಗುವುದೋ ಅಂತಹ ಜ್ಞಾನವನ್ನು ಉಪದೇಶಿಸು. ಮತ್ತು ಸತ್ತ್ವ ರಜಸ್ತಮೋಗುಣಗಳ ವಿಸ್ತಾರವಾದ ಸ್ವರೂಪವನ್ನು ವಿಂಗಡಿಸಿ ವಿಶದವಾಗಿ ಹೇಳು.

॥ ಬ್ರಹ್ಮೋವಾಚ ॥

**ತ್ರಯಾಣಾಂ ಶಕ್ತಯಸ್ತಿಸ್ರಸ್ತದ್ಬ್ರವೀಮಿ ತವಾನಘ ।**
**ಜ್ಞಾನಶಕ್ತಿಃ ಕ್ರಿಯಾಶಕ್ತಿರರ್ಥಶಕ್ತಿಸ್ತಥಾ ಪರಾ ॥೨೫॥**

ಬ್ರಹ್ಮನು ನಾರದನ ಪ್ರಶ್ನೆಗಳಿಗೆ ಹೀಗೆ ಪ್ರತ್ಯುತ್ತರವನ್ನು ಹೇಳಿದನು— ಸಾತ್ತ್ವಿಕ, ರಾಜಸ, ತಾಮಸ ಈ ಮೂರು ಬಗೆಯ ಅಹಂಕಾರಭೇದಗಳಿಗೆ ಮೂರು ವಿಧವಾದ ಶಕ್ತಿಗಳುಂಟು. ಎಲೈ ಪಾಪರಹಿತನಾದ ನಾರದನೇ, ಅವನ್ನು ನಿನಗೆ ಹೇಳುತ್ತೇನೆ. ಆ ಮೂರುವಿಧವಾದ ಅಹಂಕಾರಗಳಲ್ಲಿ ಒಂದು ಜ್ಞಾನವನ್ನುಂಟು ಮಾಡುವ ಶಕ್ತಿಯು; ಇನ್ನೊಂದು ಕ್ರಿಯೆಯನ್ನುಂಟುಮಾಡುವ ಶಕ್ತಿಯು; ಮತ್ತೊಂದು ವಸ್ತುವನ್ನುಂಟುಮಾಡುವ ಶಕ್ತಿಯು. ಹೀಗೆ ಇವು ಮೂರುಬಗೆಯಾಗಿವೆ.

**ಸಾತ್ತ್ವಿಕಸ್ಯ ಜ್ಞಾನಶಕ್ತೀ ರಾಜಸಸ್ಯ ಕ್ರಿಯಾತ್ಮಿಕಾ ।**
**ದ್ರವ್ಯಶಕ್ತಿಸ್ತಾಮಸಸ್ಯ ತಿಸ್ರಶ್ಚ ಕಥಿತಾಸ್ತವ ॥೨೬॥**

ಅವುಗಳಲ್ಲಿ ಜ್ಞಾನಶಕ್ತಿಯು ಸಾತ್ತ್ವಿಕಾಹಂಕಾರದಿಂದ ಬಂದುದು ; ಕ್ರಿಯಾ ಶಕ್ತಿಯು ರಾಜಸಾಹಂಕಾರದಿಂದ ಉಂಟಾದುದು ; ಮೂರನೆಯದಾದ ದ್ರವ್ಯಶಕ್ತಿಯು ತಾಮಸಾಹಂಕಾರದಿಂದ ಬಂದುದು. ಹೀಗೆ ಮೂರು ಶಕ್ತಿಗಳ ಸ್ವರೂಪವನ್ನು ನಿನಗೆ ಹೇಳಿದುದಾಯಿತು.

**ತೇಷಾಂ ಕಾರ್ಯಾಣಿ ವಕ್ಷ್ಯಾಮಿ ಶೃಣು ನಾರದ ತತ್ತ್ವತಃ ।**
**ತಾಮಸ್ಯಾ ದ್ರವ್ಯಶಕ್ತೇಶ್ಚ ಶಬ್ದಸ್ಪರ್ಶಸಮುದ್ಭವಃ ॥೨೭॥**

ಓ ನಾರದನೇ, ಇನ್ನು ಆ ಶಕ್ತಿಗಳಿಂದ ಹುಟ್ಟತಕ್ಕ ಕಾರ್ಯಗಳಾವುವೆಂಬು ದನ್ನು ಮರೆಮಾಚದೆ ಸತ್ಯವಾಗಿ ಹೇಳುತ್ತೇನೆ. ತಾಮಸಾಹಂಕಾರದಿಂದ ಉಂಟಾಗುವ ದ್ರವ್ಯಶಕ್ತಿಯಿಂದ ಶಬ್ದ ಮತ್ತು ಸ್ಪರ್ಶ ಇವುಗಳು ಹುಟ್ಟುತ್ತವೆ.

**ರೂಪಂ ರಸಶ್ಚ ಗಂಧಶ್ಚ ತನ್ಮಾತ್ರಾಣಿ ಪ್ರಚಕ್ಷತೇ ।**
**ಶಬ್ದೈಕಗುಣಮಾಕಾಶಂ ವಾಯುಃ ಸ್ಪರ್ಶಗುಣಸ್ತಥಾ ॥೨೮॥**

ಹಾಗೆಯೇ ರೂಪವೂ, ರಸವೂ, ಗಂಧವೂ, ಆ ದ್ರವ್ಯಶಕ್ತಿಯಿಂದಲೇ ಹುಟ್ಟು ತ್ತವೆ. ಈ ಐದು ಗುಣಗಳನ್ನು ತನ್ಮಾತ್ರಗಳೆಂದು ಹೇಳುತ್ತಾರೆ. ಎಂದರೆ ಈ ಶಬ್ದ ಮೊದಲಾದ ಐದು ಗುಣಗಳಿಂದ ಆಕಾಶವೇ ಮೊದಲಾದ ಐದು ಸೂಕ್ಷ್ಮಭೂತಗಳು ಹುಟ್ಟುತ್ತವೆ, ಎಂದರ್ಥವು. ಅವುಗಳಲ್ಲಿ ಆಕಾಶವು ಶಬ್ದವೆಂಬ ಒಂದೇ ಗುಣವುಳ್ಳದ್ದು. ಅದರಂತೆಯೇ ಸ್ಪರ್ಶವು ವಾಯುವಿನ ಗುಣವು.

**ಸುರೂಪೈಕಗುಣೋಽಗ್ನಿಶ್ಚ ಜಲಂ ರಸಗುಣಾತ್ಮಕಂ ।**
**ಪೃಥ್ವೀ ಗಂಧಗುಣಾ ಜ್ಞೇಯಾ ಸೂಕ್ಷ್ಮಾಣ್ಯೇತಾನಿ ನಾರದ ॥೨೯॥**

ಮತ್ತು ಅಗ್ನಿ ಅಥವಾ ತೇಜಸ್ಸು ರೂಪವುಳ್ಳದ್ದು ಎಂದರೆ ಮತ್ತೊಂದು ಪದಾರ್ಥವನ್ನು ಪ್ರಕಾಶದಿಂದ ಗೋಚರಿಸುವಂತೆ ಮಾಡುವ ಗುಣವುಳ್ಳದ್ದು. ಜಲವು ರಸವೆಂಬ ಗುಣವುಳ್ಳದ್ದು. ಗಂಧವು ಪೃಥಿವಿಯ ಗುಣವು. ಆದುದರಿಂದ ಓ ನಾರದನೇ, ಶಬ್ದ ಮೊದಲಾದ ಗುಣಗಳಿಂದ ಹುಟ್ಟಿದ ಎಂದರೆ ದ್ರವ್ಯಶಕ್ತಿಯ ಸಂಬಂಧವಾದ ಶಬ್ದಾ ದಿಗಳಿಂದ ಉತ್ಪನ್ನವಾದ ಆಕಾಶಾದಿಗಳೇ ತನ್ಮಾತ್ರಗಳು ಅಥವಾ ಭೂತಸೂಕ್ಷ್ಮಗಳು.

**ದಶೈತಾನಿ ಮಿಲಿತ್ವಾ ತು ದ್ರವ್ಯಶಕ್ತಿಯುತಾನಿ ವೈ ।**
**ತಾಮಸಾಹಂಕಾರಜಃ ಸ್ಯಾತ್ಸರ್ಗಸ್ತದನುವೃತ್ತಿಕಃ ॥೩೦॥**

ಶಬ್ದವೇ ಮೊದಲಾದ ತಾಮಸದ್ರವ್ಯಶಕ್ತಿಯ ಗುಣಗಳು ಐದು. ಆ ಗುಣಗಳಿಂದ ಉಂಟಾದ ಆಕಾಶ ಮೊದಲಾದ ಸೂಕ್ಷ್ಮಭೂತಗಳು ಐದು. ಹೀಗೆ ಈ ಹತ್ತು ಮತ್ತು ದ್ರವ್ಯಶಕ್ತಿ ಇವುಗಳೆಲ್ಲವೂ ಸೇರಿ ತಾಮಸಾಹಂಕಾರದಿಂದ ಆಗುವ ಸೃಷ್ಟಿಯು ಎನಿಸುತ್ತದೆ. ಅದು ಆ ತಾಮಸಾಹಂಕಾರವನ್ನೇ ಅನುಸರಿಸಿ ಆಗುವುದು.

**ರಾಜಸ್ಯಾಶ್ಚ ಕ್ರಿಯಾಶಕ್ತೇರುತ್ಪನ್ನಾನಿ ಶೃಣುಷ್ವ ಮೇ ।**
**ಶ್ರೋತ್ರಂ ತ್ವಗ್ರಸನಾ ಚಕ್ಷುರ್ಘ್ರಾಣಂ ಚೈವ ಚ ಪಂಚಮಂ ॥೩೦॥**

ಇನ್ನು ರಜೋಗುಣದ ಸಂಬಂಧಿಯಾದ ಕ್ರಿಯಾಶಕ್ತಿಯಿಂದ ಹುಟ್ಟತಕ್ಕವುಗಳನ್ನು ನಾನು ಹೇಳುತ್ತೇನೆ, ಕೇಳು. ಶ್ರೋತ್ರೇಂದ್ರಿಯ ಅಥವಾ ಕಿವಿಯು, ತ್ವಗಿಂದ್ರಿಯ ಅಥವಾ ಚರ್ಮ, ರಸನೇಂದ್ರಿಯ ಅಥವಾ ನಾಲಿಗೆ, ಚಕ್ಷುರಿಂದ್ರಿಯ ಅಥವಾ ಕಣ್ಣು, ಘ್ರಾಣೇಂದ್ರಿಯ ಅಥವಾ ಮೂಗು ಈ ಐದು ಇಂದ್ರಿಯಗಳು ರಾಜಸಾಹಂಕಾರದಿಂದ ಹುಟ್ಟುತ್ತವೆ.

**ಜ್ಞಾನೇಂದ್ರಿಯಾಣಿ ಚೈತಾನಿ ತಥಾ ಕರ್ಮೇಂದ್ರಿಯಾಣಿ ಚ ।**
**ವಾಕ್ಪಾಣಿಪಾದಪಾಯುಶ್ಚ ಗುಹ್ಯಾಂತಾನಿ ಚ ಪಂಚ ವೈ ॥೩೧॥**

ಮೇಲೆ ಹೇಳಿದ ಈ ಐದೂ ಜ್ಞಾನೇಂದ್ರಿಯಗಳು. ಮತ್ತು ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯ ಎಂದು ಹೇಳಲ್ಪಡುವ ಮಾತು, ಕೈ, ಕಾಲು, ಗುದ, ಜನನೇಂದ್ರಿಯಗಳೆಂಬ ಐದು ಕರ್ಮೇಂದ್ರಿಯಗಳೂ ಕ್ರಿಯಾಶಕ್ತಿಯಿಂದಲೇ ಹುಟ್ಟುತ್ತವೆ.

**ಪ್ರಾಣೋಽಪಾನಶ್ಚ ವ್ಯಾನಶ್ಚ ಸಮಾನೋದಾನವಾಯವಃ ।**
**ಪಂಚದಶ ಮಿಲಿತ್ವೈವ ರಾಜಸಃ ಸರ್ಗ ಉಚ್ಯತೇ ॥೩೨॥**

ಮತ್ತು ಪ್ರಾಣವಾಯು, ಅಪಾನವಾಯು, ವ್ಯಾನವಾಯು, ಸಮಾನವಾಯು, ಉದಾನವಾಯುಗಳೆಂಬ ಪಂಚ ಪ್ರಾಣವಾಯುಗಳು ರಾಜಸಕ್ರಿಯಾಶಕ್ತಿಯಿಂದಲೇ ಹುಟ್ಟುತ್ತವೆ. ಹೀಗೆ, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಪ್ರಾಣವಾಯುಗಳು ಈ ಹದಿನೈದೂ ರಾಜಸಾಹಂಕಾರದ ಸೃಷ್ಟಿಯೆಂದು ಹೇಳಲ್ಪಡುತ್ತವೆ.

**ಸಾಧನಾನಿ ಕಿಲೈತಾನಿ ಕ್ರಿಯಾಶಕ್ತಿಮಯಾನಿ ಚ ।**
**ಉಪಾದಾನಂ ಕಿಲೈತೇಷಾಂ ಚಿದನುವೃತ್ತಿರುಚ್ಯತೇ ॥೩೪॥**

ಈ ಎಲ್ಲಾ ಕ್ರಿಯಾಶಕ್ತಿಯಿಂದುಂಟಾದ ವಸ್ತುಗಳು ಆಯಾಯ ಜ್ಞಾನವೇ ಮೊದಲಾದವುಗಳಿಗೆ ಕಾರಣಗಳು. ಮತ್ತು ಈ ಎಲ್ಲ ಪದಾರ್ಥಗಳಿಗೂ ಬ್ರಹ್ಮನ ಪ್ರತಿಬಿಂಬದಿಂದ ಕೂಡಿದ ಮಾಯೆಯು ಉಪಾದಾನಕಾರಣವು. ಎಂದರೆ ಮಡಕೆಗೆ ಮಣ್ಣು ಹೇಗೋ ಹಾಗೆ. ಮಡಕೆಯು ಹೇಗೆ ಮಣ್ಣಿನ ರೂಪವೋ ಹಾಗೆ ಎಲ್ಲ ಪದಾರ್ಥಗಳೂ ಮಾಯೆಯ ರೂಪಗಳೆಂದು ತಾತ್ಪರ್ಯವು.

**ಜ್ಞಾನಶಕ್ತಿಸಮಾಯುಕ್ತಾಃ ಸಾತ್ತ್ವಿಕಾಚ್ಚ ಸಮುದ್ಭವಾಃ ।**
**ದಿಶೋ ವಾಯುಶ್ಚ ಸೂರ್ಯಶ್ಚ ವರುಣಶ್ಚಾಶ್ವಿನಾವಪಿ ॥೩೫॥**

ಇನ್ನು ಸಾತ್ತ್ವಿಕಾಹಂಕಾರದಿಂದ ಹುಟ್ಟಿದ ಜ್ಞಾನಶಕ್ತಿಯಿಂದ, ದಿಕ್ಕುಗಳೂ, ವಾಯುವೂ, ಸೂರ್ಯನೂ, ವರುಣನೂ, ಅಶ್ವಿನೀದೇವತೆಗಳೂ ಹುಟ್ಟುತ್ತಾರೆ.

**ಜ್ಞಾನೇಂದ್ರಿಯಾಣಾಂ ಪಂಚಾನಾಂ ಪಂಚಾಧಿಷ್ಠಾತೃದೇವತಾಃ ।**
**ಚಂದ್ರೋ ಬ್ರಹ್ಮಾ ತಥಾ ರುದ್ರಃ ಕ್ಷೇತ್ರಜ್ಞಶ್ಚ ಚತುರ್ಥಕಃ ॥೩೬॥**

ಮೇಲೆ ಹೇಳಿದ ದಿಕ್ಕು ಮೊದಲಾದ ಐದೂ ಶ್ರೋತ್ರ ಮೊದಲಾದ ಐದು ಜ್ಞಾನೇಂದ್ರಿಯಗಳಿಗೆ ಅಭಿಮಾನಿದೇವತೆಗಳು, ಎಂದರೆ, ಶ್ರೋತ್ರೇಂದ್ರಿಯಕ್ಕೆ ದಿಕ್ಕು, ತ್ವಗಿಂದ್ರಿಯಕ್ಕೆ ವಾಯು, ಚಕ್ಷುರಿಂದ್ರಿಯಕ್ಕೆ ಸೂರ್ಯ, ರಸನೇಂದ್ರಿಯಕ್ಕೆ ವರುಣ, ಘ್ರಾಣೇಂದ್ರಿಯಕ್ಕೆ ಅಶ್ವಿನೀದೇವತೆಗಳು. ಚಂದ್ರ, ಬ್ರಹ್ಮ, ರುದ್ರ ಮತ್ತು ಆತ್ಮ ಇವರು ನಾಲ್ವರೂ,

**ಇತ್ಯಂತಃಕರಣಾಖ್ಯಸ್ಯ ಬುದ್ಧ್ಯಾದೇಶ್ಚಾಧಿದೈವತಂ ।**
**ಚತ್ವಾರ್ಯೇವ ತಥಾ ಪ್ರೋಕ್ತಾಃ ಕಿಲಾಧಿಷ್ಠಾತೃದೇವತಾಃ ॥೩೭॥**

ಬುದ್ಧಿ, ಮನಸ್ಸು, ಚಿತ್ತ, ಅಂತಃಕರಣರೂಪವಾಗಿ ನಾಲ್ಕುವಿಧವಾಗಿರುವ ಅಂತಃಕರಣಕ್ಕೆ ಅಧಿಪತಿಗಳು. ಇಲ್ಲಿ, ಅಂತಃಕರಣವು ನಿಶ್ಚಯಜ್ಞಾನವುಳ್ಳುದುದಾದರೆ ಬುದ್ಧಿಯೆಂದೂ, ಸಂಶಯರೂಪವಾದ ಜ್ಞಾನವುಳ್ಳದ್ದಾದರೆ ಮನಸ್ಸೆಂದೂ, ಅಹಂಕಾರ ವುಳ್ಳದ್ದಾದರೆ ಚಿತ್ತವೆಂದೂ, ಸ್ಮರಣೆಯುಳ್ಳದ್ದಾದರೆ ಅಂತಃಕರಣವೆಂದೂ, ಒಂದೇ

ಅಂತಃಕರಣವು ಕಾರ್ಯಭೇದದಿಂದ ನಾಲ್ಕು ಹೆಸರುಗಳನ್ನು ಪಡೆಯುತ್ತವೆ. ಇವುಗಳಿಗೆ ಮೇಲೆ ಹೇಳಿದ ಚಂದ್ರಾದಿನಾಲ್ವರು ದೇವತೆಗಳು ಅಧಿಪತಿಗಳು.

**ಮನಸಾ ಸಹ ಚೈತಾನಿ ನೂನಂ ಪಂಚದಶೈವ ತು ।**
**ಸಾತ್ತ್ವಿಕಸ್ಯತು ಸರ್ಗೋಽಯಂ ಸಾತ್ತ್ವಿಕಾಖ್ಯಃ ಪ್ರಕೀರ್ತಿತಃ ॥೩೮॥**

ಜ್ಞಾನೇಂದ್ರಿಯಗಳ ಅಧಿದೇವತೆಗಳು ಐದು, ಅಂತಃಕರಣಭೇದಗಳು ನಾಲ್ಕು, ಮತ್ತು ಸಂಶಯನಿಶ್ಚಯಾತ್ಮಕವಾದ ಮನಸ್ಸು, ಇವುಗಳ ಅಧಿದೇವತೆಗಳು ಐದು, ಹೀಗೆ ಒಟ್ಟು ಈ ಹದಿನೈದೂ ಸಾತ್ತ್ವಿಕಾಹಂಕಾರದ ಸೃಷ್ಟಿಯು. ಇವಕ್ಕೆ ಸಾತ್ತ್ವಿಕ ಸೃಷ್ಟಿ ಎಂದು ಹೆಸರು.

**ಸ್ಥೂಲಸೂಕ್ಷ್ಮಾದಿಭೇದೇನ ದ್ವೇ ರೂಪೇ ಪರಮಾತ್ಮನಃ ।**
**ಜ್ಞಾನರೂಪಂ ನಿರಾಕಾರಂ ನಿದಾನಂ ತತ್ಪ್ರಚಕ್ಷತೇ ॥೩೯॥**

ಹೀಗೆ ತತ್ತ್ವಗಳ ಸೃಷ್ಟಿಕ್ರಮದಲ್ಲಿ ವಿವರಗಳನ್ನು ಹೇಳಿದುದಾಯಿತು. ಮಹಾಮಾಯೆಯಿಂದ ಕೂಡಿದ ಬ್ರಹ್ಮವಸ್ತುವಿಗೇ ಭಗವತೀ ಎಂದು ಹೆಸರು. ಆ ಬ್ರಹ್ಮರೂಪನಾದ ಪರಮಾತ್ಮನಿಗೆ ಸ್ಥೂಲ ಮತ್ತು ಸೂಕ್ಷ್ಮ ಎಂದು ಎರಡು ರೂಪಗಳು ಇರುತ್ತವೆ. ಜ್ಞಾನಜ್ಯೋತಿಯ ಪ್ರಕಾಶಸ್ವರೂಪವಾದ, ಅವಯವರಹಿತವಾದ ಮತ್ತು ಜಗತ್ತಿಗೆ ಕಾರಣವಾದ ಬ್ರಹ್ಮಸ್ವರೂಪವು ಸೂಕ್ಷ್ಮರೂಪವೆಂದು ಹೇಳಲ್ಪಡುತ್ತದೆ. ಉಪಾಸನೆಗೋಸ್ಕರ ಈ ವಿವರಗಳನ್ನು ಕೊಡುತ್ತಿರಲಾಗಿದೆ. ಇವು ವ್ಯಾವಹಾರಿಕವಾದುವು.

**ಸಾಧಕಸ್ಯ ತು ಧ್ಯಾನಾದೌ ಸ್ಥೂಲರೂಪಂ ಪ್ರಚಕ್ಷತೇ ।**
**ಶರೀರಂ ಸೂಕ್ಷ್ಮಮೇವೇದಂ ಪುರುಷಸ್ಯ ಪ್ರಕೀರ್ತಿತಂ ॥೪೦॥**

ಧ್ಯಾನದಿಂದ ಆತ್ಮನನ್ನು ಸಾಧಿಸತಕ್ಕ ಜ್ಞಾನಪರಿಪಕ್ವವಾಗಿಲ್ಲದ ಸಾಧಕನಿಗೆ ಆಕಾರವಿಲ್ಲದ ವಸ್ತುವನ್ನು ಧ್ಯಾನಿಸಲು ಕಷ್ಟವಾಗುವುದರಿಂದ ಅವನ ಧ್ಯಾನವೇ ಮೊದಲಾದವುಗಳ ಆನುಕೂಲ್ಯಕ್ಕಾಗಿ ಮಾಯೆಯಿಂದ ವಿಶಿಷ್ಟವಾದ ಎಂದರೆ ಈಶ್ವರ ರೂಪವನ್ನು ಸ್ಥೂಲರೂಪವೆಂದು ಹೇಳುತ್ತಾರೆ. ಮತ್ತು ಪುರುಷನಿಗೆ ಹಿಂದೆ ಹೇಳಿದ ಸೂಕ್ಷ್ಮರೂಪವೇ ನಿಜವಾದ ಪಾರಮಾರ್ಥಿಕವಾದ ಸ್ವರೂಪವೆಂದು ಹೇಳುತ್ತಾರೆ.

**ಮಮ ಚೈವ ಶರೀರಂ ವೈ ಸೂತ್ರಮಿತ್ಯಭಿಧೀಯತೇ ।**
**ಸ್ಥೂಲಂ ಶರೀರಂ ವಕ್ಷ್ಯಾಮಿ ಬ್ರಹ್ಮಣಃ ಪರಮಾತ್ಮನಃ ॥೪೧॥**

ಸೂತ್ರವೆಂಬ ಸಂಜ್ಞೆಯುಳ್ಳ ಈ ನನ್ನ ಶರೀರವೂ ಸಹ ಪರಮಾತ್ಮನ ಸ್ಥೂಲ ಶರೀರವೇ ಆಗಿರುತ್ತದೆ. ಅಂತಹ ಬ್ರಹ್ಮನ ಸ್ಥೂಲಶರೀರಸ್ವರೂಪವನ್ನು ನಿನಗೆ ಸ್ಪಷ್ಟವಾಗಿ ಹೇಳುತ್ತೇನೆ.

**ಶೃಣು ನಾರದ ಯತ್ನೇನ ಯಚ್ಛ್ರುತ್ವಾ ವಿಪ್ರಮುಚ್ಯತೇ ।**
**ತನ್ಮಾತ್ರಾಣಿ ಪುರೋಕ್ತಾನಿ ಭೂತಸೂಕ್ಷ್ಮಾಣಿ ಯಾನಿ ವೈ ॥೪೨॥**

ಓ ನಾರದನೇ, ನಾನು ಹೇಳುವುದನ್ನು ಪ್ರಯತ್ನಪೂರ್ವಕವಾಗಿ ಶ್ರದ್ಧೆಯಿಂದ ಕೇಳು. ಹಾಗೆ ಕೇಳುವುದರಿಂದ ಸಂಸಾರದಿಂದ ಬಿಡುಗಡೆಯಾಗಿ ಮುಕ್ತಿಯುಂಟಾಗುತ್ತದೆ. ಹಿಂದೆ ತನ್ಮಾತ್ರೆಗಳೆಂಬ ಯಾವ ಪೃಥಿವಿಯೇ ಮೊದಲಾದ ಭೂತಸೂಕ್ಷ್ಮಗಳನ್ನು ಹೇಳಿದೆನೋ,

**ಪಂಚೀಕೃತ್ಯ ತು ತಾನ್ಯೇವ ಪಂಚಭೂತಸಮುದ್ಭವಃ ।**
**ಪಂಚೀಕರಣಭೇದೋಽಯಂ ಶೃಣು ಸಂವದತಃ ಕಿಲ ॥೪೩॥**

ಆ ಸೂಕ್ಷ್ಮಭೂತಗಳನ್ನು ಪಂಚೀಕರಣ ಅಥವಾ ಐದುಭಾಗಗಳಾಗಿ ಮಾಡಿ ಪರಸ್ಪರವಾಗಿ ಮಿಶ್ರಣಮಾಡಿದರೆ, ಐದು ಮಹಾಭೂತಗಳು ಹುಟ್ಟುತ್ತವೆ. ಈ ಪಂಚೀಕರಣದ ಕ್ರಮವನ್ನು ಹೇಳುತ್ತೇನೆ, ಕೇಳು.

**ಪ್ರಥಮಂ ರಸತನ್ಮಾತ್ರಾಮುಹಾದಾಯ ಮನಸ್ಯಪಿ ।**
**ಕಲ್ಪಯೇಚ್ಚ ತಥಾ ತದ್ವೈ ಯಥಾ ಭವತಿ ಚೋದಕಂ ॥೪೪॥**

ಮೊದಲು ರಸತನ್ಮಾತ್ರವೆಂಬ ಸೂಕ್ಷ್ಮಭೂತಗಳಲ್ಲೊಂದಾದ ಜಲವನ್ನು ಮನಸ್ಸಿನಲ್ಲಿ ಎರಡು ಭಾಗವಾಗಿ ವಿಂಗಡಿಸಿ ಅದರಲ್ಲಿ ಒಂದು ಭಾಗವನ್ನು ಜಲಕ್ಕಾಗಿಯೇ ಬಿಟ್ಟು ಉಳಿದ ಒಂದು ಭಾಗವನ್ನು ತಿರುಗಿ ನಾಲ್ಕು ಭಾಗಗಳಾಗಿ ವಿಂಗಡಿಸಿ ಆ ನಾಲ್ಕು ಭಾಗಗಳನ್ನು ಉಳಿದ ಗಂಧತನ್ಮಾತ್ರ, ಶಬ್ದತನ್ಮಾತ್ರ, ಸ್ಪರ್ಶತನ್ಮಾತ್ರ ಮತ್ತು ರೂಪತನ್ಮಾತ್ರಗಳೆಂಬ ಸೂಕ್ಷ್ಮಗಳಿಗೆ ಒಂದೊಂದು ಭಾಗವನ್ನು ಸೇರಿಸಬೇಕು.

**ಶಿಷ್ಟಾನಾಂ ಚೈವ ಭೂತಾನಾಮಂಶಾನ್ ಕೃತ್ವಾ ಪೃಥಕ್ಪೃಥಕ್ ।**
**ಉದಕೇ ಮಿಶ್ರಯೇಚ್ಚಾಂಶಾನ್ ಕೃತೇ ರಸಮಯೇ ತತಃ ॥೪೫॥**

ಹೀಗೆ ಉಳಿದ ನಾಲ್ಕು ಸಣ್ಣ ಭೂತಗಳನ್ನೂ ಎರಡೆರಡು ಭಾಗವಾಗಿ ವಿಂಗಡಿಸಿ, ಅವುಗಳಲ್ಲಿ ಒಂದೊಂದು ಭಾಗವನ್ನು ಆಯಾಯ ಭೂತಗಳಿಗಾಗಿ ಬಿಟ್ಟು,

ಉಳಿದ ಒಂದೊಂದು ಭಾಗಗಳನ್ನು ತಿರುಗಿ ನಾಲ್ಕು ಭಾಗಗಳಾಗಿ ವಿಂಗಡಿಸಿ, ಆ ನಾಲ್ಕು ಭಾಗಗಳನ್ನು ಉಳಿದ ಇತರ ನಾಲ್ಕು ಭೂತಗಳಿಗೆ ಹಂಚಬೇಕು. ಹೀಗೆ ಮಾಡಿದರೆ ಜಲವನ್ನು ಬಿಟ್ಟು ಉಳಿದ ನಾಲ್ಕು ಭೂತಗಳ ಒಂದೊಂದು ಭಾಗಗಳು ಎಂದರೆ ಒಟ್ಟು ನಾಲ್ಕು ಭಾಗಗಳು ಜಲಕ್ಕೆ ಬಂದು ಸೇರುವುವು. ಹೀಗೆ ಸೇರಿದಲ್ಲಿ ಪಂಚೀಕೃತವಾದ ಸ್ಥೂಲಜಲವು ಉಂಟಾಗುತ್ತದೆ.

**ತದಾ ಭೂತವಿಭಾಗೇ ಚ ಚೈತನ್ಯೇ ಚ ಪ್ರವೇಶಿತೇ ।**
**ಚೈತನ್ಯಸ್ಯ ಪ್ರವೇಶಾತ್ತು ತದಾsಹಮಿತಿ ಸಂಶಯಃ ॥೪೬॥**

ಹೀಗೆಯೇ ಉಳಿದ ಪೃಥಿವಿಯೇ ಮೊದಲಾದ ಉಳಿದ ನಾಲ್ಕು ಭೂತಗಳ ಪಂಚೀಕರಣದಿಂದ ಸ್ಥೂಲಭೂತಗಳು ಆಗಲು, ಆ ಪಂಚಭೂತಗಳಿಂದುಂಟಾದ ಶರೀರಗಳಲ್ಲಿ ಬ್ರಹ್ಮಸ್ವರೂಪವು ಕನ್ನಡಿಯಲ್ಲಿ ಮುಖವು ಪ್ರತಿಬಿಂಬಿತವಾಗುವಂತೆ ಪ್ರವೇಶಿಸುತ್ತದೆ. ಆಗ ಆ ಬ್ರಹ್ಮಚೈತನ್ಯಪ್ರವೇಶದಿಂದ ಆ ಪಂಚಭೂತರೂಪವಾದ ದೇಹದಲ್ಲಿ ನಾನು ಎಂಬ ತಾದಾತ್ಮ್ಯಜ್ಞಾನವು ಉಂಟಾಗುತ್ತದೆ.

**ಪ್ರತೀಯಮಾನೇ ತೇನೈವ ವಿಶೇಷೇಣಾಭಿಮಾನತಃ ।**
**ಆದಿನಾರಾಯಣೋ ದೇವೋ ಭಗವಾನಿತಿ ಚೋಚ್ಯತೇ ॥೪೭॥**

ಹೀಗೆ ಉಂಟಾಗುವ ಮೊದಲನೆಯ ಶರೀರದಲ್ಲಿ ನಾನು ಎಂಬ ಅಭಿಮಾನದಿಂದ ಕೂಡಿರುವ ಜೀವರೂಪವಾದ ಬ್ರಹ್ಮಚೈತನ್ಯವನ್ನೇ ಆದಿನಾರಾಯಣ, ವೈಶ್ವಾನರ, ಜ್ಞಾನಜ್ಯೋತಿಃಪ್ರಕಾಶಸ್ವರೂಪನಾದ ಭಗವಾನ್ ಎಂದೂ ಹೇಳುತ್ತಾರೆ.

**ಘನೀಭೂತೇsಥ ಭೂತಾನಾಂ ವಿಭಾಗೇ ಸ್ಪಷ್ಟತಾಂ ಗತೇ ।**
**ವೃದ್ಧಿಂ ಪ್ರಾಪ್ಯ ಗುಣೈಶ್ಚೈತ್ಥಮೇಕೈಕಗುಣವೃದ್ಧಿತಃ ॥೪೮॥**

ಆಯಾಯ ಪೃಥಿವಿಯೇ ಮೊದಲಾದ ಸೂಕ್ಷ್ಮಭೂತಗಳು ಕ್ರಮವಾಗಿ ಮೇಲೆ ಹೇಳಿದಂತೆ ಪಂಚೀಕರಣದಿಂದ ಸ್ಥೂಲಭೂತಗಳಾಗಿ ಮಾರ್ಪಟ್ಟು ಸ್ಪಷ್ಟವಾಗಿ ಕಾಣುವಂತಾದ ಮೇಲೆ, ಆ ಸ್ಥೂಲಭೂತಗುಣಗಳು ತಮಗೆ ಕಾರಣಗಳಾದ ಸೂಕ್ಷ್ಮಭೂತಗಳ ಶಬ್ದವೇ ಮೊದಲಾದ ಗುಣಗಳಿಂದ ಒಂದೊಂದರಂತೆ ವೃದ್ಧಿಯನ್ನೈದುತ್ತಾ ಹೋಗುವುವು. ಎಂದರೆ ಆಕಾಶಭೂತಕ್ಕೆ ಗುಣವು ಶಬ್ದ ಒಂದು ಮಾತ್ರ. ವಾಯುವಿಗೆ ಆಕಾಶಭೂತದ ಗುಣವಾದ ಶಬ್ದವೂ ಮತ್ತು ವಾಯುವಿನ

ಸ್ವಂತ ಗುಣವಾದ ಸ್ಪರ್ಶಗುಣವೂ ಇರುತ್ತವೆ. ಹೀಗೆಯೇ ಅಗ್ನಿಗೆ ಶಬ್ದ, ಸ್ಪರ್ಶ, ರೂಪಗುಣಗಳೂ, ಜಲಕ್ಕೆ ಶಬ್ದ, ಸ್ಪರ್ಶ, ರೂಪ, ರಸಗಳೂ ಪೃಥಿವಿಗೆ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧವೆಂಬ ಐದು ಗುಣಗಳೂ ಇರುತ್ತವೆ. ಈ ರೀತಿ ಆಕಾಶಕ್ಕೆ ಒಂದು ಗುಣ, ವಾಯುವಿಗೆ ಎರಡು ಗುಣಗಳು, ಅಗ್ನಿಗೆ ಮೂರು ಗುಣಗಳೂ, ಜಲಕ್ಕೆ ನಾಲ್ಕು ಗುಣಗಳೂ, ಪೃಥಿವಿಗೆ ಐದು ಗುಣಗಳೂ ವೃದ್ಧಿಕ್ರಮದಿಂದ ಉಂಟಾಗುವುವೆಂದು ಅಭಿಪ್ರಾಯವು.

**ಆಕಾಶಸ್ಯ ಗುಣಶ್ಚೈಕಃ ಶಬ್ದ ಏವ ನ ಚಾಪರಃ ।**
**ಶಬ್ದಸ್ಪರ್ಶೌ ಚ ವಾಯೋಶ್ಚ ದ್ವೌ ಗುಣೌ ಪರಿಕೀರ್ತಿತೌ ॥೪೯॥**

ಆಕಾಶಕ್ಕೆ ಶಬ್ದವೊಂದೇ ಗುಣವು, ಬೇರೊಂದಿಲ್ಲವು. ವಾಯುವಿನ ಗುಣಗಳು ಶಬ್ದ ಮತ್ತು ಸ್ಪರ್ಶಗಳೆಂಬ ಎರಡು ಗುಣಗಳು ಎಂದು ತಿಳಿಯಬೇಕು.

**ಅಗ್ನೇಃ ಶಬ್ದಶ್ಚ ಸ್ಪರ್ಶಶ್ಚ ರೂಪಮೇತೇ ತ್ರಯೋ ಗುಣಾಃ ।**
**ಶಬ್ದಸ್ಪರ್ಶರೂಪರಸಾಶ್ಚತ್ವಾರೋ ವೈ ಜಲಸ್ಯ ಚ ॥೫೦॥**

ಮತ್ತು ಅಗ್ನಿಗೆ ಸ್ಪರ್ಶವೂ, ಶಬ್ದವೂ, ರೂಪವೂ ಈ ಮೂರು ಗುಣಗಳು, ಜಲಕ್ಕೆ ಶಬ್ದ, ಸ್ಪರ್ಶ, ರೂಪ, ರಸಗಳೆಂಬ ನಾಲ್ಕು ಗುಣಗಳು.

**ಸ್ಪರ್ಶಶಬ್ದರಸಾ ರೂಪಂ ಗಂಧಶ್ಚ ಪೃಥಿವೀಗುಣಾಃ ।**
**ಏವಂ ಮಿಲಿತಯೋಗೈಶ್ಚ ಬ್ರಹ್ಮಾಂಡೋತ್ಪತ್ತಿರುಚ್ಯತೇ ॥ ೫೧॥**

ಪೃಥಿವಿಗೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ಗುಣಗಳು. ಇದು ಸೂಕ್ಷ್ಮಭೂತಗಳ ಪಂಚೀಕರಣದಿಂದ ಮಹಾಭೂತಗಳಿಗೆ ಬಂದ ಗುಣಗಳ ವೃದ್ಧಿ ಕ್ರಮವು. ಈ ರೀತಿ ಪಂಚೀಕರಣದಿಂದ ಈ ಪ್ರಪಂಚವು ಹುಟ್ಟುತ್ತದೆ.

**ಸರ್ವೇ ಜೀವಾ ಮಿಲಿತ್ವೈವ ಬ್ರಹ್ಮಾಂಡಾಂಶಸಮುದ್ಭವಾಃ ।**
**ಚತುರಶೀತಿಲಕ್ಷಾಶ್ಚ ಪ್ರೋಕ್ತಾ ವೈ ಜೀವಜಾತಯಃ ॥೫೨॥**

ಎಲ್ಲ ಜೀವರುಗಳ ಅವಿದ್ಯೆಗಳೂ ಸೇರಿ ಈ ಪ್ರಪಂಚದ ಉತ್ಪತ್ತಿಯಾಗುತ್ತದೆ. ಮತ್ತು ಆ ಜೀವರುಗಳು ಒಟ್ಟು ಎಂಭತ್ತುನಾಲ್ಕು ಲಕ್ಷ ಜಾತಿಗಳು ಈ ಪ್ರಪಂಚದಲ್ಲಿರುತ್ತವೆಯೆಂದು ಹೇಳಿರುತ್ತದೆ. ಇಲ್ಲಿ ಹೇಳಿರುವ ಸೃಷ್ಟಿಕ್ರಮ, ಸೃಷ್ಟಪದಾರ್ಥಗಳ ಸ್ವರೂಪ, ಸಂಖ್ಯೆ ಇವುಗಳ ವಿಷಯದಲ್ಲಿ ಕೊಟ್ಟಿರುವ ವಿವರಗಳಲ್ಲಿ ಅಭಿಪ್ರಾಯ

ಭೇದಕ್ಕೆ ಅವಕಾಶವಿದೆ. ಶೈವರೂ, ವೈಷ್ಣವರೂ, ಸಾಂಖ್ಯರೂ, ವೇದಾಂತಿಗಳೂ ಹೇಳಿರುವ ಪ್ರಕ್ರಿಯೆಗಳಲ್ಲಿ ಯಾವುದಾದರೂ ಒಂದರ ದೃಷ್ಟಿಯಿಂದ ಇದನ್ನು ಹೇಳಿದೆ ಎಂದು ತಿಳಿಯಬೇಕೇ ಹೊರತು ವಿರುದ್ಧವಾಗಿದೆ ಎಂದು ತಿಳಿಯಬಾರದು. ಸಾಮಾನ್ಯ ಜನರ ಮನಸ್ಸಿನಲ್ಲಿ ಉಂಟಾಗುವ ಕುತೂಹಲ, ಸಂಶಯಗಳ ನಿವಾರಣೆಗೋಸ್ಕರ ಇದನ್ನು ಹೇಳಿದೆ. ಒಟ್ಟಿನಲ್ಲಿ ಸೃಷ್ಟಿಯು ಮಾಯಿಕವೂ, ಮಿಥ್ಯೆಯೂ, ತೋರಿಕೆಯ ರೂಪವುಳ್ಳದೂ ಆಗಿರುವುದರಿಂದ ಭೇದಗಳನ್ನು ಅಷ್ಟಾಗಿ ಗಮನಿಸಬೇಕಾಗಿಲ್ಲವು. ಆದುದರಿಂದ ಮೋಕ್ಷಸ್ವರೂಪದ, ಅದರ ಸಾಧನದ ರೀತಿನೀತಿಗಳ, ವಿವರಗಳನ್ನು ಸರಿಯಾಗಿ ತಿಳಿಯಿಸುವುದರಲ್ಲಿ ಮಾತ್ರವೇ ವೇದ, ಶಾಸ್ತ್ರ, ಪುರಾಣಗಳಿಗೆ ಮುಖ್ಯ ತಾತ್ಪರ್ಯವೆಂಬ ಅಂಶವನ್ನು ಮರೆಯಬಾರದು.

ಒಟ್ಟಿನಲ್ಲಿ ಈ ಪ್ರಪಂಚವನ್ನೂ ಶರೀರಗಳನ್ನೂ ಪಾಂಚಭೌತಿಕಗಳೆಂದು ಹೇಳಿದೆ. ಅದಕ್ಕಾಗಿ ಈ ಪಂಚೀಕರಣದ ಪ್ರಕ್ರಿಯೆಗಳನ್ನು ವಿವರಿಸುತ್ತದೆ. ಈ ಪಂಚ ಭೂತಗಳಲ್ಲಿ ಪ್ರತಿಯೊಂದರಲ್ಲೂ ತನ್ನದೇ ಆದುದು ಅರ್ಧಭಾಗವು ಎಂದರೆ ಎಂಟನೆಯ ನಾಲ್ಕುಭಾಗ ಮಾತ್ರವಾಗಿರುತ್ತದೆ. ಉಳಿದ ಅರ್ಧಭಾಗವು ಇತರ ನಾಲ್ಕು ಭೂತಗಳ ಎಂಟನೆಯ ಒಂದು ಭಾಗದಿಂದ ಉಂಟಾಗಿರುತ್ತದೆ. ಹೀಗೆ ಭೂಯೋಽನುಗ್ರಹ ನ್ಯಾಯದಿಂದ ಹೆಚ್ಚಾಗಿರುವ ಅರ್ಧಭಾಗವನ್ನು ಅವಲಂಬಿಸಿ ಒಂದೊಂದು ಭೂತಕ್ಕೂ ಆಯಾ ಭೂತವೆಂದು ವ್ಯವಹಾರವಿರುತ್ತದೆ. ಅಲ್ಲದೆ ಆಕಾಶದಿಂದ ವಾಯುವೂ, ಅದರಿಂದ ತೇಜಸ್ಸೂ, ಅದರಿಂದ ಜಲವೂ, ಅದರಿಂದ ಪೃಥ್ವಿಯೂ ಉಂಟಾಗುವುದ ರಿಂದ ಕಾರಣಗಳಲ್ಲಿನ ಗುಣಗಳು ಕಾರ್ಯಗಳಲ್ಲಿರಬೇಕಾದುದು ನ್ಯಾಯವಾದುದರಿಂದ ಎಲ್ಲಕ್ಕೂ ಮೊದಲಿನ ಭೂತವಾದ ಆಕಾಶದಲ್ಲಿ ಒಂದು ಗುಣವೂ ಎರಡನೆಯದಾದ ವಾಯುವಿನಲ್ಲಿ ಎರಡೂ, ಮೂರನೆಯದಾಗಿ ಉಂಟಾಗುವ ತೇಜಸ್ಸಿನಲ್ಲಿ ಮೂರು ಗುಣಗಳೂ, ಕ್ರಮದಲ್ಲಿ ನಾಲ್ಕನೆಯದಾದ ಜಲದಲ್ಲಿ ನಾಲ್ಕುಗುಣಗಳೂ, ಇದೇ ಕ್ರಮದಲ್ಲಿ ಐದನೆಯದಾಗಿ ಉಂಟಾಗುವ ಪೃಥಿವಿಯಲ್ಲಿ ಐದುಗುಣಗಳೂ ಉಂಟಾಗಿರು ತ್ತವೆ. ಆದುದರಿಂದ ಎಲ್ಲ ಶರೀರಗಳಿಗೂ ಸ್ಥೂಲಭೂತಗಳಿಗೂ ಪಾಂಚಭೌತಿಕಗಳೆಂಬ ವ್ಯವಹಾರವು ಸಂಗತವಾಗಿರುತ್ತದೆ. ಎಂದು ತಿಳಿಯಬಹುದು.

**ಇತಿ ಶ್ರೀ ದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಸಪ್ತಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಏಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ತೃತೀಯಸ್ಕಂಧೇ

### ॥ ಅಷ್ಟಮೋಽಧ್ಯಾಯಃ ॥

### ಎಂಟನೆಯ ಅಧ್ಯಾಯವು

॥ ಬ್ರಹ್ಮೋವಾಚ ॥

**ಸರ್ಗೋಽಯಂ ಕಥಿತಸ್ತಾತ ಯತ್ಪೃಷ್ಟೋಽಹಂ ತ್ವಯಾಽಧುನಾ ।**
**ಗುಣಾನಾಂ ರೂಪಸಂಸ್ಥಾಂ ವೈ ಶೃಣುಷ್ವೈಕಾಗ್ರಮಾನಸಃ ॥೧॥**

ಬ್ರಹ್ಮನು ಹೇಳಿದನು—ಎಲೈ ಪ್ರೀತಿಪಾತ್ರನಾದ ನಾರದನೇ, ನೀನು ಈಗ ಯಾವ ಸೃಷ್ಟಿಕರ್ಮವನ್ನು ಕೇಳಿದೆಯೋ ಅದನ್ನು ಹೇಳಿದುದಾಯಿತು. ಇನ್ನು ಸತ್ತ್ವ, ರಜಸ್ಸು ಮತ್ತು ತಮಸ್ಸು ಎಂಬ ಗುಣಗಳ ಸ್ವರೂಪವನ್ನು ವಿವರಿಸುವೆನು. ಸಾವಧಾನವಾದ ಮನಸ್ಸಿನಿಂದ ಕೇಳು.

**ಸತ್ತ್ವಂ ಪ್ರೀತ್ಯಾತ್ಮಕಂ ಜ್ಞೇಯಂ ಸುಖಾತ್ಪ್ರೀತಿಸಮುದ್ಭವಃ ।**
**ಆರ್ಜವಂ ಚ ತಥಾ ಸತ್ಯಂ ಶೌಚಂ ಶ್ರದ್ಧಾ ಕ್ಷಮಾ ಧೃತಿಃ ॥೨॥**

ಸತ್ತ್ವಗುಣವು ಪ್ರೀತಿಯ ಸ್ವರೂಪವಾಗಿರುತ್ತದೆ. ಎಂದರೆ ಸತ್ತ್ವಗುಣವು ಮುಂದಾಗಿರುವುದರಿಂದ ತನಗೂ ಇತರರಿಗೂ ಸುಖವುಂಟಾಗುತ್ತದೆ. ಆ ಸುಖದಿಂದ ಅವನು ಇತರರನ್ನೂ, ಇತರರು ಅವನನ್ನೂ ಪ್ರೀತಿಸುವಂತಾಗುತ್ತದೆ. ಅಂಥವನ ಭಾವ, ಮಾತು ಮತ್ತು ಕಾರ್ಯಗಳಲ್ಲಿ ವೈವಿಧ್ಯವಿಲ್ಲದೆ ಸತ್ಯಾಚರಣೆಯೂ, ಮೂರು ಬಗೆಯ ನೈರ್ಮಲ್ಯವೂ, ಧರ್ಮಾಚರಣೆಯಲ್ಲಿ ಆದರವೂ, ಸಹನೆಯೂ, ಧೈರ್ಯವೂ ಈ ಗುಣಗಳು ಉಂಟಾಗುತ್ತವೆ.

**ಅನುಕಂಪಾ ತಥಾ ಲಜ್ಜಾ ಶಾಂತಿಃ ಸಂತೋಷ ಏವ ಚ ।**
**ಏತೈಃ ಸತ್ತ್ವಪ್ರತೀತಿಶ್ಚ ಜಾಯತೇ ನಿಶ್ಚಲಾ ಸದಾ ॥೩॥**

ಅಲ್ಲದೆ, ದಯೆ, ನಾಚಿಕೆ, ಶಾಂತಿ, ಸಂತೋಷ ಇವುಗಳು, ಸತ್ತ್ವಗುಣವು ಮುಂದಾಗಿರುವುದರ ಗುರುತುಗಳು. ಇವುಗಳು ಕಂಡುಬಂದರೆ, ಇವುಗಳಿಗೆ ಕಾರಣವಾದ ಸತ್ತ್ವಗುಣವು ಮುಂದಾಗಿದೆಯೆಂದು ತಿಳಿಯಬಹುದು. ಬೆಟ್ಟದಲ್ಲಿ ಹೊಗೆಯು ಕಂಡುಬಂದರೆ ಆ ಹೊಗೆಗೆ ಕಾರಣವಾದ ಬೆಂಕಿಯಿರುವುದೆಂದು ತಿಳಿಯುವಂತೆ, ಯಾವ ವ್ಯಕ್ತಿಯಲ್ಲಿ ಯಾವ ಗುಣವು ಮುಂದಾಗಿದೆ ಎಂಬುದನ್ನೂ ತಿಳಿಯಬಹುದು.

**ಶ್ವೇತವರ್ಣಂ ತಥಾ ಸತ್ತ್ವಂ ಧರ್ಮೇ ಪ್ರೀತಿಕರಂ ಸದಾ ।**
**ಸಚ್ಛ್ರದ್ಧೋತ್ಪಾದಕಂ ನಿತ್ಯಮಸಚ್ಛ್ರದ್ಧಾನಿವಾರಕಂ ॥೪॥**

ಸತ್ತ್ವಗುಣವು ಬಿಳಿಯ ವರ್ಣವುಳ್ಳದ್ದು. ಆ ಸತ್ತ್ವಗುಣವು ಯಾವಾಗಲೂ ಧರ್ಮದ ಆಚರಣೆಯಲ್ಲಿ ಪ್ರೀತಿಯನ್ನುಂಟುಮಾಡುತ್ತದೆ. ಮತ್ತು ಒಳ್ಳೆಯ ಶ್ರದ್ಧೆಯನ್ನು ಉಂಟುಮಾಡುತ್ತದೆ. ಒಳ್ಳೆಯ ಕಾರ್ಯದಲ್ಲಿ ಯಾವಾಗಲೂ ಆಸಕ್ತಿಯನ್ನುಂಟುಮಾಡುತ್ತದೆ. ಅಲ್ಲದೆ ಕೆಟ್ಟ ಶ್ರದ್ಧೆಯನ್ನು ಎಂದರೆ ಅಸತ್ಕಾರ್ಯದಲ್ಲಿ ಪ್ರವೃತ್ತಿಯನ್ನು ಯಾವಾಗಲೂ ತಡೆಯುತ್ತದೆ.

**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚ ತಥಾಪರಾ ।**
**ಶ್ರದ್ಧಾ ತು ತ್ರಿವಿಧಾ ಪ್ರೋಕ್ತಾ ಮುನಿಭಿಸ್ತತ್ತ್ವದರ್ಶಿಭಿಃ ॥೫॥**

ಹಿಂದೆ ಹೇಳಿದ ಶ್ರದ್ಧೆಯು ಮೂರು ವಿಧವು. ಒಂದು ಸಾತ್ತ್ವಿಕೀ ಎಂದರೆ ಸತ್ತ್ವಗುಣದಿಂದ ಹುಟ್ಟುವುದು. ಇನ್ನೊಂದು ರಾಜಸೀ ಎಂದರೆ ರಜೋಗುಣದಿಂದ ಬಂದುದು. ಮೂರನೆಯದು ತಾಮಸೀ ಎಂದರೆ ತಮೋಗುಣದಿಂದ ಬಂದುದು ಎಂದು ಇದರ ಸ್ವರೂಪವನ್ನು ತಿಳಿದವರು ವಿಮರ್ಶಿಸಿ ನೋಡಿ ಹೇಳುವರು.

**ರಕ್ತವರ್ಣಂ ರಜಃ ಪ್ರೋಕ್ತಮಪ್ರೀತಿಕರಮದ್ಭುತಂ ।**
**ಅಪ್ರೀತಿರ್ದುಃಖಯೋಗತ್ವಾದ್ಭವತ್ಯೇವ ಸುನಿಶ್ಚಿತಾ ॥೬॥**

ರಜೋಗುಣವು ಕೆಂಪುವರ್ಣವುಳ್ಳದ್ದು. ಅದು ಅಪ್ರೀತಿಯನ್ನುಂಟುಮಾಡುತ್ತದೆ. ಅದು ಹೇಗೆಂದರೆ, ರಜೋಗುಣವು ದುಃಖಸಂಬಂಧವುಳ್ಳುದು. ಆ ದುಃಖವುಂಟಾದಲ್ಲಿ ಎಲ್ಲ ಪದಾರ್ಥಗಳಲ್ಲಿಯೂ ಕಡೆಗೆ ಪ್ರೀತಿಯು ಹೋಗುತ್ತದೆ.

**ಪ್ರದ್ವೇಷೋಽಥ ತಥಾ ದ್ರೋಹೋ ಮತ್ಸರಃ ಸ್ತಂಭ ಏವ ಚ ।**
**ಉತ್ಕಂಠಾ ಚ ತಥಾ ನಿದ್ರಾ ಶ್ರದ್ಧಾ ತತ್ರ ಚ ರಾಜಸೀ ॥೭॥**

ವೈರ, ದ್ರೋಹ ಅಥವಾ ಮೋಸ, ಅಸೂಯೆ, ಜಡತೆ, ಚಿಂತೆ, ನಿದ್ರೆ ಇವುಗಳು ರಜೋಗುಣದಿಂದ ಉಂಟಾಗುವುವು. ಇವುಗಳಲ್ಲಿರತಕ್ಕ ಮತ್ತು ಇವುಗಳಿಂದ ಉಂಟಾಗುವ ಶ್ರದ್ಧೆಯು ರಾಜಸವೆನಿಸಿಕೊಂಡಿದೆ.

**ಮಾನೋ ದಮಸ್ತಥಾ ಗರ್ವೋ ರಜಸಾ ಕಿಲ ಜಾಯತೇ ।**
**ಪ್ರತ್ಯೇತವ್ಯಂ ರಜಸ್ತ್ವೇತೈರ್ಲಕ್ಷಣೈಶ್ಚ ವಿಚಕ್ಷಣೈಃ ॥೮॥**

ಅಹಂಕಾರ, ಇಂದ್ರಿಯನಿಗ್ರಹವಿಲ್ಲದಿರುವಿಕೆ, ಗರ್ವ, ಇವುಗಳೂ ರಜೋಗುಣದಿಂದ ಹುಟ್ಟುತ್ತವೆ. ಇವುಗಳು ನಮ್ಮಲ್ಲಿ ಉಂಟಾದರೆ, ಆಗ ಅವುಗಳಿಗೆ ಕಾರಣವಾದ ರಜೋಗುಣವು ನಮ್ಮಲ್ಲಿ ಮುಂದಾಗಿರುವುದೆಂದು ಬುದ್ಧಿವಂತರು ತಿಳಿಯಬೇಕು.

**ಕೃಷ್ಣವರ್ಣಂ ತಮಃ ಪ್ರೋಕ್ತಂ ಮೋಹನಂ ಚ ವಿಷಾದಕೃತ್ ।**
**ಆಲಸ್ಯಂ ಚ ತಥಾಽಜ್ಞಾನಂ ನಿದ್ರಾ ದೈನ್ಯಂ ಭಯಂ ತಥಾ ॥೯॥**

ತಮೋಗುಣವು ಕಪ್ಪುಬಣ್ಣವುಳ್ಳದ್ದು. ಮೋಹ ಮತ್ತು ಸಂತಾಪವನ್ನುಂಟುಮಾಡುವುದು. ಹಾಗೆಯೇ, ಸೋಮಾರಿತನ, ಅಜ್ಞಾನ, ನಿದ್ರೆ, ದೀನತೆ ಮತ್ತು ಹೆದರಿಕೆ, ಇವುಗಳೂ ತಮೋಗುಣವು ಮುಂದಾಗಿರುವಿಕೆಯಿಂದ ಉಂಟಾಗುತ್ತವೆ.

**ವಿವಾದಶ್ಚೈವ ಕಾರ್ಪಣ್ಯಂ ಕೌಟಿಲ್ಯಂ ರೋಷ ಏವ ಚ ।**
**ವೈಷಮ್ಯಂ ವಾತಿನಾಸ್ತಿಕ್ಯಂ ಪರದೋಷಾನುದರ್ಶನಂ ॥೧೦॥**

ವ್ಯಾಜ್ಯ, ಜಿಪುಣತೆ, ವಂಚನೆ, ಸಿಟ್ಟು, ಪಕ್ಷಪಾತ, ಆತ್ಮನಾಗಲೀ, ಪರಲೋಕವಾಗಲಿ ಯಾವುದೂ ಇರುವುದಿಲ್ಲವೆಂದು ಹೇಳುವ ನಾಸ್ತಿಕತೆ, ಇನ್ನೊಬ್ಬರ ದೋಷವನ್ನೇ ಹುಡುಕುತ್ತಿರುವಿಕೆ, ಇವೆಲ್ಲವೂ ತಮೋಗುಣದಿಂದ ಉತ್ಪನ್ನವಾಗುವ ದೋಷಗಳು.

**ಪ್ರತ್ಯೇತವ್ಯಂ ತಮಸ್ತ್ವೇತೈರ್ಲಕ್ಷಣೈಃ ಸರ್ವಥಾ ಬುಧೈಃ ।**
**ತಾಮಸ್ಯಾ ಶ್ರದ್ಧಯಾ ಯುಕ್ತಂ ಪರತಾಪೋಪಪಾದಕಂ ॥೧೧॥**

ಈ ಮೇಲೆ ಹೇಳಿದ ವೈರ ಮುಂತಾದವುಗಳು ಉಂಟಾದರೆ ಆಗ ನಮ್ಮಲ್ಲಿ ತಮೋಗುಣ ಮುಂದಾಗಿರುವುದೆಂದು ಬುದ್ಧಿವಂತರು ತಿಳಿಯಬೇಕು. ಹಾಗೆಯೇ

ಇನ್ನೊಬ್ಬರಿಗೆ ಸಂತಾಪವನ್ನುಂಟುಮಾಡತಕ್ಕವನೂ ತಮೋಗುಣದಲ್ಲಿ ಶ್ರದ್ಧೆಯುಳ್ಳವನೆಂದು ತಿಳಿಯಬೇಕು. ಎಂದರೆ, ಮೇಲೆ ಹೇಳಿದ ಸತ್ತ್ವವೇ ಮೊದಲಾದ ಗುಣಗಳ ನೃದುತ್ವವೇ ಮೊದಲಾದ ಸ್ವಭಾವವುಳ್ಳವನು ಆಯಾಯ ಗುಣಗಳ ಸ್ವಭಾವದವನೆಂದು ತಿಳಿಯಬೇಕು. ಹೇಗೆಂದರೆ ಸತ್ತ್ವಸ್ವಭಾವದವನಾದರೆ ಸಾತ್ತ್ವಿಕನೆಂದೂ, ರಜೋಗುಣದ ಸ್ವಭಾವವುಳ್ಳವನಾದರೆ ರಾಜಸನೆಂದೂ, ತಮೋಗುಣದ ಸ್ವಭಾವಗಳಿದ್ದರೆ ತಾಮಸನೆಂದೂ ತಿಳಿಯಬೇಕು.

**ಸತ್ತ್ವಂ ಪ್ರಕಾಶಯಿತವ್ಯಂ ನಿಯಂತವ್ಯಂ ರಜಃ ಸದಾ ।**
**ಸಂಹರ್ತವ್ಯಂ ತಮಃ ಕಾಮಂ ಜನೇನ ಶುಭಮಿಚ್ಛತಾ ॥೧೨॥**

ಒಳ್ಳೆಯದಾಗಬೇಕೆಂದು ಇಚ್ಛಿಸುವ ಪ್ರತಿಯೊಬ್ಬನೂ ಸತ್ತ್ವಗುಣವನ್ನೇ ಪ್ರಕಟಿಸಬೇಕು, ವಿಕಾಸಗೊಳಿಸಬೇಕು, ಬಲಪಡಿಸುತ್ತಾ ಬೆಳೆಯಿಸಬೇಕು. ರಜೋಗುಣದ ಸ್ವಭಾವವನ್ನು ಆದಷ್ಟು ತಡೆದು ಯಾವಾಗಲೂ ಹತೋಟಿಯಲ್ಲಿಡಬೇಕು. ತಮೋಗುಣದ ಸ್ವಭಾವವನ್ನು ಆದಷ್ಟು ಕಡಮೆ ಮಾಡುತ್ತಾ ಕಡೆಗೆ ಎಲ್ಲ ವಿಧದಿಂದಲೂ ನಾಶಮಾಡಿಬಿಡಬೇಕು.

**ಅನ್ಯೋನ್ಯಾಭಿಭವಾಚ್ಛೈತೇ ವಿರುಧ್ಯಂತಿ ಪರಸ್ಪರಂ ।**
**ತಥಾನ್ಯೋನ್ಯಾಶ್ರಯಾಃ ಸರ್ವೇ ನ ತಿಷ್ಠಂತಿ ನಿರಾಶ್ರಯಾಃ ॥೧೩॥**

ಈ ಗುಣಗಳು ಪರಸ್ಪರವಾಗಿ ಒಂದನ್ನೊಂದು ಮೆಟ್ಟಿ ತುಳಿಯುವ ಸ್ವಭಾವವುಳ್ಳವುಗಳಾದುದರಿಂದ ವಿರೋಧಿಸುತ್ತಿರುತ್ತವೆ. ಆದರೆ ಇವುಗಳಲ್ಲಿ ಒಂದನ್ನು ಬಿಟ್ಟು ಮತ್ತೊಂದು ಇರಲಾರದು. ಹಾಗೂ ಇವು ಆಶ್ರಯವಿಲ್ಲದೆಯೂ ಇರಲಾರವು. ಎಂದರೆ ಇವುಗಳಿಗೆ ಪರಸ್ಪರವಾಗಿ ತಿಕ್ಕಾಟದಿಂದ ಈ ಮನಸ್ಸಿಗೆ ಕ್ಷೋಭೆ ಬರದಂತೆ ತನ್ನಲ್ಲಿರುವ ಸತ್ತ್ವಗುಣದ ಸ್ವಭಾವದಿಂದ ಅವುಗಳನ್ನು ತಡೆಯಬೇಕು.

**ಸತ್ತ್ವಂ ನ ಕೇವಲಂ ಕ್ವಾಪಿ ನ ರಜೋ ನ ತಮಸ್ತಥಾ ।**
**ಮಿಲಿತಾಶ್ಚ ಸದಾ ಸರ್ವೇ ತೇನಾನ್ಯೋನ್ಯಾಶ್ರಯಾಃ ಸ್ಮೃತಾಃ ॥೧೪॥**

ಸತ್ತ್ವಗುಣವು, ರಜಸ್ಸು ತಮಸ್ಸುಗಳನ್ನು ಬಿಟ್ಟು ತಾನೊಂದೇ ಎಲ್ಲಿಯೂ ಇರಲಾರದು. ಅದರಂತೆಯೇ ರಜೋಗುಣತಮೋಗುಣಗಳೂ ಒಂಟಿಯಾಗಿ ಇರಲಾರವು. ಎಲ್ಲವೂ ಒಟ್ಟು ಸೇರಿಯೇ ಇರುವುವು. ಆದುದರಿಂದಲೇ ಅವುಗಳು ಅನ್ಯೋ

ನ್ಯಾಶ್ರಯ ಎಂದರೆ ಒಂದನ್ನಾಶ್ರಯಿಸಿ ಮತ್ತೊಂದು ಇರತಕ್ಕ ಸ್ವಭಾವವುಳ್ಳದು ಎಂದು ಪ್ರಸಿದ್ಧವಾಗಿದೆ.

**ಅನ್ಯೋನ್ಯಮಿಥುನಾಶ್ಚೈವ ವಿಸ್ತಾರಂ ಕಥಯಾಮ್ಯಹಂ ।**
**ಶೃಣು ನಾರದ ಯಜ್ಞಾತ್ವಾ ಮುಚ್ಯತೇ ಭವಬಂಧನಾತ್ ॥೧೫॥**

ಮತ್ತು ಈ ಗುಣಗಳು ಒಂದಕ್ಕೊಂದು ಸೇರಿಕೊಂಡೇ ಇರುವುವು. ಓ ನಾರದನೇ, ನಿನಗೆ ಈ ವಿಚಾರವನ್ನು ಇನ್ನೂ ವಿವರಗಳೊಡನೆ ವಿಸ್ತಾರವಾಗಿ ಹೇಳುತ್ತೇನೆ. ಇದನ್ನು ಕೇಳಿ ತಿಳಿಯುವುದರಿಂದ ಸಂಸಾರದ ಕಟ್ಟನಿಂದ ಬಿಡುಗಡೆಯನ್ನು ಹೊಂದಬಹುದು.

**ಸಂದೇಹೋಽತ್ರ ನ ಕರ್ತವ್ಯೋ ಜ್ಞಾತ್ವೇತ್ಯುಕ್ತಂ ಮಯಾ ವಚಃ ।**
**ಜ್ಞಾತಂ ತದನುಭೂತಂ ಯತ್ಪರಿಜ್ಞಾತಂ ಫಲೇ ಸತಿ ॥೧೬॥**

ನಾನು ಈ ರೀತಿ ಹೇಳಿರತಕ್ಕ ಮಾತನ್ನು ಕೇಳಿ ಚನ್ನಾಗಿ ತಿಳಿದುಕೊಂಡ ಮೇಲೆ ಇದರಲ್ಲಿ ಸಂಶಯವನ್ನು ಹೊಂದಬಾರದು. ಯಾವುದನ್ನು ಕೇಳಿದೊಡನೆಯೇ ಅನುಭವಕ್ಕೆ ಬರುತ್ತದೋ ಅದನ್ನು ತಿಳಿದಂತಾಗುತ್ತದೆ. ಯಾವ ತಿಳಿವಳಿಕೆಯಿಂದ ಪ್ರಯೋಜನವಾಗುವುದೋ ಅದೇ ಸಫಲವಾದ ತಿಳಿವಳಿಕೆಯು.

**ಶ್ರವಣಾದ್ದರ್ಶನಾಚ್ಚೈವ ಸಪದ್ಯೇವ ಮಹಾಮತೇ ।**
**ಸಂಸ್ಕಾರಾನುಭವಾಚ್ಚೈವ ಪರಿಜ್ಞಾತಂ ನ ಜಾಯತೇ ॥೧೭॥**

ಎಲೈ ಮಹಾಬುದ್ಧಿಶಾಲಿಯಾದ ನಾರದಮುನಿಯೇ, ಕೇಳುವುದು, ನೋಡುವುದೇ ಮುಂತಾದ ಅನುಭವಗಳಿಂದ ಸಂಸ್ಕಾರವು ಉಂಟಾಗುತ್ತದೆ. ಅಂತಹ ಸಂಸ್ಕಾರದಿಂದ ಉಂಟಾಗುವ ಅನುಭವದಿಂದ ಕೇವಲ ಸ್ಮರಣರೂಪವಾದ ಅನುಭವವು ಮಾತ್ರ ಉಂಟಾಗುವುದೇ ಹೊರತು ಬೇರೆ ಯಾವ ಫಲವೂ ಉಂಟಾಗದು. ಆದುದರಿಂದ ಅದು ಸಫಲವಾದ ಜ್ಞಾನವಾಗಲಾರದು. ಉದಾಹರಣೆಯಾಗಿ ನದಿಯ ದಡದಲ್ಲಿ ಮಾವಿನ ಹಣ್ಣುಗಳನ್ನು ನೋಡಿದನೆಂದು ಮನೆಯಲ್ಲಿದ್ದು ಜ್ಞಾಪಿಸಿಕೊಂಡರೆ ಏನೂ ಫಲವಿಲ್ಲವು. ಏಕೆಂದರೆ, ಆ ಸ್ಮರಣೆಯ ಅನಂತರದಲ್ಲಿ ಆ ಮಾವಿನಹಣ್ಣಿನ ರಸದ ರುಚಿಯ ಅನುಭವವಾಗುವುದಿಲ್ಲವು. ಆದುದರಿಂದ ಒಟ್ಟಿನಲ್ಲಿ ಫಲವಿಲ್ಲದ ತಿಳಿವಳಿಕೆಯಿಂದ ಪ್ರಯೋಜನವಿಲ್ಲವು.

**ಶ್ರುತಂ ತೀರ್ಥಂ ಪವಿತ್ರಂ ಚ ಶ್ರದ್ಧೋತ್ಪನ್ನಾ ಚ ರಾಜಸೀ ।**
**ನಿರ್ಗತಸ್ತತ್ರ ತೀರ್ಥೇ ನೈ ದೃಷ್ಟಂ ಚೈವ ಯಥಾಶ್ರುತಂ ॥೧೮॥**

ಮತ್ತು, ಒಬ್ಬ ಮನುಷ್ಯನು, ಜನಗಳಿಂದ ಪವಿತ್ರವಾದ ತೀರ್ಥಕ್ಷೇತ್ರವಿರುವುದೆಂದು ಕೇಳಿದ್ದನು ಎಂದು ಭಾವಿಸೋಣ. ಆಗ ಅವನಿಗೆ ಜನಗಳೆಲ್ಲಾ ತೀರ್ಥಯಾತ್ರೆಗೆ ಹೋಗುತ್ತಾರಲ್ಲಾ, ಅದರಂತೆ ತಾನೂ ಹೋಗಬೇಕೆಂದು ರಾಜಸವಾದ ಶ್ರದ್ಧೆಯು ಉತ್ಪನ್ನವಾಯಿತು. ಮುಂದೆ ಅವನು ಆ ತೀರ್ಥಕ್ಷೇತ್ರಕ್ಕೆ ಹೋದನು. ಅದನ್ನು ಸಾಮಾನ್ಯವಾಗಿ ಎಂದರೆ ತಾನು ಜನರಿಂದ ಕೇಳಿರುವಂತೆ ಇರುವುದನ್ನು ಕಂಡನು.

**ಸ್ನಾತಸ್ತತ್ರ ಕೃತಂ ಕೃತ್ಯಂ ದತ್ತಂ ದಾನಂ ಚ ರಾಜಸಂ ।**
**ಸ್ಥಿತಸ್ತತ್ರ ಕಿಯತ್ಕಾಲಂ ರಜೋಗುಣಸಮಾವೃತಃ ॥೧೯॥**

ಅಲ್ಲಿ ಸ್ನಾನವನ್ನೂ ಮಾಡಿದನು. ತೀರ್ಥಕ್ಷೇತ್ರಗಳಲ್ಲಿ ವಿಧ್ಯುಕ್ತವಾಗಿ ಮಾಡಬೇಕಾದ ಕರ್ಮವನ್ನೆಲ್ಲಾ ಮಾಡಿದನು. ದಾನವನ್ನು ರಾಜಸಬುದ್ಧಿಯಿಂದ ಎಂದರೆ ಬರಿಯ ಆಡಂಬರಕ್ಕಾಗಿ ಕೊಡುತ್ತಾನೆ. ಮುಂದೆ ಕೆಲವುಕಾಲಪರ್ಯಂತ ರಾಜಸಬುದ್ಧಿಯಿಂದಲೇ ಆ ಕ್ಷೇತ್ರದಲ್ಲಿ ವಾಸವನ್ನು ಮಾಡುತ್ತಾನೆ.

**ರಾಗದ್ವೇಷಾನ್ನ ನಿರ್ಮುಕ್ತಃ ಕಾಮಕ್ರೋಧಸಮಾವೃತಃ ।**
**ಪುನರೇವ ಗೃಹಂ ಪ್ರಾಪ್ತೋ ಯಥಾಪೂರ್ವಂ ತಥಾ ಸ್ಥಿತಃ ॥೨೦॥**

ಮತ್ತು ಈ ವಿಧವಾದ ಸತ್ಕರ್ಮಗಳನ್ನು ರಾಜಸಬುದ್ಧಿಯಿಂದ ಮಾಡಿ ತನ್ನ ರಾಗದ್ವೇಷ ಮೊದಲಾದ ದುರ್ಗುಣಗಳನ್ನು ಬಿಡದೆ, ಕಾಮ, ಕೋಪ ಇವುಗಳಿಂದ ಸಹಿತನಾಗಿಯೇ ಪುನಃ ತನ್ನ ಮನೆಗೆ ಬಂದು ಹಿಂದಿನಂತೆಯೇ ರಾಜಸವೃತ್ತಿಯಲ್ಲಿಯೇ ಇರುತ್ತಾನೆ.

**ಶ್ರುತಂ ಚ ನಾನುಭೂತಂ ನೈ ತೇನ ತೀರ್ಥಂ ಮುನೀಶ್ವರ ।**
**ನ ಪ್ರಾಪ್ತಂ ಚ ಫಲಂ ಯಸ್ಮಾದಶ್ರುತಂ ವಿದ್ಧಿ ನಾರದ ॥೨೧॥**

ಮುನಿಶ್ರೇಷ್ಠನಾದ ಎಲೈ ನಾರದನೇ, ಮೇಲೆ ಹೇಳಿದ ಸಂದರ್ಭದಲ್ಲಿ ಆ ಮನುಷ್ಯನು ಆ ತೀರ್ಥಯಾತ್ರೆಯ ವಿಚಾರವನ್ನು ಕೇಳಿದಂತಾಯಿತೇ ಹೊರತು, ತೀರ್ಥಯಾತ್ರೆಯ ವಿಧ್ಯುಕ್ತಕರ್ಮಗಳನ್ನು ಮಾಡಿ ಅದರ ಫಲವನ್ನು ಹೊಂದಿದಂತೆ ಆಗಲಿಲ್ಲ. ಏಕೆಂದರೆ ತೀರ್ಥಯಾತ್ರೆಯನ್ನು ಅವನು ರಾಜಸಬುದ್ಧಿಯಿಂದ ಮಾಡಿದ

ರಿಂದ ಅದರ ಫಲವು ಅವನಿಗೆ ಉಂಟಾಗಲಿಲ್ಲವು. ಆದುದರಿಂದ ಆ ತೀರ್ಥವನ್ನು ಕೇಳಿದರೂ, ಕೇಳದಂತೆಯೇ, ನೋಡಿದರೂ ನೋಡದಂತೆಯೇ, ಕರ್ಮಗಳನ್ನು ಮಾಡಿದರೂ ಮಾಡದಂತೆಯೇ ಸರಿ ಎಂದು ತಾತ್ಪರ್ಯವು.

**ನಿಷ್ಪಾಪತ್ವಂ ಫಲಂ ವಿದ್ಧಿ ತೀರ್ಥಸ್ಯ ಮುನಿಸತ್ತಮ ।**
**ಕೃಷೇಃ ಫಲಂ ಯಥಾ ಲೋಕೇ ನಿಷ್ಪನ್ನಾನ್ನಸ್ಯ ಭಕ್ಷಣಂ ॥೨೨॥**

ಓ ಮುನಿಶ್ರೇಷ್ಠನಾದ ನಾರದನೇ, ಗದ್ದೆ ಹೊಲ ಮುಂತಾದ ಕ್ಷೇತ್ರಗಳ ವ್ಯವಸಾಯಕ್ಕೆ ಹೇಗೆ ಅವುಗಳಿಂದ ಉಂಟಾಗುವ ಅನ್ನದ ಭಕ್ಷಣವೇ ಫಲವೋ, ಅದರಂತೆಯೇ, ತೀರ್ಥಯಾತ್ರೆಗೆ ಪಾಪನಿವೃತ್ತಿಯೇ ಫಲವು. ತೀರ್ಥಗಳಲ್ಲಿ ಸ್ನಾನಾದಿಗಳನ್ನು ಔದಾಸೀನ್ಯದಿಂದ ಮಾಡದೆ ಶ್ರದ್ಧೆಯಿಂದ, ಆಡಂಬರದಲ್ಲಿ ಆದರವಿಲ್ಲದೆ ಮಾಡಿದರೆ, ಅದರಿಂದುಂಟಾಗುವ ಫಲವು, ಪಾಪಕ್ಷಯಪೂರ್ವಕವಾದ ಚಿತ್ತಶುದ್ಧಿಯು. ಆದರೆ ಮೇಲೆ ಹೇಳಿದ ಉದಾಹರಣೆಯಲ್ಲಿ ರಾಜಸಪುರುಷನು ತೀರ್ಥಾದಿಗಳಲ್ಲಿ ನಂಬಿಕೆಯಿಲ್ಲದೆ, ಎಲ್ಲರಂತೆ ತಾನೂ ಮಾಡಬೇಕೆಂದು ಬರಿಯ ಆಡಂಬರಕ್ಕಾಗಿಯೂ, ಕೇವಲ ಹೆಸರಿಗೋಸ್ಕರವಾಗಿಯೂ ದಾನಾದಿಗಳನ್ನು ರಾಗದ್ವೇಷಗಳಿಂದ ಕೂಡಿ ಮಾಡಿದುದರಿಂದ ಅವನಿಗೆ ಆ ತೀರ್ಥಯಾತ್ರೆಯ ನಿಜವಾದ ಫಲವು ಎಂದರೆ ದುರಿತ ಕ್ಷಯವು ದೊರೆಯಲಾರದು. ಆದುದರಿಂದ ಅಂತಹ ಮನುಷ್ಯನು ಆ ತೀರ್ಥಯಾತ್ರೆಯನ್ನು ಮಾಡಿದರೂ ಮಾಡದಂತೆಯೇ ಎಂದು ತಾತ್ಪರ್ಯವು.

**ಪಾಪದೇಹವಿಕಾರಾ ಯೇ ಕಾಮಕ್ರೋಧಾದಯಃ ಪರೇ ।**
**ಲೋಭೋ ಮೋಹಸ್ತಥಾ ತೃಷ್ಣಾ ದ್ವೇಷೋ ರಾಗಸ್ತಥಾ ಮದಃ ॥೨೩॥**

ಪಾಪವನ್ನು ಮಾಡಿ ಪಡೆದ ದೇಹದಲ್ಲಿರುವ ಮನಸ್ಸಿನಲ್ಲಿ ಉಂಟಾಗುವ ಭಾವಗಳು ಯಾವುವೆಂದರೆ-ಕಾಮ, ಕೋಪ, ಲೋಭ, ಮೋಹ, ಆಸೆ, ವೈರ, ರಾಗ, ಗರ್ವ ಇವೇ ಮುಂತಾದುವು.

**ಅಸೂಯೇರ್ಷ್ಯಾಕ್ಷಮಾಽಶಾಂತಿಃ ಪಾಪಾನ್ಯೇತಾನಿ ನಾರದ ।**
**ನ ನಿರ್ಗತಾನಿ ದೇಹಾತ್ತು ತಾವತ್ಪಾಪಯುತೋ ನರಃ ॥೨೪॥**

ಅಲ್ಲದೆ, ಅಸೂಯೆ, ಹೊಟ್ಟೆಕಿಚ್ಚು, ಅಸಹನೆ, ಅಸಮಾಧಾನ ಇವುಗಳೂ ಪಾಪದ ವಿಕಾರಗಳು. ಇವುಗಳು ತನ್ನಿಂದ ತೊಲಗಿಹೋಗುವವರಿವಿಗೂ ಮನುಷ್ಯನು ಪಾಪಿಯೆಂದು ತಿಳಿಯಬೇಕು. ಅವುಗಳು ಹೋದಮೇಲೆ ಅವನು ಶುದ್ಧನಾಗುವನು.

**ಕೃತೇ ತೀರ್ಥೇ ಯದ್ಯೈತಾನಿ ದೇಹಾನ್ನ ನಿರ್ಗತಾನಿ ಚೇತ್ ।**
**ನಿಷ್ಫಲಃ ಶ್ರಮ ಏವೈಕಃ ಕರ್ಷಕಸ್ಯ ಯಥಾ ತಥಾ ॥೨೫॥**

ಮೇಲೆ ಹೇಳಿದಂತೆ ತೀರ್ಥಯಾತ್ರೆಯನ್ನು ಮಾಡಿದರೂ, ಈ ರಾಗದ್ವೇಷಾದಿ ಗಳು ಶರೀರದಿಂದ ಹೋಗದಿದ್ದಲ್ಲಿ, ಆ ತೀರ್ಥಯಾತ್ರೆಯು ಪ್ರಯೋಜನವಿಲ್ಲದ ನಿಷ್ಫಲವಾದ ವ್ಯವಸಾಯದಂತೆ ಬರಿಯ ದೇಹಶ್ರಮವೇ ಸರಿ.

**ಶ್ರಮೇಣಾಪೀಡಿತಂ ಕ್ಷೇತ್ರಂ ಕೃಷ್ಟ್ವಾ ಭೂಮಿಃ ಸುದುರ್ಘಟಾ ।**
**ಉಪ್ತಂ ಬೀಜಂ ಮಹಾರ್ಘಂ ಚ ಹಿತಾ ವೃತ್ತಿರುದಾಹೃತಾ ॥೨೬॥**

ತುಂಬ ಪ್ರಯತ್ನದಿಂದ ಹೊಲದ ಸುತ್ತಲೂ ಪಶ್ವಾದಿಗಳ ಬಾಧೆಯು ಬರ ದಂತೆ ಬೇಲಿಯನ್ನು ಹಾಕುವಿಕೆ, ಹೆಚ್ಚಾಗಿ ಕಷ್ಟಪಟ್ಟು ಆ ಭೂಮಿಯನ್ನು ಉಳು ವಿಕೆ, ಆ ಕ್ಷೇತ್ರದಲ್ಲಿ ತುಂಬ ಬೆಲೆಯುಳ್ಳ ಮತ್ತು ಶ್ರೇಷ್ಠವಾದ ಬೀಜವನ್ನು ಬಿತ್ತುವಿಕೆ, ಈ ಮೊದಲಾದ ಕೆಲಸಗಳು ಒಳ್ಳೆಯ ವ್ಯವಸಾಯದ ರೀತಿಯಾಗಿವೆ.

**ಅಹೋರಾತ್ರಂ ಪರಿಕ್ಲಿಷ್ಟೋ ರಕ್ಷಣಾರ್ಥಂ ಫಲೋತ್ಸುಕಃ ।**
**ಕಾಲೇ ಸುಪ್ತಸ್ತು ಹೇಮಂತೇ ವನೇ ವ್ಯಾಘ್ರಾದಿಭಿರ್ಭೃಶಂ ॥೨೭॥**

ಈಗ ಒಂದು ಉದಾಹರಣೆಯು ಹೇಳಲ್ಪಡುತ್ತದೆ. ಒಬ್ಬ ಮನುಷ್ಯನು ಫಲಾ ಪೇಕ್ಷೆಯಿಂದ ಎಂದರೆ ಧಾನ್ಯಸಂಗ್ರಹಕ್ಕೋಸ್ಕರ ತನ್ನ ಹೊಲವನ್ನು ಬಹುಶ್ರಮಪಟ್ಟು ವ್ಯವಸಾಯಮಾಡಿ, ಧಾನ್ಯವು ಬಲಿಯುವವರೆಗೂ ಹಗಲೂ ರಾತ್ರಿ ಅದನ್ನು ಬಹಳ ಶ್ರಮದಿಂದ ರಕ್ಷಿಸುತ್ತಾ ಕಡೆಗೆ ಫಲಕಾಲವಾದ ಮಾಗಿಯಕಾಲದಲ್ಲಿ ಚಳಿ, ಆಯಾಸ, ಆಲಸ್ಯ, ಉದಾಸೀನತೆಯಿಂದ ಮಲಗಿದರೆ, ಹುಲಿ ಮೊದಲಾದ ದುಷ್ಟಪ್ರಾಣಿಗಳಿಂದ ನಿಬಿಡವಾದ ಆ ಅರಣ್ಯದಲ್ಲಿರುವ,

**ಭಕ್ಷಿತಂ ಶಲಭೈಃ ಸರ್ವಂ ನಿರಾಶಶ್ಚ ಕೃತಃ ಪುನಃ ।**
**ತದ್ವತ್ತೀರ್ಥಶ್ರಮಃ ಪುತ್ರ ಕಷ್ಟದೋ ನ ಫಲಪ್ರದಃ ॥೨೮॥**

ಮಿಡತೆಯ ದಂಡು ಮುಂತಾದ ಕೀಟಾದಿಗಳಿಂದ ಆ ಹೊಲದ ಪೈರೆಲ್ಲವೂ ತಿನ್ನಲ್ಪಟ್ಟು ಅದರಿಂದ ಆ ವ್ಯವಸಾಯಕ್ಕಾಗಿ ಪಟ್ಟ ಕಷ್ಟವೆಲ್ಲವೂ ಹೇಗೆ ವ್ಯರ್ಥವಾಗು ವುದೋ ಅದರಂತೆಯೇ ಓ ಪುತ್ರನಾದ ನಾರದನೇ, ಮೇಲೆ ಹೇಳಿದ ರಾಜಸವೃತ್ತಿ

ಯಿಂದ ಮಾಡಿದ ತೀರ್ಥಯಾತ್ರೆಯಿಂದ ಬರಿಯ ಶ್ರಮವೇ ವಿನಾ ಸ್ವಲ್ಪವೂ ಫಲವಾಗುವುದಿಲ್ಲವು.

**ಸತ್ತ್ವಂ ಸಮುತ್ಕಟಂ ಜಾತಂ ಪ್ರವೃದ್ಧಂ ಶಾಸ್ತ್ರದರ್ಶನಾತ್ ।**
**ವೈರಾಗ್ಯಂ ತತ್ಫಲಂ ಜಾತಂ ತಾಮಸಾರ್ಥೇಷು ನಾರದ ॥೨೯॥**

ಓ ನಾರದನೇ, ಆದರೆ ಮನುಷ್ಯನು ಸತ್ತ್ವಗುಣವು ಮುಂದಾಗಿರುವ ಸ್ವಭಾವ ಶಾಲಿಯಾಗಿದ್ದರೆ ಆ ಸತ್ತ್ವವನ್ನು ಶಾಸ್ತ್ರಗಳ ಪರಿಶೀಲನೆಯಿಂದ ಹೆಚ್ಚಿಸುತ್ತಾಬಂದರೆ ಅದು ಬಲಗೊಳ್ಳುತ್ತದೆ. ಆಗ ಅದರ ಫಲವಾಗಿ ತಾಮಸ ಮತ್ತು ರಾಜಸಪದಾರ್ಥ ಗಳಲ್ಲಿ ವೈರಾಗ್ಯ ಉಂಟಾಗುತ್ತದೆ.

**ಪ್ರಸಹ್ಯಾಭಿಭವತ್ಯೇವ ತದ್ರಜಸ್ತಮಸೀ ಉಭೇ ।**
**ರಜಸ್ಸಮುತ್ಕಟಂ ಜಾತಂ ಪ್ರವೃತ್ತಂ ಲೋಭಯೋಗತಃ ॥೩೦॥**

ಆಗ ಆ ಉದ್ರಿಕ್ತವಾದ ಸತ್ತ್ವವು, ರಜಸ್ಸು ಮತ್ತು ತಮಸ್ಸುಗಳನ್ನು ಬಲಾತ್ಕಾರದಿಂದ ಮೆಟ್ಟಿ ಅಡಗಿಸುತ್ತದೆ. ಅವುಗಳು ಹೆಚ್ಚಾಗದಂತೆ ತಡೆಯುತ್ತದೆ. ಹಾಗಿಲ್ಲದೆ ರಜಸ್ಸು ನಮ್ಮಲ್ಲಿ ಹೆಚ್ಚಾಗಿದ್ದರೆ ಅದು ಲೋಭದಿಂದ ಇನ್ನಷ್ಟು ಬೆಳೆದು,

**ತತ್ತಥಾಭಿಭವತ್ಯೇವ ತಮಸ್ಸತ್ತ್ವೇ ತಥಾ ಉಭೇ ।**
**ತಮಸ್ತಥೋತ್ಕಟಂ ಭೂತ್ವಾ ಪ್ರವೃದ್ಧಂ ಮೋಹಯೋಗತಃ ॥೩೧**

ಆ ರಜಸ್ಸು ಸತ್ತ್ವ ಮತ್ತು ತಮಸ್ಸುಗಳೆರಡನ್ನೂ ಮೇಲಕ್ಕೆ ಬರದಂತೆ ತಡೆಯುತ್ತದೆ. ಅದರಂತೆಯೇ ತಮಸ್ಸೂ ಮಾನವನಲ್ಲಿ ಹೆಚ್ಚಾಗಿದ್ದರೆ ಅದನ್ನು ತಡೆಯುವ ವಿವೇಕವಿಲ್ಲದಿದ್ದರೆ ಅದು ಮತ್ತಷ್ಟು ಬೆಳೆದು,

**ತತ್ಸತ್ತ್ವರಜಸೀ ಚೋಭೇ ಸಂಗಮ್ಯಾಭಿಭವತ್ಯಪಿ ।**
**ವಿಸ್ತರಂ ಕಥಯಾಮ್ಯದ್ಯ ಯಥಾಭಿಭವತೀತಿ ವೈ ॥೩೨॥**

ಆ ತಮಸ್ಸು ಉಳಿದ ಸತ್ತ್ವ ಮತ್ತು ರಜಸ್ಸುಗಳೆರಡನ್ನೂ ತಿರಸ್ಕರಿಸುತ್ತದೆ. ಓ ನಾರದನೇ, ಈ ಗುಣಗಳು ಪರಸ್ಪರ ಹೇಗೆ ತಿರಸ್ಕರಿಸುವುವು ಎಂಬ ವಿವರವನ್ನು ಇನ್ನೂ ವಿಸ್ತಾರವಾಗಿ ಹೇಳುತ್ತೇನೆ.

**ಯದಾ ಸತ್ತ್ವಂ ಪ್ರವೃದ್ಧಂ ವೈ ಮತಿರ್ಧರ್ಮೇ ಸ್ಥಿತಾ ತದಾ ।**
**ನ ಚಿಂತಯತಿ ಬಾಹ್ಯಾರ್ಥಂ ರಜಸ್ತಮಸ್ಸಮುದ್ಭವಂ   ॥೩೩॥**

ಯಾವಾಗ ಸತ್ತ್ವಗುಣವು ಹೆಚ್ಚಾಗಿರುವುದೋ ಆಗ ಅಂತಹ ಮನುಷ್ಯನ ಬುದ್ಧಿಯು ಧರ್ಮದಲ್ಲಿ ಹೆಚ್ಚಾಗಿ ಆಸಕ್ತವಾಗಿರುತ್ತದೆ. ಅಂತಹ ಸತ್ತ್ವಗುಣವುಳ್ಳವನು ರಜಸ್ಸು ಮತ್ತು ತಮಸ್ಸುಗಳಿಂದ ಉಂಟಾಗುವ ವಿಷಯಗಳನ್ನು ಅಪೇಕ್ಷಿಸುವುದೇ ಇಲ್ಲವು.

**ಅರ್ಥಂ ಸತ್ತ್ವಸಮುದ್ಭೂತಂ ಗೃಹ್ಣಾತಿ ಚ ನ ಚಾನ್ಯಥಾ ।**
**ಅನಾಯಾಸಕೃತಂ ಚಾರ್ಥಂ ಧರ್ಮಂ ಯಜ್ಞಂ ಚ ವಾಂಛತಿ ॥೩೪॥**

ಅಂಥವನು ಸತ್ತ್ವಗುಣವನ್ನು ಬೆಳೆಯಿಸುವ ವಸ್ತುಗಳನ್ನೇ ಪರಿಗ್ರಹಿಸುತ್ತಾನೆಯೇ ಹೊರತು ಬೇರೆ ರಜಸ್ತಮೋಗುಣಗಳನ್ನು ಮುಂದುಮಾಡುವ ವಸ್ತುಗಳನ್ನು ಮುಟ್ಟುವುದಿಲ್ಲವು. ಮತ್ತು ಹೆಚ್ಚಾದ ಶ್ರಮವಿಲ್ಲದೆ ಬರುವ ದ್ರವ್ಯವನ್ನೂ, ನಿತ್ಯವಾದ ವರ್ಣಾಶ್ರಮಧರ್ಮಗಳ ಮತ್ತು ಪಂಚಮಹಾಯಜ್ಞಗಳ ಆಚರಣೆಯನ್ನೂ ಅಪೇಕ್ಷಿಸುತ್ತಾನೆ.

**ಸಾತ್ತ್ವಿಕೇಷ್ವೇವ ಭೋಗೇಷು ಕಾಮಂ ವೈ ಕುರುತೇ ತದಾ ।**
**ರಾಜಸೇಷು ನ ಮೋಕ್ಷಾರ್ಥೀ ತಾಮಸೇಷು ಪುನಃ ಕುತಃ   ॥೩೫॥**

ಮೋಕ್ಷವನ್ನು ಅಪೇಕ್ಷಿಸುವ ಸಾತ್ತ್ವಿಕಪುರುಷನು ಸತ್ತ್ವಗುಣಕ್ಕೆ ಅನುಕೂಲವಾದ, ನಿರ್ದುಷ್ಟವಾದ ಸುಖಭೋಗಗಳನ್ನು ಮಾತ್ರ ಅಪೇಕ್ಷಿಸುತ್ತಾನೆ. ಅವನಿಗೆ ರಾಜಸಭೋಗದಲ್ಲಿ ಅಪೇಕ್ಷೆಯೇ ಇರುವುದಿಲ್ಲವು. ಇನ್ನು ತಾಮಸಸುಖಭೋಗಗಳಲ್ಲಿ ಪ್ರವೃತ್ತಿಯು ಹೇಗೆ ಉಂಟಾದೀತು ?

**ಏವಂ ಜಿತ್ವಾ ರಜಃ ಪೂರ್ವಂ ತತಶ್ಚ ತಮಸೋ ಜಯಃ ।**
**ಸತ್ತ್ವಂ ಚ ಕೇವಲಂ ಪುತ್ರ ತದಾ ಭವತಿ ನಿರ್ಮಲಂ   ॥೩೬॥**

ಎಲೈ ಪುತ್ರನೇ, ಹೀಗೆ ರಜೋಗುಣವನ್ನು, ಅದರಿಂದುಂಟಾಗುವ ಭೋಗದಲ್ಲಿ ಆಶೆಯನ್ನು ಬಿಟ್ಟು, ಮೊದಲು ಜಯಿಸಿ, ಆಮೇಲೆ ತಮಸ್ಸನ್ನು ಜಯಿಸಬೇಕು. ಹೀಗೆ ಮಾಡಿದರೆ ಆಗ ಸತ್ತ್ವಗುಣವು, ರಜಸ್ತಮೋಗುಣಗಳ ತಿರಸ್ಕಾರವಿಲ್ಲದೆ ಮತ್ತು ಅವುಗಳ ದೋಷಸಂಬಂಧವೂ ಇಲ್ಲದೆ ನಿರ್ಮಲವಾಗುತ್ತದೆ.

**ಯದಾ ರಜಃಪ್ರವೃದ್ಧಂ ವೈ ತ್ಯಕ್ತ್ವಾ ಧರ್ಮಾನ್ ಸನಾತನಾನ್ ।**
**ಅನ್ಯಥಾ ಕುರುತೇ ಧರ್ಮಾನ್ ಶ್ರದ್ಧಾಂ ಪ್ರಾಪ್ಯ ತು ರಾಜಸೀಂ ॥೩೭॥**

ಯಾವಾಗ ಪುರುಷನಲ್ಲಿ ರಜೋಗುಣವು ಹೆಚ್ಚಾಗುವುದೋ, ಆಗ ಅವನು ಸಂಪ್ರದಾಯದಲ್ಲಿ ಪ್ರಾಚೀನಕಾಲದಿಂದ ನಡೆದುಬಂದಿರುವ ನಿರ್ದುಷ್ಟವಾದ ಧರ್ಮ ಗಳನ್ನು ಬಿಟ್ಟು ರಜೋಗುಣದಿಂದ ಬಂದಿರುವ ಶ್ರದ್ಧೆಯ ಪ್ರಭಾವದಿಂದ ತನಗೆ ತೋಚಿದಂತೆ ಧರ್ಮವನ್ನು ಆಚರಿಸುವನು.

**ರಾಜಸಾದರ್ಥಸಂವೃದ್ಧಿಸ್ತಥಾ ಭೋಗಸ್ತು ರಾಜಸಃ ।**
**ಸತ್ತ್ವಂ ವಿನಿರ್ಗತಂ ತೇನ ತಮಸಶ್ಚಾಪಿ ನಿಗ್ರಹಃ ॥೩೮॥**

ಆ ರಜೋಗುಣದ ಸ್ವಭಾವದಿಂದ ಹೆಚ್ಚು ದ್ರವ್ಯವನ್ನು ಸಂಪಾದಿಸುವನು. ರಜೋಗುಣದ ಸುಖಭೋಗಗಳನ್ನೇ ಅನುಭವಿಸುವನು. ಹೀಗೆ ಅವನಲ್ಲಿ ಮುಂದಾ ಗಿರುವ ರಜೋಗುಣದಿಂದ ಸತ್ತ್ವಗುಣವು ಅಡಗಿಹೋಗಿ ಕೆಲಸಕ್ಕೆ ಬಾರದ್ದು ಆಗು ವುದು ಮತ್ತು ತಮೋಗುಣಕ್ಕೆ ತಿರಸ್ಕಾರವೂ ಎಂದರೆ ತಡೆಯೂ ಆಗುವುದು ನಿಂತು ಹೋಗುವುದು.

**ಯದಾ ತಮೋ ವಿವೃದ್ಧಂ ಸ್ಯಾದುತ್ಕಟಂ ಸಂಬಭೂವ ಹ ।**
**ತದಾ ವೇದೇ ನ ವಿಶ್ವಾಸೋ ಧರ್ಮಶಾಸ್ತ್ರೇ ತಥೈವ ಚ ॥೩೯॥**

ಯಾವಾಗ ತಮೋಗುಣವು ಮನುಷ್ಯನಲ್ಲಿ ಹೆಚ್ಚಾಗಿ ಮುಂದಾಗುವುದೋ ಆಗ ಅವನಿಗೆ ವೇದಗಳಲ್ಲಿಯೂ, ಧರ್ಮಶಾಸ್ತ್ರಗಳಲ್ಲಿಯೂ ನಂಬಿಕೆಯೇ ಇರುವುದಿ ಲ್ಲವು.

**ಶ್ರದ್ಧಾಂ ಚ ತಾಮಸೀಂ ಪ್ರಾಪ್ಯ ಕರೋತಿ ಚ ಧನಾತ್ಯಯಂ ।**
**ದ್ರೋಹಂ ಸರ್ವತ್ರ ಕುರುತೇ ನ ಶಾಂತಿಮಧಿಗಚ್ಛತಿ ॥೪೦॥**

ತಮೋಗುಣದಿಂದ ಬಂದ, ಶ್ರದ್ಧೆಯಿಂದ ಕೆಟ್ಟ ವಿಷಯಗಳಲ್ಲಿ ತುಂಬ ಹಣ ವನ್ನು ದುಂದುಗಾರಿಕೆಯಿಂದ ವೆಚ್ಚಮಾಡುವನು ; ಎಲ್ಲರಲ್ಲಿಯೂ ಕೆಟ್ಟದ್ದನ್ನೇ ಎಣಿಸುವನು ಮತ್ತು ಅವನು ಎಂದೂ ಮನಸ್ಸಿನ ಶಾಂತಿ ಅಥವಾ ಸಮಾಧಾನವನ್ನು ಹೊಂದುವುದಿಲ್ಲ.

**ಜಿತ್ವಾ ಸತ್ತ್ವಂ ರಜಶ್ಚೈವ ಕ್ರೋಧನೋ ದುರ್ಮತಿಃ ಶಠಃ ।**
**ವರ್ತತೇ ಕಾಮಚಾರೇಣ ಭಾವೇಷು ವಿತತೇಷು ಚ ॥೪೧॥**

ಅಂಥವನು ಆ ತಮೋಗುಣದ ಹೆಚ್ಚಿಗೆಯ ಪ್ರಭಾವದಿಂದ ಸತ್ತ್ವರಜೋ ಗುಣಗಳನ್ನು ಹಿಮ್ಮೆಟ್ಟಿಸಿ, ಕೆಟ್ಟಬುದ್ಧಿಯುಳ್ಳವನೂ, ಕಡುಗೋಪಿಯೂ ಆಗಿ ದುಷ್ಟ ಸ್ವಭಾವದಿಂದ ಸ್ವೇಚ್ಛಾಚಾರಿಯಾಗಿ ದುರ್ವಿಷಯಗಳಲ್ಲಿಯೂ ಸುಖಾದ್ಯುಪಭೋಗ ಗಳಲ್ಲಿಯೂ ನಿಯಮವಿಲ್ಲದೆ ವರ್ತಿಸುತ್ತಿರುವನು.

**ಏಕಂ ಸತ್ತ್ವಂ ನ ಭವತಿ ರಜಶ್ಚೈಕಂ ತಮಸ್ತಥಾ ।**
**ಸದೈವಾಶ್ರಿತ್ಯ ವರ್ತಂತೇ ಗುಣಾ ಮಿಥುನಧರ್ಮಿಣಃ ॥೪೨॥**

ಈ ಮೇಲೆ ಹೇಳಿದ ವಿಷಯಗಳ ಮುಖ್ಯಾಭಿಪ್ರಾಯವೇನೆಂದರೆ ಒಬ್ಬ ಮನುಷ್ಯನಲ್ಲಿ ಸತ್ತ್ವರಜಸ್ತಮೋಗುಣಗಳಲ್ಲಿ ಸತ್ತ್ವಗುಣವೊಂದೇ ಇರಲಾರದು. ಅದರಂತೆಯೇ ರಜಸ್ತಮೋಗುಣಗಳೂ ಒಂದೊಂದೇ ಇರಲಾರವು. ಯಾವುದಾದರೂ ಒಂದು ಗುಣ ಹೆಚ್ಚಾಗಿದ್ದು ಉಳಿದ ಎರಡು ಗುಣಗಳೂ ಸ್ವಲ್ಪ ಸ್ವಲ್ಪ ಇರುವುವು. ಏಕೆಂದರೆ, ಈ ಮೂರು ಗುಣಗಳೂ ಒಂದನ್ನೊಂದು ಬಿಟ್ಟಿರದೆ ಪರಸ್ಪರ ಆಶ್ರಯಿ ಸಿಯೇ ಇರುವ, ಬೆರೆದಿರುವ ಸ್ವಭಾವವುಳ್ಳವು.

**ರಜೋ ವಿನಾ ನ ಸತ್ತ್ವಂ ಸ್ಯಾದ್ರಜಃ ಸತ್ತ್ವಂ ವಿನಾ ಕ್ವಚಿತ್ ।**
**ತಮೋ ವಿನಾ ನ ಚೈವೈತೇ ವರ್ತಂತೇ ಪುರುಷರ್ಷಭ ॥೪೩॥**

ಎಲೈ ಪುರುಷಶ್ರೇಷ್ಠನಾದ ನಾರದನೇ, ಆದುದರಿಂದ ಸತ್ತ್ವಗುಣವು ರಜಸ್ಸನ್ನು ಬಿಟ್ಟು ಇರುವುದಿಲ್ಲ. ರಜಸ್ಸು ಸತ್ತ್ವವನ್ನು ಬಿಟ್ಟು ಇರಲಾರದು. ಹಾಗೆಯೇ ಈ ಎರಡು ಗುಣಗಳೂ ತಮಸ್ಸನ್ನು ಬಿಟ್ಟು ಇರಲಾರವು.

**ತಮಸ್ತಾಭ್ಯಾಂ ವಿಹೀನಂ ತು ಕೇವಲಂ ನ ಕದಾಚನ ।**
**ಸರ್ವೇ ಮಿಥುನಧರ್ಮಾಣೋ ಗುಣಾಃ ಕಾರ್ಯಾಂತರೇಷು ವೈ ॥೪೪॥**

ಅದರಂತೆಯೇ ತಮಸ್ಸೂ ಸತ್ತ್ವರಜಸ್ಸುಗಳನ್ನು ಬಿಟ್ಟು ಒಂದೇ ಎಂದಿಗೂ ಇರಲಾರದು. ಹೀಗೆ ಗುಣಗಳು ಪ್ರತಿಯೊಂದು ಕಾರ್ಯಗಳಲ್ಲಿಯೂ ಒಂದಕ್ಕೊಂದು ಸೇರಿಕೊಂಡೇ ಇರುವ ಸ್ವಭಾವವುಳ್ಳವುಗಳು.

**ಅನ್ಯೋನ್ಯಸಂಶ್ರಿತಾಃ ಸರ್ವೇ ತಿಷ್ಠಂತಿ ನ ವಿಯೋಜಿತಾಃ ಃ**
**ಅನ್ಯೋನ್ಯಜನಕಾಶ್ಚೈವ ಯತಃ ಪ್ರಸವಧರ್ಮಿಣಃ ॥೪೫॥**

ಆ ಎಲ್ಲ ಗುಣಗಳು ಒಂದನ್ನೊಂದು ಆಶ್ರಯಿಸಿಯೇ ಇರುವುವು. ಮತ್ತು ಒಂದನ್ನೊಂದು ಬಿಟ್ಟು ಇರಲಾರವು. ಅಲ್ಲದೆ ಪರಸ್ಪರವಾಗಿ ಒಂದನ್ನೊಂದು ಹುಟ್ಟಿಸುವ ಸ್ವಭಾವವುಳ್ಳವೂ ಆಗಿರುತ್ತವೆ.

**ಸತ್ತ್ವಂ ಕದಾಚಿಚ್ಚ ರಜಸ್ತಮಸೀ ಜನಯತ್ಯುತ ।**
**ಕದಾಚಿತ್ತು ರಜಃ ಸತ್ತ್ವತಮಸೀ ಜನಯತ್ಯಪಿ ॥೪೬॥**

ಅದು ಹೇಗೆಂದರೆ—ಒಮ್ಮೆ ಸತ್ತ್ವಗುಣವು ರಜಸ್ಸುತಮಸ್ಸುಗಳನ್ನು ಹುಟ್ಟಿಸುತ್ತದೆ. ಹಾಗೆಯೇ ರಜಸ್ಸೂ ಒಂದು ಕಾಲದಲ್ಲಿ ಸತ್ತ್ವ ಮತ್ತು ತಮಸ್ಸುಗಳನ್ನು ಉಂಟುಮಾಡುತ್ತದೆ.

**ಕದಾಚಿತ್ತು ತಮಃ ಸತ್ತ್ವರಜಸೀ ಜನಯತ್ಯುಭೇ ।**
**ಜನಯಂತ್ಯೇವಮನ್ಯೋನ್ಯಂ ಮೃತ್ಪಿಂಡಶ್ಚ ಘಟಂ ಯಥಾ ॥೪೭॥**

ಅದರಂತೆಯೇ ಒಂದುಕಾಲದಲ್ಲಿ ತಮಸ್ಸೂ ಸತ್ತ್ವರಜಸ್ಸುಗಳೆರಡಕ್ಕೂ ಕಾರಣವಾಗುತ್ತದೆ. ಈ ರೀತಿಯಾಗಿ ಮಣ್ಣಿನಿಂದ ಮಡಕೆಯು ಉಂಟಾಗುವಂತೆ ಈ ಗುಣಗಳು ಒಂದರಿಂದೊಂದು ಪರಸ್ಪರ ಉಂಟಾಗುವುವು.

**ಬುದ್ಧಿಸ್ಥಾಸ್ತೇ ಗುಣಾಃ ಕಾಮಾನ್ ಬೋಧಯಂತಿ ಪರಸ್ಪರಂ ।**
**ದೇವದತ್ತವಿಷ್ಣುಮಿತ್ರಯಜ್ಞದತ್ತಾದಯೋ ಯಥಾ ॥೪೮॥**

ದೇವದತ್ತ, ವಿಷ್ಣುಮಿತ್ರ, ಯಜ್ಞದತ್ತ ಮೊದಲಾದ ಅನೇಕರು ಪರಸ್ಪರವಾಗಿ ಸೇರಿ ಹೇಗೆ ಒಂದು ಕಾರ್ಯವನ್ನು ಮಾಡುವರೋ ಅದರಂತೆ ಈ ಮೂರು ಗುಣಗಳೂ ಪರಸ್ಪರ ಸೇರಿ ಬುದ್ಧಿಯಲ್ಲಿದ್ದುಕೊಂಡು ಆಯಾಯ ಇಚ್ಛೆಗಳನ್ನೂ, ಕಾರ್ಯಗಳನ್ನೂ ಉಂಟುಮಾಡುತ್ತಿರುತ್ತವೆ. ಅಲ್ಲದೆ ಈ ಪರಿಣಾಮಗಳಲ್ಲಿ ಎಲ್ಲ ಗುಣಗಳ ಧರ್ಮಗಳೂ ಬೆರೆದುಕೊಂಡಿರುವುದೂ ಕಂಡುಬರುತ್ತದೆ.

**ಯಥಾ ಸ್ತ್ರೀ ಪುರುಷಶ್ಚೈವ ಮಿಥುನೌ ಚ ಪರಸ್ಪರಂ ।**
**ತಥಾ ಗುಣಾಃ ಸಮಾಯಾಂತಿ ಯುಗ್ಮಭಾವಂ ಪರಸ್ಪರಂ ॥೪೯॥**

ಹೇಗೆ ಸ್ತ್ರೀಪುರುಷರು ಎಂದರೆ ಪತಿಪತ್ನಿಯರು ಅನ್ಯೋನ್ಯವಾಗಿ ಸೇರಿ ಪ್ರತಿಯೊಂದು ಕಾರ್ಯವನ್ನು ನಿರ್ವಹಿಸುವರೋ ಅದರಂತೆಯೇ ಈ ಮೂರು ಗುಣಗಳೂ ಪರಸ್ಪರ ಸೇರಿಕೊಂಡಿರುತ್ತಾ ಪ್ರತಿಯೊಂದು ಕೆಲಸವನ್ನೂ ನಿರ್ವಹಿಸುತ್ತವೆ.

**ರಜಸೋ ವಿಥುನೇ ಸತ್ತ್ವಂ ಸತ್ತ್ವಸ್ಯ ಮಿಥುನೇ ರಜಃ ।**
**ಉಭೇ ತೇ ಸತ್ತ್ವರಜಸೀ ತಮಸೋ ಮಿಥುನೇ ವಿದುಃ ॥೫೦॥**

ರಜಸ್ಸಿನ ಜತೆಯಲ್ಲಿ ಸತ್ತ್ವಗುಣವು ಸೇರುತ್ತದೆ. ಎಂದರೆ ರಜಸ್ಸೂ ತಮಸ್ಸೂ ಒಮ್ಮೆ ಒಂದು ಜೋಡಿಯಾಗುವುವು. ಅದರಂತೆ ಸತ್ತ್ವದೊಂದಿಗೆ ರಜಸ್ಸು ಸೇರುವುದು. ಎಂದರೆ ಒಮ್ಮೆ ರಜಸ್ಸು ಪ್ರಾಧಾನ್ಯವನ್ನೂ ಸತ್ತ್ವವು ದುರ್ಬಲ ಭಾವವನ್ನೂ, ಇನ್ನೊಂದುವೇಳೆ ಸತ್ತ್ವವೇ ಪ್ರಾಧಾನ್ಯವನ್ನೂ ರಜಸ್ಸು ದುರ್ಬಲ ಭಾವವನ್ನೂ ಹೊಂದುವುವು ಎಂದರ್ಥವು. ಇದರಂತೆಯೇ ತಮಸ್ಸು ಒಮ್ಮೆ ಪ್ರಧಾನವಾಗಿಯೂ ಇತರ ಗುಣಗಳು ಅತ್ಯಲ್ಪವಾಗಿಯೂ ಇರುವ ಜೋಡಿಯಾಗಿರುವುದೆಂದು ತಿಳಿದವರು ಹೇಳುತ್ತಾರೆ.

॥ ನಾರದ ಉವಾಚ ॥

**ಇತ್ಯೇತತ್ಕಥಿತಂ ಪಿತ್ರಾ ಗುಣರೂಪಮನುತ್ತಮಂ ।**
**ಶ್ರುತ್ವಾಪ್ಯೇತತ್ಸ ಏವಾಹಂ ತತೋಽಪೃಚ್ಛಂ ಪಿತಾಮಹಂ ॥೫೧॥**

ನಾರದಮುನಿಯು ಹೇಳಿದನು—ಮೇಲೆ ಹೇಳಿದ ರೀತಿಯಲ್ಲಿ ನಮ್ಮ ತಂದೆಯು ಸತ್ತ್ವರಜಸ್ತಮೋಗುಣಗಳ ಆಶ್ಚರ್ಯಕರವಾದ ಸ್ವರೂಪವನ್ನೂ ಸ್ವಭಾವವನ್ನೂ ವಿವರಿಸಿ ಹೇಳಿದನು. ಇದನ್ನು ಕೇಳಿ ಆಗ ನಾನು ತಿರುಗಿ ಜಗತ್ತಿಗೆ ಪಿತಾಮಹನೆಂದು ಹೇಳಲ್ಪಡುವ ನನ್ನ ತಂದೆಯಾದ ಬ್ರಹ್ಮನನ್ನು ಕುರಿತು ಹೀಗೆ ಕೇಳಿದೆನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಅಷ್ಟಮೋಽಧ್ಯಾಯಃ**

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### || ನವಮೋಽಧ್ಯಾಯಃ ||

### ಒಂಭತ್ತನೆಯ ಅಧ್ಯಾಯವು

|| ನಾರದ ಉವಾಚ ||

**ಗುಣಾನಾಂ ಲಕ್ಷಣಂ ತಾತ ಭವತಾ ಕಥಿತಂ ಕಿಲ ।**
**ನ ತೃಪ್ತೋಽಸ್ಮಿ ಪಿಬನ್ಮಿಷ್ಟಂ ತ್ವನ್ಮುಖಾತ್ಪ್ರಚ್ಯುತಂ ರಸಂ** ||೧||

ನಾರದಮುನಿಯು ಬ್ರಹ್ಮನನ್ನು ಕುರಿತು ಪ್ರಶ್ನೆ ಮಾಡಿದನು—ಓ ತಂದೆಯಾದ ಬ್ರಹ್ಮನೇ, ನೀನೀಗ ಗುಣಗಳ ಸ್ವರೂಪವನ್ನು ಹೇಳಿದೆಯಷ್ಟೆ. ಆದರೂ ನಿನ್ನ ಮುಖ ದಿಂದ ಬರುತ್ತಲಿರುವ ತುಂಬ ರುಚಿಕರವಾದ ಮಾತಿನ ರಸವನ್ನು ಎಷ್ಟು ಪಾನ ಮಾಡಿದರೂ ನನಗೆ ಸಾಕು ಎನ್ನಿಸುತ್ತಿಲ್ಲವು. ಇನ್ನೂ ಕೇಳಬೇಕೆನ್ನಿಸುತ್ತದೆ.

**ಗುಣಾನಾಂ ತು ಪರಿಜ್ಞಾನಂ ಯಥಾವದನುವರ್ಣಯ ।**
**ಯೇನಾಹಂ ಪರಮಾಂ ಶಾಂತಿಮಧಿಗಚ್ಛಾಮಿ ಚೇತಸಿ** ||೨||

ಆದುದರಿಂದ ಇನ್ನೂ ಹೆಚ್ಚಾಗಿ ಗುಣಗಳ ಸ್ವರೂಪದ ತಿಳಿವಳಿಕೆಯನ್ನು ನನಗೆ ಯಥಾವತ್ತಾಗಿ ಉಂಟಾಗುವಂತೆ ವಿವರಿಸಿ ಹೇಳು. ಅದರಿಂದ ನಾನು ಮನಸ್ಸಿನಲ್ಲಿ ತುಂಬ ತೃಪ್ತಿಯನ್ನೂ ಸಮಾಧಾನವನ್ನೂ ಹೊಂದುತ್ತೇನೆ.

|| ವ್ಯಾಸ ಉವಾಚ ||

**ಇತಿ ಪೃಷ್ಟಸ್ತು ಪುತ್ರೇಣ ನಾರದೇನ ಮಹಾತ್ಮನಾ ।**
**ಉವಾಚ ಚ ಜಗತ್ಕರ್ತಾ ರಜೋಗುಣಸಮುದ್ಭವಃ** ||೩||

ವ್ಯಾಸಮುನಿಯು ಹೇಳಿದನು -- ಹೀಗೆ ಮಹಾಮಹಿಮನಾದ ತನ್ನ ಪುತ್ರನಾದ ನಾರದಮುನಿಯಿಂದ ಕೇಳಲ್ಪಟ್ಟವನಾಗಿ, ರಜೋಗುಣಪ್ರಾಮುಖ್ಯದಿಂದ ಉಂಟಾಗಿರುವ ಮತ್ತು ಜಗತ್ತನ್ನೆಲ್ಲಾ ಸೃಷ್ಟಿಸುತ್ತಿರುವ ಬ್ರಹ್ಮನು ನಾರದನನ್ನು ಕುರಿತು ಹೀಗೆ ವಿವರಿಸಿ ಹೇಳಿದನು.

॥ ಬ್ರಹ್ಮೋವಾಚ ॥

**ಶೃಣು ನಾರದ ವಕ್ಷ್ಯಾಮಿ ಗುಣಾನಾಂ ಪರಿವರ್ಣನಂ**
**ಸಮ್ಯಜ್ಞಾಹಂ ವಿಜಾನಾಮಿ ಯಥಾಮತಿ ವದಾಮಿ ತೇ ॥೪॥**

ಬ್ರಹ್ಮನು ಹೇಳಿದನು——ಓ ನಾರದನೇ, ಗುಣಗಳ ಸ್ವರೂಪದ ನಿಜಸ್ಥಿತಿಯನ್ನು ವಿವರಿಸಿ ಹೇಳುತ್ತೇನೆ ಕೇಳು. ಆದರೆ ನಾನೂ ಅದನ್ನು ಚನ್ನಾಗಿ ತಿಳಿದಿಲ್ಲವು. ಆದರೂ ತಿಳಿದಿರುವಷ್ಟುಮಟ್ಟಿಗೆ ನಿನಗೆ ಹೇಳುತ್ತೇನೆ.

**ಸತ್ತ್ವಂ ತು ಕೇವಲಂ ನೈವ ಕುತ್ರಾಪಿ ಪರಿಲಕ್ಷ್ಯತೇ**
**ಮಿಶ್ರೀಭಾವಾತ್ತು ತೇಷಾಂ ನೈ ಮಿಶ್ರತ್ವಂ ಪ್ರತಿಭಾತಿ ನೈ ॥೫॥**

ಸತ್ತ್ವಗುಣವು ಒಂದೇ ಎಲ್ಲಿಯೂ ಕಾಣಿಸುವುದಿಲ್ಲ. ಸತ್ತ್ವರಜಸ್ತಮೋಗುಣಗಳು ಮೂರೂ ಒಟ್ಟು ಸೇರಿಯೇ ಇರುವುದರಿಂದ ಅವುಗಳು ಮೂರೂ ಬೆರೆದು ...ಂಡಿರುವಂತೆಯೇ ನಮಗೆ ಕಾಣಿಸುವುವು.

**ಯಥಾ ಕಾಚಿದ್ವರಾ ನಾರೀ ಸರ್ವಭೂಷಣಭೂಷಿತಾ ।**
**ಹಾವಭಾವಯುತಾ ಕಾಮಂ ಭರ್ತೃಪ್ರೀತಿಕರೀ ಭವೇತ್ ॥೬॥**

ಇದಕ್ಕೆ ಉದಾಹರಣೆಯಾಗಿ, ಉತ್ತಮಳಾದ ಓರ್ವ ಸ್ತ್ರೀಯು ಎಲ್ಲ ಬಗೆಯ ಆಭರಣಗಳಿಂದಲೂ, ಒಲವು ಒಯ್ಯಾರಗಳಿಂದಲೂ ಕೂಡಿದವಳಾಗಿ ತನ್ನ ಪ್ರಿಯತಮನಾದ ಗಂಡನಿಗೆ ಹೇಗೆ ತುಂಬ ಪ್ರೀತಿಯನ್ನು ಮಾಡುತ್ತಾಳೆಯೋ,

**ಮಾತಾಪಿತ್ರೋಸ್ತಥಾ ಸೈವ ಬಂಧುವರ್ಗಸ್ಯ ಪ್ರೀತಿದಾ ।**
**ದುಃಖಂ ಮೋಹಂ ಸಪತ್ನೀಷು ಜನಯತ್ಯಪಿ ಸೈವ ಹಿ ॥೭॥**

ಮತ್ತು ಅವಳೇ, ತನ್ನ ತಾಯಿತಂದೆಗಳಿಗೂ, ಬಂಧುಗಳಿಗೂ ಹೇಗೆ ಸಂತೋಷವನ್ನುಂಟುಮಾಡುತ್ತಾಳೋ ಹಾಗೆಯೇ, ಅವಳೇ ತನ್ನ ಸವತಿಯರಿಗೆ ದುಃಖವನ್ನೂ ಮೋಹವನ್ನೂ ಎಂದರೆ ಅವಿವೇಕವನ್ನೂ ಉಂಟುಮಾಡುತ್ತಾಳೆ.

**ಏವಂ ಸತ್ತ್ವೇನ ತೇನೈವ ಸ್ತ್ರೀತ್ವಮಾಪಾದಿತೇನ ಚ ।**
**ರಜಸಸ್ತಮಸಶ್ಚೈವ ಜನಿತಾ ವೃತ್ತಿರನ್ಯಥಾ ॥೮॥**

ಅದರಂತೆಯೇ ಸತ್ತ್ವಗುಣವೂ ಅಂತಹ ಸ್ತ್ರೀಯ ಧರ್ಮವನ್ನು ಪಡೆದು ಸುಖರೂಪವಾದ ವೃತ್ತಿಯನ್ನುಂಟುಮಾಡುವುದಾದರೂ, ಒಂದು ಕಾಲದಲ್ಲಿ ಓರ್ವ ಪುರುಷನಿಗೆ ಸುಖವನ್ನುಂಟುಮಾಡಿ ತಿರುಗಿ ಅವನಿಗೇ ಕಾಲಾಂತರದಲ್ಲಿ ರಜಸ್ಸು ಮತ್ತು ತಮಸ್ಸುಗಳ ಸಂಪರ್ಕದ ಪ್ರಭಾವಗಳಿಂದ ಕೂಡಿ ದುಃಖ ಮತ್ತು ಮೋಹರೂಪವಾದ ವೃತ್ತಿಯನ್ನುಂಟುಮಾಡುತ್ತದೆ. ಎಂದರೆ ಒಂದೇ ಗುಣವು ಸ್ವತಂತ್ರವಾಗಿ ಯಾವ ಪರಿಣಾಮವನ್ನಾಗಲೀ, ಫಲವನ್ನಾಗಲೀ ಉಂಟುಮಾಡುವುದಿಲ್ಲವು. ಮತ್ತೇನೆಂದರೆ, ಇತರ ಎರಡು ಗುಣಗಳೊಡನೆ ಯಾವಾಗಲೂ ಬೆರೆದುಕೊಂಡಿರುವುದರಿಂದ ಒಂದೇ ವ್ಯಕ್ತಿಗೆ ಕಾಲಭೇದದಿಂದಲೂ, ಒಂದೇ ಕಾಲದಲ್ಲಿ ಭಿನ್ನ ಭಿನ್ನ ವ್ಯಕ್ತಿಗಳಿಗೂ ಬೇರೆಬೇರೆ ಮನೋವೃತ್ತಿಗಳನ್ನುಂಟುಮಾಡುತ್ತದೆ.

**ರಜಸಾ ಸ್ತ್ರೀಕೃತೇನೈವಂ ತಮಸಾ ಚ ತಥಾ ಪುನಃ ।**
**ಅನ್ಯೋನ್ಯಸ್ಯ ಸಮಾಯೋಗಾದನ್ಯಥಾ ಪ್ರತಿಭಾತಿ ವೈ ॥೯॥**

ಅದರಂತೆಯೇ, ರಜೋಗುಣವೂ ಅಂತಹ ಸ್ತ್ರೀಯ ಧರ್ಮವನ್ನು ಪಡೆದು ದುಃಖವನ್ನು ಕೊಡತಕ್ಕದ್ದಾದರೂ, ತಿರುಗಿ ಸತ್ತ್ವ ಮತ್ತು ತಮಸ್ಸುಗಳ ಸಂಬಂಧವುಳ್ಳದ್ದಾಗಿ ಅದಕ್ಕೆ ವಿಪರೀತವಾಗಿಯೇ ಕಾಲಭೇದದಿಂದಲೂ, ವ್ಯಕ್ತಿಭೇದದಿಂದಲೂ, ಸುಖ ಮತ್ತು ದುಃಖಗಳೆರಡನ್ನೂ ಮಿಶ್ರವಾಗಿರುವಂತೆಯೇ ಕೊಡುವುದು.

**ಅವಸ್ಥಾನಾತ್ಸ್ವಭಾವೇಷು ನ ವೈ ಜಾತ್ಯಂತರಾಣಿ ಚ ।**
**ಲಕ್ಷ್ಯಂತೇ ವಿಪರೀತಾನಿ ಯೋಗಾನ್ನಾರದ ಕುತ್ರಚಿತ್ ॥೧೦॥**

ಕೆಲವು ವಸ್ತುಗಳು ಒಂದೊಂದೇ ಇದ್ದರೆ ಆಗ ತಮ್ಮ ಸ್ವಭಾವವುಳ್ಳವುಗಳೇ ಆಗಿರುತ್ತಾ ಒಂದೇ ರೀತಿಯಾದ ಜ್ಞಾನವನ್ನೋ, ಸುಖವನ್ನೋ ಉಂಟುಮಾಡುತ್ತವೆ. ಬೇರೆ ಜಾತಿಯ ವೃತ್ತಿ ಅಥವಾ ಸ್ವಭಾವವನ್ನು ಹೊಂದುವುದಿಲ್ಲ. ಆದರೆ, ಯಾವಾಗ ಬೇರೆ ಪದಾರ್ಥಗಳ ಸಂಬಂಧವುಂಟಾಗುವುದೋ ಆಗ ಅದಕ್ಕೆ ವಿಪರೀತವಾಗಿರುವ ವೃತ್ತಿಗಳನ್ನು ಉಂಟುಮಾಡುತ್ತಿರುತ್ತವೆ. ಓ ನಾರದನೇ, ಪ್ರಕೃತದಲ್ಲಿ ಈ ಗುಣಗಳು ಯಾವಾಗಲೂ ಭಿನ್ನಭಿನ್ನವಾದ ಸ್ವಭಾವವುಳ್ಳವುಗಳಾದ ಕಾರಣ ಎಲ್ಲವೂ ಯಾವಾ

ಗಲೂ ಒಟ್ಟು ಸೇರಿಯೇ ಕಾರ್ಯಗಳನ್ನು ಎಂದರೆ, ಬೇರೆಬೇರೆ ವೃತ್ತಿಗಳ ಪರಿಣಾಮ ಗಳೂ ಫಲಗಳೂ ಆಗಿರುವ ಸುಖದುಃಖಮೋಹಗಳನ್ನು ಉಂಟುಮಾಡುತ್ತಿರುತ್ತವೆ ಎಂದು ಭಾವವು.

**ಯಥಾ ರೂಪವತೀ ನಾರೀ ಯೌವನೇನ ವಿಭೂಷಿತಾ ।**
**ಲಜ್ಜಾಮಾಧುರ್ಯಯುಕ್ತಾ ಚ ತಥಾ ವಿನಯಸಂಯುತಾ ॥೧೧॥**

ಓರ್ವ ಸೌಂದರ್ಯವತಿಯಾದ ಸ್ತ್ರೀಯು ಹೇಗೆ ತುಂಬಿದ ಯೌವನ, ಸರಳವಾಗಿ ಹಿತವಾದ ನಾಚಿಕೆ, ರಮಣೀಯತೆ ಮತ್ತು ಒಪ್ಪುವ ವಿನಯಾದಿಗುಣ ಇವುಗಳಿಂದ ಕೂಡಿದವಳಾಗಿ,

**ಕಾಮಶಾಸ್ತ್ರವಿಧಿಜ್ಞಾ ಚ ಧರ್ಮಶಾಸ್ತ್ರೇಽಪಿ ಸಂಮತಾ ।**
**ಭರ್ತುಃ ಪ್ರೀತಿಕರೀ ಭೂತ್ವಾ ಸಪತ್ನೀನಾಂ ಚ ದುಃಖದಾ ॥೧೨॥**

ಕಾಮಶಾಸ್ತ್ರದ ರಹಸ್ಯವಿಧಾನಗಳನ್ನೂ, ಧರ್ಮಶಾಸ್ತ್ರದ ರಹಸ್ಯವನ್ನೂ ಬಲ್ಲವ ಳಾಗಿ, ಅವುಗಳಲ್ಲಿನ ನಿಯಮಗಳಿಗೆ ಸಮ್ಮತವಾದ ನಡತೆಯುಳ್ಳವಳಾಗಿ ಇದ್ದು ತನ್ನ ಪತಿಗೆ ಸಂತೋಷವನ್ನೂ, ಸವತಿಯರಿಗೆ ದುಃಖವನ್ನೂ ಉಂಟುಮಾಡುತ್ತಾಳೆಯೋ ಹಾಗೆ ಗುಣತ್ರಯದಿಂದ ಫಲಭೇದಗಳಾಗುತ್ತವೆ.

**ಮೋಹದುಃಖಸ್ವಭಾವಸ್ಥಾ ಸತ್ತ್ವಸ್ಥೇತ್ಯುಚ್ಯತೇ ಜನೈಃ ।**
**ತಥಾ ಸತ್ತ್ವಂ ವಿಕುರ್ವಾಣಮನ್ಯಭಾವಂ ವಿಭಾತಿ ವೈ ॥೧೩॥**

ಆದರೆ ಅವಳನ್ನು ಸತ್ತ್ವಗುಣದವಳಾದರೂ ಸವತಿಯರ ವಿಷಯದಲ್ಲಿ ಅವಿ ವೇಕ ದುಃಖಗಳನ್ನುಂಟುಮಾಡುವ ಸ್ವಭಾವವುಳ್ಳವಳೆನ್ನುತ್ತಾರೆ. ಅದರಂತೆ ಸತ್ತ್ವ ಗುಣವೂ ವ್ಯಕ್ತಿಭೇದದಿಂದ ಫಲಭೇದವನ್ನುಂಟುಮಾಡುತ್ತಾ ಬೇರೆಯ ಸ್ವಭಾವ ವುಳ್ಳದ್ದೆಂದು ತೋರುತ್ತದೆ.

**ಚೌರೈರುಪದ್ರುತಾನಾಂ ಹಿ ಸಾಧೂನಾಂ ಸುಖದಾ ಭವೇತ್ ।**
**ದುಃಖಾ ಮೂಢಾ ಚ ದಸ್ಯೂನಾಂ ಸೈವ ಸೇನಾ ತಥಾ ಗುಣಾ ॥೧೪॥**

ಇನ್ನೂ ಒಂದು, ರಜೋಗುಣವು ಮುಂದಾಗಿರುವುದರ ಉದಾಹರಣೆಯು. ಒಂದು ಸೇನೆಯು ಕಳ್ಳರಿಂದ ಪೀಡಿಸಲ್ಪಟ್ಟ ಸತ್ಪುರುಷರಿಗೆ ರಕ್ಷಣೆಯನ್ನುಂಟುಮಾಡಿ ಸುಖವನ್ನು ಉಂಟುಮಾಡುತ್ತದೆ. ಆದರೆ ಅದೇ ಸೇನೆಯು ಶತ್ರುಗಳಿಗೆ ದುಃಖವನ್ನೂ

ಮೋಹವನ್ನೂ ಉಂಟುಮಾಡುತ್ತದೆ. ಅದರಂತೆಯೇ ಈ ಗುಣಗಳೂ ಬೇರೆ ಬೇರೆ ವ್ಯಕ್ತಿಗಳಿಗೆ ಬೇರೆ ಬೇರೆ ಫಲಗಳನ್ನು ಕೊಡುವ ಸ್ವಭಾವಗಳುಳ್ಳವಾಗುತ್ತವೆ.

**ವಿಪರೀತಪ್ರತೀತಿಂ ವೈ ಜನಯಂತಿ ಸ್ವಭಾವತಃ ।**
**ಯಥಾ ಚ ದುರ್ದಿನಂ ಜಾತಂ ಮಹಾಮೇಘಘನಾವೃತಂ ॥೧೫॥**

ಅದರಂತೆ ಈ ಗುಣಗಳೂ ಆಯಾಯ ಸಂಬಂಧಸನ್ನಿವೇಶಗಳ ಭೇದದಿಂದ ತಮ್ಮ ಸ್ವಭಾವಕ್ಕಿಂತಲೂ ವಿಪರೀತವಾದ ಎಂದರೆ ವಿರುದ್ಧವಾದ ಪರಿಣಾಮವನ್ನುಂಟು ಮಾಡುತ್ತವೆ. ಇನ್ನು ಒಂದು ತಮೋಗುಣವು ಮುಂದಾಗುವುದರ ಉದಾಹರಣೆಯು ಹೇಗೆಂದರೆ, ಒಂದು ದಿನವು, ದೊಡ್ಡ ದೊಡ್ಡ ಮೇಘಗಳಿಂದ ನಿಬಿಡವಾಗಿ ವ್ಯಾಪಿಸಲ್ಪಟ್ಟು ಬಿಸಲೂ, ಬೆಳಕೂ ಇಲ್ಲದ ದುರ್ದಿನವಾಗುತ್ತದೆ.

**ವಿದ್ಯುತ್ಸ್ತನಿತಸಂಯುಕ್ತಂ ತಿಮಿರೇಣಾವಗುಂಠಿತಂ ।**
**ಸಿಂಚದ್ಭೂಮಿಂ ಪ್ರವರ್ಷದ್ವೈ ತಮೋರೂಪಮುದಾಹೃತಂ ॥೧೬॥**

ಮತ್ತು ಆ ದುರ್ದಿನವು ಮಿಂಚಿನ ಪ್ರಕಾಶದಿಂದಲೂ, ಮೇಘಗಳ ಗರ್ಜನೆಯಿಂದಲೂ ತುಂಬಿ ಭಯಂಕರವಾಗಿರುತ್ತದೆ. ಮತ್ತು ಅಂಧಕಾರದಿಂದ ಮುಚ್ಚಲ್ಪಟ್ಟಿರುತ್ತದೆ. ಆದರೆ ಹೀಗೆ ಕತ್ತಲೆಯಿಂದ ವ್ಯಾಪ್ತವಾಗಿದ್ದರೂ ಭೂಮಿಯೆಲ್ಲಾ ಮಳೆಯ ನೀರಿನಿಂದ ತೋಯ್ದಿರುತ್ತದೆ.

**ಯದೇತತ್ಕರ್ಷಕಾಣಾಂ ವೈ ತದೇವಾತೀವದುರ್ದಿನಂ ।**
**ಬೀಜೋಪಸ್ಕರಯುಕ್ತಾನಾಂ ಸುಖದಂ ಪ್ರಭವತ್ಯುತ ॥೧೭॥**

ಹೀಗೆ ತುಂಬ ದುರ್ದಿನವಾದ ಆ ದಿವಸವೇ ಬೀಜವನ್ನು ಬಿತ್ತುವ ಉಪಕರಣಗಳಿಂದ ಕೂಡಿರುವ ವ್ಯವಸಾಯಗಾರರಿಗೆ ಅನುಕೂಲವಾಗಿರುವುದರಿಂದ ಅವರಿಗೆ ತುಂಬಾ ಸಂತೋಷಕರವಾಗಿರುತ್ತದೆ.

**ಅಪ್ರಚ್ಛನ್ನಗೃಹಾಣಾಂ ಚ ದುರ್ಭಗಾನಾಂ ವಿಶೇಷತಃ ।**
**ತೃಣಕಾಷ್ಠಗೃಹೀತಾನಾಂ ದುಃಖದಂ ಗೃಹಮೇಧಿನಾಂ ॥೧೮॥**

ಆದರೆ ಅದೇ ರೈತರಿಗೆ ಅನುಕೂಲವಾದ ದುರ್ದಿನವು, ಮನೆಯನ್ನು ಒಳ್ಳೆಯ ಛಾವಣಿಯಿಂದ ಹೊದ್ದಿಸಿಕೊಳ್ಳದೇ ಇರುವ ಮತ್ತು ಮಳೆಗಾಲಕ್ಕಾಗಿ ಹುಲ್ಲು, ಸೌದೆ

ಮುಂತಾದವುಗಳನ್ನು ಸಂಗ್ರಹಿಸದಿರುವ ಗೃಹಸ್ಥರಿಗೂ, ಇರುವುದಕ್ಕೆ ವಾಸಸ್ಥಳವಿಲ್ಲದ ನಿರ್ಗತಿಕರಿಗೂ ತುಂಬಾ ದುಃಖವನ್ನುಂಟುಮಾಡುತ್ತದೆ.

**ಪ್ರೋಷಿತಭರ್ತೃಕಾಣಾಂ ವೈ ಮೋಹದಂ ಪ್ರವದಂತ್ಯಪಿ ।**
**ಸ್ವಭಾವಸ್ಥಾ ಗುಣಾಸ್ಸರ್ವೇ ವಿಪರೀತಾ ವಿಭಾಂತಿ ವೈ ॥೧೯॥**

ಮತ್ತು ವಿರಹಿಣಿಯರಾದ ಸ್ತ್ರೀಯರಿಗೂ ಸಹ ದುಃಖವನ್ನುಂಟುಮಾಡುತ್ತದೆ. ಅದರಂತೆಯೇ ಈ ಗುಣಗಳೂ ತಮ್ಮ ಸ್ವಭಾವದಲ್ಲಿ ಭೇದವಿಲ್ಲದೆ ಇದ್ದರೂ ವ್ಯಕ್ತಿಗಳ, ಸನ್ನಿವೇಶಗಳ ಮತ್ತು ಕಾಲದ ಭೇದದಿಂದ ಭಿನ್ನವಾಗಿ ತೋರುವವು.

**ಲಕ್ಷಣಾನಿ ಪುನಸ್ತೇಷಾಂ ಶೃಣು ಪುತ್ರ ಬ್ರವೀಮ್ಯಹಂ ।**
**ಲಘುಪ್ರಕಾಶಕಂ ಸತ್ತ್ವಂ ನಿರ್ಮಲಂ ವಿಶದಂ ಸದಾ ॥೨೦॥**

ಓ ಪುತ್ರನಾದ ನಾರದನೇ, ಇನ್ನೂ ಆ ಗುಣಗಳ ಲಕ್ಷಣಗಳನ್ನು ಹೇಳುತ್ತೇನೆ, ಕೇಳು. ಸತ್ತ್ವಗುಣವು ಲಘು ಎಂದರೆ ಹಗುರವಾದ ಸ್ವರೂಪವುಳ್ಳದ್ದು ಮತ್ತು ಪ್ರಕಾಶವನ್ನು, ತಿಳಿವಳಿಕೆಯ ಬೆಳಕನ್ನು, ಸುಖಕರವಾದ ಒಳ್ಳೆಯ ಫಲವನ್ನೂ ಉಂಟುಮಾಡತಕ್ಕದ್ದು; ಶುದ್ಧವಾದುದು; ಮಂಕುತನವನ್ನು ನಿವಾರಿಸುವುದರಿಂದ ವಿಶದವಾದುದು.

**ಯದಾಂಗಾನಿ ಲಘೂನ್ಯೇವ ನೇತ್ರಾದೀನೀಂದ್ರಿಯಾಣಿ ಚ ।**
**ನಿರ್ಮಲಂ ಚ ತಥಾ ಚೇತೋ ಗೃಹ್ಣಾತಿ ವಿಷಯಾನ್ನ ತಾನ್ ॥೨೧॥**

ಆದುದರಿಂದ, ಯಾವಾಗ ನಮ್ಮ ಶರೀರವೂ, ಕಣ್ಣುಗಳೇ ಮೊದಲಾದ ಇಂದ್ರಿಯಗಳೂ ಅಲಸವಾಗಿಲ್ಲದೆ ಹಗುರವಾಗಿ ಚಟುವಟಿಕೆಯಿಂದ ಇರುವುವೋ ಮತ್ತು ಮನಸ್ಸು ನಿರ್ಮಲವಾಗಿದ್ದು ರಾಜಸತಾಮುಸವಿಷಯಗಳನ್ನು ಗ್ರಹಿಸುವುದಿಲ್ಲವೋ ಎಂದರೆ ರಾಜಸತಾಮುಸಸಂಬಂಧವಾದ ವಿಷಯಾದಿ ಭೋಗಗಳಲ್ಲಿ ಆಸಕ್ತಿಯುಳ್ಳವುಗಳಾಗಿರುವುದಿಲ್ಲವೋ,

**ತದಾ ಸತ್ತ್ವಂ ಶರೀರೇ ವೈ ಮಂತವ್ಯಂ ಚ ಸಮುತ್ಕಟಂ ।**
**ಜೃಂಭಾಂ ಸ್ತಂಭಂ ಚ ತಂದ್ರಾಂ ಚ ಚಲಂ ಚೈವ ರಜಃ ಪುನಃ ॥೨೨॥**

ಆಗ ನಮ್ಮಲ್ಲಿ ಸತ್ತ್ವಗುಣವು ಹೆಚ್ಚಾಗಿ, ಮೇಲಾಗಿದೆಯೆಂದು ತಿಳಿಯಬೇಕು. ಹಾಗೆಯೇ, ಶರೀರದಲ್ಲಿ ಭಾರವಾಗಿರುವಿಕೆ, ಆಕಳಿಕೆ, ಜಡತೆ, ಸೋಮಾರಿ

ತನ, ಚಾಂಚಲ್ಯ ಇವುಗಳು ಯಾವಾಗ ಇರುವವೋ ಆಗ ರಜೋಗುಣವು ಮುಂದಾಗಿದೆ ಎಂದು ತಿಳಿಯಬೇಕು.

**ಯದಾ ತದುತ್ಕಟಂ ಜಾತಂ ದೇಹೇ ಯಸ್ಯ ಚ ಕಸ್ಯ ಚಿತ್ ।**
**ಕಲಿಂ ಮೃಗಯತೇ ಕರ್ತುಂ ಗಂತುಂ ಗ್ರಾಮಾಂತರಂ ತಥಾ ॥೨೩॥**

ಆಗ ಅವನಲ್ಲಿ ರಜೋಗುಣವು ಹೆಚ್ಚಾಗಿದೆಯೆಂದು ತಿಳಿಯಬೇಕು. ಮತ್ತು ಆಗ ಅಂಥವನು ಚಟುವಟಿಕೆಯಿಂದ ವ್ಯವಹರಿಸಲು ತವಕಪಡುತ್ತಿರುತ್ತಾನೆ. ಊರಿಂದೂರಿಗೆ ಹೋಗುವುದಕ್ಕೆ ಎಂದರೆ ಚಲನೆಯಲ್ಲಿ ಆಸಕ್ತನಾಗಿರುತ್ತಾನೆ.

**ಚಲಚಿತ್ತಶ್ಚ ಸೋಽತ್ಯರ್ಥಂ ವಿವಾದೇ ಚೋದ್ಯತಸ್ತಥಾ ।**
**ಗುರುಮಾನರಣಂ ಕಾಮಂ ತಮೋ ಭವತಿ ತದ್ಯದಾ ॥೨೪॥**

ಮತ್ತು ಆ ರಜೋಗುಣವು ಹೆಚ್ಚಾಗಿರುವವನು, ಸ್ಥಿರವಾದ ಮನಸ್ಸಿಲ್ಲದೆ ವ್ಯವಹಾರಮಾಡಲು ಆತುರಪಡುತ್ತಿರುತ್ತಾನೆ. ಮತ್ತು ಹಾಗೆಯೇ ತಮೋಗುಣವು ಜಡಸ್ವಭಾವವುಳ್ಳದ್ದು ಮತ್ತು ತಿಳಿವಳಿಕೆಯನ್ನು ಮರೆಮಾಡುವ ಸ್ವಭಾವವುಳ್ಳದ್ದು. ಅದು ಯಾವಾಗ ಉದ್ರೇಕಗೊಂಡಿರುವುದೋ

**ತದಾಂಗಾನಿ ಗುರೂಣ್ಯಾಶು ಪ್ರಭವಂತ್ಯಾವೃತಾನಿ ಚ ।**
**ಇಂದ್ರಿಯಾಣಿ ಮನಃ ಶೂನ್ಯಂ ನಿದ್ರಾಂ ನೈವಾಭಿವಾಂಛತಿ ॥೨೫॥**

ಆಗ ಶರೀರವೆಲ್ಲಾ ಭಾರವಾಗಿರುತ್ತದೆ. ಇಂದ್ರಿಯಗಳು ಮಂಕುಬಡಿದಂತಾಗಿರುತ್ತವೆ. ಮನಸ್ಸು, ಏನನ್ನು ಮಾಡಬೇಕೆಂಬುದನ್ನಾಗಲೀ, ಹೊಸವಿಷಯಗಳನ್ನಾಗಲೀ ತಿಳಿಯಲಾರದೆ ಜ್ಞಾನಶೂನ್ಯವಾಗಿರುತ್ತದೆ. ಆಗ ಮನುಷ್ಯನು ನಿದ್ರೆಯನ್ನೇ ಅಪೇಕ್ಷಿಸಬೇಕಾಗಿರುವುದಿಲ್ಲವು. ಅಂಥವನು ಯಾವಾಗಲೂ ನಿದ್ರೆಯಿಂದ ಆವರಿಸಲ್ಪಟ್ಟಿರುತ್ತಾನೆ.

**ಗುಣಾನಾಂ ಲಕ್ಷಣಾನ್ಯೇವಂ ವಿಜ್ಞೇಯಾನೀಹ ನಾರದ ।**

ಓ ನಾರದಮುನಿಯೇ, ಈ ರೀತಿಯಾಗಿ ಗುಣಗಳ ಲಕ್ಷಣ, ಸ್ವರೂಪ ಪರಿಣಾಮಕಾರ್ಯ, ಇವುಗಳನ್ನು ತಿಳಿಯಬೇಕು.

|| ನಾರದ ಉವಾಚ ||

**ವಿಭಿನ್ನಲಕ್ಷಣಾಃ ಪ್ರೋಕ್ತಾಃ ಪಿತಾಮಹ ಗುಣಾಸ್ತ್ರಯಃ ||೨೬||**

ನಾರದನು ತನ್ನ ತಂದೆಯಾದ ಬ್ರಹ್ಮನನ್ನು ಕುರಿತು ತಿರುಗಿ ಕೇಳಿದನು— ಪ್ರಪಂಚಕ್ಕೆ ಪಿತಾಮಹಸ್ವರೂಪನಾದ ಬ್ರಹ್ಮನೇ, ನೀನು ಈಗ ಮೂರು ಗುಣಗಳೂ ಪರಸ್ಪರ ಭಿನ್ನವಾದ ಲಕ್ಷಣಗಳುಳ್ಳವೆಂದು ಹೇಳಿರುವೆ.

**ಕಥಮೇಕತ್ರ ಸಂಸ್ಥಾನೇ ಕಾರ್ಯಂ ಕುರ್ವಂತಿ ಶಾಶ್ವತಂ ।**
**ಪರಸ್ಪರಂ ಮಿಲಿತ್ವಾ ಹಿ ವಿಭಿನ್ನಾಃ ಶತ್ರವಃ ಕಿಲ ||೨೭||**

ಹಾಗಾದರೆ, ಭಿನ್ನಧರ್ಮ, ಫಲ, ಪರಿಣಾಮಗಳುಳ್ಳ ಗುಣಗಳು ಒಂದೇ ಸ್ಥಳದಲ್ಲಿ ಪರಸ್ಪರ ಸೇರಿ ಯಾವಾಗಲೂ ಹೇಗೆ ಕಾರ್ಯವನ್ನು ಮಾಡುತ್ತವೆ? ಪರಸ್ಪರ ವಿರುದ್ಧವಾದವುಗಳು ಶತ್ರುಗಳ ಹಾಗಲ್ಲವೇ?

**ಏಕತ್ರಸ್ಥಾಃ ಕಥಂ ಕಾರ್ಯಂ ಕುರ್ವಂತೀತಿ ವದಸ್ವ ಮೇ ।**

ಆದುದರಿಂದ ಪರಸ್ಪರ ವಿರುದ್ಧವಾದ ಗುಣಗಳು ಒಂದೆಡೆಯಲ್ಲಿ ಸೇರಿ ಹೇಗೆ ಕಾರ್ಯವನ್ನು ನಿರ್ವಹಿಸುತ್ತವೆ ಎಂಬುದನ್ನು ವಿವರಿಸಿ ಹೇಳು.

|| ಬ್ರಹ್ಮೋವಾಚ ||

**ಶೃಣು ಪುತ್ರ ಪ್ರವಕ್ಷ್ಯಾಮಿ ಗುಣಾಸ್ತೇ ದೀಪವೃತ್ತಯಃ ||೨೮||**

ಬ್ರಹ್ಮನು ಹೇಳಿದನು—ಎಲೈ ಪುತ್ರನಾದ ನಾರದನೇ, ಕೇಳು ಹೇಳುತ್ತೇನೆ. ಆ ಗುಣಗಳು ದೀಪದಂತೆ ಕಾರ್ಯವನ್ನು ನಿರ್ವಹಿಸುತ್ತವೆ.

**ಪ್ರದೀಪಶ್ಚ ಯಥಾ ಕಾರ್ಯಂ ಪ್ರಕರೋತ್ಯರ್ಥದರ್ಶನಂ ।**
**ವರ್ತಿಸ್ತೈಲಂ ಯಥಾರ್ಚಿಶ್ಚ ವಿರುದ್ಧಾಶ್ಚ ಪರಸ್ಪರಂ ||೨೯||**

ಅದು ಹೇಗೆಂದರೆ, ಬತ್ತಿ, ಎಣ್ಣೆ ಮತ್ತು ತೇಜಸ್ಸು, ಶಾಖ, ಇವುಗಳಿಂದ ಉಂಟಾದ ದೀಪವು ಪದಾರ್ಥಗಳನ್ನು ಪ್ರಕಾಶಪಡಿಸುತ್ತದೆ. ಆದರೆ ಅದಕ್ಕೆ ಕಾರಣಗಳಾದ ಬತ್ತಿ, ಎಣ್ಣೆ, ಬೆಂಕಿ ಇವು ಪರಸ್ಪರ ವಿರುದ್ಧಗಳು. ಆದರೂ ಅವು ಒಂದರೊಡನೆ ಮತ್ತೊಂದು ಸೇರಿ ಪದಾರ್ಥಗಳನ್ನು ತೋರಿಸುವ ಕಾರ್ಯವನ್ನು ಮಾಡುತ್ತವೆ.

**ವಿರುದ್ಧಂ ಹಿ ತಥಾ ತೈಲಮಗ್ನಿನಾ ಸಹ ಸಂಗತಂ ।**
**ತೈಲಂ ವರ್ತಿವಿರೋಧ್ಯೇವ ಪಾವಕೋಽಪಿ ಪರಸ್ಪರಂ ॥೩೦॥**

ಎಣ್ಣೆಯು ಬೆಂಕಿಯೊಡನೆ ಸೇರಿದರೆ ಅದು ಸುಟ್ಟೇ ಹೋಗುತ್ತದೆ ಅದರಂತೆಯೇ ಬತ್ತಿಗೂ ಬೆಂಕಿಗೂ ವಿರೋಧವು. ಆದುದರಿಂದ ತೈಲವು, ಬತ್ತಿಯು, ಮತ್ತು ಬೆಂಕಿಯೂ ಇವುಗಳು ಪರಸ್ಪರ ವಿರುದ್ಧವಸ್ತುಗಳು.

**ಏಕತ್ರಸ್ಥಾಃ ಪದಾರ್ಥಾನಾಂ ಪ್ರಕುರ್ವಂತಿ ಪ್ರದರ್ಶನಂ ।**

ಹೀಗೆ ಪರಸ್ಪರ ವಿರುದ್ಧಗಳಾಗಿದ್ದರೂ, ಎಣ್ಣೆ, ಬತ್ತಿ ಮತ್ತು ಬೆಂಕಿಗಳು ಒಂದೆಡೆ ಸೇರಿ ಪದಾರ್ಥಪ್ರಕಾಶನವೆಂಬ ಕಾರ್ಯವನ್ನು ಮಾಡುತ್ತವೆ. ಅದರಂತೆಯೇ ಈ ಸತ್ತ್ವರಜಸ್ತಮೋಗುಣಗಳೂ ವಿರುದ್ಧಗಳಾದರೂ ಒಂದೆಡೆ ಸೇರಿ ಕಾರ್ಯವನ್ನು ಮಾಡುತ್ತವೆ.

॥ ನಾರದ ಉವಾಚ ॥

**ಏವಂ ಪ್ರಕೃತಿಜಾಃ ಪ್ರೋಕ್ತಾ ಗುಣಾಃ ಸತ್ಯವತೀಸುತ ॥೩೧॥**
**ವಿಶ್ವಸ್ಯ ಕಾರಣಂ ತೇ ವೈ ಮಯಾ ಪೂರ್ವಂ ಯಥಾಶ್ರುತಂ ।**

ನಾರದಮುನಿಯು ಹೇಳಿದನು—ಸತ್ಯವತಿಯ ಪುತ್ರನಾದ ಓ ವ್ಯಾಸನೇ, ಹೀಗೆ ನಮ್ಮ ತಂದೆಯು ಮಾಯೆಯಿಂದ ಉತ್ಪನ್ನವಾದ ಸತ್ತ್ವರಜಸ್ತಮೋಗುಣಗಳ ಸ್ವರೂಪವನ್ನು ಹೇಳಿದನು. ಮತ್ತು ಈ ಗುಣಗಳೇ ಜಗತ್ತಿಗೆ ಕಾರಣಗಳೆಂದೂ ನಾನು ಬ್ರಹ್ಮನಿಂದ ಕೇಳಿ ತಿಳಿದೆನು.

॥ ವ್ಯಾಸ ಉವಾಚ ॥

**ಇತ್ಯುಕ್ತಂ ನಾರದೇನಾಥ ಮಮ ಸರ್ವಂ ಸವಿಸ್ತರಂ ॥೩೨॥**

ವ್ಯಾಸಮುನಿಯು ಹೇಳಿದನು—ಹೀಗೆ ನಾರದನು ನನಗೆ ಈಗ ಮೇಲೆ ಹೇಳಿದುದೆಲ್ಲವನ್ನೂ ವಿಸ್ತಾರವಾಗಿ ವಿವರಿಸಿ ಹೇಳಿದನು.

**ಗುಣಾನಾಂ ಲಕ್ಷಣಂ ಸರ್ವಂ ಕಾರ್ಯಂ ಚೈವ ವಿಭಾಗಶಃ ।**
**ಆರಾಧ್ಯಾ ಪರಮಾ ಶಕ್ತಿರ್ಯಯಾ ಸರ್ವಮಿದಂ ತತಂ ॥೩೩॥**

ನಾರದನು ಆ ಗುಣಗಳ ಸ್ವರೂಪವನ್ನೆಲ್ಲವನ್ನೂ ಆಯಾಯ ಗುಣಗಳಿಂದುಂಟಾಗತಕ್ಕ ಆಯಾಯ ಕಾರ್ಯಗಳನ್ನೂ ಪ್ರತ್ಯೇಕವಾಗಿ ತಿಳಿಯಹೇಳಿದನು. ಆದುದರಿಂದ ಈ ಗುಣಗಳಿಗೂ ಕಾರಣಳಾದ ಉತ್ಕೃಷ್ಟಶಕ್ತಿಸ್ವರೂಪಳಾದ ಆ ದೇವಿಯನ್ನು ಅರ್ಚಿಸಬೇಕು. ಅವಳು ಈ ಜಗತ್ತಿನಲ್ಲಿ ಎಲ್ಲವನ್ನೂ ವ್ಯಾಪಿಸಿಕೊಂಡು ಇರುತ್ತಾಳೆ. ಅಲ್ಲದೆ ಒಳ್ಳೆಯ ಗುಣಫಲಗಳನ್ನೂ ದೇವಿಯೇ ಅನುಗ್ರಹಿಸಬೇಕಾಗಿದೆ.

**ಸಗುಣಾ ನಿರ್ಗುಣಾ ಚೈವ ಕಾರ್ಯಭೇದೇ ಸದೈವ ಹಿ ।**
**ಅಕರ್ತಾ ಪುರುಷಃ ಪೂರ್ಣೋ ನಿರೀಹಃ ಪರಮೋಽವ್ಯಯಃ ॥೩೪॥**

ಆ ಪರಾಶಕ್ತಿರೂಪಳಾದ ದೇವಿಯು, ಮಹಾಪ್ರಳಯದಲ್ಲಿ ತನ್ನ ವಾಸ್ತವ ಸ್ವರೂಪದಲ್ಲಿ ನಿರ್ಗುಣವಾದ ಬ್ರಹ್ಮನಿಗಿಂತಲೂ ಬೇರೆಯಾಗಿಲ್ಲದಿರುವುದರಿಂದ ನಿರ್ಗುಣಳು. ಜಗತ್ತನ್ನು ಸೃಷ್ಟಿಸುವಿಕೆ ಮುಂತಾದ ವ್ಯವಹಾರಗಳನ್ನು ನಡೆಯಿಸುವಾಗ ಸಗುಣವಾದ ಈಶ್ವರಸ್ವರೂಪಳು. ಆದರೆ ಬ್ರಹ್ಮನು ಯಾವಾಗಲೂ ಕರ್ತೃತ್ವವಿಲ್ಲದವನು ; ಎಲ್ಲೆಡೆಯಲ್ಲೂ ವ್ಯಾಪಿಸಿಕೊಂಡಿರುವವನು ; ಆಶೆಗಳಿಲ್ಲದ ಆಪ್ತಕಾಮನು ; ಎಲ್ಲಕ್ಕಿಂತಲೂ ಮೇಲಾದವನು ; ಉತ್ಪತ್ತಿವಿನಾಶರಹಿತನು ಮತ್ತು ನಿರ್ಗುಣನು. ಆದುದರಿಂದ,

**ಕರೋತ್ಯೇಷಾ ಮಹಾಮಾಯಾ ವಿಶ್ವಂ ಸದಸದಾತ್ಮಕಂ ।**
**ಬ್ರಹ್ಮಾ ವಿಷ್ಣುಸ್ತಥಾ ರುದ್ರಃ ಸೂರ್ಯಶ್ಚಂದ್ರಃ ಶಚೀಪತಿಃ ॥೩೫॥**

ಎಲ್ಲ ಕಾರ್ಯಗಳನ್ನೂ ನೆರವೇರಿಸಬಲ್ಲ ಶಕ್ತಿಸ್ವರೂಪಳಾದ ಪ್ರಾಣಿಗಳ ಕರ್ಮಾನುಸಾರವಾಗಿ ಸೃಷ್ಟಿಗೆ ಅಭಿಮುಖನಾದ ಬ್ರಹ್ಮನ ಮೊದಲನೆಯ ಇಚ್ಛಾ, ಸ್ಪಂದ, ವಾಕ್ ರೂಪಳಾದ ಆ ಮಾಯೆಯು, ಸದಸದಾತ್ಮಕಂ ಎಂದರೆ ಜಗತ್ತು ಸೃಷ್ಟಿಯಾಗುವುದಕ್ಕೆ ಪೂರ್ವದಲ್ಲಿ ಅವ್ಯಕ್ತವಾಗಿದ್ದ ಅಸತ್, ಸೃಷ್ಟಿಯಾದನಂತರ ದೃಷ್ಟಿಗೋಚರವಾಗುವ ಸತ್, ಈ ಸ್ವಭಾವದಿಂದ ಕೂಡಿರುವ ಜಗತ್ತನ್ನು ಸೃಷ್ಟಿಸುತ್ತಾಳೆ. ಬ್ರಹ್ಮನೂ, ವಿಷ್ಣುವೂ, ರುದ್ರನೂ, ಸೂರ್ಯನೂ, ಚಂದ್ರನೂ ಮತ್ತು ಶಚೀಪತಿಯಾದ ಇಂದ್ರನೂ ಸಹ ಅವರವರಿಗೆ ಕ್ಲೃಪ್ತವಾಗಿರುವ ಸೃಷ್ಟಿ ಮುಂತಾದ ಕಾರ್ಯಗಳನ್ನು ಆ ದೇವಿಯ ಅಂಶಗಳಿಂದ ಶಕ್ತಿಗಳ ಸಹಾಯದಿಂದ ನೆರವೇರಿಸುತ್ತಾರೆ.

**ಅಶ್ವಿನೌ ವಸವಸ್ತ್ವಷ್ಟಾ ಕುಬೇರೋ ಯಾದಸಾಂಪತಿಃ ।**
**ವಹ್ನಿರ್ವಾಯುಸ್ತಥಾ ಪೂಷಾ ಸೇನಾನೀಶ್ಚ ವಿನಾಯಕಃ ॥೩೬॥**

ಹಾಗೆಯೇ, ಅಶ್ವಿನೀದೇವತೆಗಳೂ, ಅಷ್ಟವಸುಗಳೂ, ವಿಶ್ವಕರ್ಮನೂ, ಕುಬೇರನೂ, ಜಲಾಧಿಪತಿಯಾದ ವರುಣನೂ, ಅಗ್ನಿಯೂ, ವಾಯುವೂ, ಸೂರ್ಯನೂ, ಷಣ್ಮುಖನೂ, ಗಣಪತಿಯೂ ಸಹ ಅವರವರಿಗೆ ಗೊತ್ತಾಗಿರುವ, ಅವರವರ ಶಕ್ತಿಗಳಿಗೆ ನಿಗದಿರುವ ಸೃಷ್ಟಿ ಮುಂತಾದ ಕಾರ್ಯಗಳನ್ನು ನೆರವೇರಿಸುತ್ತಿರುತ್ತಾರೆ.

**ಸರ್ವೇ ಶಕ್ತಿಯುತಾಃ ಶಕ್ತಾಃ ಕರ್ತುಂ ಕಾರ್ಯಾಣಿ ಸ್ವಾನಿ ಚ ।**
**ಅನ್ಯಥಾ ತೇಽಪ್ಯಶಕ್ತಾ ವೈ ಪ್ರಸ್ಪಂದಿತುಮನೀಶ್ವರಾಃ ॥೩೭॥**

ಆದುದರಿಂದ ಈ ಎಲ್ಲ ದೇವತೆಗಳೂ ಆ ಶಕ್ತಿದೇವಿಯ ಅಂಶಗಳಿಂದ ಕೂಡಿದವರಾಗಿಯೇ ತಮ್ಮ ತಮ್ಮ ಕಾರ್ಯಗಳನ್ನು ಮಾಡಲು ಶಕ್ತರಾದಾರು. ಇಲ್ಲದಿದ್ದರೆ ಅವರು ಅಲುಗಾಡಲು ಸಹ ಶಕ್ತಿಯಿಲ್ಲದ ಅಸಮರ್ಥರಾಗುತ್ತಾರೆ.

**ಸಾ ಚೈವ ಕಾರಣಂ ರಾಜನ್ ಜಗತಃ ಪರಮೇಶ್ವರೀ ।**
**ಸಮಾರಾಧಯತಾಂ ಭೂಪ ಕುರು ಯಜ್ಞಂ ಜನಾಧಿಪ ॥೩೮॥**

ಓ ರಾಜನೇ, ಈ ಪ್ರಕಾರವಾಗಿ ಆ ದೇವಿಯೇ ಈ ಜಗತ್ತಿಗೆ ಸಾಕ್ಷಾತ್ತಾಗಿಯೂ, ಪರಂಪರೆಯಿಂದಲೂ ಕಾರಣಳು ಮತ್ತು ಒಡೆಯಳು. ಓ ಜನಮೇಜಯ ರಾಜನೇ, ಇಂತಹ ದೇವಿಯನ್ನು ನೀನು ಪೂಜಿಸು ಮತ್ತು ಆ ದೇವಿಯ ಯಜ್ಞವನ್ನು ಮಾಡು.

**ಪೂಜನಂ ಪರಯಾ ಭಕ್ತ್ಯಾ ತಸ್ಯಾ ಏವ ವಿಧಾನತಃ ।**
**ಮಹಾಲಕ್ಷ್ಮೀರ್ಮಹಾಕಾಲೀ ತಥಾ ಮಹಾಸರಸ್ವತೀ ॥೩೯॥**

ಮತ್ತು ತುಂಬ ಭಕ್ತಿಯಿಂದ ಆ ದೇವಿಯ ಪೂಜೆಯನ್ನು ಯಥಾವಿಧಿಯಾಗಿ ಶಾಸ್ತ್ರದಲ್ಲಿ ಹೇಳಿರುವಂತೆ ಮಾಡು. ಆ ದೇವಿಯು ವಿಷ್ಣುಶಕ್ತಿಯಾದ ಮಹಾಲಕ್ಷ್ಮಿಯ ಸ್ವರೂಪಳು, ರುದ್ರನ ಶಕ್ತಿಯಾದ ಮಹಾಕಾಲಿಯ ಸ್ವರೂಪಳು, ಮತ್ತು ಬ್ರಹ್ಮನ ಶಕ್ತಿಯಾದ ಮಹಾಸರಸ್ವತೀರೂಪಳೂ ಅವಳೇ ಆಗಿರುತ್ತಾಳೆ.

**ಈಶ್ವರೀ ಸರ್ವಭೂತಾನಾಂ ಸರ್ವಕಾರಣಕಾರಣಂ ।**
**ಸರ್ವಕಾಮಾರ್ಥದಾ ಶಾಂತಾ ಸುಖಸೇವ್ಯಾ ದಯಾನ್ವಿತಾ ॥೪೦॥**

ಆ ಮಹಾಶಕ್ತಿಯು ಹಿಂದೆ ಹೇಳಿದಂತೆ ಎಲ್ಲಾ ಚರಾಚರಪ್ರಪಂಚಗಳಿಗೂ ಒಡೆಯಳೂ, ಎಲ್ಲಾ ಜಗತ್ತಿಗೂ ಕಾರಣರಾದ ಬ್ರಹ್ಮ ವಿಷ್ಣು ಮಹೇಶ್ವರರಿಗೂ

ಕಾರಣಳೂ, ಎಲ್ಲಾ ಇಷ್ಟಾರ್ಥವನ್ನೂ ಕೊಡತಕ್ಕವಳೂ, ಶನುಗುಣಪ್ರಧಾನವಾದ ಸ್ವಭಾವವುಳ್ಳವಳೂ, ಎಲ್ಲರಿಂದಲೂ ಸುಲಭವಾಗಿ ಸೇವಿಸಲ್ಪಡಲು ಸಾಧ್ಯವಾಗಿರು ನವಳೂ ಮತ್ತು ತುಂಬ ಕರುಣೆಯುಳ್ಳವಳೂ ಆಗಿದ್ದಾಳೆ.

**ನಾಮೋಚ್ಚಾರಣಮಾತ್ರೇಣ ವಾಂಛಿತಾರ್ಥಫಲಪ್ರದಾ ।**
**ದೇವೈರಾರಾಧಿತಾ ಪೂರ್ವಂ ಬ್ರಹ್ಮವಿಷ್ಣುಮಹೇಶ್ವರೈಃ ॥೪೧॥**

ಅಲ್ಲದೇ ಆ ಮೂಲಶಕ್ತಿಯ ಹೆಸರನ್ನು ಏಕಾಗ್ರತೆಯಿಂದಲೂ ಅನನ್ಯಭಕ್ತಿ ಯಿಂದಲೂ ಉಚ್ಚರಿಸಿದ ಮಾತ್ರದಿಂದಲೇ ಅಪೇಕ್ಷಿಸಿದ ಫಲವನ್ನು ಕೊಡತಕ್ಕವಳೂ ಆದುದರಿಂದ ಆ ದೇವಿಯು ಹಿಂದೆ ಸೃಷ್ಟಿಯ ಪ್ರಾರಂಭಕಾಲದಲ್ಲಿ ಬ್ರಹ್ಮವಿಷ್ಣುಮಹೇ ಶ್ವರರೆಂಬ ತ್ರಿಮೂರ್ತಿಗಳಿಂದಲೂ ಸೇವಿಸಲ್ಪಟ್ಟವಳಾಗಿ ಅವರನ್ನೂ ಅನುಗ್ರಹಿಸಿದಳು.

**ಮೋಕ್ಷಕಾಮೈಶ್ಚ ವಿವಿಧೈಸ್ತಾಪಸೈರ್ವಿಜಿತಾತ್ಮಭಿಃ ।**
**ಅಸ್ಪಷ್ಟಮಪಿ ಯನ್ನಾಮ ಪ್ರಸಂಗೇನಾಭಿಭಾಷಿತಂ ॥೪೨॥**

ಆ ಪರಾಶಕ್ತಿಯನ್ನು ಇಂದ್ರಿಯನಿಗ್ರಹವುಳ್ಳ ಮತ್ತು ಮುಕ್ತಿಯನ್ನಪೇಕ್ಷಿಸುವ ನಾನಾಬಗೆಯ ಸನ್ಯಾಸಿಗಳೂ ಸೇವಿಸುತ್ತಾರೆ. ಅಲ್ಲದೆ, ಆ ಶಕ್ತಿಯ ನಾಮವನ್ನು ಸ್ಪಷ್ಟತೆಯಿಲ್ಲದೆಯೂ, ವಿಶದವಾಗಿ ಅರ್ಥವು ತಿಳಿಯದೆ ಇದ್ದರೂ, ಧ್ಯಾನದ ಉದ್ದೇಶ ವಿಲ್ಲದೆ ಬೇರೆ ಕೆಲಸದಲ್ಲಿರುವಾಗ ಪ್ರಸಂಗವಶದಿಂದಲಾದರೂ ಉಚ್ಚರಿಸಿದರೂ, ಆ ದೇವಿಯು ಭಕ್ತರ ಕೋರಿಕೆಗಳನ್ನು ನೆರವೇರಿಸಿಕೊಡುತ್ತಾಳೆ.

**ದದಾತಿ ವಾಂಛಿತಾನರ್ಥಾನ್ ದುರ್ಲಭಾನಪಿ ಸರ್ವಥಾ ।**
**ಐಐ ಇತಿ ಭಯಾರ್ತೇನ ದೃಷ್ಟ್ವಾ ವ್ಯಾಘ್ರಾದಿಕಂ ವನೇ ॥೪೩॥**

ಪಡೆಯಲಸಾಧ್ಯವಾದಂತಹ ಇಷ್ಟಾರ್ಥಗಳನ್ನೂ ಆ ಶಕ್ತಿಯ ಅನುಗ್ರಹದಿಂದ ಪಡೆಯಬಹುದು. ಇದಕ್ಕೆ ಉದಾಹರಣೆಯು. ಕಾಡಿನಲ್ಲಿ ಹುಲಿಯೇ ಮೊದಲಾದ ದುಷ್ಟಪ್ರಾಣಿಗಳನ್ನು ನೋಡಿ ಹೆದರಿಕೊಂಡಿರುವ ಮನುಷ್ಯನು "ಐ ಐ" ಎಂದು ಆ ಶಕ್ತಿಯ ಬೀಜಮಂತ್ರದ ಭಾಗವನ್ನು ಮಾತ್ರ ಉಚ್ಚರಿಸಿದರೂ ಅಂತಹ ಅಪಾಯ ದಿಂದ ರಕ್ಷಣೆಯನ್ನು ಹೊಂದಬಹುದು.

**ಬಿಂದುಹೀನಮಪೀತ್ಯುಕ್ತಂ ವಾಂಛಿತಂ ಪ್ರದದಾತಿ ವೈ ।**
**ತತ್ರ ಸತ್ಯವ್ರತಸ್ಯೈವ ದೃಷ್ಟಾಂತೋ ನೃಪಸತ್ತಮ ॥೪೪॥**

ಆ ದೇವಿಯ ಬೀಜಮಂತ್ರವಾದ ಐಂ ಎನ್ನುವುದರ ಬದಲು ಸೊನ್ನೆಯಿಲ್ಲದೆ ದೇವಿಯ ನಾಮಾಕ್ಷರವನ್ನು ಉಚ್ಚಾರಮಾಡಿದರೂ ನಮ್ಮ ಇಷ್ಟಾರ್ಥವು ನೆರವೇರುವುದು. ಓ ಜನಮೇಜಯರಾಜನೇ, ಇದಕ್ಕೆ ಉದಾಹರಣೆಯು ಸತ್ಯವ್ರತನ ಚರಿತ್ರೆಯು.

**ಪ್ರತ್ಯಕ್ಷ ಏವ ಚಾಸ್ಮಾಕಂ ಮುನೀನಾಂ ಭಾವಿತಾತ್ಮನಾಂ ।**
**ಬ್ರಾಹ್ಮಣಾನಾಂ ಸಮಾಜೇಷು ತಸ್ಯೋದಾಹರಣಂ ಬುಧೈಃ ॥೪೫॥**

ಆ ಪರಾಶಕ್ತಿಯ ನಾಮಗಳನ್ನು ಸ್ಮರಿಸುವುದರಿಂದ ಶುದ್ಧವಾದ ಮನಸ್ಸುಳ್ಳ ಮುನಿಗಳ ಮತ್ತು ಬ್ರಾಹ್ಮಣರ ಸಭೆಯಲ್ಲಿ ತಿಳಿದವರು ಸತ್ಯವ್ರತನ ಉದಾಹರಣೆಯನ್ನು ಎಂದರೆ ವೃತ್ತಾಂತವನ್ನು ಹೇಳುವರು ಮತ್ತು ಕೇಳುವರು. ಇದು ನಾವು ಕಂಡ ವಿಷಯವೇ ಆಗಿದೆ.

**ಕಥ್ಯಮಾನಂ ಮಯಾ ರಾಜನ್ ಶ್ರುತಂ ಸರ್ವಂ ಸವಿಸ್ತರಂ ।**
**ಅನಕ್ಷರೋ ಮಹಾಮೂರ್ಖೋ ನಾಮ್ನಾ ಸತ್ಯವ್ರತೋ ದ್ವಿಜಃ ॥೪೬॥**

ಹಾಗೆ ಹೇಳಿದುದನ್ನು ನಾನೇ ಪ್ರತ್ಯಕ್ಷವಾಗಿ, ವಿಸ್ತಾರವಾಗಿ ಎಲ್ಲವನ್ನೂ ಕೇಳಿರುವೆನು. ಓ ಜನಮೇಜಯನೇ, ಆ ಸತ್ಯವ್ರತನೆಂಬ ಬ್ರಾಹ್ಮಣನು ಏನೂ ತಿಳಿವಳಿಕೆಯಿಲ್ಲದ ದೊಡ್ಡ ಮೂರ್ಖನಾಗಿದ್ದನು.

**ಶ್ರುತ್ವಾಕ್ಷರಂ ಕೋಲಮುಖಾತ್ಸಮುಚ್ಚಾರ್ಯ ಸ್ವಯಂ ತತಃ ।**
**ಬಿಂದುಹೀನಂ ಪ್ರಸಂಗೇನ ಜಾತೋಽಸೌ ವಿಬುಧೋತ್ತಮಃ ॥೪೭॥**

ಅವನು ಕಾಡಿನಲ್ಲಿರುವಾಗ, ಒಂದು ದಿನ ಬೇಡನೊಬ್ಬನ ಬಾಣದ ಏಟಿಗೆ ಸಿಕ್ಕಿದ ಒಂದು ಹಂದಿಯ ಮುಖದಿಂದ, ದುಃಖದಿಂದ ಹೊರಟ, ಬಿಂದು ಸಹ ಇಲ್ಲದ "ಐ" ಎಂಬ ದೇವಿಯ ಬೀಜಾಕ್ಷರವನ್ನು ಗ್ರಹಿಸಿ ತಿರುಗಿ ಅದನ್ನು ಚನ್ನಾಗಿ ಉಚ್ಚರಿಸಿ ದೊಡ್ಡ ಪಂಡಿತನಾದನು.

**ಐಕಾರೋಚ್ಚಾರಣಾದ್ದೇವೀ ತುಷ್ಟಾ ಭಗವತೀ ತದಾ ।**
**ಚಕಾರ ಕವಿರಾಜಂ ತಂ ದಯಾರ್ದ್ರಾ ಪರಮೇಶ್ವರೀ ॥೪೮॥**

ಸೊನ್ನೆಯಿಲ್ಲದ ಬರಿಯ ಐಕಾರಮಾತ್ರದ ಉಚ್ಚಾರಣೆಯಿಂದಲೇ ಸರ್ವಜ್ಞಳಾದ ಮತ್ತು ಜಗತ್ತಿಗೆಲ್ಲಾ ಒಡೆಯಳಾದ ಆ ದೇವಿಯು ಸಂತುಷ್ಟಳಾದಳು ಮತ್ತು

ತುಂಬಿದ ಕರುಣೆಯಿಂದ ಕೂಡಿದವಳಾಗಿ, ಮೂರ್ಖನಾದರೂ, ಸತ್ಯಭಾಷಣದ ನಿಯ ಮವನ್ನು ಪಾಲಿಸುತ್ತಿದ್ದ ಆ ಸತ್ಯವ್ರತನನ್ನು ಉತ್ತಮಕವಿಯನ್ನಾಗಿ ಮಾಡಿದಳು.

ಈ ಕಥೆಯು ದೇವಿಯಲ್ಲಿ ಕಾಣಬರುವ ಅನುಗ್ರಹಶೀಲದ ರೀತಿನೀತಿಗಳನ್ನು ತಿಳಿಯಿಸುವ ಅರ್ಥವಾದವಾಗಿದೆ. ಇದರಲ್ಲಿ ತೋರುವ ಅತಿಶಯೋಕ್ತಿಯಿಂದ ಈಗಿನವರಲ್ಲಿ ಅನೇಕರು ಇಂತಹ ಕಥೆಗಳಲ್ಲಿ ಅಪನಂಬಿಕೆ ಅನಾದರಗಳನ್ನು ವ್ಯಕ್ತ ಪಡಿಸಬಹುದು. ಆದರೂ ತಾರತಮ್ಯದೃಷ್ಟಿಯಿಂದ ಆಳವಾಗಿಯೂ ಸೂಕ್ಷ್ಮವಾಗಿಯೂ ಪರಿಶೀಲಿಸುವ ವಿಮರ್ಶಕರು ಸತ್ಯವ್ರತನಂತಹ ಉದಾಹರಣೆಗಳಲ್ಲಿ ಒಂದು ಖಚಿತ ವಾದ ಶೀಲವನ್ನು ಎಂದರೆ ಅಚಂಚಲವಾದ ಸತ್ಯನಿಷ್ಠೆಯನ್ನೂ ಅನನ್ಯವಾದ ದೈವ ಭಕ್ತಿಯನ್ನೂ ಮನಗಾಣುತ್ತಾರೆ. ಖಚಿತವಾದ ಶೀಲದ ಪ್ರಭಾವದಿಂದ ಆಗುವ ವಿಸ್ತಾರವಾದ ಪರಿಣಾಮಗಳಿಂದ ಅಂತಹ ವ್ಯಕ್ತಿಗಳು ಮಹಾತ್ಮರೆನಿಸಿಕೊಳ್ಳುತ್ತಾರೆ. ಇಂತಹ ಮಹಾನುಭಾವರು ಎಲ್ಲ ಕಾಲಗಳಲ್ಲೂ ದೇಶಗಳಲ್ಲೂ ಅವತರಿಸುತ್ತಿರುತ್ತಾ ರೆಂಬುದನ್ನು ನಾವು ಮರೆಯಬಾರದು. ಇಂತಹ ಅದ್ಭುತವಾಗಿ ತೋರುವ ಪರಿಣಾಮ ಕಾರಿಯಾದ ಶೀಲದ ಪ್ರಭಾವಕ್ಕೆ ಉದಾಹರಣೆಯಂತಿರುವ ಮಹಾಪುರುಷರನ್ನು ಈಗಲೂ ನಾವು ನೋಡಬಹುದು. ಇಂತಹ ಶೀಲವು ಪೂರ್ವಜನ್ಮದಲ್ಲಿನ ಸತ್ಕರ್ಮಾ ಚರಣೆಯ ಫಲವು ಸಂಸ್ಕಾರರೂಪದಲ್ಲಿದ್ದು ಈಗ ವ್ಯಕ್ತವಾಗಿ ಕಾಣಬರುತ್ತದೆ. ವೇದ ದಲ್ಲಿರುವ ಅರ್ಥವಾದಗಳಂತೆ, ವೇದಾರ್ಥಗಳನ್ನು ಪುಷ್ಟಿಗೊಳಿಸಿ ವಿವರಿಸುವ ಪುರಾಣ ಗಳಲ್ಲೂ ಅರ್ಥವಾದಗಳು ಸಾರ್ಥಕವಾಗಿರುತ್ತವೆಂಬ ಅಂಶವನ್ನು ಗಮನಿಸಬಹುದು. ಇಂತಹ ವಿಷಯಗಳನ್ನು ಏಕಜನ್ಮವಾದಿಗಳಾದ ಮತಧರ್ಮಗಳು ತೃಪ್ತಿಕರವಾಗಿ ವಿವರಿಸಲಾರದೆ ಇವೆ ಎಂಬುದನ್ನೂ ಗಮನಿಸಬಹುದು. ಈ ಕಾರಣದಿಂದಲೇ ಕರ್ಮ ವಾದವು ಈಗಿನ ವಿದ್ಯಾವಂತರಾದ ಕೆಲವರು ಪಾಶ್ಚಾತ್ಯರನ್ನೂ ಒಲಿಸಿಕೊಳ್ಳುತ್ತಿದೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ನವಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### ॥ ದಶಮೋಽಧ್ಯಾಯಃ ॥

### ಹತ್ತನೆಯ ಅಧ್ಯಾಯವು

॥ ಜನಮೇಜಯ ಉವಾಚ ॥

**ಕೋಽಸೌ ಸತ್ಯವ್ರತೋ ನಾಮ ಬ್ರಾಹ್ಮಣೋ ದ್ವಿಜಸತ್ತಮಃ ।**
**ಕಸ್ಮಿನ್ ದೇಶೇ ಸಮುತ್ಪನ್ನಃ ಕೀದೃಶಶ್ಚ ವದಸ್ವ ಮೇ ॥೧॥**

ಜನಮೇಜಯರಾಜನು ವ್ಯಾಸಮುನಿಯನ್ನು ಪ್ರಶ್ನೆಮಾಡಿದನು—ಓ ವ್ಯಾಸ ಮುನಿಯೇ, ಬ್ರಾಹ್ಮಣರಲ್ಲಿ ಉತ್ತಮನಾದ ಆ ಸತ್ಯವ್ರತನೆಂಬುವವನು ಯಾರು? ಯಾವ ದೇಶದಲ್ಲಿ ಹುಟ್ಟಿದವನು? ಅವನು ಎಂತಹ ನಡತೆಯುಳ್ಳವನು? ಹೇಳು.

**ಕಥಂ ತೇನ ಶ್ರುತಃ ಶಬ್ದಃ ಕಥಮುಚ್ಚಾರಿತಃ ಪುನಃ ।**
**ಸಿದ್ಧಿಶ್ಚ ಕೀದೃಶೀ ಜಾತಾ ತಸ್ಯ ವಿಪ್ರಸ್ಯ ತತ್ಕ್ಷಣಾತ್ ॥೨॥**

ಅವನು "ಐ" ಎಂಬ ಶಬ್ದವನ್ನು ಹೇಗೆ ಕೇಳಿದನು? ತಿರುಗಿ ಹೇಗೆ ಉಚ್ಚರಿಸಿದನು? ಅದರಿಂದ ಆ ಬ್ರಾಹ್ಮಣನಿಗೆ ಆ ಕೂಡಲೇ ಎಂತಹ ಸಿದ್ಧಿಯುಂಟಾಯಿತು? ಇದೆಲ್ಲವನ್ನೂ ವಿವರಿಸಿ ಹೇಳು.

**ಕಥಂ ತುಷ್ಟಾ ಭವಾನೀ ಸಾ ಸರ್ವಜ್ಞಾ ಸರ್ವಸಂಸ್ಥಿತಾ ।**
**ವಿಸ್ತರೇಣ ವದಸ್ವಾದ್ಯ ಕಥಾಮೇತಾಂ ಮನೋರಮಾಂ ॥೩॥**

ಮತ್ತು ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವ ಮತ್ತು ಎಲ್ಲವನ್ನೂ ತಿಳಿದ ಆ ಭವಾನಿಯು ಅವನಿಗೆ ಯಾವರೀತಿಯಿಂದ ಸಂತುಷ್ಟಳಾದಳು? ಕೇಳಲು ತುಂಬ ಮನೋಹರವಾದ ಈ ಕಥೆಯನ್ನು ವಿಸ್ತಾರವಾಗಿ ಹೇಳು.

|| ಸೂತ ಉವಾಚ ||

**ಇತಿ ಪೃಷ್ಟಸ್ತದಾ ರಾಜ್ಞಾ ವ್ಯಾಸಃ ಸತ್ಯವತೀಸುತಃ |**
**ಉವಾಚ ಪರಮೋದಾರಂ ವಚನಂ ರಸವಚ್ಛುಚಿ ||೪||**

ಸೂತಮುನಿಯು ಹೇಳಿದನು—ಹೀಗೆ ಆ ಜನಮೇಜಯರಾಜನಿಂದ ಕೇಳ ಲ್ಪಟ್ಟವನಾಗಿ ಸತ್ಯವತಿಯ ಮಗನಾದ ವ್ಯಾಸಮುನಿಯು ಆಗ ಕೇಳಲು ಇಂಪಾದ ತುಂಬ ಆಶ್ಚರ್ಯ, ಭಕ್ತಿ, ಅನುಗ್ರಹ, ಮುಂತಾದ ರಸವತ್ತಾದ ಅಭಿಪ್ರಾಯವುಳ್ಳ ಮತ್ತು ಪವಿತ್ರವಾದ ಮಾತುಗಳನ್ನು ಹೇಳಿದನು.

|| ವ್ಯಾಸ ಉವಾಚ ||

**ಶೃಣು ರಾಜನ್ ಪ್ರವಕ್ಷ್ಯಾಮಿ ಕಥಾಂ ಪೌರಾಣಿಕೀಂ ಶುಭಾಂ |**
**ಶ್ರುತಾ ಮುನಿಸಮಾಜೇಷು ಮಯಾ ಪೂರ್ವಂ ಕುರೂದ್ವಹ ||೫||**

ವ್ಯಾಸಮುನಿಯು ಹೇಳಿದನು—ಕುರುವಂಶದ ರಾಜರಲ್ಲಿ ಶ್ರೇಷ್ಠನಾದ ಓ ಜನಮೇಜಯರಾಜನೇ, ತುಂಬ ಹಿಂದೆ ನಡೆದ ಮತ್ತು ಮಂಗಳಕರವಾದ ಆ ಕಥೆ ಯನ್ನು ಹೇಳುತ್ತೇನೆ, ಕೇಳು. ಈ ಕಥೆಯನ್ನು ನಾನು ಹಿಂದೆ ಋಷಿಗಳ ಸಮೂಹ ಗಳಲ್ಲಿಯೂ ಕೇಳಿರುತ್ತೇನೆ.

**ಏಕದಾಹಂ ಕುರುಶ್ರೇಷ್ಠ ಕುರ್ವಂಸ್ತೀರ್ಥಾಟನಂ ಶುಚಿ |**
**ಸಂಪ್ರಾಪ್ತೋ ನೈಮಿಷಾರಣ್ಯಂ ಪಾವನಂ ಮುನಿಸೇವಿತಂ ||೬||**

ಓ ಕುರುಶ್ರೇಷ್ಠನಾದ ಜನಮೇಜಯನೇ, ಒಂದು ಕಾಲದಲ್ಲಿ ನಾನು ಪವಿತ್ರ ವಾದ ತೀರ್ಥಯಾತ್ರೆಯನ್ನು ಮಾಡುತ್ತಾ ಮುನಿಗಳಿಂದ ಸೇವಿಸಲ್ಪಟ್ಟ ಚಿತ್ತಶುದ್ಧಿಯ ನ್ನುಂಟುಮಾಡುವ ನೈಮಿಷಾರಣ್ಯವನ್ನೂ ಪಡೆದೆನು.

**ಪ್ರಣಮ್ಯಾಹಂ ಮುನೀನ್ ಸರ್ವಾನ್ ಸ್ಥಿತಸ್ತತ್ರ ವರಾಶ್ರಮೇ |**
**ವಿಧಿಪುತ್ರಾಸ್ತು ಯತ್ರಾಸನ್ ಜೀವನ್ಮುಕ್ತಾ ಮಹಾವ್ರತಾಃ ||೭||**

ನಾನು ಆ ಮುನಿಗಳೆಲ್ಲರನ್ನೂ ನಮಸ್ಕರಿಸಿ, ಬ್ರಹ್ಮನ ಮಾನಸಪುತ್ರರಾದ, ತುಂಬ ಆಚಾರಶೀಲರಾದ ಮತ್ತು ಜೀವನ್ಮುಕ್ತರಾದ, ಸನತ್ಕುಮಾರಾದಿಗಳು ಹಿಂದೆ ವಾಸಮಾಡುತ್ತಲಿದ್ದ ಆ ಉತ್ತಮವಾದ ಆಶ್ರಮದಲ್ಲಿ ಇದ್ದೆನು.

**ಕಥಾಪ್ರಸಂಗ ಏವಾಸೀತ್ತತ್ರ ವಿಪ್ರಸಮಾಗಮೇ ।**
**ಜಮದಗ್ನಿಸ್ತು ಪಪ್ರಚ್ಛ ಮುನೀನೇವಂ ಸಮಾಸ್ಥಿತಃ ॥೮॥**

ಆ ಆಶ್ರಮದಲ್ಲಿ ಆಗ ಒಂದು ಕಥೆಯನ್ನು ವಿವರಿಸುವ ಸಂದರ್ಭವು ಆ ಬ್ರಾಹ್ಮಣರ ಸಮೂಹದಲ್ಲಿ ಉಂಟಾಯಿತು. ಅಲ್ಲಿದ್ದ ಜಮದಗ್ನಿಯೆಂಬ ಋಷಿಯು ಅಲ್ಲಿದ್ದ ಋಷಿಗಳನ್ನು ಕುರಿತು ಹೀಗೆ ಕೇಳಿದನು.

॥ ಜಮದಗ್ನಿರುವಾಚ ॥

**ಸಂದೇಹೋಽಸ್ತಿ ಮಹಾಭಾಗಾ ಮಮ ಚೇತಸಿ ತಾಪಸಾಃ ।**
**ಸಮಾಜೇಷು ಮುನೀನಾಂ ವೈ ನಿಸ್ಸಂದೇಹೋ ಭವಾಮ್ಯಹಂ ॥೯॥**

ಜಮದಗ್ನಿ ಋಷಿಯು ಹೇಳಿದನು — ತುಂಬ ಪುಣ್ಯಶಾಲಿಗಳಾದ ಋಷಿಗಳೇ, ನನ್ನ ಮನಸ್ಸಿನಲ್ಲಿ ಸಂಶಯವೊಂದು ಉಂಟಾಗಿರುತ್ತದೆ. ನಿಮ್ಮ ಈ ಋಷಿಸಮೂಹ ದಲ್ಲಿ ನನ್ನ ಆ ಸಂದೇಹವನ್ನು ನಿವಾರಿಸಿಕೊಳ್ಳಬೇಕೆಂದಿರುತ್ತೇನೆ.

**ಬ್ರಹ್ಮಾ ವಿಷ್ಣುಸ್ತಥಾ ರುದ್ರೋ ಮಘವಾ ವರುಣೋಽನಲಃ ।**
**ಕುಬೇರಃ ಪವನಸ್ತ್ವಷ್ಟಾ ಸೇನಾನೀಶ್ಚ ಗಣಾಧಿಪಃ ॥೧೦॥**

ಬ್ರಹ್ಮ, ವಿಷ್ಣು, ರುದ್ರ, ಇಂದ್ರ, ವರುಣ, ಅಗ್ನಿ, ಕುಬೇರ, ವಾಯು, ವಿಶ್ವ ಕರ್ಮ, ಷಣ್ಮುಖ, ಗಣಪತಿ,

**ಸೂರ್ಯೋಽಶ್ವಿನೌ ಭಗಃ ಪೂಷಾ ನಿಶಾನಾಥೋ ಗ್ರಹಾಸ್ತಥಾ ।**
**ಆರಾಧನೀಯತಮಃ ಕೋಽತ್ರ ವಾಂಛಿತಾರ್ಥಫಲಪ್ರದಃ ॥೧೧॥**

ಸೂರ್ಯ, ಅಶ್ವಿನೀದೇವತೆಗಳು, ಭಗನೆಂಬ ಆದಿತ್ಯನು, ಪೂಷಾ ಎಂಬ ಆದಿತ್ಯನು, ಚಂದ್ರನು, ಹಾಗೆಯೇ ಇತರ ನವಗ್ರಹಗಳು, ಇವರಲ್ಲಿ ಯಾರು ಸರ್ವೋತ್ಕೃಷ್ಟರು ? ಮತ್ತು ಯಾರನ್ನು ಪೂಜಿಸಬೇಕು ? ಯಾರು ನಮ್ಮ ಇಷ್ಟಾರ್ಥ ವನ್ನು ನೆರವೇರಿಸತಕ್ಕವರು ?

**ಸುಖಸೇವ್ಯಶ್ಚ ಸತತಂ ಚಾಶುತೋಷಶ್ಚ ಮಾನದಾಃ ।**
**ಬ್ರುವಂತು ಮುನಯಃ ಶೀಘ್ರಂ ಸರ್ವಜ್ಞಾಃ ಸಂಶಿತವ್ರತಾಃ ॥೧೨॥**

ಯಾರನ್ನು ಯಾವಾಗಲೂ ಸುಖವಾಗಿ ಸೇವಿಸಬಹುದು? ಯಾರು ಶೀಘ್ರ ವಾಗಿ ಸಂತುಷ್ಟರಾಗುತ್ತಾರೆ? ತುಂಬ ಗೌರವವನ್ನು ಕೊಡುವ ಹೆಚ್ಚಾಗಿ ಧರ್ಮಾನು ಷ್ಠಾನವನ್ನು ಮಾಡಿರುವುದರಿಂದ ಎಲ್ಲವನ್ನೂ ಬಲ್ಲ ಓ ಮುನಿಗಳೇ, ನಾನು ಕೇಳಿದ ವಿಷಯವನ್ನು ಸ್ಪಷ್ಟವಾಗಿ ಹೇಳಿ ನನ್ನ ಸಂಶಯವನ್ನು ಬೇಗನೆ ನಿವಾರಣೆಮಾಡಿರಿ.

**ಏವಂ ಪ್ರಶ್ನೇ ಕೃತೇ ತತ್ರ ಲೋಮಶೋ ವಾಕ್ಯಮಬ್ರವೀತ್ ।**
**ಜಮದಗ್ನೇ ಶೃಣುಷ್ವೈತದ್ಯತ್ಪೃಷ್ಟಂ ವೈ ತ್ವಯಾಧುನಾ ॥೧೩॥**

ಹೀಗೆ ಆ ಜಮದಗ್ನಿಯು ಕೇಳಲು, ಅದಕ್ಕೆ ಉತ್ತರವಾಗಿ ಲೋಮಶ ಮುನಿಯು ಹೇಳಿದನು— ಓ ಜಮದಗ್ನಿಮುನಿಯೇ ನೀನು ಈಗ ಯಾವುದನ್ನು ಕೇಳಿದೆಯೋ ಅದನ್ನು ಹೇಳುತ್ತೇನೆ ಕೇಳು.

**ಸೇವನೀಯತಮಾ ಶಕ್ತಿಃ ಸರ್ವೇಷಾಂ ಶುಭಮಿಚ್ಛತಾಂ ।**
**ಪರಾ ಪ್ರಕೃತಿರಾದ್ಯಾ ಚ ಸರ್ವಗಾ ಸರ್ವದಾ ಶಿವಾ ॥೧೪॥**

ಒಳ್ಳೆಯದಾಗಬೇಕೆನ್ನುವ ಎಲ್ಲ ಮನುಷ್ಯರಿಗೂ ಶಕ್ತಿರೂಪಳಾದ ಆ ದೇವಿಯೇ ಸರ್ವೋತ್ತಮಳಾದ ಉಪಾಸ್ಯದೇವತೆಯು. ಅವಳಾರೆಂದರೆ, ಅವಳೇ ಈ ಜಗತ್ತಿಗೆ ಮೊದಲಿನವಳು, ಮತ್ತು ಕಾರಣಳು; ಎಲ್ಲೆಡೆಯಲ್ಲಿಯೂ ಇರುವವಳು; ಮಂಗಳ ಸ್ವರೂಪಳು. ಆದುದರಿಂದ ಇವಳಿಗೆ ಪರಾಪ್ರಕೃತಿ ಎಂದರೆ ಎಲ್ಲಕ್ಕಿಂತ ಮೇಲಾದ ಮೂಲಶಕ್ತಿಯೆಂದು ಹೇಳಿರುವುದರಿಂದ ಇವಳನ್ನು ಸೇವಿಸುವುದೇ ಉತ್ತಮವಾದುದು.

**ದೇವಾನಾಂ ಜನನೀ ಸೈವ ಬ್ರಹ್ಮಾದೀನಾಂ ಮಹಾತ್ಮನಾಂ ।**
**ಆದಿಪ್ರಕೃತಿರ್ಮೂಲಂ ಸಾ ಸಂಸಾರಪಾದಪಸ್ಯ ವೈ ॥೧೫॥**

ಬ್ರಹ್ಮನೇ ಮೊದಲಾದ ತುಂಬ ಗೌರವಾರ್ಹರಾದ ದೇವತೆಗಳಿಗೂ ಅವಳೇ ಜನನಿಯು ಎಂದರೆ ಕಾರಣಳು. ಈ ಜಗತ್ತಿಗೆ ಮೊದಲನೆಯ ಕಾರಣಳು ಮತ್ತು ಈ ಸಂಸಾರವೆಂಬ ವೃಕ್ಷಕ್ಕೆ ಅವಳು ಮೂಲವು ಎಂದರೆ ಬೇರಿನೋಪಾದಿಯಲ್ಲಿ ಇರುವಳು. ಅವಳು ಇಲ್ಲದಿದ್ದರೆ, ಬೇರಿಲ್ಲದ ಗಿಡವು ಬೆಳೆಯದಂತೆ, ಸಂಸಾರವು ನಿಲ್ಲಲಾರದು.

**ಸ್ಮೃತಾ ಚೋಚ್ಚಾರಿತಾ ದೇವೀ ದದಾತಿ ಕಿಲ ವಾಂಛಿತಂ ।**
**ಸರ್ವದೈವಾರ್ದ್ರಚಿತ್ತಾ ಸಾ ವರದಾನಾಯ ಸೇವಿತಾ ॥೧೬॥**

ಪ್ರಕಾಶಸ್ವರೂಪಳಾದ ಆ ದೇವಿಯನ್ನು ಸ್ಮರಿಸಿದರೆ ಮತ್ತು ಅವಳ ನಾಮವನ್ನು ಜಪಿಸಿದರೆ ನಮ್ಮ ಇಷ್ಟಾರ್ಥವು ನೆರವೇರುವುದು. ಕರುಣೆಯಿಂದ ಕರಗುವ ಮನಸ್ಸುಳ್ಳ ಅವಳು ತನ್ನನ್ನು ಸೇವಿಸಿದವರಿಗೆ ವರಗಳನ್ನು ಎಂದರೆ ಇಷ್ಟಾರ್ಥಗಳನ್ನು ಕೊಡಲು ಯಾವಾಗಲೂ ಸಿದ್ಧಳಾಗಿರುತ್ತಾಳೆ.

**ಇತಿಹಾಸಂ ಪ್ರವಕ್ಷ್ಯಾಮಿ ಶೃಣ್ವಂತು ಮುನಯಃ ಶುಭಂ ।**
**ಅಕ್ಷರೋಚ್ಚಾರಣಾದೇವ ಯಥಾ ಪ್ರಾಪ್ತಂ ದ್ವಿಜೇನ ವೈ ॥೧೭॥**

ಓ ಋಷಿಗಳೇ, ಈ ವಿಷಯದಲ್ಲಿ ನಡೆದ ಮಂಗಳಕರವಾದ ಒಂದು ಇತಿಹಾಸವನ್ನು ಎಂದರೆ ವೃತ್ತಾಂತವನ್ನು ಹೇಳುತ್ತೇನೆ, ಕೇಳಿರಿ. ಹಿಂದೆ ಒಬ್ಬ ಬ್ರಾಹ್ಮಣನು ಆ ದೇವಿಯ ಬರಿಯ ನಾಮೋಚ್ಚಾರಣೆಯಿಂದಲೇ ಹೇಗೆ ಸಿದ್ಧಿಯನ್ನು ಪಡೆದನೆಂಬುದನ್ನು ಹೇಳುತ್ತೇನೆ.

**ಕೋಸಲೇಷು ದ್ವಿಜಃ ಕಶ್ಚಿದ್ದೇವದತ್ತೇತಿ ವಿಶ್ರುತಃ ।**
**ಅನಪತ್ಯಶ್ಚಕಾರೇಷ್ಟಿಂ ಪುತ್ರಾಯ ವಿಧಿಪೂರ್ವಕಂ ॥೧೮॥**

ಹಿಂದೆ ಕೋಸಲದೇಶದಲ್ಲಿ ದೇವದತ್ತನೆಂಬ ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಮಕ್ಕಳಿರಲಿಲ್ಲವಾದುದರಿಂದ ಮಕ್ಕಳಾಗುವುದಕ್ಕೋಸ್ಕರ ಪುತ್ರಕಾಮೇಷ್ಟಿಯೆಂಬ ಯಜ್ಞವನ್ನು ಯಥಾವಿಧಿಯಾಗಿ ಮಾಡಿದನು.

**ತಮಸಾತೀರಮಾಸ್ಥಾಯ ಕೃತ್ವಾ ಮಂಡಪಮುತ್ತಮಂ ।**
**ದ್ವಿಜಾನಾಹೂಯ ವೇದಜ್ಞಾನ್ ಸತ್ರಕರ್ಮವಿಶಾರದಾನ್ ॥೧೯॥**

ಅವನು ತಮಸಾನದಿಯ ದಡದಲ್ಲಿ ಯಜ್ಞಶಾಲೆಯನ್ನು ನಿರ್ಮಿಸಿ, ಅಲ್ಲಿಗೆ ವೇದಾಧ್ಯಯನಸಂಪನ್ನರಾಗಿಯೂ, ಯಜ್ಞವನ್ನು ಮಾಡಿಸುವುದರಲ್ಲಿ ನಿಪುಣರಾಗಿಯೂ ಇರುವ ಬ್ರಾಹ್ಮಣರನ್ನು ಕರೆಯಿಸಿದನು.

**ಕೃತ್ವಾ ವೇದೀಂ ವಿಧಾನೇನ ಸ್ಥಾಪಯಿತ್ವಾ ವಿಭಾವಸೂನ್ ।**
**ಪುತ್ರೇಷ್ಟಿಂ ವಿಧಿವತ್ತತ್ರ ಚಕಾರ ದ್ವಿಜಸತ್ತಮಃ ॥೨೦॥**

ಅಲ್ಲಿ ಆ ಬ್ರಾಹ್ಮಣಶ್ರೇಷ್ಠನು ಶಾಸ್ತ್ರಸಿಯಮದಂತೆ ಯಜ್ಞವೇದಿಯನ್ನೂ, ಹೋಮಕುಂಡಗಳನ್ನೂ ಮಾಡಿಸಿ ಅವುಗಳಲ್ಲಿ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ

ಗಳೆಂಬ ಶ್ರೌತಾಗ್ನಿಗಳನ್ನು ಪ್ರತಿಷ್ಠಿಸಿ, ಆ ಬ್ರಾಹ್ಮಣೋತ್ತಮನು ಶಾಸ್ತ್ರದಲ್ಲಿ ಹೇಳಿದ ಕ್ರಮದಂತೆ ಪುತ್ರಕಾಮೇಷ್ಟಿಯೆಂಬ ಯಾಗವನ್ನು ಮಾಡಿದನು.

**ಬ್ರಹ್ಮಾಣಂ ಕಲ್ಪಯಾಮಾಸ ಸುಹೋತ್ರಂ ಮುನಿಸತ್ತಮಂ ।**
**ಅಧ್ವರ್ಯುಂ ಯಾಜ್ಞವಲ್ಕ್ಯಂ ಚ ಹೋತಾರಂ ಚ ಬೃಹಸ್ಪತಿಂ ॥೨೦॥**

ಆ ಯಜ್ಞಕರ್ಮದಲ್ಲಿ ಸುಹೋತ್ರನೆಂಬ ಋಷಿಯನ್ನು ಬ್ರಹ್ಮನನ್ನಾಗಿಯೂ (ಇಲ್ಲಿ ಬ್ರಹ್ಮನೆಂದರೆ, ಯಜ್ಞಾದಿಕರ್ಮಗಳಲ್ಲಿ, ಕರ್ಮವು ಯಥಾವಿಧಿಯಾಗಿ ನಡೆಯುವಂತೆ ನೋಡಿಕೊಳ್ಳುವುದಕ್ಕಾಗಿ ನಿಯಮಿಸುವ, ಋತ್ವಿಕ್ಕುಗಳಲ್ಲಿ ಮುಖ್ಯನಾಗಿಯೂ ಶ್ರೇಷ್ಠನಾಗಿಯೂ ಇರುವ ಬ್ರಾಹ್ಮಣನಿಗೆ ಬ್ರಹ್ಮನೆಂದು ಹೆಸರು). ಯಾಜ್ಞವಲ್ಕ್ಯ ಋಷಿಯನ್ನು ಅಧ್ವರ್ಯುವನ್ನಾಗಿಯೂ, ಬೃಹಸ್ಪತಿಯನ್ನೇ ಹೋತೃವನ್ನಾಗಿಯೂ ವರಿಸಿ, ನಿಯಮಿಸಿಕೊಂಡನು.

**ಪ್ರಸ್ತೋತಾರಂ ತಥಾ ಪೈಲಮುದ್ಗಾತಾರಂ ಚ ಗೋಭಿಲಂ ।**
**ಸಭ್ಯಾನನ್ಯಾನ್ಮುನೀನ್ಕೃತ್ವಾ ವಿಧಿವತ್ಪ್ರದದೌ ವಸು ॥೨೧॥**

ಪೈಲಮುನಿಯನ್ನು ಪ್ರಸ್ತೋತೃವನ್ನಾಗಿಯೂ, ಗೋಭಿಲಮುನಿಯನ್ನು ಉದ್ಗಾತೃವನ್ನಾಗಿಯೂ, ಇನ್ನು ಕೆಲವು ಋಷಿಗಳನ್ನು ಸದಸ್ಯರನ್ನಾಗಿಯೂ ಗೊತ್ತು ಮಾಡಿ ಯಾಗವನ್ನು ನೆರವೇರಿಸಿ ಆ ದೇವದತ್ತನು ಆ ಋತ್ವಿಜರೆಲ್ಲರಿಗೂ ಶಾಸ್ತ್ರದಲ್ಲಿ ಹೇಳಿದಂತೆ ದಕ್ಷಿಣೆಯನ್ನು ಕೊಟ್ಟನು.

ಇಲ್ಲಿ ತಿಳಿಯಬೇಕಾದ ವಿಶೇಷಸಂಗತಿಯೇನೆಂದರೆ, ಯಜ್ಞವನ್ನು ವಿಧಿಪೂರ್ವಕವಾಗಿ ಮಾಡುವುದಕ್ಕೆ ಋಗ್ವೇದ, ಯಜುರ್ವೇದ, ಸಾಮವೇದ ಈ ಮೂರು ವೇದಗಳೂ ಅವುಗಳನ್ನು ಚನ್ನಾಗಿ ಅಧ್ಯಯನಮಾಡಿರುವ ಋತ್ವಿಕ್ಕುಗಳೂ ಅವಶ್ಯಕವು. ಈ ಋತ್ವಿಕ್ಕುಗಳ ಪೈಕಿ ಪ್ರತಿಯೊಬ್ಬರಿಗೂ ತಾವು ಮಾಡಬೇಕಾದ ಕೆಲಸವು ಇಂತಹುದೇ ಎಂದು ನಿಷ್ಕರ್ಷೆಯಾಗಿರುವುದರಿಂದ ಅವರು ತಮ್ಮ ತಮ್ಮ ಕೆಲಸವನ್ನು ಮಾತ್ರವೇ ಲೋಪಗಳಿಲ್ಲದಂತೆ ಮಾಡಬೇಕು. ಮಂತ್ರಲೋಪವೇ ಆಗಲಿ, ಸ್ವರಲೋಪವೇ ಆಗಲಿ ಆದರೂ ಫಲವ್ಯತ್ಯಾಸವಾಗುವುದು. ಬ್ರಹ್ಮನೆಂದರೆ, ಋತ್ವಿಕ್ಕುಗಳು ಮಾಡುವ ಕೆಲಸಗಳನ್ನು ಲೋಪಬಾರದಂತೆ ನೋಡಿಕೊಳ್ಳುವುದಕ್ಕೆ ನಿಯಮಿತನಾದ ಪುರುಷನು. ಇವನಿಗೆ ಯಜ್ಞಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳೂ ಚನ್ನಾಗಿ ತಿಳಿದಿರಬೇಕು. ಮತ್ತು ಎಲ್ಲ ವೇದಾಧ್ಯಯನವನ್ನೂ ಮಾಡಿರಬೇಕು. ಹೋತೃವೆಂದರೆ

ಹೋಮಮಾಡುವುದಕ್ಕೂ, ದೇವತೆಗಳನ್ನು ಯಜ್ಞಾರ್ಥವಾಗಿ ಆಹ್ವಾನಿಸುವುದಕ್ಕೂ, ಯಾಜ್ಯಾ ಪುರೋಽನುವಾಕ್ಯಗಳ ಮಂತ್ರಗಳನ್ನು ಕ್ರಮದಂತೆ ಉಚ್ಚರಿಸಿ ಸ್ವಾಹಾಕಾರ ವಷಟ್ಕಾರಪೂರ್ವಕವಾಗಿ ಹೋಮಗಳನ್ನು ಮಾಡಿಸುವ ಋತ್ವಿಜನು. ಇವನು ಋಗ್ವೇದವನ್ನು ಚನ್ನಾಗಿ ಅಧ್ಯಯನಮಾಡಿರಬೇಕು. ಅಧ್ವರ್ಯುವೆಂದರೆ, ಯಜು ರ್ವೇದವನ್ನು ಚನ್ನಾಗಿ ಅಧ್ಯಯನಮಾಡಿ, ಶ್ರೌತಭಾಗಗಳನ್ನು ಚನ್ನಾಗಿ ತಿಳಿದು ಯಜ್ಞದಲ್ಲಿ ಮಾಡಬೇಕಾದ ಎಲ್ಲ ಕರ್ಮಗಳ ವಿವರ ಕಲಾಪಗಳನ್ನೂ, ಹೋಮ ಗಳನ್ನೂ ಮಂತ್ರಪೂರ್ವಕವಾಗಿ ಮಾಡುವವನು. ಉದ್ಗಾತೃವೆಂದರೆ ಯಜ್ಞದಲ್ಲಿ ರಥಂತರಾದಿ ಸಾಮಗಾನಗಳನ್ನು ವಿಧಿಪೂರ್ವಕವಾಗಿ ಮಾಡುವವನು. ಇದರಂತೆಯೇ ಆಯಾ ಯಜ್ಞಗಳಿಗೆ ಅನುಸಾರವಾಗಿ ಮೇಲೆ ಹೇಳಿದ ಋತ್ವಿಕ್ಕುಗಳಲ್ಲದೆ, ಪ್ರಸ್ತೋತೃ ಪ್ರತಿಹರ್ತೃ, ಮೈತ್ರಾವರುಣ, ನೇಷ್ಟೃ, ಅಚ್ಛಾವಾಕ, ಅಗ್ನೀಧ್ರ ಮೊದಲಾದ ಋತ್ವಿಕ್ಕುಗಳಿರುವರು. ಯಜಮಾನ ಎಂದರೆ ದೀಕ್ಷೆಯನ್ನು ವಹಿಸಿ ಯಜ್ಞವನ್ನು ಈ ಋತ್ವಿಕ್ಕುಗಳ ಸಹಾಯದಿಂದ ಯಥಾವಿಧಿಯಾಗಿ ಫಲಕಾಮನೆಯಿಂದ ಅಥವಾ ನಿಷ್ಕಾಮವಾದರೆ ಈಶ್ವರಪ್ರೀತ್ಯರ್ಥವಾಗಿ ನೆರವೇರಿಸುವವನು.

**ಉದ್ಗಾತಾ ಸಾಮಗಃ ಶ್ರೇಷ್ಠಃ ಸಪ್ತಸ್ವರಸಮನ್ವಿತಂ ।**
**ರಥಂತರಮಗಾಯತ್ತು ಸ್ವರಿತೇನ ಸಮನ್ವಿತಂ ॥೨೩॥**

ಚನ್ನಾಗಿ ಸಾಮವೇದವನ್ನು ಅಧ್ಯಯನಮಾಡಿದ ಉದ್ಗಾತೃವಾದ ಗೋಭಿಲ ಮುನಿಯು ಸಪ್ತಸ್ವರಗಳಿಂದ ಯುಕ್ತವಾದ ರಥಂತರವೆಂಬ ಋಕ್ಕನ್ನು ಸ್ವರಿತವೆಂಬ ಸ್ವರದಿಂದ ಯುಕ್ತವಾಗಿ ಗಾನಮಾಡಿದನು.

**ತದಾಸ್ಯ ಸ್ವರಭಂಗೋಽಭೂತ್ಕೃತೇ ಶ್ವಾಸೇ ಮುಹುರ್ಮುಹುಃ ।**
**ದೇವದತ್ತಶ್ಚುಕೋಪಾಶು ಗೋಭಿಲಂ ಪ್ರತ್ಯುವಾಚ ಹ ॥೨೪॥**

ಹೀಗೆ ಸಾಮಗಾನವನ್ನು ಗೋಭಿಲಮುನಿಯು ಮಾಡುತ್ತಿರಲು ಮಧ್ಯೆ ಉಸಿರನ್ನು ಎಳೆದು ಬಿಡುವಾಗ ಸ್ವರವು ವ್ಯತ್ಯಾಸವಾಗಿ ಅಪಸ್ವರವಾಗಿ ಹೋಯಿತು. ಆಗ ಯಜಮಾನನಾದ ದೇವದತ್ತನು ಸಿಟ್ಟುಗೊಂಡು ಆ ಗೋಭಿಲನನ್ನು ಕುರಿತು ಹೀಗೆ ಅಂದನು.

**ಮೂರ್ಖೋಽಸಿ ಮುನಿಮುಖ್ಯಾದ್ಯ ಸ್ವರಭಂಗಸ್ತ್ವಯಾ ಕೃತಃ ।**
**ಕಾಮ್ಯಕರ್ಮಣಿ ಸಂಜಾತೇ ಪುತ್ರಾರ್ಥಂ ಯಜತಶ್ಚ ಮೇ ॥೨೫॥**

ಎಲೈ ಮುನಿಶ್ರೇಷ್ಠನಾದ ಗೋಭಿಲನೇ, ನೀನು ತಿಳಿವಳಿಕೆಯಿಲ್ಲದ ಮೂರ್ಖನು. ಆದುದರಿಂದಲೇ ಸಾಮಗಾನದಲ್ಲಿ ಸ್ವರವನ್ನು ವ್ಯತ್ಯಾಸಮಾಡಿರುತ್ತೀಯೆ. ಪುತ್ರನಾಗಬೇಕೆಂದು ಕಾಮ್ಯಫಲವನ್ನು ಇಚ್ಛಿಸಿ ಆ ವಿಧವಾದ ಯಾಗವನ್ನು ನಾನು ಮಾಡುತ್ತಿರುತ್ತೇನೆ. ಕಾಮ್ಯಕರ್ಮದಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಫಲವುಂಟಾಗುವುದಿಲ್ಲ. ಆದಕಾರಣ ಗೋಭಿಲನ ಸ್ವರಭಂಗದಿಂದ ತಾನು ಮಾಡಿದ ಪುತ್ರಕಾಮೇಷ್ಟಿಯು ಕೆಟ್ಟುಹೋಯಿತೆಂದು ದೇವದತ್ತನ ಅಭಿಪ್ರಾಯವು.

**ಗೋಭಿಲಸ್ತು ತದೋವಾಚ ದೇವದತ್ತಂ ಸುಕೋಪಿತಃ ।**
**ಮೂರ್ಖಸ್ತೇ ಭವಿತಾ ಪುತ್ರಃ ಶಠಃ ಶಬ್ದವಿವರ್ಜಿತಃ ॥೨೬॥**

ಆಗ ಗೋಭಿಲಮುನಿಯು ತುಂಬ ಸಿಟ್ಟುಗೊಂಡು ದೇವದತ್ತನನ್ನು ಕುರಿತು—ಓ ದೇವದತ್ತನೇ, ನಿನಗೆ ಹುಟ್ಟತಕ್ಕ ಮಗನು ಮೂರ್ಖನೂ, ಒಂದು ಶಬ್ದವೂ ಸಹ ಬರದವನೂ, ದಡ್ಡನೂ ಆಗುವನು ಎಂದು ಶಾಪವನ್ನು ಕೊಟ್ಟನು.

**ಸರ್ವಪ್ರಾಣಿಶರೀರೇ ತು ಶ್ವಾಸೋಚ್ಛ್ವಾಸಃ ಸುದುರ್ಗ್ರಹಃ ।**
**ನ ಮೇಽತ್ರ ದೂಷಣಂ ಕಿಂಚಿತ್ಸ್ವರಭಂಗೇ ಮಹಾಮತೇ ॥೨೭॥**

ಮಹಾಬುದ್ಧಿಶಾಲಿಯಾದ ಓ ದೇವದತ್ತನೇ, ಪ್ರತಿ ಪ್ರಾಣಿಯ ಶರೀರದಲ್ಲೂ ಸ್ವಾಭಾವಿಕವಾಗಿರುವ ಈ ಶ್ವಾಸೋಚ್ಛ್ವಾಸವು ಎಂದರೆ, ಉಸಿರನ್ನು ಶರೀರದೊಳಗೆ ಎಳೆದುಕೊಳ್ಳುವುದು ಮತ್ತು ಅದನ್ನು ಪುನಃ ಹೊರಕ್ಕೆ ಬಿಡುವುದು, ಈ ವ್ಯಾಪಾರವನ್ನು ತಡೆಯಲು ಅಸಾಧ್ಯವಾಗಿರುವುದು. ಇದರಲ್ಲಿ ನನ್ನ ದೋಷವೇನೂ ಇರುವುದಿಲ್ಲವು.

**ತಚ್ಛ್ರುತ್ವಾ ವಚನಂ ತಸ್ಯ ಗೋಭಿಲಸ್ಯ ಮಹಾತ್ಮನಃ ।**
**ಶಾಪಾದ್ಭೀತೋ ದೇವದತ್ತಸ್ತಮುವಾಚಾತಿದುಃಖಿತಃ ॥೨೮॥**

ಮಹಾಮಹಿಮನಾದ ಆ ಗೋಭಿಲಮುನಿಯ ಮಾತುಗಳನ್ನು ಕೇಳಿ ದೇವದತ್ತನು, ಅವನು ಕೊಟ್ಟ ಶಾಪದಿಂದ ಹೆದರಿದವನಾಗಿ ತುಂಬಾ ದುಃಖದಿಂದ ಆ ಗೋಭಿಲಮುನಿಯನ್ನು ಕುರಿತು ಹೇಳಿದನು.

**ಕಥಂ ಕ್ರುದ್ಧೋಽಸಿ ವಿಪ್ರೇಂದ್ರ ವೃಥಾ ಮಯಿ ನಿರಾಗಸಿ ।**
**ಅಕ್ರೋಧನಾ ಹಿ ಮುನಯೋ ಭವಂತಿ ಸುಖದಾಃ ಸದಾ ॥೨೯॥**

ಓ ಬ್ರಾಹ್ಮಣೋತ್ತಮನಾದ ಗೋಭಿಲಮುನಿಯೇ, ತಪ್ಪಿಲ್ಲದ ನನ್ನಲ್ಲಿ ಸುಮ್ಮನೆ ಏಕೆ ಕೋಪಗೊಂಡಿರುವೆ? ಋಷಿಗಳು ಕೋಪವಿಲ್ಲದವರಾದರೆ ಯಾವಾಗಲೂ ಸಂತೋಷವನ್ನೇ ಉಂಟುಮಾಡತಕ್ಕವರು. ಕಾಮ್ಯಕರ್ಮಗಳಲ್ಲಿ ನಿಯಮಲೋಪವು ಸ್ವಲ್ಪವೂ ಸಂಭವಿಸಬಾರದೆಂಬ ನಿಯಮದಿಂದ ಅವನು ಆಕ್ಷೇಪಿಸಿದುದರಲ್ಲಿ ಅವನ ತಪ್ಪಿಲ್ಲವೆಂದು ತಾತ್ಪರ್ಯವು.

**ಸ್ವಲ್ಪೇಽಪರಾಧೇ ವಿಪ್ರೇಂದ್ರ ಕಥಂ ಶಪ್ತಸ್ತ್ವಯಾ ಹ್ಯಹಂ ।**
**ಅಪುತ್ರೋಽಹಂ ಸುತಪ್ತಃ ಪ್ರಾಕ್ತ್ವಾಪಯುಕ್ತಃ ಪುನಃ ಕೃತಃ ॥೩೦॥**

ಓ ಬ್ರಾಹ್ಮಣಶ್ರೇಷ್ಠನೇ, ನನ್ನ ತಪ್ಪು ತೀರ ಕಮ್ಮಿಯದಾಗಿದ್ದರೂ ನೀನು ಅದೇಕೆ ನನ್ನನ್ನು ಶಪಿಸಿದೆ? ಈ ಮೊದಲು ನಾನು ಮಕ್ಕಳಿಲ್ಲವೆಂದು ತುಂಬಾ ದುಃಖಪಟ್ಟಿದ್ದೆನು. ಈಗ ನೀನು ಹೀಗೆ ಶಾಪವನ್ನು ಕೊಟ್ಟು ತಿರುಗಿ ನನ್ನನ್ನು ದುಃಖಿತನನ್ನಾಗಿ ಮಾಡಿರುತ್ತೀಯೆ.

**ಮೂರ್ಖಪುತ್ರಾದಪುತ್ರತ್ವಂ ವರಂ ವೇದವಿದೋ ವಿದುಃ ।**
**ತಥಾಪಿ ಬ್ರಾಹ್ಮಣೋ ಮೂರ್ಖಃ ಸರ್ವೇಷಾಂ ನಿಂದ್ಯ ಏವ ಹಿ ॥೩೧॥**

ದಡ್ಡನಾದ ಪುತ್ರನಿರುವುದಕ್ಕಿಂತಲೂ ಮಕ್ಕಳಿಲ್ಲದಿರುವಿಕೆಯೇ ಮೇಲೆಂದು ವೇದವನ್ನು ಬಲ್ಲವರು ಹೇಳುತ್ತಾರೆ. ಅದರಲ್ಲಿಯೂ ಬ್ರಾಹ್ಮಣನು ದಡ್ಡನಾದರೆ ಎಲ್ಲರಿಗೂ ನಿಂದೆಗೆ ಯೋಗ್ಯನೇ ಸರಿ ಎಂದೂ ಹೇಳುತ್ತಾರೆ.

**ಪಶುವಚ್ಛೂದ್ರವಚ್ಚೈವ ನ ಯೋಗ್ಯಃ ಸರ್ವಕರ್ಮಸು ।**
**ಕಿಂ ಕರೋಮಿಹ ಮೂರ್ಖೇಣ ಪುತ್ರೇಣ ದ್ವಿಜಸತ್ತಮ ॥೩೨॥**

ದಡ್ಡನಾದ ಬ್ರಾಹ್ಮಣನು ಪಶುಗಳಂತೆಯೂ, ಶೂದ್ರರಂತೆಯೂ ಯಾವ ವೈದಿಕಕರ್ಮಗಳಿಗೂ ಯೋಗ್ಯನಲ್ಲವು. ಓ ಬ್ರಾಹ್ಮಣೋತ್ತಮನಾದ ಗೋಭಿಲನೇ, ಅಯೋಗ್ಯನಾದ ಮೂರ್ಖಪುತ್ರನನ್ನು ಪಡೆದು ನಾನೇನನ್ನು ಮಾಡಲಿ?

**ಯಥಾ ಶೂದ್ರಸ್ತಥಾ ಮೂರ್ಖೋ ಬ್ರಾಹ್ಮಣೋ ನಾತ್ರ ಸಂಶಯಃ ।**
**ನ ಪೂಜಾರ್ಹೋ ನ ದಾನಾರ್ಹೋ ನಿಂದ್ಯಶ್ಚ ಸರ್ವಕರ್ಮಸು ॥೩೩॥**

ಮೂರ್ಖನಾದ ಬ್ರಾಹ್ಮಣನು ಶೂದ್ರನಂತೆಯೇ ಸರಿ. ಇದರಲ್ಲಿ ಸಂಶಯ ವಿಲ್ಲವು. ಅವನು ಪೂಜೆಗೆ ಯೋಗ್ಯನಲ್ಲವು; ದಾನವನ್ನು ಸ್ವೀಕರಿಸುವುದಕ್ಕೂ ಯೋಗ್ಯನಲ್ಲವು; ಮತ್ತು ಎಲ್ಲ ವೇದೋಕ್ತಕರ್ಮಗಳಲ್ಲಿಯೂ ನಿಂದ್ಯನು ಎಂದರೆ ಶೂದ್ರನಂತೆ ವರಿಸಲ್ಪಡಲು ಅಧಿಕಾರವಿಲ್ಲದವನು.

**ದೇಶೇ ವೈ ವಸಮಾನಶ್ಚ ಬ್ರಾಹ್ಮಣೋ ವೇದವರ್ಜಿತಃ ।**
**ಕರದಃ ಶೂದ್ರವಚ್ಚೈವ ಮಂತ್ರವ್ಯಃ ಸ ಚ ಭೂಭುಜಾ ॥೩೪॥**

ರಾಜನೂ ಸಹ ದೇಶದಲ್ಲಿ ವಾಸಮಾಡುತ್ತಲಿರುವ ವೇದಾಧ್ಯಯನವಿಲ್ಲದೆ ದಡ್ಡನಾಗಿರುವ ಬ್ರಾಹ್ಮಣನಿಂದಲೂ ಶೂದ್ರನಿಂದ ಹೇಗೋ ಹಾಗೆ ಕರವನ್ನು ಎಂದರೆ ರಾಜಾದಾಯರೂಪವಾದ ಕಂದಾಯವನ್ನು ತೆಗೆದುಕೊಳ್ಳಬೇಕು.

**ನಾಸನೇ ಪಿತೃಕಾರ್ಯೇಷು ದೇವಕಾರ್ಯೇಷು ಸ ದ್ವಿಜಃ ।**
**ಮೂರ್ಖಃ ಸಮುಪವೇಶ್ಯಶ್ಚ ಕಾರ್ಯಸ್ಯ ಫಲಮಿಚ್ಛತಾ ॥೩೫॥**

ಶ್ರಾದ್ಧವೇ ಮೊದಲಾದ ಪಿತೃಕಾರ್ಯಗಳಲ್ಲಿಯೂ, ಯಾಗವೇ ಮೊದಲಾದ ದೇವಕಾರ್ಯಗಳಲ್ಲಿಯೂ ಯಜಮಾನನಾದವನು ತನಗೆ ಫಲವಾಗಬೇಕೆಂದಿದ್ದರೆ ದಡ್ಡನಾದ ಬ್ರಾಹ್ಮಣನನ್ನು ಆಸನವನ್ನು ಕೊಟ್ಟು ಕೂರಿಸಬಾರದು. ಹಾಗೆ ಅವನನ್ನು ಸೇರಿಸಿದರೆ ಆ ಕರ್ಮದ ಫಲವೇ ದೊರೆಯಲಾರದೆಂದು ತಾತ್ಪರ್ಯವು.

**ರಾಜ್ಞಾ ಶೂದ್ರಸಮೋ ಜ್ಞೇಯೋ ನ ಯೋಜ್ಯಃ ಸರ್ವಕರ್ಮಸು ।**
**ಕರ್ಷಕಸ್ತು ದ್ವಿಜಃ ಕಾರ್ಯೋ ಬ್ರಾಹ್ಮಣೋ ವೇದವರ್ಜಿತಃ ॥೩೬॥**

ರಾಜನೂ ಸಹ ವೇದರಹಿತನಾದ ದಡ್ಡನಾದ ಬ್ರಾಹ್ಮಣನನ್ನು ಶೂದ್ರನಂತೆಯೇ ತಿಳಿಯಬೇಕು. ಯಾವ ಕರ್ಮಗಳಲ್ಲಿಯೂ ಅವನನ್ನು ಸೇರಿಸಬಾರದು. ಮತ್ತು ಅವನನ್ನು, ಭೂಮಿಯನ್ನು ಉತ್ತು ವ್ಯವಸಾಯಮಾಡುವ ಶೂದ್ರನಂತೆ ಪರಿಗಣಿಸಬೇಕು.

**ವಿನಾ ವಿಪ್ರೇಣ ಕರ್ತವ್ಯಂ ಶ್ರಾದ್ಧಂ ಕುಶಚಟೇನ ವೈ ।**
**ನ ತು ವಿಪ್ರೇಣ ಮೂರ್ಖೇಣ ಶ್ರಾದ್ಧಂ ಕಾರ್ಯಂ ಕದಾಚನ ॥೩೭॥**

ವೇದವನ್ನು ತಿಳಿದಿರುವ ಬ್ರಾಹ್ಮಣರು ಶ್ರಾದ್ಧಕ್ಕೆ ಸಿಕ್ಕದಿದ್ದರೆ, ಬ್ರಾಹ್ಮಣರನ್ನು ಕೂರಿಸದೆ ಬರಿಯ ದರ್ಭೆಗಳನ್ನೇ ಬ್ರಾಹ್ಮಣರಿಗೆ ಬದಲಾಗಿ ಇಟ್ಟು, ಮಂತ್ರಪೂರ್ವಕ

ವಾಗಿ ಶ್ರಾದ್ಧವನ್ನು ಮಾಡಬೇಕು. ಆದರೆ ದಡ್ಡನಾದ ಬ್ರಾಹ್ಮಣನನ್ನು ಕುರಿಸಿ ಶ್ರಾದ್ಧಕರ್ಮವನ್ನು ಎಂದೆಂದಿಗೂ ಮಾಡಬಾರದು.

**ಆಹಾರಾದಧಿಕಂ ಚಾನ್ನಂ ನ ದಾತವ್ಯಮಪಂಡಿತೇ ।**
**ದಾತಾ ನರಕಮಾಪ್ನೋತಿ ಗೃಹೀತಾ ತು ವಿಶೇಷತಃ ॥೩೮॥**

ತಿಳವಳಿಕೆಯಿಲ್ಲದ ದಡ್ಡನಿಗೆ ಅವನ ಆಹಾರಕ್ಕಿಂತಲೂ ಹೆಚ್ಚಾಗಿ ಅನ್ನವನ್ನು ಕೊಡಬಾರದು. ಹಾಗೆ ಕೊಟ್ಟರೆ ಆ ಕೊಟ್ಟವನೂ ಅವನಿಗಿಂತಲೂ ಹೆಚ್ಚಾಗಿ ತೆಗೆದುಕೊಂಡ ದಡ್ಡನೂ ಸಹ ನರಕಕ್ಕೆ ಹೋಗುತ್ತಾರೆ.

**ಧಿಗ್ರಾಜ್ಯಂ ತಸ್ಯ ರಾಜ್ಞೋ ವೈ ಯಸ್ಯ ದೇಶೇಽಬುಧಾ ಜನಾಃ ।**
**ಪೂಜ್ಯಂತೇ ಬ್ರಾಹ್ಮಣಾ ಮೂರ್ಖಾ ದಾನಮಾನಾದಿಕೈರಪಿ ॥೩೯॥**

ಯಾವ ರಾಜನ ದೇಶದಲ್ಲಿ ತಿಳಿವಳಿಕೆಯಿಲ್ಲದ ಮೂರ್ಖರಾದ ಬ್ರಾಹ್ಮಣರು ದಾನ ಮತ್ತು ಗೌರವಾದಿಗಳಿಂದ ಪೂಜಿಸಲ್ಪಡುತ್ತಾರೆಯೋ ಆ ರಾಜ್ಯಕ್ಕೆ ನಿಂದೆಯಿರಲಿ.

**ಆಸನೇ ಪೂಜನೇ ದಾನೇ ಯತ್ರ ಭೇದೋ ನ ಚಾಣ್ವಪಿ ।**
**ಮೂರ್ಖಪಂಡಿತಯೋರ್ಭೇದೋ ಜ್ಞಾತವ್ಯೋ ವಿಬುಧೇನ ವೈ॥೪೦॥**

ಮತ್ತು ಯಾವ ರಾಜ್ಯದಲ್ಲಿ ಪಂಡಿತ ಮತ್ತು ಮೂರ್ಖರಿಗೆ ಮರ್ಯಾದೆಯು ಸ್ಥಾನವನ್ನು ಕೊಡುವುದರಲ್ಲಿಯೂ, ಗೌರವವನ್ನು ತೋರಿಸುವುದರಲ್ಲಿಯೂ, ದಾನ ದಲ್ಲಿಯೂ ಭೇದವಿಲ್ಲವೋ ಆ ರಾಜ್ಯಕ್ಕೆ ನಿಂದೆಯಿರಲಿ. ಬುದ್ಧಿವಂತನು ಹೀಗೆ ಪಂಡಿತ ಮತ್ತು ದಡ್ಡ ಇವರುಗಳಿಗೆ ಇರುವ ಭೇದವನ್ನು ಗಮನಿಸಬೇಕು.

**ಮೂರ್ಖಾ ಯತ್ರ ಸುಗರ್ವಿಷ್ಠಾ ದಾನಮಾನಪರಿಗ್ರಹೈಃ ।**
**ತಸ್ಮಿನ್ದೇಶೇ ನ ವಸ್ತವ್ಯಂ ಪಂಡಿತೇನ ಕಥಂಚನ ॥೪೧ಃ**

ಯಾವ ದೇಶದಲ್ಲಿ ತಿಳಿವಳಿಕೆಯಿಲ್ಲದ ಮೂರ್ಖರು, ದಾನ, ಗೌರವ, ಮುಂತಾ ದುವನ್ನು ಪಡೆದು ತುಂಬ ಕೊಬ್ಬಿರುತ್ತಾರೆಯೋ ಆ ದೇಶದಲ್ಲಿ ಪಂಡಿತನು ಖಂಡಿತ ವಾಗಿಯೂ ವಾಸಮಾಡಬಾರದು.

**ಅಸತಾಮುಪಕಾರಾಯ ದುರ್ಜನಾನಾಂ ವಿಭೂತಯಃ ।**
**ಪಿಚುಮಂದಃ ಫಲಾಢ್ಯೋಽಪಿ ಕಾಕೈರೇವೋಪಭುಜ್ಯತೇ ॥೪೨॥**

ದುಷ್ಟರ ಐಶ್ವರ್ಯವೆಲ್ಲವೂ ಸತ್ಪುರುಷರಲ್ಲದ ಮೂರ್ಖರ ಉಪಯೋಗಕ್ಕೇ ದೊರೆಯುವಂತೆ ಆಗುತ್ತವೆ. ಇದಕ್ಕೆ ದೃಷ್ಟಾಂತವು. ಬೇವಿನಮರವು ಹಣ್ಣುಗಳಿಂದ ಭರಿತವಾಗಿದ್ದರೂ ಕಾಗೆಗಳಿಂದಲೇ ಅನುಭವಿಸಲ್ಪಡುತ್ತದೆ.

**ಭುಕ್ತ್ವಾನ್ನಂ ವೇದವಿದ್ವಿಪ್ರೋ ವೇದಾಭ್ಯಾಸಂ ಕರೋತಿ ವೈ ।**
**ಕ್ರೀಡಂತಿ ಪೂರ್ವಜಾಸ್ತಸ್ಯ ಸ್ವರ್ಗೇ ಪ್ರಮುದಿತಾಃ ಕಿಲ ॥೪೩॥**

ವೇದವನ್ನು ತಿಳಿದ ಬ್ರಾಹ್ಮಣನು ಯಾವ ಮನುಷ್ಯನ ಮನೆಯಲ್ಲಿ ಭೋಜನ ಮಾಡಿ ವೇದಾಭ್ಯಾಸವನ್ನು ಮಾಡುವನೋ ಆ ಮನೆಯ ಯಜಮಾನನ ಪಿತೃಗಳೆಲ್ಲರೂ ಸ್ವರ್ಗದಲ್ಲಿದ್ದು ಸಂತೋಷದಿಂದ ವಿಹರಿಸುತ್ತಾರೆ.

**ಗೋಭಿಲಾತಃ ಕಿಮುಕ್ತಂ ವೈ ತ್ವಯಾ ವೇದವಿದುತ್ತಮ ।**
**ಸಂಸಾರೇ ಮೂರ್ಖಪುತ್ರತ್ವಂ ಮರಣಾದತಿಗರ್ಹಿತಂ ॥೪೪॥**

ಆದುದರಿಂದ ಓ ಗೋಭಿಲಮುನಿಯೇ, ನೀನು ಇದೇನನ್ನು ಹೇಳಿದೆ? ಮೂರ್ಖನಾದ ಪುತ್ರನು ಹುಟ್ಟಲಿ ಎಂದು ಹೇಳಿದೆಯಲ್ಲವೇ? ಈ ಸಂಸಾರದಲ್ಲಿ ದಡ್ಡನಾದ ಮಗನನ್ನು ಪಡೆದಿರುವಿಕೆಯು ಮರಣಕ್ಕಿಂತಲೂ ತುಂಬ ನಿಂದ್ಯವಾದುದು.

**ಕೃಪಾಂ ಕುರು ಮಹಾಭಾಗ ಶಾಪಸ್ಯಾನುಗ್ರಹಂ ಪ್ರತಿ**
**ದೀನೋದ್ಧಾರಣಶಕ್ತೋಽಸಿ ಪತಾಮಿ ತವ ಪಾದಯೋಃ ॥೪೫॥**

ತುಂಬ ಪುಣ್ಯಶಾಲಿಯಾದ ಓ ಗೋಭಿಲನೇ, ನೀನು ನನ್ನಲ್ಲಿ ದಯೆಯನ್ನು ಮಾಡಿ ಈ ಶಾಪಕ್ಕೆ ನಿವೃತ್ತಿಯನ್ನು ಅನುಗ್ರಹಿಸು. ನೀನು ದುಃಖಿತರನ್ನು ಉದ್ಧರಿಸಲು ಸಮರ್ಥನಾಗಿರುತ್ತೀಯೆ. ನಿನ್ನ ಪಾದಗಳಿಗೆ ಬೀಳುತ್ತೇನೆ.

॥ ಲೋಮಶ ಉವಾಚ ॥

**ಇತ್ಯುಕ್ತ್ವಾ ದೇವದತ್ತಸ್ತು ಪತಿತಸ್ತಸ್ಯ ಪಾದಯೋಃ ।**
**ಸ್ತುವನ್ ದೀನಹೃದತ್ಯರ್ಥಂ ಕೃಪಣಃ ಸಾಶ್ರುಲೋಚನಃ ॥೪೬॥**

ಲೋಮಶಮುನಿಯು ಹೇಳಿದನು—ಹೀಗೆ ಆ ದೇವದತ್ತನು ಸಂತಾಪಗೊಂಡವನಾಗಿ ಆ ಗೋಭಿಲಮುನಿಯನ್ನು ಸ್ತೋತ್ರಮಾಡುತ್ತಾ ಅವನ ಪಾದಗಳ

ಮೇಲೆ ಬಿದ್ದು ತುಂಬ ದುಃಖಗೊಂಡ ಮನಸ್ಸುಳ್ಳವನಾಗಿಯೂ, ಕಣ್ಣೀರನ್ನು ಸುರಿಸುತ್ತಲೂ ದೀನಭಾವದಿಂದ ಇದ್ದನು.

**ಗೋಭಿಲಸ್ತು ತದಾ ತತ್ರ ದೃಷ್ಟ್ವಾ ತಂ ದೀನಚೇತಸಂ ।**
**ಕ್ಷಣಕೋಪಾ ಮಹಾಂತೋ ವೈ ಪಾಪಿಷ್ಠಾಃ ಕಲ್ಪಕೋಪನಾಃ ॥೪೭॥**

ಆಗ ಗೋಭಿಲಮುನಿಯು ದುಃಖಿತನಾದ ಮನಸ್ಸುಳ್ಳ ಆ ದೇವದತ್ತನನ್ನು ನೋಡಿ ಕೋಪವನ್ನು ಬಿಟ್ಟು ಶಾಂತನಾದನು. ಏಕೆಂದರೆ ದೊಡ್ಡವರು ಕೇವಲ ಸ್ವಲ್ಪಹೊತ್ತು ಮಾತ್ರ ಸಿಟ್ಟುಗೊಳ್ಳುವರು. ಪಾಪಿಗಳಾದ ದುಷ್ಟರಾದರೋ ಬಹುಕಾಲ ಕೋಪವುಳ್ಳವರಾಗಿಯೇ ಇರುವರು.

**ಜಲಂ ಸ್ವಭಾವತಃ ಶೀತಂ ಪಾವಕಾತಪಯೋಗತಃ ।**
**ಉಷ್ಣಂ ಭವತಿ ತಚ್ಛೀಘ್ರಂ ತದ್ವಿನಾ ಶಿಶಿರಂ ಭವೇತ್ ॥೪೮॥**

ಜಲವು ಸ್ವಭಾವವಾಗಿ ತಣ್ಣಗೆ ಇರುವುದು. ಅದು ಬಿಸಿಲು ಮತ್ತು ಬೆಂಕಿಯ ಸಂಪರ್ಕದಿಂದ ಬಿಸಿಯಾಗಿ ಆದರೂ ಅವುಗಳ ಸಂಪರ್ಕ ತಪ್ಪಿದ ಕೂಡಲೇ ಶೀಘ್ರ ವಾಗಿ ಎಂದರೆ ಅತ್ಯಲ್ಪಕಾಲದಲ್ಲಿಯೇ ತಣ್ಣಗಾಗುವುದು. ಅದರಂತೆ ಮಹಾತ್ಮರ ಸ್ವಭಾವವು.

**ದಯಾವಾನ್ ಗೋಭಿಲಸ್ತ್ವಾಹ ದೇವದತ್ತಂ ಸುದುಃಖಿತಂ ।**
**ಮೂರ್ಖೋ ಭೂತ್ವಾ ಸುತಸ್ತೇ ವೈ ವಿದ್ವಾನಪಿ ಭವಿಷ್ಯತಿ ॥೪೯॥**

ಆಗ ಗೋಭಿಲಮುನಿಯು ಕರುಣೆಯಿಂದ ಕೂಡಿದವನಾಗಿ, ತುಂಬ ದುಃಖ ಗೊಂಡ ದೇವದತ್ತನನ್ನು ಕುರಿತು, ಓ ದೇವದತ್ತನೇ, ನಿನಗೆ ಆಗುವ ಪುತ್ರನು ನನ್ನ ಶಾಪದಂತೆ ಮೊದಲು ಮೂರ್ಖನಾಗಿದ್ದು ಆ ಮೇಲೆ ಪಂಡಿತನೂ ಆಗುವನು ಎಂದು ವಿಶಾಪದ ಅನುಗ್ರಹವನ್ನೂ ಹೇಳಿದನು.

**ಇತಿ ದತ್ತವರಃ ಸೋಽಥ ಮುದಿತೋಽಭೂದ್ದ್ವಿಜರ್ಷಭಃ ।**
**ಇಷ್ಟಿಂ ಸಮಾಪ್ಯ ವಿಪ್ರಾನ್ವೈ ವಿಸಸರ್ಜ ಯಥಾವಿಧಿ ॥೫೦॥**

ಹೀಗೆ ಗೋಭಿಲಮುನಿಯು ಕೊಟ್ಟ ವರದಿಂದ ಬ್ರಾಹ್ಮಣಶ್ರೇಷ್ಠನಾದ ದೇವ ದತ್ತನು ತುಂಬ ಸಂತೋಷಗೊಂಡು ಶಾಸ್ತ್ರನಿಯಮದಂತೆ ಆ ಪುತ್ರಕಾಮೇಷ್ಟಿ ಯಾಗವನ್ನು ಮುಗಿಸಿ, ಯಾಗಾರ್ಥವಾಗಿ ಬಂದಿದ್ದ ಬ್ರಾಹ್ಮಣರನ್ನೆಲ್ಲಾ ಬೀಳ್ಕೊಟ್ಟನು.

**ಕಾಲೇನ ಕಿಯತಾ ತಸ್ಯ ಭಾರ್ಯಾ ರೂಪವತೀ ಸತೀ ।**
**ಗರ್ಭಂ ದಧಾರ ಕಾಲೇ ಸಾ ರೋಹಿಣೀ ರೋಹಿಣೀಸಮಾ ॥೫೧॥**

ಮುಂದೆ ಸ್ವಲ್ಪ ಕಾಲದಲ್ಲಿಯೇ ತುಂಬಾ ಸುಂದರಿಯಾದ, ಚಂದ್ರನ ಪತ್ನಿಯಾದ ರೋಹಿಣಿಯಂತಿರತಕ್ಕ, ಪತಿವ್ರತೆಯಾದ, ರೋಹಿಣಿಯೆಂಬ ಹೆಸರುಳ್ಳ, ಆ ದೇವದತ್ತನ ಪತ್ನಿಯು ಗರ್ಭವನ್ನು ಧರಿಸಿದಳು.

**ಗರ್ಭಾಧಾನಾದಿಕಂ ಕರ್ಮ ಚಕಾರ ವಿಧಿವದ್ದ್ವಿಜಃ ।**
**ಪುಂಸವನವಿಧಾನಂ ಚ ಶೃಂಗಾರಕರಣಂ ತಥಾ ॥೫೨॥**

ಆಗ ದೇವದತ್ತನು, ಗರ್ಭಸಂಸ್ಕಾರಕ್ಕಾಗಿ ಮಾಡುವ ಪುಂಸವನ ಮುಂತಾದ ಕರ್ಮಗಳನ್ನೂ, ಗರ್ಭಿಣಿಯರನ್ನು ಅಲಂಕಾರಾದಿಗಳಿಂದ ಶೃಂಗರಿಸುವ ಲೌಕಿಕ ಸಂಪ್ರದಾಯಾದಿಗಳನ್ನೂ ಯಥಾವಿಧಿಯಾಗಿ ನೆರವೇರಿಸಿದನು.

**ಸೀಮಂತೋನ್ನಯನಂ ಚೈವ ಕೃತಂ ವೇದವಿಧಾನತಃ ।**
**ದದೌ ದಾನಾನಿ ಮುದಿತೋ ಮತ್ವೇಷ್ಟಿಂ ಸಫಲಾಂ ತಥಾ ॥೫೩॥**

ಮತ್ತು ವಿಧ್ಯುಕ್ತವಾದ ಕಾಲದಲ್ಲಿ ಸೀಮಂತೋನ್ನಯನವೆಂಬ ಪ್ರಥಮ ಗರ್ಭಕಾಲದಲ್ಲಿ ಮಾಡುವ ಕರ್ಮವನ್ನೂ ವೇದದಲ್ಲಿ ಹೇಳಿದ ನಿಯಮದಂತೆ ಮಾಡಿ, ತಾನು ಮಾಡಿದ ಪುತ್ರಕಾಮೇಷ್ಟಿಯು ಸಫಲವಾಯಿತೆಂದು ತುಂಬ ಸಂತೋಷಗೊಂಡು ಅನೇಕ ದಾನಧರ್ಮಗಳನ್ನು ಮಾಡಿದನು.

**ಶುಭೇಽಹ್ನಿ ಸುಷುವೇ ಪುತ್ರಂ ರೋಹಿಣೀ ರೋಹಿಣೀಯುತೇ ।**
**ದಿನೇ ಲಗ್ನೇ ಶುಭೇಽತ್ಯರ್ಥಂ ಜಾತಕರ್ಮ ಚಕಾರ ಸಃ ॥೫೪॥**

ಅನಂತರದಲ್ಲಿ ಆ ದೇವದತ್ತನ ಪತ್ನಿಯಾದ ರೋಹಿಣಿಯು, ರೋಹಿಣೀನಕ್ಷತ್ರದಿಂದ ಕೂಡಿರುವ ಶುಭದಿನದಲ್ಲಿ ಮತ್ತು ಶುಭಲಗ್ನದಲ್ಲಿ ಪುತ್ರನನ್ನು ಪ್ರಸವಿಸಿದಳು. ಆ ದೇವದತ್ತನು ಶುಭದಿವಸದಲ್ಲಿ ಹುಟ್ಟಿದ ಶಿಶುವಿಗೆ ಜಾತಕರ್ಮವೆಂಬ ಸಂಸ್ಕಾರವನ್ನು ಮಾಡಿದನು.

**ಪುತ್ರದರ್ಶನಕಂ ಕೃತ್ವಾ ನಾಮಕರ್ಮ ಚಕಾರ ಚ ।**
**ಉತಥ್ಯ ಇತಿ ಪುತ್ರಸ್ಯ ಕೃತಂ ನಾಮ ಪುರಾವಿದಾ ॥೫೫॥**

ಪುತ್ರನ ಪ್ರಥಮದರ್ಶನವನ್ನು ಮಾಡಿ ಆ ಶಿಶುವಿಗೆ ನಾಮಕರಣ ವಿಧಿಯನ್ನೂ ಮಾಡಿದನು. ಮತ್ತು ಪ್ರಾಚೀನಸಂಪ್ರದಾಯಗಳನ್ನು ತಿಳಿದ ಆ ದೇವದತ್ತನು ಆ ಶಿಶುವಿಗೆ ಉತಥ್ಯನೆಂದು ಹೆಸರಿಟ್ಟನು.

**ಸ ಚಾಷ್ಟಮೇ ತಥಾ ವರ್ಷೇ ಶುಭೇ ವೈ ಶುಭವಾಸರೇ ।**
**ತಸ್ಯೋಪನಯನಂ ಕರ್ಮ ಚಕಾರ ವಿಧಿವತ್ಪಿತಾ ॥೫೬॥**

ತಂದೆಯಾದ ದೇವದತ್ತನು ಆ ಉತಥ್ಯನಿಗೆ ಎಂಟನೆಯ ವರ್ಷದಲ್ಲಿ ಒಳ್ಳೆಯ ದಿವಸದಲ್ಲಿ ಉಪನಯನಸಂಸ್ಕಾರವನ್ನು ಎಂದರೆ ವೇದಾಧ್ಯಯನಕ್ಕೆ ಅಧಿಕಾರ ವನ್ನುಂಟುಮಾಡುವ ಕರ್ಮವನ್ನು ವಿಧಿಪೂರ್ವಕವಾಗಿ ಮಾಡಿದನು.

**ವೇದಮಧ್ಯಾಪಯಾಮಾಸ ಗುರುಸ್ತಂ ವೈ ವ್ರತೇ ಸ್ಥಿತಂ ।**
**ನೋಚ್ಚಚಾರ ತಥೋತಥ್ಯಃ ಸಂಸ್ಥಿತೋ ಮುಗ್ಧವತ್ತದಾ ॥೫೭॥**

ಅನಂತರದಲ್ಲಿ ಆ ದೇವದತ್ತನು ತನ್ನ ಕುಮಾರನಾದ ಆ ಉತಥ್ಯನಿಗೆ ತಾನೇ ಗುರುವಾಗಿ ಬ್ರಹ್ಮಚಾರಿನಿಯಮವನ್ನು ಪಾಲಿಸುತ್ತಿದ್ದ ಆ ಕುಮಾರನಿಗೆ ವೇದವನ್ನು ಹೇಳಿಕೊಟ್ಟನು. ಆದರೆ ಆ ಉತಥ್ಯನು ಮೂಢನಂತಿದ್ದು ಒಂದಕ್ಷರ ವನ್ನೂ ಉಚ್ಚಾರಮಾಡಲು ಸಮರ್ಥನಾಗಲಿಲ್ಲವು.

**ಬಹುಧಾ ಪಾಠಿತಃ ಪಿತ್ರಾ ನ ದಧಾರ ಮತಿಂ ಶಠಃ ।**
**ಮೂಢವತ್ತಿಷ್ಠತೇಽತ್ಯರ್ಥಂ ತಂ ಶುಶೋಚ ಪಿತಾ ತದಾ ॥೫೮॥**

ತಂದೆಯಿಂದ ಅನೇಕಪ್ರಕಾರವಾಗಿ ಹೇಳಿಕೊಡಲ್ಪಟ್ಟರೂ ಆ ಉತಥ್ಯನು ಮೂರ್ಖನಾಗಿ ಒಂದಕ್ಷರವನ್ನೂ ಬುದ್ಧಿಯಿಂದ ಗ್ರಹಿಸದೆ, ಯಾವಾಗಲೂ ದಡ್ಡನಂತೆ ಇರುತ್ತಿದ್ದನು. ಇವನು ಹೀಗಿರುವುದನ್ನು ತಂದೆಯು ನೋಡಿ ಆಗ ತುಂಬ ವ್ಯಥೆಪಟ್ಟನು.

**ಏವಂ ಕುರ್ವನ್ಸದಾಭ್ಯಾಸಂ ಜಾತೋ ದ್ವಾದಶವಾರ್ಷಿಕಃ ।**
**ನ ವೇದ ವಿಧಿವತ್ಕರ್ತುಂ ಸಂಧ್ಯಾವಂದನಕಂ ವಿಧಿಂ ॥೫೯॥**

ಹೀಗೆ ಯಾವಾಗಲೂ ವೇದಾಭ್ಯಾಸವನ್ನು ಮಾಡುತ್ತಾ ಆ ಉತಥ್ಯನು ಹನ್ನೆರಡು ವರ್ಷ ವಯಸ್ಸಿನವನಾದನು. ಅಷ್ಟು ದಿವಸಗಳಾದರೂ ಸಹ ಅವನಿಗೆ ಯಥಾವಿಧಿಯಾಗಿ ಸಂಧ್ಯಾವಂದನೆಯನ್ನು ಮಾಡಲು ಸಹ ಬರಲಿಲ್ಲವು.

**ಮೂರ್ಖೋಽಭೂದಿತಿಲೋಕೇಷು ಗತಾ ವಾರ್ತಾತಿವಿಸ್ತರಂ ।**
**ಬ್ರಾಹ್ಮಣೇಷು ಚ ಸರ್ವೇಷು ತಾಪಸೇಷ್ವಿತರೇಷು ಚ ॥೬೦॥**

ಹೀಗೆ ಆ ಉತಥ್ಯನು ತುಂಬಾ ದಡ್ಡನಾದನು. ಇವನು ಹೀಗೆ ದಡ್ಡನಾಗಿರುವ ವಾರ್ತೆಯು ಎಲ್ಲಾ ಬ್ರಾಹ್ಮಣರಲ್ಲಿಯೂ, ಋಷಿಗಳಲ್ಲಿಯೂ ಇತರ ಜನಗಳಲ್ಲಿಯೂ ವಿಸ್ತಾರವಾಗಿ ಹರಡಿತು.

**ಜಹಾಸ ಲೋಕಸ್ತಂ ವಿಪ್ರಂ ಯತ್ರ ತತ್ರ ಗತಂ ವನೇ ।**
**ಪಿತಾ ಮಾತಾ ನಿನಿಂದಾಥ ಮೂರ್ಖಂ ತಮತಿಭರ್ತ್ಸಯನ್ ॥೬೧॥**

ಜನಗಳು ಆ ತಪೋವನದಲ್ಲಿ ಆ ಉತಥ್ಯನನ್ನು ಎಲ್ಲೆಲ್ಲಿಗೆ ಹೋದರೂ ಬಿಡದೆ ಹಾಸ್ಯಮಾಡುತ್ತಿದ್ದರು. ಅವನ ತಂದೆತಾಯಿಗಳೂ ಸಹ ಮೂರ್ಖನಾದ ಅವನನ್ನು ವಿಶೇಷವಾಗಿ ಹೆದರಿಸುತ್ತಾ ನಿಂದಿಸುತ್ತಿದ್ದರು.

**ನಿಂದಿತೋಽಥ ಜನೈಃ ಕಾಮಂ ಪಿತೃಭ್ಯಾಮಥ ಬಾಂಧವೈಃ ।**
**ವೈರಾಗ್ಯಮಗಮದ್ವಿಪ್ರೋ ಜಗಾಮ ವನಮುಪ್ಯಸೌ ॥೬೨॥**

ಹೀಗೆ ಆ ಉತಥ್ಯನು ಎಲ್ಲ ಜನಗಳಿಂದಲೂ, ಬಂಧುಗಳಿಂದಲೂ, ತಂದೆ ತಾಯಿಗಳಿಂದಲೂ ನಿಂದಿಸಲ್ಪಟ್ಟವನಾಗಿ, ತುಂಬ ವೈರಾಗ್ಯವನ್ನೂ ಹೊಂದಿ ಕಾಡಿಗೆ ಹೊರಟುಹೋದನು.

**ಅಂಧೋ ವರಸ್ತಥಾ ಪಂಗುರ್ನ ಮೂರ್ಖಸ್ತು ವರಃ ಸುತಃ ।**
**ಇತ್ಯುಕ್ತೋಽಸೌ ಪಿತೃಭ್ಯಾಂ ವೈ ವಿವೇಶ ಕಾನನಂ ಪ್ರತಿ ॥೫೩॥**

ಕುರುಡನಾಗಿಯೂ, ಕುಂಟನಾಗಿಯೂ ಇರುವ ಪುತ್ರನೇ ಎಷ್ಟೋ ಮೇಲು. ಆದರೆ ಈ ಮೂರ್ಖಪುತ್ರನು ಅವರಿಗಿಂತಲೂ ಕೀಳು ಎಂದು ತಂದೆತಾಯಿಗಳು ನಿಂದಿಸಿದ್ದರಿಂದ ಆ ಉತಥ್ಯನು ಕಾಡನ್ನು ಪ್ರವೇಶಿಸಿದನು.

**ಗಂಗಾತೀರೇ ಶುಭೇ ಸ್ಥಾನೇ ಕೃತ್ವೋಟಜಮನುತ್ತಮಂ ।**
**ವನ್ಯಾಂ ವೃತ್ತಿಂ ಚ ಸಂಕಲ್ಪ್ಯ ಸ್ಥಿತಸ್ತತ್ರ ಸಮಾಹಿತಃ ॥೬೪॥**

ಹೀಗೆ ಕಾಡನ್ನು ಪ್ರವೇಶಿಸಿ ಗಂಗಾನದಿಯ ದಡದಲ್ಲಿ ಪವಿತ್ರವಾದೊಂದು ಸ್ಥಳದಲ್ಲಿ ಸಾಮಾನ್ಯವಾದೊಂದು ಪರ್ಣಕುಟೀರವನ್ನು ಎಂದರೆ ಜೋಪಡಿಯನ್ನು

ಕಟ್ಟಿಕೊಂಡು, ಗೆಡ್ಡೆ ಗೆಣಸು ಮುಂತಾದ ವನ್ಯಾಹಾರವನ್ನು ತಿನ್ನುತ್ತಾ, ಕಾಡಿನ ಜೀವನವನ್ನು ಮಾಡುತ್ತಾ, ಅಲ್ಲಿಯೇ ಸಮಾಧಾನಚಿತ್ತನಾಗಿ ವಾಸಮಾಡಿಕೊಂಡಿದ್ದನು.

**ನಿಯಮಂ ಚ ಪರಂ ಕೃತ್ವಾ ನಾಸತ್ಯಂ ಪ್ರಬ್ರವೀಮ್ಯಹಂ ।**
**ಸ್ಥಿತಸ್ತತ್ರಾಶ್ರಮೇ ರಮ್ಯೇ ಬ್ರಹ್ಮಚರ್ಯವ್ರತೋ ಹಿ ಸಃ ॥೬೫॥**

ನಾನು ಯಾವಾಗಲೂ ಸುಳ್ಳನ್ನು ಹೇಳುವುದಿಲ್ಲವೆಂದು ಶ್ರೇಷ್ಠವಾದ ನಿಯಮವನ್ನು ಪಾಲಿಸುತ್ತಾ, ಆ ಮನೋಹರವಾದ ಆಶ್ರಮದಲ್ಲಿ ಆ ಉತಥ್ಯನು ಬ್ರಹ್ಮಚರ್ಯವ್ರತನಿಯಮದಿಂದ ಯುಕ್ತನಾಗಿ ವಾಸಮಾಡಿಕೊಂಡಿದ್ದನು.

ಹಿಂದಿನ ಅನೇಕಜನ್ಮಗಳಿಂದಲೂ ಸತ್ಯವ್ರತನಂತಹ ಸತ್ಪುರುಷರಲ್ಲಿ ಬೆಳೆದು ಬಂದಿದ್ದ ಧಾರ್ಮಿಕವಾದ ಸಂಸ್ಕೃತಿಯು ಬಿರುಗಾಳಿಯಂತೆ ಅಡ್ಡಲಾಗಿ ಬಂದ ಗೋಭಿಲ ಋಷಿಯ ಶಾಪ ಮುಂತಾದ ಅಡ್ಡಿಯಿಂದ ಸ್ವಲ್ಪಕಾಲದ ಮಟ್ಟಿಗೆ ಮರೆಯಾಗಿದ್ದರೂ, ಕಡೆಗೆ ವಿಕಾಸವನ್ನು ಪಡೆದು ತಪ್ಪದೆ ಬೆಳಗುತ್ತದೆ. ಸತ್ಯವ್ರತನ ಸತ್ಯಪರತೆಯಲ್ಲಿದ್ದ ನಿಷ್ಠೆಯು ಆ ಧಾರ್ಮಿಕಸಂಸ್ಕೃತಿಯ ಫಲವು.

ಈ ಉತಥ್ಯನ ವೃತ್ತಾಂತವೂ ವೇದಗಳಲ್ಲಿ ಸೂಚಿತವಾಗಿದೆ. "ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ।" ಎಂಬ ಸೂಕ್ತಿಗೆ ಇದೂ ಇನ್ನೊಂದು ಉದಾಹರಣೆಯಾಗಿದೆ ಎಂಬುದನ್ನು ಗಮನಿಸಬಹುದು. ವೈದಿಕ, ಪೌರಾಣಿಕ, ದಾರ್ಶನಿಕ, ಮತ್ತು ಕಾವ್ಯಸಾಹಿತ್ಯಗಳಲ್ಲಿ ತತ್ತ್ವಸಾಮರಸ್ಯವನ್ನು ಮನಗಾಣಲು ತೊಡಗುವುದು ಫಲವಿಲ್ಲದ ಸಾಹಸಕಾರ್ಯವೆಂದು ಕೆಲವರು ವೃದ್ಧರು ಅಭಿಪ್ರಾಯಪಡುತ್ತಾರೆ. ಆದರೆ ಭಾರತಾರ್ಯರ ಧಾರ್ಮಿಕವಾದ ಸಂಸ್ಕೃತಿಯ ವೃಕ್ಷವು ಅವಿಚ್ಛಿನ್ನವಾಗಿ ಬೆಳೆದು ಬರುತ್ತಾ ಉತ್ತಮವಾದ ಪುಷ್ಪಫಲಗಳನ್ನು ಕೊಡುತ್ತಲೇ ಬಂದಿರುತ್ತದೆ ಎನ್ನುವುದು ಚರಿತ್ರದೃಷ್ಟಿಯಿಂದ ನ್ಯಾಯ್ಯವಾದ ಸಿದ್ಧಾಂತವಾಗಿದೆ ಎಂಬುದನ್ನು ಮರೆಯಬಾರದು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ದಶಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ತೃತೀಯಸ್ಕಂಧೇ

### ॥ ಏಕಾದಶೋಽಧ್ಯಾಯಃ ॥

### ಹನ್ನೊಂದನೆಯ ಅಧ್ಯಾಯವು

॥ ಲೋಮಶ ಉವಾಚ ॥

**ನ ವೇದಾಧ್ಯಯನಂ ಕಿಂಚಿಜ್ಜಾನಾತಿ ನ ಜಪಂ ತಥಾ ।**
**ಧ್ಯಾನಂ ನ ದೇವತಾನಾಂ ಚ ನ ಚೈವಾರಾಧನಂ ತಥಾ ॥೧॥**

ಲೋಮಶಮುನಿಯು ಹೇಳಿದನು—ಹೀಗೆ ವೈರಾಗ್ಯದಿಂದ ಅರಣ್ಯಕ್ಕೆ ಹೋಗಿ ಇರುತ್ತಿದ್ದ ಆ ಉತಥ್ಯಮುನಿಯು ವೇದಾಧ್ಯಯನವನ್ನಾಗಲೀ, ಮಂತ್ರಜಪಗಳನ್ನಾಗಲೀ, ದೇವತೆಗಳ ಉಪಾಸನೆ ಪೂಜೆ ಇವುಗಳನ್ನಾಗಲೀ ಸುತರಾಂ ತಿಳಿಯದವನಾಗಿದ್ದನು.

**ನಾಸನಂ ವೇದ ವಿಪ್ರೋಽಸೌ ಪ್ರಾಣಾಯಾಮಂ ತಥಾ ಪುನಃ ।**
**ಪ್ರತ್ಯಾಹಾರಂ ತು ನೋ ವೇದ ಭೂತಶುದ್ಧಿಂ ಚ ಕಾರಣಂ ॥೨॥**

ಅಲ್ಲದೆ ಅಷ್ಟಾಂಗಯೋಗದಲ್ಲಿ ಪ್ರಸಿದ್ಧವಾದ ಆಸನವನ್ನಾಗಲೀ, ಪ್ರಾಣಾಯಾಮವನ್ನು ಎಂದರೆ ಯೋಗಾಂಗವಾಗಿ ಅಭ್ಯಾಸಮಾಡುವ, ಉಸಿರನ್ನು ಕಟ್ಟಿ ನಿಲ್ಲಿಸಿ ಹತೋಟಿಯಲ್ಲಿಟ್ಟುಕೊಳ್ಳುವ ರೀತಿಯನ್ನಾಗಲೀ, ಆಮೇಲೆ ಇಂದ್ರಿಯಗಳನ್ನು ಅವುಗಳ ವಿಷಯಗಳಲ್ಲಿ ಸ್ವೇಚ್ಛೆಯಿಂದ ಪ್ರವರ್ತಿಸದಂತೆ ತಡೆಯುವ ಪ್ರತ್ಯಾಹಾರವನ್ನಾಗಲೀ, ಶರೀರಶುದ್ಧಿಗೆ ಸಾಧನವಾದ ಇವಾವುದನ್ನೂ, ಹಾಗೆಯೇ ಎಲ್ಲಕ್ಕೂ ಕಾರಣನಾದ ದೇವರನ್ನಾಗಲೀ ಅವನು ತಿಳಿದಿರಲಿಲ್ಲ.

**ನ ಮಂತ್ರಂ ಕೀಲಕಂ ಜಾಪ್ಯಂ ಗಾಯತ್ರೀಂ ಚ ನ ವೇದ ಸಃ ।**
**ಶೌಚಂ ಸ್ನಾನವಿಧಿಂ ಚೈವ ತಥಾಚಮನಕಂ ಪುನಃ ॥೩॥**

ಮತ್ತು ಆ ಉತಥ್ಯಮುನಿಯು, ಜಪಿಸಲು ಯೋಗ್ಯವಾದ ಯಾವ ಮಂತ್ರವನ್ನಾಗಲೀ, ಅದರ ಕೀಲಕವನ್ನಾಗಲೀ, ಗಾಯತ್ರಿಯನ್ನು ಸಹ ತಿಳಿಯದವನಾಗಿದ್ದನು. ಅಲ್ಲದೆ, ಶರೀರಶುದ್ಧಿಗೆ ಬೇಕಾದ ಸ್ನಾನ, ಆಚಮನ ಮುಂತಾದ ವಿಧಿನಿಯಮಗಳನ್ನೂ ತಿಳಿದಿರಲಿಲ್ಲ. ಆಚಮನವೆಂದರೆ, ಶರೀರದ ಅಂತಶ್ಶುದ್ಧಿಗಾಗಿ ಬಲಗೈಯಲ್ಲಿ ಸ್ವಲ್ಪ ನೀರನ್ನು ಹಾಕಿಕೊಂಡು ಮಂತ್ರಪೂರ್ವಕವಾಗಿ ಪ್ರಾಶನಮಾಡುವುದು. "ಅಪೋಽಶ್ನಾತಿ, ಅಂತರತ ಏವ ಮೇಧ್ಯೋಭವತಿ" ಎಂದು ಯಜುರ್ವೇದ ಸಂಹಿತೆಯಲ್ಲಿ ಹೇಳಿದೆ.

**ಪ್ರಾಣಾಗ್ನಿಹೋತ್ರಂ ನೋ ವೇದ ಬಲಿದಾನಂ ನ ಚಾತಿಥಿಂ ।**
**ನ ಸಂಧ್ಯಾಂ ಸಮಿಧೋ ಹೋಮಂ ವಿವೇದ ಚ ತಥಾ ಮುನಿಃ ॥೪॥**

ಮತ್ತು ಉಪನಿಷತ್ತಿನಲ್ಲಿ ಹೇಳಿರುವ ಪ್ರಾಣಾಗ್ನಿಹೋತ್ರಕ್ರಮವನ್ನೂ, ವೈಶ್ವದೇವವೇ ಮೊದಲಾದ ಬಲಿದಾನವಿಧಿಯನ್ನೂ ಅವನು ತಿಳಿದಿರಲಿಲ್ಲ. ಹಾಗೆಯೇ ಅತಿಥಿಸತ್ಕಾರದ ರೀತಿನೀತಿಗಳೂ, ಸಂಧ್ಯಾವಂದನೆ, ಅಗ್ನಿಕಾರ್ಯ ಔಪಾಸನ ಇವುಗಳೂ ಅವನಿಗೆ ಗೊತ್ತಿರಲಿಲ್ಲ.

**ಸೋಽಕರೋತ್ಪ್ರಾತರುತ್ಥಾಯ ಯತ್ಕಿಂಚಿದ್ದಂತಧಾವನಂ ।**
**ಸ್ನಾನಂ ಚ ಶೂದ್ರವತ್ತತ್ರ ಗಂಗಾಯಾಂ ಮಂತ್ರವರ್ಜಿತಂ ॥೫॥**

ಅವನು ಬೆಳಿಗ್ಗೆ ಎದ್ದು ಸ್ವಲ್ಪ ಹಲ್ಲನ್ನುಜ್ಜುತ್ತಿದ್ದನು. ಅನಂತರ ಮಂತ್ರೋಚ್ಚಾರಣೆ ಮೊದಲಾದ ವಿಧಿಯಿಲ್ಲದೆ ಶೂದ್ರನಂತೆ ಗಂಗಾನದಿಯಲ್ಲಿ ಸುಮ್ಮನೆ ಮುಳುಗಿ ಸ್ನಾನಮಾಡುತ್ತಿದ್ದನು. ಇಷ್ಟು ಮಾತ್ರ ಅವನಿಗೆ ತಿಳಿದಿದ್ದಿತು.

**ಫಲಾನ್ಯಾದಾಯ ವನ್ಯಾನಿ ಮಧ್ಯಾಹ್ನೇಽಪಿ ಯದೃಚ್ಛಯಾ ।**
**ಭಕ್ಷ್ಯಾಭಕ್ಷ್ಯಪರಿಜ್ಞಾನಂ ನ ಜಾನಾತಿ ಶಠಸ್ತಥಾ ॥೬॥**

ಹೆಚ್ಚಾದ ಪ್ರಯತ್ನವಾಗಲೀ ಉದ್ದೇಶವಾಗಲೀ ಇಲ್ಲದೆ ಕಾಡಿನಲ್ಲಿ ತಾನಾಗಿ ದೊರೆಯುವ ಹಣ್ಣುಗಳನ್ನು ಮಧ್ಯಾಹ್ನಸಮಯದಲ್ಲಿ ತಂದು ಆ ಹಣ್ಣುಗಳಲ್ಲಿ ಇವು ತಿನ್ನುವುದಕ್ಕೆ ಯೋಗ್ಯವಾದವು, ಇವು ಯೋಗ್ಯವಾದವುಗಳಲ್ಲ ಎಂಬ ವಿವೇಚನೆಯಿಲ್ಲದೆ ಮನಸ್ಸುಬಂದಂತೆ ಅವುಗಳನ್ನು ಆ ದಡ್ಡನು ತಿನ್ನುತ್ತಿದ್ದನು.

**ಸತ್ಯಂ ಬ್ರೂತೇ ಸ್ಥಿತಸ್ತತ್ರ ನಾನೃತಂ ವದತೇ ಪುನಃ ।**
**ಜನೈಃ ಸತ್ಯತಪಾ ನಾಮ ಕೃತಮಸ್ಯ ದ್ವಿಜಸ್ಯ ವೈ ॥೭॥**

ಆ ಕಾಡಿನಲ್ಲಿ ಅವನು ಈ ರೀತಿಯಲ್ಲಿ ಇರುತ್ತಾ ಯಾವಾಗಲೂ ಸತ್ಯವನ್ನೇ ಹೇಳುತ್ತಿದ್ದನು. ಆದುದರಿಂದ ಜನಗಳು ಅವನನ್ನು "ಸತ್ಯತಪಾಃ" ಎಂದರೆ ಸತ್ಯವನ್ನೇ ತಪಸ್ಸನ್ನಾಗಿ ಆಚರಿಸುವ ಸ್ವಭಾವ ಉಳ್ಳವನು ಎಂದು ಕರೆಯುತ್ತಿದ್ದರು.

**ನಾಹಿತಂ ಕಸ್ಯಚಿತ್ಕುರ್ಯಾನ್ನ ತಥಾಪಿ ಹಿತಂ ಕ್ವಚಿತ್ ।**
**ಸುಖಂ ಸ್ವಪಿತಿ ತತ್ರೈವ ನಿರ್ಭಯಶ್ಚಿಂತಯನ್ನಿತಿ ॥೮॥**

ಅಲ್ಲದೆ ಅವನು ಯಾವದೊಂದು ಪ್ರಾಣಿಗೂ ಕೆಡುಕನ್ನು ಮಾಡುತ್ತಿರಲಿಲ್ಲ. ಹಾಗೆಯೇ ನಿಷಿದ್ಧಕರ್ಮವನ್ನು ಎಂದರೆ ಮಾಡಬಾರದ ಯಾವ ಕಾರ್ಯವನ್ನೂ ಅವನು ಮಾಡುತ್ತಿರಲಿಲ್ಲ. ಇಂತಹ ಅಹಿಂಸೆಯ ನಡವಳಿಕೆಯಿಂದ ಅವನು ಯಾವ ಭಯವೂ ಇಲ್ಲದೆ ಅಲ್ಲಿಯೇ ನಿದ್ರಿಸುತ್ತಿದ್ದನು. ಆದರೂ ಮುಂದೆ ಹೇಳುವಂತೆ ಯೋಚಿಸುತ್ತಿದ್ದನು.

**ಕದಾ ಮೇ ಮರಣಂ ಭಾವಿ ದುಃಖಂ ಜೀವಾಮಿ ಕಾನನೇ ।**
**ಜೀವಿತಂ ಧಿಕ್ಚ ಮೂರ್ಖಸ್ಯ ತರಸಾ ಮರಣಂ ಧ್ರುವಂ ॥೯॥**

ನನಗೆ ಯಾವಾಗ ಮರಣವಾದೀತು? ಈ ಕಾಡಿನಲ್ಲಿ ಬಹುದುಃಖದಿಂದ ಜೀವಿಸುತ್ತಲಿದ್ದೇನೆ. ತಿಳಿವಳಿಕೆಯಿಲ್ಲದ ಶುದ್ಧ ದಡ್ಡನಾದ ನನ್ನ ಈ ಜೀವನವು ಬಹು ನಿಂದ್ಯವಾದುದು. ಇಂತಹ ಜೀವನಕ್ಕಿಂತಲೂ ಆದಷ್ಟು ಬೇಗ ಸಾಯುವುದು ಮೇಲು.

**ದೈವೇನಾಹಂ ಕೃತೋ ಮೂರ್ಖೋ ನಾನ್ಯೋಽತ್ರ ಕಾರಣಂ ಮಮ ।**
**ಪ್ರಾಪ್ಯ ಚೈವೋತ್ತಮಂ ಜನ್ಮ ವೃಥಾ ಜಾತಂ ಮಮಾಧುನಾ ॥೧೦॥**

ನನ್ನ ದುರದೃಷ್ಟದಿಂದಲೇ ನಾನು ಹೀಗೆ ತಿಳಿವಳಿಕೆಯಿಲ್ಲದ ದಡ್ಡನಾಗಿರುತ್ತೇನೆ. ಇದರಲ್ಲಿ ನಾನು ಮಾಡಿರಬಹುದಾದ ಯಾವ ದೋಷವೂ ಕಾರಣವಾಗಿಲ್ಲ. ನಾನು ಉತ್ತಮವಾದ ಇಂತಹ ಬ್ರಾಹ್ಮಣಜನ್ಮವನ್ನು ಪಡೆದುದೂ ಈಗ ವ್ಯರ್ಥವಾಯಿತು.

**ಯಥಾ ವಂಧ್ಯಾ ಸುರೂಪಾ ಚ ಯಥಾ ವಾ ನಿಷ್ಫಲೋ ದ್ರುಮಃ ।**
**ಅದುಗ್ಧದೋಹಾ ಧೇನುಶ್ಚ ತಥಾಹಂ ನಿಷ್ಫಲಃ ಕೃತಃ ॥೧೧॥**

ಸ್ತ್ರೀಯು ಎಷ್ಟು ಸುಂದರಿಯಾಗಿದ್ದರೂ ಬಂಜೆಯಾಗಿದ್ದರೆ ಹೇಗೋ, ಹಣ್ಣು ಬಿಡದಿರುವ ಮರವು ಹೇಗೋ, ಹಾಲನ್ನು ಕರೆಯದಿರುವ ಹಸುವು ಹೇಗೋ, ಹಾಗೆಯೇ ನಾನೂ ಯಾವ ಪ್ರಯೋಜನಕ್ಕೂ ಬಾರದವನಾದೆನು.

**ಕಿಂ ನು ನಿಂದಾಮ್ಯಹಂ ದೈವಂ ನೂನಂ ಕರ್ಮ ಮಮೇದೃಶಂ ।**
**ನ ದತ್ತಂ ಪುಸ್ತಕಂ ಕೃತ್ವಾ ಬ್ರಾಹ್ಮಣಾಯ ಮಹಾತ್ಮನೇ ॥೧೨॥**

ಅದೃಷ್ಟವನ್ನು ನಾನು ಸುಮ್ಮನೆ ನಿಂದಿಸಿ ಪ್ರಯೋಜನವೇನು? ನಾನು ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಫಲವೇ ಹೀಗಾಗಿರುತ್ತದೆ. ಒಳ್ಳೆಯ ಸ್ವಭಾವವುಳ್ಳ, ಯೋಗ್ಯನಾದ ಬ್ರಾಹ್ಮಣನಿಗೆ ದೇವೀಮಹಿಮೆ ಮುಂತಾದ ಒಳ್ಳೆಯಗ್ರಂಥಗಳ ಪ್ರತಿಯನ್ನು ಬರೆದು ಆ ಪುಸ್ತಕವನ್ನು ದಾನವಾಗಿ ಕೊಡಲಿಲ್ಲವು.

**ನ ವೈ ವಿದ್ಯಾ ಮಯಾ ದತ್ತಾ ಪೂರ್ವಜನ್ಮನಿ ನಿರ್ಮಲಾ ।**
**ತೇನಾಹಂ ಕರ್ಮಯೋಗೇನ ಶಠೋಽಸ್ಮಿ ಚ ದ್ವಿಜಾಧಮಃ ॥೧೩॥**

ಹಿಂದಿನ ಜನ್ಮದಲ್ಲಿ ನಾನು ನಿರ್ದುಷ್ಟವಾದ ವಿದ್ಯೆಯನ್ನು ಯಾರಿಗೂ ಉಪದೇಶಿಸಲಿಲ್ಲ. ಈ ವಿಧವಾದ ಕರ್ಮಗಳಿಂದಲೇ ನಾನು ಈಗ ತಿಳಿವಳಿಕೆಯಿಲ್ಲದ ದಡ್ಡನೂ ಬ್ರಾಹ್ಮಣರಲ್ಲಿ ಬಹಳ ಹೀನನೂ ಆಗಿ ಹುಟ್ಟಿರುತ್ತೇನೆ.

**ನ ಚ ತೀರ್ಥೇ ತಪಸ್ತಪ್ತಂ ಸೇವಿತಾ ನ ಚ ಸಾಧವಃ ।**
**ನ ದ್ವಿಜಾಃಪೂಜಿತಾ ದ್ರವ್ಯೈಸ್ತೇನ ಜಾತೋಽಸ್ಮಿ ದುಷ್ಟಧೀಃ ॥೧೪॥**

ಪವಿತ್ರವಾದ ತೀರ್ಥಕ್ಷೇತ್ರಗಳಲ್ಲಿ ನಾನು ತಪಸ್ಸನ್ನಾಚರಿಸಲಿಲ್ಲ. ಸತ್ಪುರುಷರನ್ನು ಸೇವಿಸಲಿಲ್ಲ. ಯಥಾಶಕ್ತಿದ್ರವ್ಯದಿಂದ ಬ್ರಾಹ್ಮಣರನ್ನು ಪೂಜಿಸಲಿಲ್ಲ. ಇದೆಲ್ಲದರ ಫಲವಾಗಿ ಈಗ ನಾನು ಬುದ್ಧಿದೋಷದಿಂದ ಕೂಡಿರುತ್ತೇನೆ.

**ವರ್ತಂತೇ ಮುನಿಪುತ್ರಾಶ್ಚ ವೇದಶಾಸ್ತ್ರಾರ್ಥಪಾರಗಾಃ ।**
**ಅಹಂ ಸುಮೂಢಃ ಸಂಜಾತೋ ದೈವಯೋಗೇನ ಕೇನಚಿತ್ ॥೧೫॥**

ಋಷಿಗಳ ಮಕ್ಕಳೆಲ್ಲರೂ ವೇದವನ್ನು ಅಧ್ಯಯನಮಾಡಿ, ಶಾಸ್ತ್ರಾರ್ಥವನ್ನು ಚನ್ನಾಗಿ ತಿಳಿದು ಪಂಡಿತರಾಗಿರುತ್ತಾರೆ. ನಾನಾದರೋ ಯಾವುದೋ ಒಂದು ದುರದೃಷ್ಟದಿಂದ ಶುದ್ಧ ಮೂಢನಾಗಿ ಹುಟ್ಟಿರುತ್ತೇನೆ.

**ನ ಜಾನಾಮಿ ತಪಸ್ತಪ್ತುಂ ಕಿಂ ಕರೋಮಿ ಸುಸಾಧನಂ ।**
**ಮಿಥ್ಯಾಽಯಂ ಮೇಽತ್ರ ಸಂಕಲ್ಪೋ ನ ಮೇ ಭಾಗ್ಯಂ ಶುಭಂ ಕಿಲ ॥೧೬॥**

ತಪಸ್ಸನ್ನು ಮಾಡೋಣವೆಂದರೆ ಅದನ್ನು ಮಾಡುವ ರೀತಿಯೇ ನನಗೆ ತಿಳಿಯದು. ಯೋಗ್ಯವಾದ ಇನ್ನಾವ ಸತ್ಕರ್ಮರೂಪವಾದ ಸಾಧನವನ್ನು ಆಚರಿಸಲಿ? ನಾನು ಮಾಡಬೇಕಾದುದನ್ನು ಕುರಿತು ಆಲೋಚಿಸುವುದೂ ಸೂಕ್ತವಾಗಿರುವಂತೆ ತೋರುವುದಿಲ್ಲವು. ಏಕೆಂದರೆ, ಒಟ್ಟಿನಲ್ಲಿ ನನ್ನ ಅದೃಷ್ಟವೇ ಚನ್ನಾಗಿಲ್ಲವು.

**ದೈವಮೇವ ಪರಂ ಮನ್ಯೇ ಧಿಕ್ಪೌರುಷಮನರ್ಥಕಂ ।**
**ವೃಥಾ ಶ್ರಮುಕೃತಂ ಕಾರ್ಯಂ ದೈವಾದ್ಭವತಿ ಸರ್ವಥಾ ॥೧೭॥**

ಅದೃಷ್ಟ ಮತ್ತು ಪುರುಷಪ್ರಯತ್ನಗಳಲ್ಲಿ ಅದೃಷ್ಟವೇ ಪ್ರಬಲವಾದುದೆಂದು ನಾನು ತಿಳಿಯುತ್ತೇನೆ. ಪುರುಷಪ್ರಯತ್ನವು ಕೇವಲ ಅನರ್ಥಹೇತುವಾದುದರಿಂದ ಅದು ನಿಂದಾರ್ಹವು. ಏಕೆಂದರೆ, ಆಯಾಸಪಟ್ಟು ಬರಿಯ ಪುರುಷಪ್ರಯತ್ನದಿಂದ ಮಾಡಿದ ಕೆಲಸವೂ ಅದೃಷ್ಟಬಲದಿಂದ ವ್ಯರ್ಥವಾಗುತ್ತದೆ.

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಶಕ್ರಾದ್ಯಾಃ ಕಿಲ ದೇವತಾಃ ।**
**ಕಾಲಸ್ಯ ವಶಗಾಃ ಸರ್ವೇ ಕಾಲೋ ಹಿ ದುರತಿಕ್ರಮಃ ॥೧೮॥**

ಬ್ರಹ್ಮ, ವಿಷ್ಣು, ರುದ್ರ ಮತ್ತು ಇಂದ್ರನೇ ಮೊದಲಾದ ಪ್ರಮುಖರಾದ ದೇವತೆಗಳೂ ಸಹ ಕಾಲಕ್ಕೆ ಅಧೀನರು. ಕಾಲವನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ. ಕಾಲ, ಅದೃಷ್ಟ, ನಿಯತಿ, ದೈವ, ಕರ್ಮಫಲ ಇವು ಪರ್ಯಾಯಪದಗಳು.

**ಏವಂವಿಧಾನ್ವಿತರ್ಕಾಂಸ್ತು ಕುರ್ವಾಣೋಽಹರ್ನಿಶಂ ದ್ವಿಜಃ ।**
**ಸ್ಥಿತಸ್ತತ್ರಾಶ್ರಮೇ ತೀರೇ ಜಾಹ್ನವ್ಯಾಃ ಪಾವನೇ ಸ್ಥಲೇ ॥೧೯॥**

ಈ ರೀತಿಯಾಗಿ ರಾತ್ರಿ ಹಗಲೂ ಆ ಬ್ರಾಹ್ಮಣನು ನಾನಾ ತೆರನಾಗಿ ಯೋಚಿಸುತ್ತಾ ಪವಿತ್ರವಾದ ಗಂಗಾನದೀ ದಡದಲ್ಲಿರುವ ತನ್ನ ಆಶ್ರಮದಲ್ಲಿ ವಾಸಿಸುತ್ತಿದ್ದನು.

**ವಿರಕ್ತಃ ಸ ತು ಸಂಜಾತಃ ಸ್ಥಿತಸ್ತತ್ರಾಶ್ರಮೇ ದ್ವಿಜಃ ।**
**ಕಾಲಾತಿವಾಹನಂ ಶಾಂತಶ್ಚಕಾರ ವಿಜನೇ ವನೇ ॥೨೦॥**

ಹೀಗಿರುತ್ತಾ ಅವನು ಯಾವ ವಸ್ತುವಿನಲ್ಲಿಯೂ ಆಸೆಯಿಲ್ಲದ ವಿರಕ್ತನಾದವನು. ಹಾಗೂ, ಜನರ ಸುಳಿವೇ ಇಲ್ಲದ ಆ ಕಾಡಿನಲ್ಲಿ ಶಾಂತರೀತಿಯಿಂದ ಕಾಲವನ್ನು ಕಳೆಯುತ್ತಿದ್ದನು.

**ಏವಂ ಸ್ಥಿತಸ್ಯ ತು ವನೇ ವಿಮಲೋದಕೇ ವೈ**
**ವರ್ಷಾಣಿ ತತ್ರ ನವಪಂಚ ಗತಾನಿ ಕಾಮಂ ।**
**ನಾರಾಧನಂ ನ ಚ ಜಪಂ ನ ವಿವೇದ ಮಂತ್ರಂ**
**ಕಾಲಾತಿವಾಹನಮಸೌ ಕೃತವಾನ್ ವನೇ ವೈ ॥೨೧॥**

ಹೀಗೆ ಆ ಉತಥ್ಯಮುನಿಯು ಶುದ್ಧವಾದ ಗಂಗಾನದಿಯ ಜಲದಿಂದ ಯುಕ್ತವಾದ ಆ ವನದಲ್ಲಿ ವಾಸಮಾಡುತ್ತಿರಲು, ಹದಿನಾಲ್ಕು ವರ್ಷಗಳು ಕಳೆದುಹೋದವು. ಅಷ್ಟು ಕಾಲವೂ ಅವನು ಪೂಜೆಯನ್ನಾಗಲೀ, ಜಪವನ್ನಾಗಲೀ, ಮಂತ್ರವನ್ನಾಗಲೀ ತಿಳಿಯದೆ ಸುಮ್ಮನೆ ಆ ಕಾಡಿನಲ್ಲಿ ಕಾಲಕಳೆಯುತ್ತಿದ್ದನು.

**ಜಾನಾತಿ ತಸ್ಯ ವಿತತಂ ವ್ರತಮೇವ ಲೋಕಃ**
**ಸತ್ಯಂ ವದತ್ಯಪಿ ಮುನಿಃ ಕಿಲ ನಾಮ ಜಾತಂ ।**
**ಜಾತಂ ಯಶಶ್ಚ ಸಕಲೇಷು ಜನೇಷು ಕಾಮಂ**
**ಸತ್ಯವ್ರತೋಽಯಮನಿಶಂ ನ ಮೃಷಾಭಿಭಾಷೀ ॥೨೨॥**

ಈ ಮುನಿಯು ನಿಜವನ್ನೇ ಹೇಳುತ್ತಾನೆ ಎಂದು ಅವನ ಸತ್ಯಪರತೆಯನ್ನು ಜನಗಳೆಲ್ಲಾ ತಿಳಿದಿದ್ದರು. ಅದರಿಂದ ಅವನಿಗೆ ಹಿಂದೆ ಹೇಳಿದಂತೆ ಸತ್ಯವ್ರತನು ಎಂದರೆ ನಿಜವನ್ನೇ ಹೇಳಬೇಕೆಂಬ ನಿಯಮವನ್ನು ಪಾಲಿಸುವವನು ಎಂದು ಹೆಸರು ಬಂದಿತು. ಈ ಉತಥ್ಯಮುನಿಯು ಯಾವಾಗಲೂ ಸತ್ಯವನ್ನೇ ಆಡತಕ್ಕವನು. ಎಂದೂ ಸುಳ್ಳನ್ನು ಹೇಳುವುದಿಲ್ಲವೆಂದು ಇವನ ಕೀರ್ತಿಯು ಎಲ್ಲ ಜನಗಳಲ್ಲಿಯೂ ಅತಿಶಯವಾಗಿ ಹರಡಿತು.

**ತತ್ರೈಕದಾ ತು ಮೃಗಯಾಂ ರಮಮಾಣ ಏವ**
**ಪ್ರಾಪ್ತೋ ನಿಷಾದನಿಶಠೋ ಧೃತಚಾಪಬಾಣಃ ।**

ಕ್ರೀಡನ್ವನೇಽತಿವಿಪುಲೇ ಯಮತುಲ್ಯದೇಹಃ
ಕ್ರೂರಾಕೃತಿರ್ಹನನಕರ್ಮಣಿ ಚಾತಿದಕ್ಷಃ ॥೨೩॥

ಹೀಗಿರಲು, ಒಂದು ದಿನ ಆ ಅತಿವಿಸ್ತಾರವಾದ ಅರಣ್ಯದಲ್ಲಿ ಯಮನಂತೆ ಕಪ್ಪಾದ ಮತ್ತು ಭಯಂಕರವಾದ ಶರೀರವುಳ್ಳ, ಮೃಗಗಳನ್ನು ಕೊಲ್ಲುವುದರಲ್ಲಿ ಸಮರ್ಥನಾದ, ದುಷ್ಟನಾದ ಬೇಡನೊಬ್ಬನು ಧನುರ್ಬಾಣಗಳನ್ನು ಹಿಡಿದುಕೊಂಡು ಬೇಟೆಯಾಡುತ್ತಾ ಅಲ್ಲಿಗೆ ಬಂದನು.

ತೇನಾತಿಕೃಷ್ಣೇನ ಶರೇಣ ವಿದ್ಧಃ
ಕೋಲಃ ಕಿರಾತೇನ ಧನುರ್ಧರೇಣ ।
ಪಲಾಯಮಾನೋ ಭಯವಿಹ್ವಲಶ್ಚ
ಮುನೇಃ ಸಮೀಪಂ ವಿದ್ರುತೋ ಜಗಾಮ ॥೨೪॥

ಧನುಸ್ಸನ್ನು ಹಿಡಿದಿರುವ ಆ ಕಿರಾತನು ಚನ್ನಾಗಿ ಎಳೆದು ಬಿಟ್ಟ ಬಾಣದಿಂದ ಹೊಡೆಯಲ್ಪಟ್ಟ ಒಂದು ವರಾಹವು ಹೆದರಿಕೆಯಿಂದ ಗಾಬರಿಗೊಂಡು ಓಡುತ್ತಾ ಆ ಉತಥ್ಯಮುನಿಯ ಸಮೀಪಕ್ಕೆ ಬಂದಿತು.

ವಿಕಂಪಮಾನೋ ರುಧಿರಾರ್ದ್ರದೇಹೋ
ಯದಾ ಜಗಾಮಾಶ್ರಮಮಂಡಲಂ ವೈ ।
ಕೋಲಸ್ತದಾತೀವ ದಯಾರ್ದ್ರಭಾವಂ
ಪ್ರಾಪ್ನೋನ್ಮುನಿಸ್ತತ್ರ ಸಮೀಕ್ಷ್ಯ ದೀನಂ ॥೨೫॥

ಹೀಗೆ ಆ ವರಾಹವು ರಕ್ತದಿಂದ ನೆನೆದಿರುವ ಶರೀರವುಳ್ಳದ್ದಾಗಿ ನಡುಗುತ್ತಾ ಆ ಮುನಿಯ ಹತ್ತಿರಕ್ಕೆ ಬಂದಾಗ ತುಂಬಾ ಕಷ್ಟದಲ್ಲಿರುವುದರಿಂದ ಮರುಕವನ್ನುಂಟುಮಾಡುತ್ತಿರುವ ಆ ವರಾಹವನ್ನು ನೋಡಿ ಆ ಉತಥ್ಯಮುನಿಯು ಅದರ ವಿಷಯದಲ್ಲಿ ಬಹಳ ದಯೆಯುಳ್ಳವನಾದನು.

ಅಗ್ರೇ ವ್ರಜಂತಂ ರುಧಿರಾರ್ದ್ರದೇಹಂ
ದೃಷ್ಟ್ವಾ ಮುನಿಃ ಸೂಕರಮಾಶು ವಿದ್ಧಂ ।
ದಯಾಭಿವೇಶಾದತಿಕಂಪಮಾನಃ
ಸಾರಸ್ವತಂ ಬೀಜಮುಥೋಚ್ಚಚಾರ ॥೨೬॥

ಬೇಡನಿಂದ ಹೊಡೆಯಲ್ಪಟ್ಟು ರಕ್ತದಿಂದ ನೆನೆದ ಶರೀರವುಳ್ಳದ್ದಾಗಿ ಮುಂದುಗಡೆಯೇ ಹೋಗುತ್ತಲಿರುವ ಆ ವರಾಹವನ್ನು ನೋಡಿ ಉತಥ್ಯಮುನಿಗೆ ಕೂಡಲೇ ಕರುಣೆಯ ಭಾವವು ಉಕ್ಕಿಬಂದುದರಿಂದ ಕಂಪಮಾನಶರೀರವುಳ್ಳವನಾಗಿ ಆ ಉತಥ್ಯಮುನಿಯು, ಆರ್ತರನ್ನು ನೋಡಿ ಮರುಗಿದವರು ಉಚ್ಚರಿಸುವ ಅನುಕರಣಶಬ್ದದಲ್ಲಿ ಏಕದೇಶವಾಗಿದ್ದರೂ, ಐ ಐ ಎಂಬ ಸರಸ್ವತೀದೇವಿಯ ಬೀಜಾಕ್ಷರವಾದ ಶಬ್ದವನ್ನು ಉಚ್ಚಾರಮಾಡಿದನು.

**ಅಜ್ಞಾತಪೂರ್ವಂ ಚ ತಥಾ ಶ್ರುತಂ ಚ**
**ದೈವಾನ್ಮುಖೇ ವೈ ಸಮುಪಾಗತಂ ಚ ।**
**ನ ಜ್ಞಾತವಾನ್ ಬೀಜಮಸೌ ವಿಮೂಢೋ**
**ಮಮಜ್ಜ ಶೋಕೇ ಸ ಮುನಿರ್ಮಹಾತ್ಮಾ ॥೨೭॥**

ಮೇಲೆ ಹೇಳಿದ ಬೀಜಾಕ್ಷರವನ್ನು ಆ ಮುನಿಯು ಈ ಮೊದಲು ತಿಳಿದೂ ಇರಲಿಲ್ಲ, ಕೇಳಿಯೂ ಇರಲಿಲ್ಲ. ಅದೃಷ್ಟಯೋಗದಿಂದಲೇ ಆಗ ಅದು ಅವನ ಮುಖದಲ್ಲಿ (ಬಾಯಿಯಲ್ಲಿ) ಬಂದಿತು. ಮೂಢನಾದ ಆ ಉತಥ್ಯನಾದರೋ ತಾನು ಉಚ್ಚರಿಸಿದುದು ಸರಸ್ವತಿಯ ಬೀಜಾಕ್ಷರಗಳೆಂದು ತಿಳಿಯಲೂ ಇಲ್ಲ. ಆದರೂ ಒಳ್ಳೆಯಸ್ವಭಾವವುಳ್ಳ ಆ ಮುನಿಯು ಆ ವರಾಹದ ವಿಷಯವಾಗಿ ವ್ಯಸನದಲ್ಲಿ ಮುಳುಗಿದನು.

**ಕೋಲಃ ಪ್ರವಿಶ್ಯಾಶ್ರಮಮಂಡಲಂ ತ-**
**ದ್ಗತೋ ನಿಕುಂಜೇ ಪ್ರವಿಲೀಯ ಗೂಢಂ ।**
**ಅಪ್ರಾಪ್ತಮಾರ್ಗೋ ದೃಢನಿರ್ವಿಣ್ಣಚೇತಾಃ**
**ಪ್ರವೇಪಮಾನಃ ಶರಪೀಡಿತತ್ವಾತ್ ॥೨೮॥**

ಅನಂತರದಲ್ಲಿ ಆ ವರಾಹವು ಈ ರೀತಿಯಾಗಿ ಆ ಆಶ್ರಮದ ಪ್ರದೇಶವನ್ನು ಹೊಕ್ಕು, ಬಾಣವು ಚುಚ್ಚಿಕೊಂಡಿದ್ದುದರಿಂದ ಮುಂದುಗಡೆಯನ್ನು ಕಾಣದೆ ನೋವಿನಿಂದ ನಡುಗುತ್ತಾ ಅಲ್ಲಿಯೇ ಹತ್ತಿರದಲ್ಲಿದ್ದ ಒಂದು ಪೊದರಿನಲ್ಲಿ ಕಾಣದಂತೆ ಮರೆಯಾಯಿತು.

**ತತಃ ಕ್ಷಣಾದಾಕರಣಾಂತಕೃಷ್ಟಂ**
**ಚಾಪಂ ದಧಾನೋಽತಿಕರಾಲದೇಹಃ ।**

ಪ್ರಾಪ್ತಸ್ತದಂತೇ ಸ ಚ ವ್ಯಗ್ರಮಾಣೋ
ನಿಷಾದರಾಜಃ ಕಿಲ ಕಾಲ ಏವ ॥೨೯॥

ಆ ಕೂಡಲೇ ಕಿವಿಯವರಿವಿಗೆ ಎಳೆದು ಧನುಸ್ಸನ್ನು ಹಿಡಿದಿರುವ ಅತಿಭಯಂಕರವಾದ ಶರೀರವುಳ್ಳ, ಬೇಡರೊಡೆಯನೊಬ್ಬನು ಆ ವರಾಹವನ್ನು ಹುಡುಕುತ್ತಾ ಯಮನಂತೆ ಆ ಮುನಿಯಿದ್ದ ಸ್ಥಳಕ್ಕೆ ಬಂದನು.

ದೃಷ್ಟ್ವಾ ಮುನಿಂ ತತ್ರ ಕುಶಾಸನೇ ಸ್ಥಿತಂ
ನಾಮ್ನಾ ತು ಸತ್ಯವ್ರತಮದ್ವಿತೀಯಂ ।
ವ್ಯಾಧಃ ಪ್ರಣಮ್ಯ ಪ್ರಮುಖೇ ಸ್ಥಿತೋಽಸೌ
ಪಪ್ರಚ್ಛ ಕೋಲಃ ಕ್ವ ಗತೋ ದ್ವಿಜೇಶ ॥೩೦॥

ಅಲ್ಲಿಗೆ ಬಂದು ಆ ಬೇಡನು ದರ್ಭಾಸನದಲ್ಲಿ ಕುಳಿತಿರುವ ಅಸಾಧಾರಣವಾದ ಸತ್ಯಪರತೆಯುಳ್ಳ, ಸತ್ಯವ್ರತನೆಂಬ ಹೆಸರಿನ ಆ ಮುನಿಯನ್ನು ನೋಡಿ ಅವನಿಗೆ ನಮಸ್ಕರಿಸಿ ಅವನೆದುರಿನಲ್ಲಿ ನಿಂತು ಓ ಬ್ರಾಹ್ಮಣೋತ್ತಮನೇ, ಆ ವರಾಹವು ಎಲ್ಲಿ ಹೋಯಿತು? ಎಂದು ಪ್ರಶ್ನಿಸಿದನು.

ಜಾನಾಮಿ ತೇಽಹಂ ಸುವ್ರತಂ ಪ್ರಸಿದ್ಧಂ
ತೇನಾದ್ಯ ಪೃಚ್ಛೇ ಮಮ ಬಾಣವಿದ್ಧಃ ।
ಕ್ಷುಧಾರ್ದಿತಂ ಮೇ ಸಕಲಂ ಕುಟುಂಬಂ
ಬಿಭರ್ತುಕಾಮಃ ಕಿಲ ಆಗತೋಽಸ್ಮಿ ॥೩೧॥

ಎಲ್ಲೆಡೆಯಲ್ಲಿಯೂ ಹರಡಿರುವ ನಿನ್ನ ಸತ್ಯಪರತೆಯ ಕೀರ್ತಿಯನ್ನು ನಾನೂ ತಿಳಿದಿರುತ್ತೇನೆ. ಆದುದರಿಂದ ನನ್ನ ಬಾಣದಿಂದ ಹೊಡೆಯಲ್ಪಟ್ಟ ಆ ವರಾಹವು ಎಲ್ಲಿ ಹೋಯಿತು ಎಂದು ಕೇಳುತ್ತೇನೆ. ಹಸಿವಿನಿಂದ ಬಳಲಿರುವ ನನ್ನ ಮನೆಯವರನ್ನು ಕಾಪಾಡಲು ಬೇಟೆಗಾಗಿ ಬಂದಿರುತ್ತೇನೆ.

ವೃತ್ತಿರ್ಮಮೈಷಾ ವಿಹಿತಾ ವಿಧಾತ್ರಾ
ನಾನ್ಯಾಸ್ತಿ ವಿಪ್ರೇಂದ್ರ ಋತಂ ಬ್ರವೀಮಿ ।
ಭರ್ತವ್ಯಮೇವೇಹ ಕುಟುಂಬಮಂಜಸಾ
ಕೇನಾಪ್ಯುಪಾಯೇನ ಶುಭಾಶುಭೇನ ॥೩೨॥

ಬೇಡನಾದ ನನಗೆ ಬೇಟೆಯಿಂದಲೇ ಜೀವನವನ್ನು ಮಾಡುವಂತೆ ಬ್ರಹ್ಮನೇ ವಿಧಿಸಿರುತ್ತಾನೆ. ಇದರಲ್ಲಿ ಸಂಶಯವಿಲ್ಲ. ನಾನು ಸತ್ಯವಾಗಿ ಹೇಳುತ್ತೇನೆ. ಓ ಬ್ರಾಹ್ಮಣೋತ್ತಮನೇ, ಕುಟುಂಬಪೋಷಣವನ್ನು ಒಳ್ಳೆಯ ಮಾರ್ಗದಿಂದಾಗಲೀ, ಕೆಟ್ಟಮಾರ್ಗದಿಂದಾಗಲೀ ಯಾವ ಉಪಾಯದಿಂದಲಾದರೂ ಮಾಡಲೇ ಬೇಕಾಗಿರುತ್ತದೆ.

ಸತ್ಯಂ ಬ್ರವೀತ್ವದ್ಯ ಸತ್ಯವ್ರತೋಽಸಿ
ಕ್ಷುಧಾತುರೋ ವರ್ತತೇ ಪೋಷ್ಯವರ್ಗಃ ।
ಕ್ವಾಸೌ ಗತಃ ಸೂಕರೋ ಬಾಣವಿದ್ಧಃ
ಪೃಚ್ಛಾಮ್ಯಹಂ ವಾಡವ ಬ್ರೂಹಿ ತೂರ್ಣಂ ॥೩೩॥

ಓ ಬ್ರಾಹ್ಮಣನೇ, ನೀನಾವಾಗಲೂ ನಿಜವನ್ನೇ ಹೇಳತಕ್ಕ ನಿಯಮವುಳ್ಳವನು. ಈಗಲೂ ನಿಜವನ್ನು ಹೇಳು. ನನ್ನ ಕುಟುಂಬವು ಹಸಿವಿನಿಂದ ಬಳಲಿರುತ್ತದೆ. ನನ್ನ ಬಾಣದಿಂದ ಹೊಡೆಯಲ್ಪಟ್ಟ ಆ ವರಾಹವು ಎಲ್ಲಿ ಹೋಯಿತು ಎಂದು ಕೇಳುತ್ತಿದ್ದೇನೆ. ಜಾಗ್ರತೆಯಾಗಿ ಹೇಳು.

ತೇನೇತಿ ಪೃಷ್ಟಃ ಸ ಮುನಿರ್ಮಹಾತ್ಮಾ
ವಿತರ್ಕಮಗ್ನಃ ಪ್ರಬಭೂವ ಕಾಮಂ ।
ಸತ್ಯವ್ರತಂ ಮೇಽದ್ಯ ಭವೇನ್ನ ಭಗ್ನಂ
ನ ದೃಷ್ಟ ಇತ್ಯುಚ್ಚರಿತೇನ ಕಿಂ ವೈ ॥೩೪॥

ಆ ಬೇಡನಿಂದ ಹೀಗೆ ಕೇಳಲ್ಪಟ್ಟು, ದೊಡ್ಡ ಸ್ವಭಾವವುಳ್ಳ ಆ ಮುನಿಯು ತುಂಬಾ ಸಂಶಯಕ್ಕೆ ಸಿಕ್ಕಿಬಿದ್ದು ಯೋಚಿಸತೊಡಗಿದನು. ಈಗ ನಾನು ವರಾಹವನ್ನು ನೋಡಿಲ್ಲವೆಂದರೆ ನನ್ನ ಸತ್ಯಪರತೆಯು ನಷ್ಟವಾಗುವುದಲ್ಲವೇ?

ಗತೋಽತ್ರ ಕೋಲಃ ಶರವಿದ್ಧದೇಹಃ
ಕಥಂ ಬ್ರವೀಮ್ಯದ್ಯ ಮೃಷಾಽಮೃಷಾ ವಾ ।
ಕ್ಷುಧಾರ್ದಿತೋಽಯಂ ಪರಿಪೃಚ್ಛತೀವ
ದೃಷ್ಟ್ವಾ ಹನಿಷ್ಯತ್ಯಪಿ ಸೂಕರಂ ವೈ ॥೩೫॥

ಬಾಣದಿಂದ ಹೊಡೆಯಲ್ಪಟ್ಟ ಆ ವರಾಹವು ನನ್ನ ಎದುರಿಗೇ ಇಲ್ಲಿ ಓಡಿ ಹೋಯಿತು. ಆದುದರಿಂದ ನಾನು ನೋಡಲಿಲ್ಲವೆಂದು ಸುಳ್ಳನ್ನು ಹೇಗೆ ಹೇಳಲಿ?

ನಿಜವನ್ನು ಹೇಳಿದರೆ, ಹಸಿವಿನಿಂದ ಪೀಡಿತನಾದ ಈ ಬೇಡನು ಆ ವರಾಹವನ್ನು ಕೊಲ್ಲದೆ ಇರಲಾರನು. ಅದರಿಂದ ನನಗೆ ಹಿಂಸಾದೋಷವು ತಪ್ಪದು.

ಸತ್ಯಂ ನ ಸತ್ಯಂ ಖಲು ಯತ್ರ ಹಿಂಸಾ
ದಯಾನ್ವಿತಂ ಚಾನೃತಮೇವ ಸತ್ಯಂ ।
ಹಿತಂ ನರಾಣಾಂ ಭವತೀಹ ಯೇನ
ತದೇವ ಸತ್ಯಂ ನ ತಥಾಽನ್ಯಥೈವ ॥೩೬॥

ನಿಜವನ್ನು ಹೇಳುವುದರಿಂದ ಎಲ್ಲಿ ಹಿಂಸೆಯು ಆಗುತ್ತದೆಯೋ ಅದು ನಿಜ ವಲ್ಲವು. ಹಿಂಸೆಯು ತಪ್ಪುವಂತೆ ದಯೆಯಿಂದ ಕೂಡಿ ಸುಳ್ಳನ್ನು ಹೇಳಿದರೂ ಅದು ಸತ್ಯವೆಂದೇ ಹೇಳಲ್ಪಡುವುದು. ಆದುದರಿಂದ ಜನಗಳಿಗೆ ಅಥವಾ ಪ್ರಾಣಿಗಳಿಗೆ ಯಾವುದನ್ನು ಹೇಳಿದರೆ ಒಳ್ಳೆಯದಾಗುವುದೋ ಅದೇ ಸತ್ಯವು ಮತ್ತು ಸತ್ಯಪರ ತೆಯು. ಈ ರೀತಿಯಲ್ಲದ್ದು ಸತ್ಯವಾಗುವದಿಲ್ಲವು.

ಹಿತಂ ಕಥಂ ಸ್ಯಾದುಭಯೋರ್ವಿರುದ್ಧಯೋ
ಸ್ತದುತ್ತರಂ ಕಿಂ ನ ಯಥಾ ಮೃಷಾವಚಃ ।
ವಿಚಾರಯನ್ನಾಪ್ತವಧರ್ಮಸಂಕಟೇ
ನ ಪ್ರಾಪ ವಕ್ತುಂ ವಚನಂ ಯಥೋಚಿತಂ ॥೩೭॥

ಆದುದರಿಂದ ಪರಸ್ಪರವಿರುದ್ಧವಾದ ಈ ಬೇಡ ಮತ್ತು ವರಾಹಗಳಿಗೆ ಇಬ್ಬ ರಿಗೂ ಹಿತವು ಎಂದರೆ ಒಳ್ಳೆಯದು ಹೇಗೆ ಆದೀತು? ಒಳ್ಳೆಯದಾಗುವಂತೆ ಯಾವ ಉತ್ತರವನ್ನು ಹೇಳಲಿ? ನನ್ನ ಮಾತೂ ಸುಳ್ಳಾಗದೇ ಇರುವುದು ಹೇಗೆ? ಹೀಗೆಂದು ಆಲೋಚಿಸುತ್ತಾ, ಓ ಜನುದಗ್ನಿಯೇ, ಆ ಮುನಿಯು ಈ ರೀತಿಯಾಗಿ ಧರ್ಮ ಸಂಕಟದ ತೊಡಕಿನಲ್ಲಿ ಬಿದ್ದು ಎರಡಕ್ಕೂ ಯೋಗ್ಯವಾದ ಉತ್ತರವೊಂದನ್ನು ಮನ ಗಾಣಲು ಸಮರ್ಥನಾಗಲಿಲ್ಲ.

ಬಾಣಾಹತಂ ವೀಕ್ಷ್ಯ ದಯಾನ್ವಿತಂ ಚ
ಕೋಲಂ ತದಂತೇ ಸಮುದಾಹೃತಂ ವಚಃ ।
ತೇನ ಪ್ರಸನ್ನಾ ನಿಜಬೀಜತಃ ಶಿವಾ
ವಿದ್ಯಾಂ ದುರಾಪಾಂ ಪ್ರದದೌ ಚ ತಸ್ಮೈ ॥೩೮॥

ಆ ಮುನಿಯು ಮೊದಲು ಬಾಣದಿಂದ ಹೊಡೆಯಲ್ಪಟ್ಟ ವರಾಹವನ್ನು ನೋಡಿ ದಯೆಯಿಂದ ಕೂಡಿದ ಮಾತನ್ನು ಎಂದರೆ ದಯೆಯಿಂದ ಅಕಸ್ಮಾತ್ತಾಗಿ "ಐ ಐ" ಎಂಬ ಸರಸ್ವತೀದೇವಿಯ ಬೀಜಾಕ್ಷರವನ್ನುಚ್ಚರಿಸಿದ್ದನು. ಅದರಿಂದ ಸಂತುಷ್ಟಳಾಗಿ ಮಂಗಳಕರಳಾದ ಆ ದೇವಿಯು ಆ ಮುನಿಗೆ ಈಗ ಇತರರಿಂದ ಸಾಧಾರಣವಾಗಿ ಪಡೆಯಲು ಅಸಾಧ್ಯವಾದ ವಿದ್ಯೆಯನ್ನೂ ತಕ್ಕ ತಿಳಿವಳಿಕೆಯನ್ನೂ ಅನುಗ್ರಹಿಸಿದಳು.

**ಬೀಜೋಚ್ಚಾರಣತೋ ದೇವ್ಯಾ ವಿದ್ಯಾ ಪ್ರಸ್ಫುರಿತಾಖಿಲಾ ।**
**ವಾಲ್ಮೀಕೇಶ್ಚ ಯಥಾ ಪೂರ್ವಂ ತಥಾ ಸ ಹ್ಯಭವತ್ಕವಿಃ ॥೩೯॥**

ಸರಸ್ವತೀದೇವಿಯ ಬೀಜಮಂತ್ರೋಚ್ಚಾರಣೆಯಿಂದ ಎಲ್ಲ ವಿದ್ಯೆಗಳೂ ಆ ಮುನಿಗೆ ಹೊಳೆದುವು. ಹಿಂದೆ ವಾಲ್ಮೀಕಿಯು ಹೇಗೆ ರಾಮನಾಮೋಚ್ಚಾರಣೆಯಿಂದ ಕವಿಯಾದನೋ, ಹಾಗೆಯೇ ಈ ಮುನಿಯೂ ದೇವಿಯ "ಐ ಐ" ಎಂಬ ಬೀಜಾಕ್ಷರದ ಉಚ್ಚಾರಣೆಯಿಂದ ಕವಿಯಾದನು.

**ತಮುವಾಚ ದ್ವಿಜೋ ವ್ಯಾಧಂ ಸಂಮುಖಸ್ಥಂ ಧನುರ್ಧರಂ ।**
**ಸತ್ಯಕಾಮಸ್ತು ಧರ್ಮಾತ್ಮಾ ಶ್ಲೋಕಮೇಕಂ ದಯಾಪರಃ ॥೪೦॥**

ಆಗ ಮುನಿಯು ತನ್ನ ಎದುರಿಗೆ ಧನುಸ್ಸನ್ನು ಹಿಡಿದು ನಿಂತಿರುವ ಬೇಡನನ್ನು ಕುರಿತು ನಿಜವನ್ನೇ ಹೇಳಲು ಅಪೇಕ್ಷಿಸುವ ಮತ್ತು ಅಹಿಂಸಾ, ಸತ್ಯರೂಪವಾದ ಧರ್ಮಪರನಾದ ಆ ಉತಥ್ಯನೆಂಬ ಬ್ರಾಹ್ಮಣನು ಕರುಣೆಯಿಂದ ಕೂಡಿದವನಾಗಿ ಶ್ಲೋಕವೊಂದನ್ನು ಹೇಳಿದನು.

**ಯಾ ಪಶ್ಯತಿ ನ ಸಾ ಬ್ರೂತೇ ಯಾ ಬ್ರೂತೇ ಸಾ ನ ಪಶ್ಯತಿ ।**
**ಅಹೋ ವ್ಯಾಧ ಸ್ವಕಾರ್ಯಾರ್ಥಿನ್ ಕಿಂ ಪೃಚ್ಛಸಿ ಪುನಃ ಪುನಃ ॥೪೧॥**

ಯಾವ ಕಣ್ಣುಗಳು ನೋಡಬಲ್ಲವೋ ಅವುಗಳು ಹೇಳಲಾರವು; ಯಾವ ನಾಲಿಗೆಯು ಹೇಳಬಲ್ಲುದೋ ಅದು ನೋಡಲಾರದು; ಆದುದರಿಂದ ವರಾಹವನ್ನು ನೋಡದ ನಾಲಿಗೆಯಿಂದ ಅದು ಎಲ್ಲಿಗೆ ಹೋಯಿತೆಂದು ನಾನು ಹೇಗೆ ಹೇಳಲಿ? ಬೇಟೆಯನ್ನು ಅಪೇಕ್ಷಿಸುವ, ಹಿಂಸೆಯಿಂದಲೂ ಸ್ವಾರ್ಥವನ್ನು ಸಾಧಿಸಲು ಬಯಸುವ, ಎಲೈ ಬೇಡನೇ, ಸುಮ್ಮನೆ ಬಾರಿಬಾರಿಗೂ ಏಕೆ ಕೇಳುವೆ?

**ಇತ್ಯುಕ್ತಸ್ತು ತದಾ ತೇನ ಗತೋಽಸೌ ಪಶುಹಾ ಪುನಃ ।**
**ನಿರಾಶಃ ಸೂಕರೇ ತಸ್ಮಿನ್ ಪರಾವೃತ್ತೋ ನಿಜಾಲಯೇ ॥೪೨॥**

ಹೀಗೆ ಆ ಮುನಿಯು ಹೇಳಲು, ಮೃಗಗಳನ್ನು ಕೊಲ್ಲುವುದೇ ವೃತ್ತಿಯಾಗಿ ವುಳ್ಳ ಆ ಬೇಡನು ಆಗ ಜ್ಞಾನಿಯಾದ ಈ ಸಾಧುವನ್ನು ಹೆಚ್ಚಾಗಿ ಪ್ರಶ್ನೆಮಾಡಿದರೆ ಫಲವಿಲ್ಲವೆಂದು ತಿಳಿದು ಆ ವರಾಹದಲ್ಲಿ ಆಸೆಯನ್ನು ಬಿಟ್ಟು ತನ್ನ ಮನೆಗೆ ಹಿಂತಿರುಗಿ ತೆರಳಿದನು.

**ಬ್ರಾಹ್ಮಣಸ್ತು ಕವಿರ್ಜಾತಃ ಪ್ರಾಚೇತಸ ಇವಾಪರಃ ।**
**ಪ್ರಸಿದ್ಧಃ ಸರ್ವಲೋಕೇಷು ನಾಮ್ನಾ ಸತ್ಯವ್ರತೋ ದ್ವಿಜಃ ॥೪೩॥**

ಮುಂದೆ ಆ ಉತಥ್ಯಮುನಿಯು ಬೀಜಾಕ್ಷರದ ಉಚ್ಚಾರಣೆಯ ಮಹಿಮೆ ಯಿಂದ, ಎರಡನೆಯ ವಾಲ್ಮೀಕಿಯಂತೆ ಕವಿಯಾದನು. ಸತ್ಯಪರನಾದ ಅವನ ಹೆಸರು ಎಲ್ಲೆಡೆಯಲ್ಲಿಯೂ ಹರಡಿತು.

**ಸಾರಸ್ವತಂ ತತೋ ಬೀಜಂ ಜಜಾಪ ವಿಧಿಪೂರ್ವಕಂ ।**
**ಪಂಡಿತಶ್ಚಾತಿವಿಖ್ಯಾತೋ ದ್ವಿಜೋಽಸೌ ಧರಣೀತಲೇ ॥೪೪॥**

ತಾನು ಉಚ್ಚರಿಸಿದುದು ಸರಸ್ವತೀದೇವಿಯ ಬೀಜಾಕ್ಷರವೆಂದು ಆಗ ತಿಳಿದ ಮೇಲೆ, ಆ ಮುನಿಯು ಅದನ್ನು ಕ್ರಮವರಿತು ಜಪಮಾಡಿದನು. ಅದರಿಂದ ಆ ಬ್ರಾಹ್ಮಣನು ದೊಡ್ಡ ಜ್ಞಾನಿಯೂ, ಪ್ರಪಂಚದಲ್ಲಿ ತುಂಬ ಪ್ರಸಿದ್ಧನೂ ಆದನು.

**ಪ್ರತಿಪರ್ವಸು ಗಾಯಂತಿ ಬ್ರಾಹ್ಮಣಾ ಯದ್ಯಶಃ ಸದಾ ।**
**ಆಖ್ಯಾನಂ ಚಾತಿವಿಸ್ತೀರ್ಣಂ ಸ್ತುವಂತಿ ಮುನಯಃ ಕಿಲ ॥೪೫॥**

ಹುಣ್ಣಿಮೆಯೇ ಮೊದಲಾದ ಎಲ್ಲಾ ಪರ್ವದಿವಸಗಳಲ್ಲಿಯೂ ಬ್ರಾಹ್ಮಣರು ಆ ಉತಥ್ಯಮುನಿಯ ಕೀರ್ತಿಯನ್ನು ಹೊಗಳಿ ಹಾಡುತ್ತಾರೆ. ಅವನ ಕಥೆಯನ್ನು ಮುನಿಗಳು ಶ್ಲಾಘಿಸುತ್ತಾರೆ.

**ತಚ್ಛ್ರುತ್ವಾ ಸದನಂ ತಸ್ಯ ಸಮಾಗಮ್ಯ ತದಾಶ್ರಮೇ ।**
**ಯೇನ ತ್ಯಕ್ತಃ ಪುರಾ ತೇನ ಗೃಹಂ ನೀತೋಽತಿಮಾನಿತಃ ॥೪೬॥**

ರಾಜಲಕ್ಷ್ಮಿಯಿಂದ ಕೂಡಿರುವ ಶೂರರಾದ ರಾಜರನ್ನೂ, ಎಲ್ಲ ಜನಗಳಿಗೂ ಬೇಕಾಗಿರುವ, ತನ್ನ ಜನರ ವಿಯೋಗವನ್ನು ಹೊಂದದಿರುವ, ಸಮಸ್ತ ಪುರುಷಲಕ್ಷಣಗಳಿಂದ ಕೂಡಿರುವ, ಉತ್ತಮ ಪುರುಷರನ್ನು ಕಂಡಾಗ ಮೇಲೆ ಹೇಳಿದಂತೆಯೇ ಊಹಿಸಬೇಕು.

**ವ್ಯತಿರೇಕಾನ್ವಯಾಭ್ಯಾಂ ಚ ವಿಚೇತವ್ಯಂ ವಿಚಕ್ಷಣೈಃ ।**
**ಏಭಿರ್ನ ಪೂಜಿತಾ ದೇವೀ ಸರ್ವಾರ್ಥಫಲದಾ ಶಿವಾ ॥೫೫॥**
**ಸಮಾರಾಧಿತಾ ಚ ತಥಾ ನೃಭಿರೇಭಿಃ ಸದಾಂಬಿಕಾ ।**

ಮನುಷ್ಯರ ಸ್ವಭಾವ ಮತ್ತು ಸ್ಥಿತಿಗತಿಗಳನ್ನು ನೋಡಿ, ಇವರು ಎಲ್ಲ ಇಷ್ಟಾರ್ಥಗಳನ್ನೂ ಕೊಡುವ ದೇವಿಯನ್ನು ಪೂಜಿಸಲಿಲ್ಲವು. ಆದುದರಿಂದ ಇವರು ದುಃಖಿತರಾಗಿರುತ್ತಾರೆ. ಮತ್ತೆ ಕೆಲವರು ಮಂಗಳಕರಳಾದ ದೇವಿಯನ್ನು ಯಾವಾಗಲೂ ಪೂಜಿಸಿರುವರು. ಆದುದರಿಂದ ಇವರು ಸುಖಿಗಳಾಗಿರುತ್ತಾರೆ ಎಂದು ಅನ್ವಯ ಮತ್ತು ವ್ಯತಿರೇಕದ ನ್ಯಾಯಯುಕ್ತಿಗಳಿಂದ ಕಾರ್ಯಕಾರಣ ಸಂಬಂಧವನ್ನು ವಿಮರ್ಶೆಯಿಂದ ಊಹಿಸಿ ನಿಶ್ಚಯಿಸಬೇಕು.

**ಯತೋಽಮೀ ಸುಖಿನಃ ಸರ್ವೇ ಸಂಸಾರೇಽಸ್ಮಿನ್ನ ಸಂಶಯಃ ॥೫೬॥**

ಯಾವುದರಿಂದ ಸರಸ್ವತಿಯ ಆರಾಧನೆ ಎಂಬ ಧರ್ಮಾಚರಣೆಯಿಂದ, ಎಲ್ಲರೂ ಈ ಸಂಸಾರದಲ್ಲಿ ನಿಶ್ಚಯವಾಗಿಯೂ ಸುಖವನ್ನು ಹೊಂದುವರು ಎಂದೂ ನಿಶ್ಚಯಿಸಬೇಕು.

॥ ವ್ಯಾಸ ಉವಾಚ ॥

**ಇತಿ ರಾಜನ್ ಶ್ರುತಂ ತತ್ರ ಮಯಾ ಮುನಿಸಮಾಗಮೇ ।**
**ಲೋಮಶಸ್ಯ ಮುಖಾತ್ಕಾಮಂ ದೇವೀಮಾಹಾತ್ಮ್ಯಮುತ್ತಮಂ ॥೫೭॥**

ವ್ಯಾಸಮುನಿಯು ಹೇಳಿದನು—ಓ ರಾಜನೇ, ಹೀಗೆ ನಾನು ಆ ಋಷಿಗಳ ಸಭೆಯಲ್ಲಿ ಲೋಮಶಮುನಿಯ ಮುಖದಿಂದ ಶ್ರೇಷ್ಠವಾದ ಆ ದೇವಿಯ ಮಹಿಮೆಯನ್ನು ಚನ್ನಾಗಿ ಕೇಳಿ ತಿಳಿದಿರುತ್ತೇನೆ.

**ಇತಿ ಸಂಚಿಂತ್ಯ ರಾಜೇಂದ್ರ ಕರ್ತವ್ಯಂ ಚ ಸದಾರ್ಚನಂ ।**
**ಭಕ್ತ್ಯಾ ಪರಮಯಾ ದೇವ್ಯಾಃ ಪ್ರೀತ್ಯಾ ಚ ಪುರುಷರ್ಷಭ ॥೫೮॥**

ಮನುಷ್ಯರಲ್ಲಿ ಶ್ರೇಷ್ಠನಾದ ಓ ಮಹಾರಾಜನೇ, ಆದುದರಿಂದ ಹಿಂದೆ ಹೇಳಿದಂತೆ ಸರಸ್ವತೀದೇವಿಯ ಮಹಿಮೆಯನ್ನು ಆಲೋಚಿಸಿ ಯಾವಾಗಲೂ ಉತ್ತಮವಾದ ಭಕ್ತಿಯಿಂದಲೂ, ಆದರದಿಂದಲೂ ಆ ದೇವಿಯ ಪೂಜೆಯನ್ನು ಮಾಡತಕ್ಕದ್ದು.

ಆದಿಶಕ್ತಿಸ್ವರೂಪಳಾದ ಮಹಾಲಕ್ಷ್ಮಿಯಿಂದ, ಮಹಾಕಾಳಿಯೂ, ಮಹಾಸರಸ್ವತಿಯೂ, ಉದ್ಭವಿಸಿದರೆಂದೂ, ಅವರಿಂದ ಬ್ರಹ್ಮ, ವಿಷ್ಣು, ರುದ್ರರೂ, ಅವರ ಪತ್ನಿಯರಾದ ಲಕ್ಷ್ಮೀ, ಸರಸ್ವತೀ, ಗೌರೀ, ದೇವಿಯರು ಉಂಟಾದರೆಂದೂ, ದುರ್ಗಾಸಪ್ತಶತಿಯ ಪ್ರಾಧಾನಿಕ ರಹಸ್ಯಾಧ್ಯಾಯದಲ್ಲಿ ಹೇಳಿರುವದನ್ನು ಜ್ಞಾಪಿಸಿಕೊಳ್ಳಬೇಕು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಏಕಾದಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.



ಆಮೇಲೆ ತನ್ನ ಮಗನಾದ ಉತಥ್ಯನ ಮಹಿಮೆಯನ್ನು ಕೇಳಿ, ಹಿಂದೆ ಆ ಉತಥ್ಯನನ್ನು ಮನೆಯಿಂದ ಹೊರಡಿಸಿದ್ದ ಅವನ ತಂದೆಯೇ ಅವನ ಆಶ್ರಮಕ್ಕೆ ಬಂದು ಅವನನ್ನು ಬಹಳವಾಗಿ ಗೌರವಿಸಿ ತನ್ನ ಮನೆಗೆ ಕರೆದುಕೊಂಡು ಹೋದನು.

**ತಸ್ಮಾದ್ರಾಜನ್ ಸದಾ ಸೇವ್ಯಾ ಪೂಜನೀಯಾ ಚ ಭಕ್ತಿತಃ ।**
**ಆದಿಶಕ್ತಿಃ ಪರಾದೇವೀ ಜಗತಾಂ ಕಾರಣಂ ಹಿ ಸಾ       ॥೪೭॥**

ಆದುದರಿಂದ ಓ ರಾಜನೇ, ಜಗತ್ತಿಗೆ ಕಾರಣಳಾದ ಮತ್ತು ತುಂಬ ಶ್ರೇಷ್ಠಳಾದ ಆ ಆದಿಶಕ್ತಿಯನ್ನು ಯಾವಾಗಲೂ ಭಕ್ತಿಯಿಂದ ಸೇವಿಸಬೇಕು ಮತ್ತು ಅರ್ಚಿಸಬೇಕು.  ಆ ಆದಿಶಕ್ತಿದೇವಿಯಿಂದಲೇ ಸರಸ್ವತಿಯೂ ಉದ್ಭವಿಸಿದಳು.

**ತಸ್ಯಾ ಯಜ್ಞಂ ಮಹಾರಾಜ ಕುರು ವೇದವಿಧಾನತಃ ।**
**ಸರ್ವಕಾಮಪ್ರದಂ ನಿತ್ಯಂ ನಿಶ್ಚಯಂ ಕಥಿತಂ ಪುರಾ       ॥೪೮॥**

ಓ ಮಹಾರಾಜನೇ, ಆ ದೇವಿಯ ಅನುಗ್ರಹಕ್ಕಾಗಿ, ಎಲ್ಲ ಇಷ್ಟಾರ್ಥಗಳನ್ನೂ ಕೊಡುವ ದೇವೀಯಾಗವೊಂದನ್ನು ವೇದದಲ್ಲಿ ಹೇಳಿರುವಂತೆ ಮಾಡುವವನಾಗು. ಹಾಗೆ ಮಾಡಿದರೆ ಎಲ್ಲ ಇಷ್ಟಾರ್ಥಗಳೂ ನೆರವೇರುವುವೆಂದು ಹೇಳಿರುತ್ತದೆ.

**ಸ್ಮೃತಾ ಸಂಪೂಜಿತಾ ಭಕ್ತ್ಯಾ ಧ್ಯಾತಾ ಚೋಚ್ಚಾರಿತಾ ಸ್ತುತಾ ।**
**ದದಾತಿ ವಾಂಛಿತಾನರ್ಥಾನ್ ಕಾಮದಾ ತೇನ ಕೀರ್ತ್ಯತೇ      ॥೪೯॥**

ಆ ದೇವಿಯನ್ನು ಸ್ಮರಣೆಮಾಡಿದರಾಗಲೀ, ಪೂಜಿಸಿದರಾಗಲೀ, ಅಥವಾ ಧ್ಯಾನಮಾಡಿದರಾಗಲೀ, ಅವಳ ಮಂತ್ರದ ಬೀಜಾಕ್ಷರವನ್ನುಚ್ಚಾರಮಾಡಿದರಾಗಲೀ, ಆ ದೇವಿಯು ಇಷ್ಟಾರ್ಥಗಳನ್ನು ಕೊಡುವಳು. ಆದುದರಿಂದಲೇ ಅವಳನ್ನು ಎಲ್ಲರೂ ಕಾಮದಾ ಎಂದರೆ ಇಷ್ಟಾರ್ಥವನ್ನು ಕೊಡುವವಳು ಎಂದು ಹೊಗಳುತ್ತಾರೆ.

**ಅನುಮಾನಮಿದಂ ರಾಜನ್ ಕರ್ತವ್ಯಂ ಸರ್ವಥಾ ಬುಧೈಃ ।**
**ದೃಷ್ಟ್ವಾ ರೋಗಯುತಾನ್ ದೀನಾನ್ ಕ್ಷುಧಿತಾನ್ನಿರ್ಧನಾನ್ ಶಠಾನ್॥೫೦॥**

ಓ ರಾಜನೇ, ತಿಳಿವಳಿಕೆಯುಳ್ಳವರು ಯಾವಾಗಲೂ ಮುಂದೆ ಹೇಳುವಂತೆ ಊಹಿಸಬೇಕು—ಖಾಯಿಲೆಯಿಂದ ಕೂಡಿದವರನ್ನೂ, ಅಶಕ್ತರನ್ನೂ ಹಸಿದಿರುವವರನ್ನೂ, ದರಿದ್ರರನ್ನೂ, ಮೂರ್ಖರನ್ನೂ, ನೋಡಿದಾಗ ಇವರುಗಳು ಹಿಂದಿನ

ಜನ್ಮದಲ್ಲಿ ಎಲ್ಲ ಕೋರಿಕೆಗಳನ್ನೂ ಅನುಗ್ರಹಿಸುವ ದೇವಿಯನ್ನು ಭಕ್ತಿಯಿಂದ ಪೂಜಿಸಿ ಧ್ಯಾನಿಸಲಿಲ್ಲವೆಂದು ಊಹಿಸಬೇಕು.

**ಜನಾನಾರ್ತಾಂಸ್ತಥಾ ಮೂರ್ಖಾನ್ ಪೀಡಿತಾನ್ವೈರಿಭಿಃ ಸದಾ ।**
**ದಾಸಾನಾಜ್ಞಾಕರಾನ್ ಕ್ಷುದ್ರಾನ್ವಿಕಲಾನ್ವಿಹ್ವಲಾನಥ ॥೫೧॥**

ಮತ್ತು ದುಃಖಿತರಾದವರನ್ನೂ, ಶತ್ರುಗಳಿಂದ ಪೀಡಿಸಲ್ಪಟ್ಟಿರುವವರನ್ನೂ, ಅಪ್ಪಣೆಯನ್ನು ನಡೆಸುವ ಸೇವಕರನ್ನೂ, ಅಲ್ಪಜನರನ್ನೂ, ಅಂಗಹೀನರಾದವರನ್ನೂ, ಮೂಢರಾದ ಜನಗಳನ್ನೂ ಕಂಡಾಗ ಇವರುಗಳೂ ದೇವಿಯನ್ನು ಪೂಜಿಸಲಿಲ್ಲನೆಂದು ಊಹಿಸಬೇಕು.

**ಅತೃಪ್ತಾನ್ ಭೋಜನೇ ಭೋಗೇ ಸದಾರ್ತಾನಜಿತೇಂದ್ರಿಯಾನ್ ।**
**ತೃಷ್ಣಾಧಿಕಾನಶಕ್ತಾಂಶ್ಚ ಸದಾಧಿಪರಿಪೀಡಿತಾನ್ ॥೫೨॥**

ಭೋಜನಾದಿಗಳಲ್ಲಿಯೂ, ಸುಖಾನುಭವದಲ್ಲಿಯೂ, ತೃಪ್ತಿಹೊಂದದೆ, ಯಾವಾಗಲೂ ದುಃಖಿತರಾದ, ಇಂದ್ರಿಯನಿಗ್ರಹವಿಲ್ಲದ ಮತ್ತು ಅತಿ ಆಸೆಯುಳ್ಳವರಾದ, ಶಕ್ತಿಯಿಲ್ಲದ, ಯಾವಾಗಲೂ ವ್ಯಸನದಿಂದ ಕೃಶರಾವ ಜನಗಳನ್ನು ಕಂಡಾಗ ಮೇಲೆ ಹೇಳಿದಂತೆಯೇ ಇವರೂ ಸರಸ್ವತೀದೇವಿಯನ್ನು ಪೂಜಿಸಿ ಧ್ಯಾನಿಸಲಿಲ್ಲವೆಂದು ತಿಳಿಯಬೇಕು.

**ತಥಾ ವಿಭವಸಂಪನ್ನಾನ್ ಪುತ್ರಪೌತ್ರವಿವರ್ಧನಾನ್ ।**
**ಪುಷ್ಟದೇಹಾಂಶ್ಚ ಸಂಭೋಗೈಃ ಸಂಯುತಾನ್ವೇದವಾದಿನಃ ॥೫೩॥**

ಹಾಗೆಯೇ ಐಶ್ವರ್ಯವುಳ್ಳ, ಮಕ್ಕಳು, ಮೊಮ್ಮಕ್ಕಳು ಮುಂತಾದ ಸಂತಾನಾಭಿವೃದ್ಧಿಯಿಂದ ಕೂಡಿರುವ, ಪುಷ್ಟವಾದ ಶರೀರವುಳ್ಳ ಸಕಲ ಭೋಗಸಾಧನಗಳಿಂದ ಕೂಡಿ ಭೋಗಾನುಭವವನ್ನು ಮಾಡುತ್ತಿರುವ, ವೇಧಾಭ್ಯಾಸನಿರತರಾದ ಜನರನ್ನು ಕಂಡಾಗ, ಇಂಥವರು ಇಷ್ಟಾರ್ಥಗಳನ್ನು ಅನುಗ್ರಹಿಸಬಲ್ಲ ಸರಸ್ವತೀ ದೇವಿಯನ್ನು ಆರಾಧಿಸಿದ್ದಾರೆಂದು ಊಹಿಸಿ ತಿಳಿಯಬೇಕು.

**ರಾಜಲಕ್ಷ್ಮ್ಯಾ ಯುತಾನ್ ಶೂರಾನ್ವಶೀಕೃತಜನಾನಥ ।**
**ಸ್ವಜನೈರವಿಯುಕ್ತಾಂಶ್ಚ ಸರ್ವಲಕ್ಷಣಲಕ್ಷಿತಾನ್ ॥೫೪॥**

ರಾಜಲಕ್ಷ್ಮಿಯಿಂದ ಕೂಡಿರುವ ಶೂರರಾದ ರಾಜರನ್ನೂ, ಎಲ್ಲ ಜನಗಳಿಗೂ ಬೇಕಾಗಿರುವ, ತನ್ನ ಜನರ ವಿಯೋಗವನ್ನು ಹೊಂದದಿರುವ, ಸಮಸ್ತ ಪುರುಷಲಕ್ಷಣ ಗಳಿಂದ ಕೂಡಿರುವ, ಉತ್ತಮ ಪುರುಷರನ್ನು ಕಂಡಾಗ ಮೇಲೆ ಹೇಳಿದಂತೆಯೇ ಊಹಿಸಬೇಕು.

**ವ್ಯತಿರೇಕಾನ್ವಯಾಭ್ಯಾಂ ಚ ವಿಚೇತವ್ಯಂ ವಿಚಕ್ಷಣೈಃ ।**
**ಏಭಿರ್ನ ಪೂಜಿತಾ ದೇವೀ ಸರ್ವಾರ್ಥಫಲದಾ ಶಿವಾ ॥೫೫॥**
**ಸಮಾರಾಧಿತಾ ಚ ತಥಾ ನೃಭಿರೇಭಿಃ ಸದಾಂಬಿಕಾ ।**

ಮನುಷ್ಯರ ಸ್ವಭಾವ ಮತ್ತು ಸ್ಥಿತಿಗತಿಗಳನ್ನು ನೋಡಿ, ಇವರು ಎಲ್ಲ ಇಷ್ಟಾರ್ಥಗಳನ್ನೂ ಕೊಡುವ ದೇವಿಯನ್ನು ಪೂಜಿಸಲಿಲ್ಲವು. ಆದುದರಿಂದ ಇವರು ದುಃಖಿತರಾಗಿರುತ್ತಾರೆ. ಮತ್ತೆ ಕೆಲವರು ಮಂಗಳಕರಳಾದ ದೇವಿಯನ್ನು ಯಾವಾ ಗಲೂ ಪೂಜಿಸಿರುವರು. ಆದುದರಿಂದ ಇವರು ಸುಖಿಗಳಾಗಿರುತ್ತಾರೆ ಎಂದು ಅನ್ವಯ ಮತ್ತು ವ್ಯತಿರೇಕದ ನ್ಯಾಯಯುಕ್ತಿಗಳಿಂದ ಕಾರ್ಯಕಾರಣ ಸಂಬಂಧ ವನ್ನು ವಿಮರ್ಶೆಯಿಂದ ಊಹಿಸಿ ನಿಶ್ಚಯಿಸಬೇಕು.

**ಯತೋಽಮೀ ಸುಖಿನಃ ಸರ್ವೇ ಸಂಸಾರೇಽಸ್ಮಿನ್ನ ಸಂಶಯಃ ॥೫೬॥**

ಯಾವುದರಿಂದ ಸರಸ್ವತಿಯ ಆರಾಧನೆ ಎಂಬ ಧರ್ಮಾಚರಣೆಯಿಂದ, ಎಲ್ಲರೂ ಈ ಸಂಸಾರದಲ್ಲಿ ನಿಶ್ಚಯವಾಗಿಯೂ ಸುಖವನ್ನು ಹೊಂದುವರು ಎಂದೂ ನಿಶ್ಚಯಿಸಬೇಕು.

|| ವ್ಯಾಸ ಉವಾಚ ||

**ಇತಿ ರಾಜನ್ ಶ್ರುತಂ ತತ್ರ ಮಯಾ ಮುನಿಸಮಾಗಮೇ ।**
**ಲೋಮಶಸ್ಯ ಮುಖಾತ್ಕಾಮಂ ದೇವೀಮಾಹಾತ್ಮ್ಯಮುತ್ತಮಂ ॥೫೭॥**

ವ್ಯಾಸಮುನಿಯು ಹೇಳಿದನು—ಓ ರಾಜನೇ, ಹೀಗೆ ನಾನು ಆ ಋಷಿಗಳ ಸಭೆಯಲ್ಲಿ ಲೋಮಶಮುನಿಯ ಮುಖದಿಂದ ಶ್ರೇಷ್ಠವಾದ ಆ ದೇವಿಯ ಮಹಿಮೆ ಯನ್ನು ಚನ್ನಾಗಿ ಕೇಳಿ ತಿಳಿದಿರುತ್ತೇನೆ.

**ಇತಿ ಸಂಚಿಂತ್ಯ ರಾಜೇಂದ್ರ ಕರ್ತವ್ಯಂ ಚ ಸದಾರ್ಚನಂ ।**
**ಭಕ್ತ್ಯಾ ಪರಮಯಾ ದೇವ್ಯಾಃ ಪ್ರೀತ್ಯಾ ಚ ಪುರುಷರ್ಷಭ ॥೫೮॥**

ಮನುಷ್ಯರಲ್ಲಿ ಶ್ರೇಷ್ಠನಾದ ಓ ಮಹಾರಾಜನೇ, ಆದುದರಿಂದ ಹಿಂದೆ ಹೇಳಿದಂತೆ ಸರಸ್ವತೀದೇವಿಯ ಮಹಿಮೆಯನ್ನು ಆಲೋಚಿಸಿ ಯಾವಾಗಲೂ ಉತ್ತಮವಾದ ಭಕ್ತಿಯಿಂದಲೂ, ಆದರದಿಂದಲೂ ಆ ದೇವಿಯ ಪೂಜೆಯನ್ನು ಮಾಡತಕ್ಕದ್ದು.

ಆದಿಶಕ್ತಿಸ್ವರೂಪಳಾದ ಮಹಾಲಕ್ಷ್ಮಿಯಿಂದ, ಮಹಾಕಾಳಿಯೂ, ಮಹಾಸರಸ್ವತಿಯೂ, ಉದ್ಭವಿಸಿದರೆಂದೂ, ಅವರಿಂದ ಬ್ರಹ್ಮ, ವಿಷ್ಣು, ರುದ್ರರೂ, ಅವರ ಪತ್ನಿಯರಾದ ಲಕ್ಷ್ಮೀ, ಸರಸ್ವತೀ, ಗೌರೀ, ದೇವಿಯರು ಉಂಟಾದರೆಂದೂ, ದುರ್ಗಾಸಪ್ತಶತಿಯ ಪ್ರಾಧಾನಿಕ ರಹಸ್ಯಾಧ್ಯಾಯದಲ್ಲಿ ಹೇಳಿರುವದನ್ನು ಜ್ಞಾಪಿಸಿಕೊಳ್ಳಬೇಕು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಏಕಾದಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### || ದ್ವಾದಶೋಽಧ್ಯಾಯಃ ||

### ಹನ್ನೆರಡನೆಯ ಅಧ್ಯಾಯವು

|| ರಾಜೋವಾಚ ||

**ವದ ಯಜ್ಞವಿಧಿಂ ಸಮ್ಯಗ್ದೇವ್ಯಾಸ್ತಸ್ಯಾಃ ಸಮಂತತಃ ।**
**ಶ್ರುತ್ವಾ ಕರೋಮ್ಯಹಂ ಸ್ವಾಮಿನ್ಯಥಾಶಕ್ತಿಹ್ಯತಂದ್ರಿತಃ ||೧||**

ಜನಮೇಜಯರಾಜನು ವ್ಯಾಸಮುನಿಯನ್ನು ಕುರಿತು ಹೀಗೆ ಹೇಳಿದನು—ಎಲೈ ಸ್ವಾಮಿಯಾದ ವ್ಯಾಸಮುನಿಯೇ, ದೇವಿಯ ಯಾಗವನ್ನು ಆಚರಿಸುವ ಕ್ರಮವನ್ನೆಲ್ಲಾ ಚನ್ನಾಗಿ ವಿವರಿಸಿ ಹೇಳುವವನಾಗು. ನೀನು ಹೇಳಿದುದನ್ನು ಕೇಳಿಕೊಂಡು ನನ್ನ ಶಕ್ತಿಯಿರುವಷ್ಟುಮಟ್ಟಿಗೂ ಉದಾಸೀನತೆಯಿಲ್ಲದೆ ಆ ಯಾಗವನ್ನು ಮಾಡುತ್ತೇನೆ.

**ಪೂಜಾವಿಧಿಂ ಚ ಮಂತ್ರಾಂಶ್ಚ ಹೋಮದ್ರವ್ಯಮಸಂಶಯಂ ।**
**ಬ್ರಾಹ್ಮಣಾಃ ಕತಿಸಂಖ್ಯಾಶ್ಚ ದಕ್ಷಿಣಾಶ್ಚ ತಥಾ ಪುನಃ ||೨||**

ಅಲ್ಲದೆ ಆ ದೇವಿಯ ಪೂಜೆಯ ಕ್ರಮವನ್ನೂ, ಜಪಿಸತಕ್ಕ ಮಂತ್ರಗಳನ್ನೂ, ಹೋಮಕ್ಕೆ ಉಕ್ತವಾದ ಹವಿಸ್ಸನ್ನೂ ಸಂಶಯ ಬರದಂತೆ ಹೇಳು. ಅದಕ್ಕೆ ಬ್ರಾಹ್ಮಣರೆಷ್ಟುಮಂದಿ ಬೇಕಾಗುತ್ತಾರೆ, ದಕ್ಷಿಣೆಯನ್ನು ಎಷ್ಟು ಕೊಡಬೇಕು, ಎಲ್ಲವನ್ನೂ ಹೇಳು.

|| ವ್ಯಾಸ ಉವಾಚ ||

**ಶೃಣು ರಾಜನ್ ಪ್ರವಕ್ಷ್ಯಾಮಿ ದೇವ್ಯಾ ಯಜ್ಞಂ ವಿಧಾನತಃ ।**
**ತ್ರಿವಿಧಂ ತು ಸದಾ ಜ್ಞೇಯಂ ವಿಧಿದೃಷ್ಟೇನ ಕರ್ಮಣಾ ||೩||**

ವ್ಯಾಸಮುನಿಯು ಹೇಳಿದನು—ಓ ರಾಜನೇ, ದೇವಿಯ ಯಾಗವನ್ನು ಶಾಸ್ತ್ರದಲ್ಲಿ ಹೇಳಿರುವಂತೆಯೇ ಹೇಳುತ್ತೇನೆ, ಕೇಳು. ಶಾಸ್ತ್ರದಲ್ಲಿ ಹೇಳಿರತಕ್ಕ ಈ ಯಜ್ಞವು ಮೂರು ವಿಧವಾಗಿರುವುದು.

**ಸಾತ್ತ್ವಿಕಂ ರಾಜಸಂ ಚೈವ ತಾಮಸಂ ಚ ತಥಾಪರಂ ।**
**ಮುನೀನಾಂ ಸಾತ್ತ್ವಿಕಂ ಪ್ರೋಕ್ತಂ ನೃಪಾಣಾಂ ರಾಜಸಂ ಸ್ಮೃತಂ ॥೪॥**

ಸಾತ್ತ್ವಿಕ, ರಾಜಸ, ತಾಮಸವೆಂದು ಮೇಲೆ ಹೇಳಿದಂತೆ ಯಾಗವು ಮೂರು ವಿಧವು. ಅದರಲ್ಲಿ ಋಷಿಗಳು ಮಾಡತಕ್ಕ ಕರ್ಮವು ಸಾತ್ತ್ವಿಕವಾಗಿರಬೇಕು. ರಾಜರು ಮಾಡತಕ್ಕ ಕರ್ಮವು ರಾಜಸವಾಗಿರಬೇಕು.

**ತಾಮಸಂ ರಾಕ್ಷಸಾನಾಂ ವೈ ಜ್ಞಾನಿನಾಂ ತು ಗುಣೋಜ್ಝಿತಂ ।**
**ವಿಮುಕ್ತಾನಾಂ ಜ್ಞಾನಮಯಂ ವಿಸ್ತರಾತ್ಪ್ರಬ್ರವೀಮಿ ತೇ ॥೫॥**

ರಾಕ್ಷಸರು ಮಾಡತಕ್ಕ ಕರ್ಮವು ತಾಮಸವು. ತಿಳಿವಳಿಕೆಯುಳ್ಳ ಜ್ಞಾನಿಗಳು ಫಲಾಪೇಕ್ಷೆಯಿಲ್ಲದೆ ಮಾಡತಕ್ಕ ಕರ್ಮವು ಸತ್ತ್ವರಜಸ್ತಮಸ್ಸೆಂಬ ಮೂರು ಗುಣಗಳ ಸಂಬಂಧವಿಲ್ಲದ್ದಾಗಿರಬೇಕು. ಜೀವನ್ಮುಕ್ತರು ಮಾಡತಕ್ಕ ಕರ್ಮವು ಜ್ಞಾನರೂಪವಾದುದು. ಈ ಕರ್ಮಗಳ ಸ್ವರೂಪವನ್ನು ನಿನಗೆ ಇನ್ನೂ ವಿಶದವಾಗಿ ತಿಳಿಸುತ್ತೇನೆ.

**ದೇಶಃ ಕಾಲಸ್ತಥಾ ದ್ರವ್ಯಂ ಮಂತ್ರಾಶ್ಚ ಬ್ರಾಹ್ಮಣಾಸ್ತಥಾ ।**
**ಶ್ರದ್ಧಾ ಚ ಸಾತ್ತ್ವಿಕೀ ಯತ್ರ ತಂ ಯಜ್ಞಂ ಸಾತ್ತ್ವಿಕಂ ವಿದುಃ ॥೬॥**

ಕಾಶಿಯೇ ಮೊದಲಾದ ಸಾತ್ತ್ವಿಕದೇಶಗಳಲ್ಲಿ, ಉತ್ತರಾಯಣಾದಿ ಸಾತ್ತ್ವಿಕ ಕಾಲಗಳಲ್ಲಿ, ನ್ಯಾಯವಾಗಿ ಸಂಪಾದಿಸಿದ ದ್ರವ್ಯದಿಂದ ಶ್ರೋತ್ರಿಯರಾದ ಬ್ರಾಹ್ಮಣರ ಸಹಾಯದಿಂದ ವೈದಿಕಮಂತ್ರಪುರಸ್ಸರವಾಗಿ ನಿಷ್ಕಾಮವಾದ ಮನೋಭಾವದಿಂದ ಕೂಡಿ ಮಾಡುವ ಯಾಗವು ಸಾತ್ತ್ವಿಕ ಯಾಗವೆಂದು ಜ್ಞಾನಿಗಳು ತಿಳಿಯುತ್ತಾರೆ.

**ದ್ರವ್ಯಶುದ್ಧಿಃ ಕ್ರಿಯಾಶುದ್ಧಿರ್ಮಂತ್ರಶುದ್ಧಿಶ್ಚ ಭೂಮಿಪ ।**
**ಭವೇದ್ಯದಿ ತದಾ ಪೂರ್ಣಂ ಫಲಂ ಭವತಿ ನಾನ್ಯಥಾ ॥೭॥**

ಓ ದೊರೆಯೇ, ಈ ಯಾಗಕ್ಕಾಗಿ ಉಪಯೋಗಿಸುವ ದ್ರವ್ಯವು ನ್ಯಾಯಾರ್ಜಿತವಾಗಿರಬೇಕು. ನಾವು ಮಾಡುವ ಕರ್ಮಗಳು ರಾಗಾದಿಗಳಿಂದ ಕಲುಷಿತವಾಗದೆ ಶುದ್ಧವಾಗಿಯೂ ಫಲಾಪೇಕ್ಷೆಯಿಲ್ಲದೆಯೂ ಇರಬೇಕು. ಮಂತ್ರಗಳು ಸ್ವರವರ್ಣಮುಂತಾದವುಗಳಲ್ಲಿ ಲೋಪವಿಲ್ಲದೆ ಸದ್ಬ್ರಾಹ್ಮಣರಿಂದ ಉಚ್ಚರಿಸಲ್ಪಟ್ಟು ಶುದ್ಧವಾಗಿರಬೇಕು. ಹೀಗೆ ಆಚರಿಸಿದರೆ ಅಂತಹ ಕರ್ಮದಿಂದ ಪೂರ್ಣಫಲವು ದೊರೆಯುವುದು. ಇಲ್ಲದಿದ್ದರೆ ಫಲವು ಲಭಿಸದು.

**ಅನ್ಯಾಯೋಪಾರ್ಜಿತೇನೈವ ದ್ರವ್ಯೇಣ ಸುಕೃತಂ ಕೃತಂ ।**
**ನ ಕೀರ್ತಿರಿಹ ಲೋಕೇ ಚ ಪರಲೋಕೇ ನ ತತ್ಫಲಂ ॥೮॥**

ಅನ್ಯಾಯದಿಂದ ಸಂಪಾದಿಸಿದ ದ್ರವ್ಯದಿಂದ ಪುಣ್ಯಕರ್ಮಗಳನ್ನು ಮಾಡಿದರೆ ಅದರಿಂದ ಈ ಲೋಕದಲ್ಲಿ ಕೀರ್ತಿಯಾಗಲೀ, ಪರಲೋಕದಲ್ಲಿ ಉತ್ತಮಫಲವಾಗಲೀ ದೊರೆಯುವುದಿಲ್ಲ.

**ತಸ್ಮಾನ್ನ್ಯಾಯಾರ್ಜಿತೇನೈವ ಕರ್ತವ್ಯಂ ಸುಕೃತಂ ಸದಾ ।**
**ಯಶಸೇ ಪರಲೋಕಾಯ ಭವತ್ಯೇವ ಸುಖಾಯ ಚ ॥೯॥**

ಆದುದರಿಂದ ಸರಿಯಾದ ಮಾರ್ಗದಿಂದಲೇ ಸಂಪಾದಿಸಿದ ಹಣವನ್ನು ವಿನಿಯೋಗಿಸಿ ಸತ್ಕರ್ಮವನ್ನು ಮಾಡಿದರೆ ಅದರಿಂದ ಇಹದಲ್ಲಿ ಕೀರ್ತಿಯೂ, ಪರಲೋಕದಲ್ಲಿ ಸದ್ಗತಿಯೂ ಸುಖವೂ ಉಂಟಾಗುತ್ತವೆ.

**ಪ್ರತ್ಯಕ್ಷಂ ತವ ರಾಜೇಂದ್ರ ಪಾಂಡವೈಸ್ತು ಮುಖಃ ಕೃತಃ ।**
**ರಾಜಸೂಯಃ ಕ್ರತುವರಃ ಸಮಾಪ್ತವರದಕ್ಷಿಣಃ ॥೧೦॥**

ಓ ರಾಜಶ್ರೇಷ್ಠನೇ, ನೀನೇ ನೋಡಿರುತ್ತೀಯೆ. ಪಾಂಡವರು ರಾಜಸೂಯವೆಂಬ ಉತ್ತಮವಾದ ಯಾಗವನ್ನು ತುಂಬ ದಕ್ಷಿಣೆಯನ್ನು ದಾನಮಾಡಿ ನೆರವೇರಿಸಿದರು.

**ಯತ್ರ ಸಾಕ್ಷಾದ್ಧರಿಃ ಕೃಷ್ಣೋ ಯಾದವೇಂದ್ರೋ ಮಹಾಮನಾಃ ।**
**ಬ್ರಾಹ್ಮಣಾಃ ಪೂರ್ಣವಿದ್ಯಾಶ್ಚ ಭಾರದ್ವಾಜಾದಯಸ್ತಥಾ ॥೧೧॥**

ಅಷ್ಟೇ ಅಲ್ಲದೆ ಆ ಯಜ್ಞದಲ್ಲಿ ಸಾಕ್ಷಾನ್ನಾರಾಯಣನ ಅವತಾರವಾದ, ಯಾದವರಿಗೆಲ್ಲಾ ಒಡೆಯನಾದ ಮತ್ತು ದೊಡ್ಡ ಸ್ವಭಾವವುಳ್ಳ ಶ್ರೀಕೃಷ್ಣನೇ ಸಭಾಧ್ಯಕ್ಷನಾಗಿದ್ದನು. ಭರದ್ವಾಜಋಷಿಯೇ ಮುಂತಾದ ತುಂಬ ವಿದ್ಯಾವಂತರಾದ ಬ್ರಾಹ್ಮಣರೇ ಋತ್ವಿಜರಾಗಿದ್ದರು.

**ಕೃತ್ವಾ ಯಜ್ಞಂ ಸುಸಂಪೂರ್ಣಂ ಮಾಸಮಾತ್ರೇಣ ಪಾಂಡವೈಃ ।**
**ಪ್ರಾಪ್ತಂ ಮಹತ್ತರಂ ಕಷ್ಟಂ ವನವಾಸಶ್ಚ ದಾರುಣಃ ॥೧೨॥**

ಯಾಗವನ್ನು ಮುಗಿಸಿ ಒಂದು ತಿಂಗಳಾಗುವಷ್ಟರಲ್ಲಿಯೇ ಪಾಂಡವರಿಗೆ ದೊಡ್ಡ ಕಷ್ಟವು ಬಂದಿತು. ಅವರು ಭಯಂಕರವಾದ ಹನ್ನೆರಡು ವರ್ಷ ಪರ್ಯಂತದ ವನವಾಸವನ್ನೂ, ಒಂದು ವರ್ಷದ ಅಜ್ಞಾತವಾಸವನ್ನೂ ಅನುಭವಿಸಬೇಕಾಯಿತು.

**ಪೀಡನಂ ಚೈವ ಪಾಂಚಾಲ್ಯಾಸ್ತಥಾ ದ್ಯೂತೇ ಪರಾಜಯಃ ।**
**ವನವಾಸೋ ಮಹತ್ಕಷ್ಟಂ ಕ್ವ ಗತಂ ಮಖಜಂ ಫಲಂ ॥೧೩॥**

ಇದರ ಜೊತೆಗೆ ಪಗಡೆಯಾಟದಲ್ಲಿ ಸೋಲಾಗಿ ರಾಜ್ಯವನ್ನೆಲ್ಲಾ ಕಳೆದುಕೊಂಡುದಾಯಿತು. ಅಲ್ಲದೆ ದ್ರೌಪದಿಗೆ ವಸ್ತ್ರಾಪಹರಣದ ಪ್ರಯತ್ನರೂಪವಾದ ಅವಮಾನದ ಕಷ್ಟವೊದಗಿತು. ಮುಂದೆ ಹನ್ನೆರಡು ವರ್ಷಗಳ ಕಾಲ ಕಾಡಿನಲ್ಲಿ ವಾಸವು ಪ್ರಾಪ್ತವಾಯಿತು. ಇಷ್ಟೆಲ್ಲಾ ಕಷ್ಟ ಬಂದಿತೇ ವಿನಾ ಆ ರಾಜಸೂಯ ಯಾಗದ ಒಳ್ಳೆಯದಾದ ಫಲವು ಮಾತ್ರ ಎಲ್ಲಿ ಹೋಯಿತೋ ಗೊತ್ತಾಗಲಿಲ್ಲವು.

**ದಾಸತ್ವಂ ಚ ವಿರಾಟಸ್ಯ ಕೃತಂ ಸರ್ವೈರ್ಮಹಾತ್ಮಭಿಃ ।**
**ಕೀಚಕೇನ ಪರಿಕ್ಲಿಷ್ಟಾ ದ್ರೌಪದೀ ಚ ಪ್ರಮದ್ವರಾ ॥೧೪॥**

ಇಷ್ಟೇ ಅಲ್ಲದೆ, ಅಜ್ಞಾತವಾಸದಲ್ಲಿ ಒಂದು ವರ್ಷ ವಿರಾಟರಾಜನ ಅರಮನೆಯಲ್ಲಿ ದೊಡ್ಡಯೋಗ್ಯತೆಯುಳ್ಳವರಾದ ಆ ಪಾಂಡವರು ಐವರೂ ಆಳುಗಳಹಾಗೆ ಸೇವೆಯನ್ನೂ ಮಾಡಿದರು. ಅಲ್ಲಿಯೂ ಉತ್ತಮಸ್ತ್ರೀಯಾದ ದ್ರೌಪದಿಯನ್ನು ಕೀಚಕನು ತೊಂದರೆಗೊಳಿಸಿದನು.

**ಆಶೀರ್ವಾದಾ ದ್ವಿಜಾತೀನಾಂ ಕ್ವ ಗತಾಃ ಶುದ್ಧಚೇತಸಾಂ ।**
**ಭಕ್ತಿರ್ವಾ ವಾಸುದೇವಸ್ಯ ಕ್ವ ಗತಾ ತತ್ರ ಸಂಕಟೇ ॥೧೫॥**

ನಿರ್ಮಲವಾದ ಅಂತಃಕರಣವುಳ್ಳ ಬ್ರಾಹ್ಮಣರ ಆಶೀರ್ವಾದಗಳೆಲ್ಲವೂ ಎಲ್ಲಿ ಹೋದುವೋ ? ಶ್ರೀಕೃಷ್ಣನಲ್ಲಿರತಕ್ಕ ಪಾಂಡವರ ಭಕ್ತಿಯಾದರೂ ಆ ಕಷ್ಟದ, ಧರ್ಮಸಂಕಟದ ಸಮಯದಲ್ಲಿ ಎಲ್ಲಿ ಹೋಯಿತೋ, ತಿಳಿಯದಾಯಿತು.

**ನ ರಕ್ಷಿತಾ ತದಾ ಬಾಲಾ ಕೇನಾಪಿ ದ್ರುಪದಾತ್ಮಜಾ ।**
**ಪ್ರಾಪ್ತಕೇಶಗ್ರಹಾಕಾಲೇ ಸಾಧ್ವೀ ಚ ವರವರ್ಣಿನೀ ॥೧೬॥**

ಆಗ ತುಂಬಿದ ಸಭೆಯಲ್ಲಿ ದ್ರೌಪದಿಯ ಮುಂದಲೆಯನ್ನು ಹಿಡಿದು ದುಶ್ಶಾಸನನು ಜಗ್ಗುತ್ತಿರಲಾಗಿ ಪತಿವ್ರತೆಯಾದ ಮತ್ತು ಉತ್ತಮಸ್ತ್ರೀಯಾದ ದ್ರೌಪದಿಯನ್ನು ಯಾರೂ ರಕ್ಷಿಸಲಿಲ್ಲವು.

**ಕಿಮತ್ರ ಚಿಂತನೀಯಂ ವೈ ಧರ್ಮವೈಗುಣ್ಯಕಾರಣಂ ।**
**ಕೇಶವೇ ಸತಿ ದೇವೇಶೇ ಧರ್ಮಪುತ್ರೇ ಯುಧಿಷ್ಠಿರೇ ॥೧೭॥**

ದೇವತೆಗಳಿಗೂ ಒಡೆಯನಾದ ಶ್ರೀಕೃಷ್ಣನೇ ಅಧ್ಯಕ್ಷನಾಗಿರುವಾಗಲೂ ಧರ್ಮರಾಜನ ಮಗನಾದ ಮತ್ತು ಧರ್ಮದ ಮೂರ್ತಿಯಾದ ಯುಧಿಷ್ಠಿರನೇ ಯಜಮಾನನಾಗಿರುವಾಗಲೂ, ಯಜ್ಞವಾದ ಮೇಲೆ ಅನರ್ಥವು ಬಂದೊದಗಿತು. ಆದುದರಿಂದ ಆ ಯಜ್ಞದಲ್ಲಿ ಕರ್ಮವು ಸರಿಯಾಗಿ ನಡೆಯಲಿಲ್ಲವೆಂದೇ ಊಹಿಸಬೇಕು. ಅಂತಹ ಧರ್ಮಲೋಪಕ್ಕೆ ಕಾರಣವೇನಿರಬಹುದು ?

**ಭವಿತವ್ಯಮಿತಿ ಪ್ರೋಕ್ತೇ ನಿಷ್ಫಲಃ ಸ್ಯಾತ್ತದಾಗಮಃ ।**
**ವೇದಮಂತ್ರಾಸ್ತಥಾನ್ಯೇ ವೈ ವಿತಥಾಃ ಸ್ಯುರಸಂಶಯಂ ॥೧೮॥**

ಹಾಗಲ್ಲವು. ಕರ್ಮದಲ್ಲಿ ಗುಣಲೋಪವು ಇಲ್ಲದಿದ್ದರೂ ಪಾಂಡವರ ಅದೃಷ್ಟವೇ ಹಾಗಿತ್ತು. ಅದರಿಂದ ಹಾಗಾಗಬೇಕಾಯಿತು, ಎನ್ನುವುದಾದರೆ ಮನುಷ್ಯ ಪ್ರಯತ್ನದ ಧರ್ಮಾಚರಣೆಗೆ ಏನೂ ಬೆಲೆಯಿಲ್ಲದೆ ಹೋಗಿ ಅದೃಷ್ಟಕ್ಕೇ ಬೆಲೆ ಕೊಟ್ಟರೆ, ಸುಖಕ್ಕೆ ಸಾಧನವಾದ ಧರ್ಮವನ್ನೂ ಉಪಾಯವನ್ನೂ ಬೋಧಿಸುವ ಶಾಸ್ತ್ರವು ವ್ಯರ್ಥವಾದೀತು ! ಹಾಗೆಯೇ ವೇದಮಂತ್ರಗಳೂ ಪ್ರಯೋಜನವಿಲ್ಲದೆಯೇ ಹೋಗುವುವು !

**ಸಾಧನಂ ನಿಷ್ಫಲಂ ಸರ್ವಮುಪಾಯಶ್ಚ ನಿರರ್ಥಕಃ ।**
**ಭವಿತವ್ಯಂ ಭವತ್ಯೇವ ವಚನೇ ಪ್ರತಿಪಾದಕೇ ॥೧೯॥**

ಮತ್ತು, ಆಗಬೇಕಾದುದು ಅವನವನ ಅದೃಷ್ಟದಂತೆ ತಾನಾಗಿ ಆಗುತ್ತದೆ ಎಂದು ಹೇಳುವುದಾದರೆ, ಆಗಬೇಕಾದ ಕೆಲಸಕ್ಕಾಗಿ ಮಾಡುವ ಸಾಧನಗಳೂ, ಉಪಾಯಗಳೂ ಎಲ್ಲವೂ ಪ್ರಯೋಜನವಿಲ್ಲದೆಯೇ ಹೋಗುವುವು. ತಾನಾಗಿ ಆಗುವುದರಲ್ಲಿ ಉಪಾಯ ಮತ್ತು ಸಾಧನಗಳೇತಕ್ಕೆ ? ಎಂಬ ವಾದವು ತಲೆ ಎತ್ತುವುದು.

**ಆಗಮೋಽಪ್ಯರ್ಥವಾದಃ ಸ್ಯಾತ್ಕ್ರಿಯಾಃ ಸರ್ವಾ ನಿರರ್ಥಕಾಃ ।**
**ಸ್ವರ್ಗಾರ್ಥಂ ಚ ತಪೋ ವ್ಯರ್ಥಂ ವರ್ಣಧರ್ಮಶ್ಚ ವೈ ತಥಾ ॥೨೦॥**

ಅಲ್ಲದೆ, ವೇದವೆಲ್ಲವೂ ತಾನು ಬೋಧಿಸುತ್ತಿರುವ ಧರ್ಮಾಚರಣೆಯ ವಿಧಿಯಲ್ಲಿ ತಾತ್ಪರ್ಯವಿಲ್ಲದ್ದಾದೀತು. ಆಗ ಅದರಲ್ಲಿ ಹೇಳಿದ ಕರ್ಮಗಳೆಲ್ಲವೂ ಪ್ರಯೋಜನವಿಲ್ಲದವುಗಳಾಗುವುವು. ಸ್ವರ್ಗವನ್ನು ಪಡೆಯಲು ತಪಸ್ಸನ್ನಾಚರಿಸುವುದೂ ವ್ಯರ್ಥವೇ ಆಗುವುದು. ಅದೃಷ್ಟವಿದ್ದರೆ ಸ್ವರ್ಗವು ಸಿಕ್ಕುವುದು. ಸುಮ್ಮನೆ ತಪಸ್ಸೇಕೆ ಎಂದು ವಾದವು ತಲೆ ಎತ್ತುವುದು. ಹಾಗೆಯೇ ಆಯಾಯ ಜನರ ಗುಣಕರ್ಮ ಜಾತಿಗಳಿಗನುಗುಣವಾಗಿ ವಿಹಿತವಾಗಿರುವ ವರ್ಣಾಶ್ರಮಧರ್ಮಗಳ ವ್ಯವಸ್ಥೆಗೂ ಬೆಲೆಯಿಲ್ಲದೆ ಹೋಗುವುದು.

**ಸರ್ವಂ ಪ್ರಮಾಣಂ ವ್ಯರ್ಥಂ ಸ್ಯಾದ್ಭವಿತವ್ಯೇ ಕೃತೇ ಹೃದಿ ।**
**ಉಭಯಂ ಚಾಪಿ ಮಂತವ್ಯಂ ದೈವಂ ಚೋಪಾಯ ಏವ ಚ ॥೨೧॥**

ಅದೃಷ್ಟವೇ ಮುಖ್ಯವೆಂದು ಮನಸ್ಸಿನಲ್ಲಿ ನಿಶ್ಚಯಿಸುವುದಾದರೆ, ಇಷ್ಟಾರ್ಥಸಿದ್ಧಿಗೋಸ್ಕರವಾಗಿರುವ ವೇದಶಾಸ್ತ್ರ ಮುಂತಾದ ಎಲ್ಲ ಪ್ರಮಾಣಗಳೂ, ಅವುಗಳಲ್ಲಿ ಹೇಳಿರುವ ಉಪಾಯಗಳೂ ವ್ಯರ್ಥವಾಗುವುವು. ಅದು ಸರಿಯಲ್ಲವು. ಆದುದರಿಂದ, ಅದೃಷ್ಟ ಮತ್ತು ಪುರುಷನ ಧರ್ಮಾಚರಣೆ ಎಂಬ ಉಪಾಯ ಇವೆರಡೂ ಇಷ್ಟಾರ್ಥಸಿದ್ಧಿಗೆ ಕಾರಣಗಳು ಎಂದು ತಿಳಿದುಕೊಳ್ಳಬೇಕು.

**ಕೃತೇ ಕರ್ಮಣಿ ಚೇತ್ಸಿದ್ಧಿರ್ವಿಪರೀತಾ ಯದಾ ಭವೇತ್ ।**
**ವೈಗುಣ್ಯಂ ಕಲ್ಪನೀಯಂ ಸ್ಯಾತ್ಪ್ರಾಜ್ಞೈಃ ಪಂಡಿತಮೌಲಿಭಿಃ ॥೨೨॥**

ಕರ್ಮವನ್ನು ಮಾಡಿದ ಮೇಲೆಯೂ ಅದಕ್ಕೆ ಸರಿಯಾದ ಫಲವಾಗದೆ ವಿರುದ್ಧವಾದ ಫಲವಾದರೆ, ಆಗ ಮಾಡಿದ ಕರ್ಮವು ಸರಿಯಾಗಿ ಆಗಿಲ್ಲವೆಂದು ತುಂಬ ತಿಳಿವಳಿಕೆಯುಳ್ಳ ಪಂಡಿತೋತ್ತಮರು ಊಹಿಸಬೇಕು.

**ತತ್ಕರ್ಮ ಬಹುಧಾ ಪ್ರೋಕ್ತಂ ವಿದ್ವದ್ಭಿಃ ಕರ್ಮಕಾರಿಭಿಃ ।**
**ಕರ್ತೃಭೇದಾನ್ಮಂತ್ರಭೇದಾದ್ದ್ರವ್ಯಭೇದಾತ್ತಥಾ ಪುನಃ ॥೨೩॥**

ಏಕೆಂದರೆ, ಅಧರ್ಮಾಚರಣೆಯಲ್ಲಿ ಕರ್ಮವನ್ನಾಚರಿಸುವವರು, ಮಾಡ ತಕ್ಕವರ ಮನೋಭಾವ, ಇಚ್ಛಾ, ಉದ್ದೇಶ ಮುಂತಾದ ಗುಣಗಳ ಭೇದದಿಂದಲೂ ಅದಕ್ಕನುಗುಣವಾದ ಹಲವು ಬಗೆಯ ಮಂತ್ರಗಳಿಂದಲೂ, ಅವುಗಳಿಗೆ ಬೇಕಾಗುವ ನಾನಾವಿಧವಾದ ದ್ರವ್ಯಗಳಿಂದಲೂ ಮೇಲೆ ಹೇಳಿದ ಕರ್ಮಗಳು ಅನೇಕ ವಿಧವಾದ ಫಲವುಳ್ಳವುಗಳಾಗುತ್ತವೆ ಎಂದು ಪಂಡಿತರು ಹೇಳಿರುತ್ತಾರೆ.

**ಯಥಾ ಮಘವತಾ ಪೂರ್ವಂ ವಿಶ್ವರೂಪೋ ವೃತೋ ಗುರುಃ ।**
**ವಿಪರೀತಂ ಕೃತಂ ತೇನ ಕರ್ಮ ಮಾತೃಹಿತಾಯ ವೈ ॥೨೪॥**

ಇದಕ್ಕೊಂದು ದೃಷ್ಟಾಂತವು—ಹಿಂದೆ ಇಂದ್ರನು ಯಾಗವೊಂದನ್ನು ಮಾಡಿಸಲು ವಿಶ್ವರೂಪಾಚಾರ್ಯನನ್ನು ಪುರೋಹಿತನನ್ನಾಗಿ ಮಾಡಿಕೊಂಡನು. ಆ ವಿಶ್ವರೂಪಾಚಾರ್ಯನು ಯಾಗವನ್ನು ತನ್ನ ತಾಯಿಯಾದ ದಿತಿಯ ಮಕ್ಕಳಾದ ರಾಕ್ಷಸರಿಗೆ ಅನುಕೂಲವಾಗುವಂತೆ ಆಯಾಯ ಮಂತ್ರ ಮತ್ತು ದ್ರವ್ಯಗಳಿಂದ ಕರ್ಮವನ್ನು ಇಂದ್ರನ ಉದ್ದೇಶಕ್ಕೆ ವಿರುದ್ಧವಾಗಿ ಮಾಡಿಸಿದನು.

**ದೇವೇಭ್ಯೋ ದಾನವೇಭ್ಯಸ್ತು ಸ್ವಸ್ತೀತ್ಯುಕ್ತ್ವಾ ಪುನಃಪುನಃ ।**
**ಅಸುರಾ ಮಾತೃಪಕ್ಷೀಯಾಃ ಕೃತಂ ತೇಷಾಂ ಚ ರಕ್ಷಣಂ ॥೨೫॥**

ದೇವತೆಗಳಿಗೂ ರಾಕ್ಷಸರಿಗೂ ಒಳ್ಳೆಯದಾಗಲಿ ಎಂದು ಬಾರಿಬಾರಿಗೂ ಎದುರಿಗೆ ಹೇಳುತ್ತಾ ತನ್ನ ತಾಯಿಯ ಕಡೆಯವರಾದ ರಾಕ್ಷಸರ ರಕ್ಷಣೆಯನ್ನು ಒಳಗೊಳಗೇ ಸಿದ್ಧಿಸುವಂತೆ ಮಾಡಿದನು.

**ದೈತ್ಯಾನ್ ದೃಷ್ಟ್ವಾಽತಿಸಂಪುಷ್ಟಾನ್ ಚುಕೋಪ ಮಘವಾ ತದಾ ।**
**ಶಿರಾಂಸಿ ತಸ್ಯ ವಜ್ರೇಣ ಚಿಚ್ಛೇದ ತರಸಾ ಹರಿಃ ॥೨೬॥**

ವಿಶ್ವರೂಪನ ಈ ಬಗೆಯ ಕೃತಿಯಿಂದ ಚನ್ನಾಗಿ ಅಭಿವೃದ್ಧಿಯನ್ನು ಹೊಂದಿದ ರಾಕ್ಷಸರನ್ನು ನೋಡಿ ಇಂದ್ರನು ವಿಶ್ವರೂಪನ ಮೇಲೆ ಸಿಟ್ಟುಗೊಂಡನು. ಶತ್ರುಗಳನ್ನು ನಾಶಮಾಡುವುದರಲ್ಲಿ ಸಮರ್ಥನಾದ ಆ ಇಂದ್ರನು ಅವನ ತಲೆಗಳನ್ನು

(ವಿಶ್ವರೂಪನಿಗೆ ಮೂರು ತಲೆಗಳಿದ್ದುವೆಂದು ವೇದದಲ್ಲಿ ಹೇಳಿದೆ) ಆ ಕೂಡಲೇ ಕತ್ತರಿಸಿದನು.

**ಕ್ರಿಯಾವೈಗುಣ್ಯಮತ್ರೈವ ಕರ್ತೃಭೇದಾದಸಂಶಯಂ ।**
**ನೋ ಚೇತ್ಪಂಚಾಲರಾಜೇನ ರೋಷೇಣಾಪಿ ಕೃತಾ ಕ್ರಿಯಾ ॥೨೭॥**

ಇಲ್ಲಿ ಕರ್ಮ ಮಾಡಿರತಕ್ಕ ವಿಶ್ವರೂಪನಿಗೆ ಅನುಗುಣವಾಗಿ ಕರ್ಮವು ಕೆಟ್ಟು ಹೋಯಿತು. ಅದರಿಂದ ವಿಶ್ವರೂಪನ ಮರಣವು ಸಂಭವಿಸಿತು. ಆ ಯಾಗವು ಕಾಮ್ಯವಾಗಿದ್ದುದರಿಂದ ರಾಜಸವಾಯಿತು. ಮತ್ತು ಇತರರ ನಾಶದಲ್ಲಿ ಉದ್ದೇಶವುಳ್ಳದ್ದಾಗಿದ್ದುದರಿಂದ ತಾಮಸವೂ ಆಯಿತು. ಕರ್ಮವು ಕೆಡದೇ ಸರಿಯಾಗಿ ನಡೆದರೆ ಕೆಟ್ಟ ಫಲವಾಗದೆ ಇನ್ನೂ ಹೆಚ್ಚಾಗಿ ಒಳ್ಳೆಯ ಫಲವೇ ಆಗುವುದು. ಇದಕ್ಕೆ ದೃಷ್ಟಾಂತವು ಪಂಚಾಲದೇಶಕ್ಕೆ ರಾಜನಾದ ದ್ರುಪದನು ದ್ರೋಣಾಚಾರ್ಯನ ಮೇಲಿನ ಸಿಟ್ಟಿನಿಂದ ಯಾಗವನ್ನು ಮಾಡಿದುದೂ ಆಗಿದೆ.

**ಭಾರದ್ವಾಜವಿನಾಶಾಯ ಪುತ್ರಸ್ಯೋತ್ಪಾದನಾಯ ಚ ।**
**ಧೃಷ್ಟದ್ಯುಮ್ನಃ ಸಮುತ್ಪನ್ನೋ ವೇದೀಮಧ್ಯಾಚ್ಚ ದ್ರೌಪದೀ ॥೨೮॥**

ದ್ರುಪದನು ಮಾಡಿದ ಅಂತಹ ಯಾಗವು ದ್ರೋಣಾಚಾರ್ಯನ ನಾಶಕ್ಕಾಗಿಯೂ, ಪುತ್ರನು ತನಗೆ ಹುಟ್ಟುವುದಕ್ಕಾಗಿಯೂ ಮಾಡಿದುದಾಗಿತ್ತು. ಅದರಂತೆ ದ್ರೋಣನನ್ನು ಕೊಲ್ಲಲು ಸಮರ್ಥನಾದ ಧೃಷ್ಟದ್ಯುಮ್ನನು ಹುಟ್ಟಿದನು. ಅಲ್ಲದೆ, ಯಜ್ಞಕುಂಡದಿಂದ ದ್ರೌಪದಿಯೆಂಬ ಮಗಳೂ ಹುಟ್ಟಿದಳು. ಇದು ಕಾಮ್ಯಕರ್ಮವು ಯಾವ ಲೋಪಾತಿರೇಕಗಳೂ ಇಲ್ಲದೆ ಸರಿಯಾಗಿ ನಡೆದುದರ ಫಲವು.

**ಪುರಾ ದಶರಥೇನಾಪಿ ಪುತ್ರೇಷ್ಟಿಸ್ತು ಕೃತಾ ಯದಾ ।**
**ಅಪುತ್ರಸ್ಯ ಸುತಾಸ್ತಸ್ಯ ಚತ್ವಾರಃ ಸಂಪ್ರಜಜ್ಞಿರೇ ॥೨೯॥**

ಕಾಮ್ಯವಾದ ಕರ್ಮವು ಗುಣಲೋಪವಿಲ್ಲದೆ ನಡೆದರೆ ಸಫಲವೇ ಆಗುತ್ತದೆ ಎಂಬುದಕ್ಕೆ ಇನ್ನೂ ಒಂದು ಉದಾಹರಣೆಯು. ಹಿಂದೆ ಮಕ್ಕಳಿಲ್ಲದ ದಶರಥರಾಜನು ತನಗೆ ಪುತ್ರೋತ್ಪತ್ತಿಯಾಗಲಿ ಎಂದು ಪುತ್ರಕಾಮೇಷ್ಟಿಯನ್ನು ಮಾಡಿದನು. ಅದರಂತೆ ಅವನಿಗೆ ಸಮರ್ಥರಾದ ಮಹಾಪುರುಷರಾದ ನಾಲ್ವರು ಮಕ್ಕಳು ಹುಟ್ಟಿದರು. ಇದೂ ಸರಿಯಾಗಿ ಕರ್ಮ ಮಾಡಿದುದರ ಫಲವು.

**ಅತಃ ಕ್ರಿಯಾ ಕೃತಾ ಯುಕ್ತ್ಯಾ ಸಿದ್ಧಿದಾ ಸರ್ವಥಾ ಭವೇತ್ ।**
**ಅಯುಕ್ತ್ಯಾ ವಿಪರೀತಾ ಸ್ಯಾತ್ಸರ್ವಥಾ ನೃಪಸತ್ತಮ ॥೩೦॥**

ಓ ರಾಜಶ್ರೇಷ್ಠನೇ, ಆದುದರಿಂದ ಸರಿಯಾದ ರೀತಿಯಲ್ಲಿ ವಿವೇಕದಿಂದ ಕೂಡಿದ ಉಪಾಯದಿಂದ ಕರ್ಮವನ್ನಾಚರಿಸಿದರೆ, ಅದು ಎಲ್ಲ ವಿಧದಿಂದಲೂ ಉದ್ದಿಷ್ಟವಾದ ಫಲವನ್ನು ತಪ್ಪದೆ ಕೊಡುವುದು. ಹಾಗಲ್ಲದೆ ಅವಿವೇಕದಿಂದ ಗುಣ ಲೋಪವಾಗಿ ಕರ್ಮವು ಕೆಡುವಂತೆ ಮಾಡಿದರೆ ಎಲ್ಲಾ ಕಡೆಯಿಂದಲೂ ಕೆಟ್ಟ ಫಲವೇ ಆಗುವುದು.

**ಪಾಂಡವಾನಾಂ ಯಥಾ ಯಜ್ಞೇ ಕಿಂಚಿದ್ವೈಗುಣ್ಯಯೋಗತಃ ।**
**ವಿಪರೀತಂ ಫಲಂ ಪ್ರಾಪ್ತಂ ನಿರ್ಜಿತಾಸ್ತೇ ದುರೋದರೇ ॥೩೧॥**

ಪಾಂಡವರ ಯಾಗದಲ್ಲಿಯಾದರೋ ಯಾವುದೋ ಎಲ್ಲಿಯೋ ಸ್ವಲ್ಪ ಅವಿವೇಕದಿಂದ ಕರ್ಮವು ಸರಿಯಾಗಿ ನಡೆಯದಿದ್ದುದರಿಂದ ಕೆಟ್ಟ ಫಲವುಂಟಾಯಿತು. ಮುಂದೆ ಪಗಡೆಯಾಟದಲ್ಲಿ ಪಾಂಡವರು ಸೋತರು. ದೊಡ್ಡ ಕಷ್ಟವೂ ಬಂದೊದಗಿತು.

**ಸತ್ಯವಾದೀ ತಥಾ ರಾಜನ್ ಧರ್ಮಪುತ್ರೋ ಯುಧಿಷ್ಠಿರಃ ।**
**ದ್ರೌಪದೀ ಚ ತಥಾ ಸಾಧ್ವೀ ತಥಾನ್ಯೇಽಪ್ಯನುಜಾಃ ಶುಭಾಃ ॥೩೨॥**

ಯಮಧರ್ಮರಾಜನ ಮಗನಾದ ಯುಧಿಷ್ಠಿರನು ಯಾವಾಗಲೂ ನಿಜವನ್ನೇ ಹೇಳುವ ಸತ್ಪುರುಷನು. ದ್ರೌಪದಿಯು ಮಹಾಪತಿವ್ರತೆಯು. ಉಳಿದ ಭೀಮಸೇನಾದಿಗಳು ತಮ್ಮ ಅಣ್ಣನಾದ ಯುಧಿಷ್ಠಿರನಂತೆ ಸತ್ಯವಾದಿಗಳು ಮತ್ತು ಒಳ್ಳೆಯ ಮಹಾಪುರುಷರು.

**ಕುದ್ರವ್ಯಯೋಗಾದ್ವೈಗುಣ್ಯಂ ಸಮುತ್ಪನ್ನಂ ಮಖೇಽಥವಾ ।**
**ಸಾಭಿಮಾನೈಃ ಕೃತಾದ್ವಾಪಿ ದೂಷಣಂ ಸಮುಪಸ್ಥಿತಂ ॥೩೩॥**

ಆದರೂ ಅವರ ರಾಜಸೂಯವು ಅನೇಕರಾಜರನ್ನು ಕೊಂದು ತಂದಿದ್ದ ಹಣದಿಂದ ನೆರವೇರಿಸಿದುದು ಆಯಿತು. ಅದೇ ದೋಷವು. ಅಥವಾ ಅವರು ಮಹಾಗರ್ವದಿಂದ ಕೂಡಿದವರಾಗಿ ಯಾಗವನ್ನು ಮಾಡಿದುದರಿಂದಲೂ ದೋಷವುಂಟಾಯಿತು.

**ಸಾತ್ತ್ವಿಕಸ್ತು ಮಹಾರಾಜ ದುರ್ಲಭೋ ವೈ ಮಖಃ ಸ್ಮೃತಃ ।**
**ವೈಖಾನಸಮುನೀನಾಂ ಹಿ ವಿಹಿತೋಽಸೌ ಮಹಾಮಖಃ ॥೩೪॥**

ಅಂತಹ ದೋಷರಹಿತವಾದ ಸಾತ್ತ್ವಿಕಯಾಗವು ಆಗುವುದು ಕಷ್ಟವು. ವೈಖಾನಸರೆಂಬ ಋಷಿಗಳು ಮಾತ್ರ ಅಂತಹ ಸಾತ್ತ್ವಿಕವೆನಿಸುವ ಮಹಾಯಜ್ಞವನ್ನು ಮಾಡಬಲ್ಲರು.

**ಸಾತ್ತ್ವಿಕಂ ಭೋಜನಂ ಯೇ ವೈ ನಿತ್ಯಂ ಕುರ್ವಂತಿ ತಾಪಸಾಃ ।**
**ನ್ಯಾಯಾರ್ಜಿತಂ ಚ ವನ್ಯಂ ಚ ತಥಾ ಋಷ್ಯಂ ಸುಸಂಸ್ಕೃತಂ ॥೩೫॥**

ನ್ಯಾಯವಾಗಿ ಸಂಪಾದಿಸಿದ, ಕಾಡಿನಲ್ಲೇ ಬೆಳೆದ, ಋಷಿಗಳಿಗೆ ಹಿತವಾದ ಗೆಡ್ಡೆಗೆಣಸು ಮುಂತಾದ ಸಾತ್ತ್ವಿಕ ಆಹಾರವನ್ನು ಸೇವಿಸುವ ವೈಖಾನಸರುಮಾತ್ರ ಸಾತ್ತ್ವಿಕಕರ್ಮವನ್ನು ಆಚರಿಸಬಲ್ಲವರು.

**ಪುರೋಡಾಶಪರಾ ನಿತ್ಯಂ ವಿಯೂಪಾ ಮಂತ್ರಪೂರ್ವಕಾಃ ।**
**ಶ್ರದ್ಧಾಧಿಕಾ ಮಖಾ ರಾಜನ್ ಸಾತ್ತ್ವಿಕಾಃ ಪರಮಾಃ ಸ್ಮೃತಾಃ॥೩೬॥**

ಓ ರಾಜನೇ, ಧಾನ್ಯಾದಿಗಳಿಂದ ಮಾಡಿದ ಪುರೋಡಾಶವೆಂಬ ಹವಿಸ್ಸನ್ನು ಮಾತ್ರ ಹೋಮಮಾಡುವ, ಯೂಪವೆಂಬ ಯಜ್ಞದಲ್ಲಿ ಪಶುವನ್ನು ಕಟ್ಟುವ ಸ್ತಂಭವಿಲ್ಲದೇ ಇರುವ ಎಂದರೆ ಪಶುಹಿಂಸೆ ಇಲ್ಲದೇ ಇರುವ, ವೇದಮಂತ್ರಗಳಿಂದ ತುಂಬ ಶ್ರದ್ಧೆಯಿಂದಲೂ ಆಸ್ತಿಕ್ಯಬುದ್ಧಿಯಿಂದಲೂ ಮಾಡಲ್ಪಡುವ ಯಾಗಗಳು ಸಾತ್ತ್ವಿಕಗಳಾಗಿಯೂ ಒಳ್ಳೆಯವುಗಳಾಗಿಯೂ ಇರುವುವು.

**ರಾಜಸಾ ದ್ರವ್ಯಬಹುಲಾಃ ಸಯೂಪಾಶ್ಚ ಸುಸಂಸ್ಕೃತಾಃ ।**
**ಕ್ಷತ್ರಿಯಾಣಾಂ ವಿಶಾಂ ಚೈವ ಸಾಭಿಮಾನಾಶ್ಚ ವೈ ಮಖಾಃ ॥೩೭॥**

ತುಂಬ ದ್ರವ್ಯಗಳನ್ನು ಖರ್ಚುಮಾಡಿ ಮಾಡತಕ್ಕ, ಪಶುಹಿಂಸೆಯಿಂದ ಕೂಡಿದ, ವೇದೋಕ್ತವಿಧಿಯಂತೆ ಮಾಡುವದಾದರೂ, ನಾನು ಮಾಡತಕ್ಕವನು ಎಂಬ ಅಹಂಕಾರದಿಂದ ಕೂಡಿರುವ, ವೈಶ್ಯರು ಮತ್ತು ಕ್ಷತ್ರಿಯರು ಮಾಡತಕ್ಕ ಯಾಗಗಳು ರಾಜಸಗಳೆನಿಸುವುವು.

**ತಾಮಸಾ ದಾನವಾನಾಂ ವೈ ಸಕ್ರೋಧಾ ಮದವರ್ಧಕಾಃ ।**
**ಸಾಮರ್ಷಾಃ ಸಂಸ್ಕೃತಾಃ ಕ್ರೂರಾ ಮಖಾಃ ಪ್ರೋಕ್ತಾ ಮಹಾತ್ಮಭಿಃ ॥೩೮॥**

ಸಿಟ್ಟಿನಿಂದಲೂ, ಅಸೂಯೆಯಿಂದಲೂ, ಗರ್ವವನ್ನು ಹೆಚ್ಚಿಸುವ, ನಿಯಮ ದಂತೆ ಮಾಡಿದರೂ, ಭಯಂಕರವಾದ ಫಲಸಿದ್ಧಿಯೇ ಉದ್ದೇಶವಾಗಿವುಳ್ಳ ರಾಕ್ಷಸರು ಮಾಡತಕ್ಕ ಯಾಗಾದಿಗಳು ತಾಮಸಗಳು ಎಂದು ಮಹಾತ್ಮರು ಹೇಳುತ್ತಾರೆ.

**ಮುನೀನಾಂ ಮೋಕ್ಷಕಾಮಾನಾಂ ವಿರಕ್ತಾನಾಂ ಮಹಾತ್ಮನಾಂ ।**
**ಮಾನಸಸ್ತು ಸ್ಮೃತೋ ಯಾಗಃ ಸರ್ವಸಾಧನಸಂಯುತಃ ॥೩೯॥**

ಸಂಸಾರದಿಂದ ಬಿಡುಗಡೆಯನ್ನು ಅಪೇಕ್ಷಿಸುವ, ಅದಕ್ಕಾಗಿ ವೈರಾಗ್ಯವನ್ನು ಪಡೆದಿರುವ ಮಹಾತ್ಮರಾದ ಋಷಿಗಳು ಮನಸ್ಸಿನಿಂದಲೇ ಕಲ್ಪಿತಗಳಾದ ಎಲ್ಲ ಸಾಧನ ಸಾಮಗ್ರಿಗಳಿಂದಲೂ ಕೂಡಿದ ಮನಸ್ಸಿನಲ್ಲಿಯೇ ಕಲ್ಪಿಸಿ ಮಾಡತಕ್ಕ ಕರ್ಮವು ಮಾನಸವೆಂದು ಹೇಳುತ್ತಾರೆ.

**ಅನ್ಯೇಷು ಸರ್ವಯಜ್ಞೇಷು ಕಿಂಚಿನ್ನ್ಯೂನಂ ಭವೇದಪಿ ।**
**ದ್ರವ್ಯೇಣ ಶ್ರದ್ಧಯಾ ವಾಪಿ ಕ್ರಿಯಯಾ ಬ್ರಾಹ್ಮಣೈಸ್ತಥಾ ॥೪೦॥**

ಈ ಮಾನಸಯಾಗವನ್ನು ಬಿಟ್ಟು ಉಳಿದ ಎಲ್ಲಾ ಯಜ್ಞಗಳಲ್ಲಿಯೂ ದ್ರವ್ಯ ದಿಂದಾಗಲಿ, ಕರ್ಮದ ವಿವರಗಳಲ್ಲಿಯಾಗಲಿ, ಶ್ರದ್ಧೆಯಲ್ಲಾಗಲಿ, ಋತ್ವಿಕ್ಕುಗಳಾಗಿ ನಿಯಮಿಸಲ್ಪಟ್ಟಿರುವ ಬ್ರಾಹ್ಮಣರ ಗುಣಲೋಪದಿಂದಲಾಗಲೀ ಸ್ವಲ್ಪ ನ್ಯೂನತೆಯು ಉಂಟಾದರೂ ಕರ್ಮವು ಸರಿಯಾಗಿ ಪೂರ್ಣವಾದಂತಾಗುವುದಿಲ್ಲ.

**ದೇಶಕಾಲಪೃಥಗ್ದ್ರವ್ಯಸಾಧನೈಃ ಸಕಲೈಸ್ತಥಾ ।**
**ನಾನ್ಯೋ ಭವತಿ ಪೂರ್ಣೋ ವೈ ಯಥಾ ಭವತಿ ಮಾನಸಃ ॥೪೧॥**

ಮೊದಲು ಹೇಳಿದ ಮೂರು ಬಗೆಯ ಯಾಗಗಳಲ್ಲಿ, ಸರಿಯಾದ ದೇಶ, ಉತ್ತರಾಯಣಾದಿಕಾಲ, ಬೇರೆಬೇರೆಯಾಗಿ ವಿಧಿಸಿರುವ ದ್ರವ್ಯ ಮತ್ತು ಉಪಾಯ ಎಂದರೆ ಅಂಗಗಳು ಉಪಾಂಗಗಳು ಇವುಗಳಿಂದ ಕೂಡಿರುವ ಕರ್ಮಗಳು, ಇವುಗಳೆ ಲ್ಲವೂ ಸರಿಯಾಗಿರಬೇಕು. ಹಾಗಿಲ್ಲದೆ ಕೆಲವಂಶಗಳು ಸರಿಯಾಗಿ ನಡೆಯದೇ ಹೋದರೂ ಕರ್ಮವು ಪೂರ್ತಿಯಾಗಲಾರದು. ಆದರೆ ಮಾನಸಯಜ್ಞವು ಹಾಗ ಲ್ಲವು. ಉಪಾಯಗಳಾಗಲೀ ಬೇರೆ ಯಾವ ಅಂಶವಾಗಲೀ ಕಡಿಮೆಯಾದರೂ ಅದ ರಿಂದ ಯಾವ ತೊಂದರೆಯೂ ಆಗುವುದಿಲ್ಲವು. ಇದೇ ಕಾಮ್ಯವಲ್ಲದ ಮಾನಸ ವಾದ ಜ್ಞಾನಯಜ್ಞದ ವಿಶೇಷಗುಣವು.

**ಪ್ರಥಮಂ ತು ಮನಃ ಶೋಧ್ಯಂ ಕರ್ತವ್ಯಂ ಗುಣವರ್ಜಿತಂ ।**
**ಶುದ್ಧೇ ಮನಸಿ ದೇಹೋ ವೈ ಶುದ್ಧ ಏವ ನ ಸಂಶಯಃ ॥೪೨॥**

ಆ ಮಾನಸಯಜ್ಞದಲ್ಲಿ ಮೊದಲು ರಾಗದ್ವೇಷಗಳಿಂದ ಕೂಡಿದ ಮನಸ್ಸನ್ನು ಯಾವ ಗುಣಗಳ ಸಂಬಂಧವೂ ಇಲ್ಲದಂತೆ ಶೋಧಿಸಬೇಕು. ಮನಸ್ಸು ಶುದ್ಧ ವಾದರೆ ಅದರಿಂದ ಶರೀರವೂ ಶುದ್ಧವಾಗುವುದು. ಇದರಲ್ಲಿ ಸಂಶಯವಿಲ್ಲವು.

**ಇಂದ್ರಿಯಾರ್ಥಪರಿತ್ಯಕ್ತಂ ಯದಾ ಜಾತಂ ಮನಃ ಶುಚಿ ।**
**ತದಾ ತಸ್ಯ ಮಖಸ್ಯಾಸೌ ಪ್ರಭವೇದಧಿಕಾರವಾನ್ ॥೪೩॥**

ಯಾವಾಗ ಇಂದ್ರಿಯಗಳ ಮತ್ತು ವಿಷಯಗಳ ಸಂಬಂಧದಿಂದ ಬಿಡಲ್ಪಟ್ಟು ಮನಸ್ಸು ಶುದ್ಧವಾಗುವುದೋ ಆಗ ಅಂತಹ ಶುದ್ಧಮನಸ್ಸುಳ್ಳವನು ಮಾನಸಯಜ್ಞ ದಲ್ಲಿ ಅಧಿಕಾರವುಳ್ಳವನಾಗುತ್ತಾನೆ.

**ತದಾಸೌ ಮಂಡಪಂ ಕೃತ್ವಾ ಬಹುಯೋಜನವಿಸ್ತೃತಂ ।**
**ಸ್ತಂಭೈಶ್ಚ ವಿಪುಲೈಃ ಶ್ಲಕ್ಷ್ಣೈರ್ಯಜ್ಞೀಯದ್ರುಮಸಂಭವೈಃ ॥೪೪॥**

ಮೇಲೆ ಹೇಳಿದಂತೆ ಮನಶ್ಶುದ್ಧಿಯಾದ ಮೇಲೆ ಅವನು ಮನಸ್ಸಿನಲ್ಲಿಯೇ ಅನೇಕಗಾವುದ ವಿಶಾಲವಾದ, ಏರುಪೇರಿಲ್ಲದೆ ಪುಷ್ಟವಾಗಿರುವ ಯಾಗಕ್ಕೆ ಯೋಗ್ಯ ವಾದ ಮರದಿಂದಲೇ ಕೆತ್ತಿ ಮಾಡಿರುವ ಕಂಭಗಳಿಂದ ಮಂಟಪವನ್ನು ಕಲ್ಪಿಸಿಕೊಂಡು,

**ವೇದೀಂ ಚ ವಿಶದಾಂ ತತ್ರ ಮನಸಾ ಪರಿಕಲ್ಪಯೇತ್ ।**
**ಅಗ್ನಯೋಽಪಿ ತಥಾ ಸ್ಥಾಪ್ಯಾ ವಿಧಿವನ್ಮನಸಾ ಕಿಲ ॥೪೫॥**

ಅದರಲ್ಲಿ ವಿಶಾಲವಾದ ವೇದಿಯನ್ನೂ, ಅಗ್ನಿಸ್ಥಾನಗಳನ್ನೂ ಮನಸ್ಸಿನಿಂದಲೇ ಕಲ್ಪಿಸಿಕೊಳ್ಳಬೇಕು. ಮತ್ತು ಗಾರ್ಹಪತ್ಯಾಹವನೀಯದಕ್ಷಿಣಾಗ್ನಿ ಮುಂತಾದ ಅಗ್ನಿಗಳನ್ನೂ ಶಾಸ್ತ್ರನಿಯಮದಂತೆ ಆಯಾಯ ಸ್ಥಾನಗಳಲ್ಲಿ ಮನಸ್ಸಿನಿಂದಲೇ ಸ್ಥಾಪಿಸಬೇಕು.

**ಬ್ರಾಹ್ಮಣಾನಾಂ ಚ ವರಣಂ ತಥೈವ ಪ್ರತಿಪಾದ್ಯ ಚ ।**
**ಬ್ರಹ್ಮಾಧ್ವರ್ಯುಸ್ತಥಾ ಹೋತಾ ಪ್ರಸ್ತೋತಾ ವಿಧಿಪೂರ್ವಕಂ ॥೪೬॥**

ಆಯಾಯ ಕರ್ಮಗಳನ್ನು ಮಾಡಿಸುವುದಕ್ಕಾಗಿ ಬ್ರಾಹ್ಮಣರನ್ನು ಋತ್ವಿಜರನ್ನಾಗಿ ಮನಸ್ಸಿನಿಂದಲೇ ಗೊತ್ತುಮಾಡಿ ಕಲ್ಪಿಸಿಕೊಳ್ಳಬೇಕು. ಅದಕ್ಕನುಗುಣವಾಗಿ ಅವರಿಗೆ ದಕ್ಷಿಣೆಯನ್ನೂ ಮನಸ್ಸಿನಲ್ಲಿಯೇ ಕಲ್ಪಿಸಿಕೊಡಬೇಕು. ಬ್ರಹ್ಮನು, ಯಜ್ಞ ಕಲಾಪಾದಿಗಳನ್ನು ಮುಖ್ಯವಾಗಿ ಮಾಡುವ ಅಧ್ವರ್ಯುವು, ಋಗ್ವೇದದ ಮಂತ್ರಗಳನ್ನು ಹೇಳುತ್ತಾ ಹೋಮವನ್ನು ಮಾಡಿಸುವ ಹೋತೃವು, ಸಾಮವೇದದ ಮಂತ್ರಗಳಿಂದ ದೇವತೆಗಳನ್ನು ಸ್ತೋತ್ರಮಾಡುವ ಪ್ರಸ್ತೋತೃ ಇವರನ್ನೆಲ್ಲಾ ಶಾಸ್ತ್ರದಲ್ಲಿ ಹೇಳಿರುವಂತೆ ಮನಸ್ಸಿನಿಂದ ಪೂಜಿಸಬೇಕು.

**ಉದ್ಗಾತಾ ಪ್ರತಿಹರ್ತಾ ಚ ಸಭ್ಯಾಶ್ಚಾನ್ಯೇ ಯಥಾವಿಧಿ ।**
**ಪೂಜನೀಯಾಃ ಪ್ರಯತ್ನೇನ ಮನಸೈವ ದ್ವಿಜೋತ್ತಮಾಃ ॥೪೭॥**

ಸಾಮಗಾನವನ್ನು ಹೇಳುವ ಉದ್ಗಾತೃ, ಪ್ರತಿಹರ್ತೃ ಮತ್ತು ಸಭಿಕರೇ ಮುಂತಾದ ಬ್ರಾಹ್ಮಣಶ್ರೇಷ್ಠರು ಇವರೆಲ್ಲರನ್ನೂ ಶಾಸ್ತ್ರದಲ್ಲಿ ಹೇಳಿದಂತೆ ಮನಸ್ಸಿನಲ್ಲಿಯೇ ವರಿಸಿ ಅವರನ್ನು ದಕ್ಷಿಣೆ ಮೊದಲಾದವುಗಳಿಂದ ಮನಸ್ಸಿನಲ್ಲಿಯೇ ಸತ್ಕರಿಸಿ ಪೂಜಿಸಬೇಕು.

**ಪ್ರಾಣೋಽಪಾನಸ್ತಥಾ ವ್ಯಾನಃ ಸಮಾನೋದಾನ ಏವ ಚ ।**
**ಪಾವಕಾಃ ಪಂಚ ಏವೈತೇ ಸ್ಥಾಪ್ಯಾ ವೇದ್ಯಾಂ ವಿಧಾನತಃ ॥೪೮॥**

ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ ಈ ಐದು ವಾಯುಗಳೇ ಯಾಗಕ್ಕೆ ಬೇಕಾದ ಐದು ಅಗ್ನಿಗಳು. ಅವುಗಳನ್ನು ಆ ವೇದಿಯಲ್ಲಿ ಶಾಸ್ತ್ರದಲ್ಲಿ ಹೇಳಿರುವ ನಿಯಮದಂತೆ ಪ್ರತಿಷ್ಠೆಮಾಡಬೇಕು.

**ಗಾರ್ಹಪತ್ಯಸ್ತದಾ ಪ್ರಾಣೋಽಪಾನಶ್ಚಾಹವನೀಯಕಃ ।**
**ದಕ್ಷಿಣಾಗ್ನಿಸ್ತಥಾ ವ್ಯಾನಃ ಸಮಾನಶ್ಚಾವಸಥ್ಯಕಃ ॥೪೯॥**

ಪ್ರಾಣವಾಯುವೇ ಗಾರ್ಹಪತ್ಯಾಗ್ನಿಯು. ಅಪಾನವು ಆಹವನೀಯಾಗ್ನಿಯು. ವ್ಯಾನವಾಯುವು ದಕ್ಷಿಣಾಗ್ನಿಯು. ಸಮಾನವು ಆವಸಥ್ಯವೆಂಬ ಅಗ್ನಿಯು.

**ಸಭ್ಯೋದಾನಃ ಸ್ಮೃತಾ ಹ್ಯೇತೇ ಪಾವಕಾಃ ಪರಮೋತ್ಕಟಾಃ ।**
**ದ್ರವ್ಯಂ ಚ ಮನಸಾ ಭಾವ್ಯಂ ನಿರ್ಗುಣಂ ಪರಮಂ ಶುಚಿ ॥೫೦॥**

ಉದಾನವಾಯುವು ಸಭ್ಯವೆಂಬ ಅಗ್ನಿಯು. ಈ ಐದು ವಾಯುಗಳೇ ತುಂಬ ಶ್ರೇಷ್ಠವಾದ ಐದು ಅಗ್ನಿಗಳು ಎಂದು ಭಾವಿಸಬೇಕು. ಆಯಾಯ ಹೋಮಕ್ಕೆ

ಬೇಕಾದ ಹವಿಸ್ಸು ಮನಸ್ಸಿನಿಂದಲೇ ಕಲ್ಪಿಸಲ್ಪಟ್ಟು, ದೋಷರಹಿತವಾಗಿಯೂ, ಉತ್ಕೃಷ್ಟವಾದುದಾಗಿಯೂ ಶುದ್ಧವಾದುದಾಗಿಯೂ ಇರಬೇಕು.

**ಮನ ಏವ ತದಾ ಹೋತಾ ಯಜಮಾನಸ್ತಥೈವ ತತ್ ।**
**ಯಜ್ಞಾಧಿದೇವತಾ ಬ್ರಹ್ಮ ನಿರ್ಗುಣಂ ಚ ಸನಾತನಂ ॥೫೧॥**

ಇಂತಹ ಮಾನಸಯಜ್ಞದಲ್ಲಿ ಸಂಕಲ್ಪ ಮತ್ತು ವಿಕಲ್ಪಸ್ವರೂಪವಾದ ಮನಸ್ಸೇ ಹೋತೃವು. ಅಹಂಕಾರಸ್ವರೂಪವಾದ ಆ ಮನಸ್ಸೇ ಯಜಮಾನನು. ಈ ಯಜ್ಞಕ್ಕೆ ಯಾವ ಗುಣಗಳ ಸಂಬಂಧವೂ ಇಲ್ಲದ ಮತ್ತು ಆದ್ಯಂತರಹಿತವಾದ, ನಿತ್ಯವಾದ, ವ್ಯಾಪಕವಾದ ಪರಬ್ರಹ್ಮವೇ ಅಧಿದೇವತೆಯು ಎಂದು ಭಾವಿಸಬೇಕು.

**ಫಲದಾ ನಿರ್ಗುಣಾ ಶಕ್ತಿಃ ಸದಾ ನಿರ್ವೇದದಾ ಶಿವಾ ।**
**ಬ್ರಹ್ಮವಿದ್ಯಾಖಿಲಾಧಾರಾ ವ್ಯಾಪ್ಯ ಸರ್ವತ್ರ ಸಂಸ್ಥಿತಾ ॥೫೨॥**

ಗುಣತ್ರಯಗಳ ಸಂಬಂಧವಿಲ್ಲದ ಎಂದರೆ, ಸಾಮ್ಯಾವಸ್ಥೆಯಲ್ಲಿರುವ ಮಾಯಾ ಸ್ವರೂಪವಾದ, ಸಂಸಾರದಲ್ಲಿ ವೈರಾಗ್ಯವನ್ನುಂಟುಮಾಡುವ, ಆದುದರಿಂದಲೇ ಮಂಗಳಕರವಾದ, ಸಮಸ್ತಪ್ರಪಂಚಕ್ಕೂ ಆಧಾರವಾದ ಎಲ್ಲೆಡೆಯಲ್ಲಿಯೂ ವ್ಯಾಪಿಸಿ ಕೊಂಡಿರತಕ್ಕ ಭಗವತೀ ಎಂದರೆ ಮಹಾಮಹಿಮಾಶಾಲಿನಿಯಾದ ಬ್ರಹ್ಮವಿದ್ಯೆಯೇ, ಚಿದ್ರೂಪವಾದ ಶಕ್ತಿಯೇ ಆ ಯಜ್ಞಕ್ಕೆ ಫಲವನ್ನು ಕೊಡುವ ಅಧಿದೇವತೆಯು, ಎಂದು ಧ್ಯಾನಿಸಬೇಕು. ಆದುದರಿಂದ ಸಾಮ್ಯಾವಸ್ಥೆಯಲ್ಲಿರುವ ಮಾಯೆಯೇ ಉಪಾಧಿಯಾಗಿವುಳ್ಳ ಪರಬ್ರಹ್ಮತತ್ತ್ವವೇ ಈ ಯಾಗಕ್ಕೆ ದೇವತೆಯು ಎಂದು ತಾತ್ಪರ್ಯವು.

**ತದುದ್ದೇಶೇನ ತದ್ದ್ರವ್ಯಂ ಹುನೇತ್ಪ್ರಾಣಾಗ್ನಿಷು ದ್ವಿಜಃ ।**
**ಪಶ್ಚಾಚ್ಚಿತ್ತಂ ನಿರಾಲಂಬಂ ಕೃತ್ವಾ ಪ್ರಾಣಾನಪಿ ಪ್ರಭೋ ॥೫೩॥**

ಆ ಬ್ರಹ್ಮವಿದ್ಯಾಸ್ವರೂಪಳಾದ ಶಕ್ತಿಯನ್ನು ಎಂದರೆ ಮಾಯೆಯಿಂದ ಕೂಡಿರುವ ಬ್ರಹ್ಮರೂಪಳಾದ ಭಗವತಿಯಾದ ದೇವಿಯನ್ನು ಉದ್ದೇಶಿಸಿ ಮನಸ್ಸಿನಿಂದ ಕಲ್ಪಿಸಲ್ಪಟ್ಟ ದ್ರವ್ಯವನ್ನು ಪ್ರಾಣಾಗ್ನಿಯಲ್ಲಿ ವಿಲಾಪನಮಾಡಿ ಬ್ರಾಹ್ಮಣಾದಿ ಮೂರು ವರ್ಣದವರೂ ಹೋಮವನ್ನು ಎಂದರೆ ಸಮರ್ಪಣೆಯನ್ನು ಮಾಡಬೇಕು. ಆ ಮೇಲೆ ಪ್ರಾಣ ಮುಂತಾದ ಐದು ವಾಯುಗಳನ್ನೂ ಮನಸ್ಸನ್ನೂ ವಿಷಯಗಳ ಸಂಬಂಧವಿಲ್ಲದಂತೆ ಮಾಡಿ,

**ಕುಂಡಲೀಮುಖಮಾರ್ಗೇಣ ಹುನೇದ್ಬ್ರಹ್ಮಣಿ ಶಾಶ್ವತೇ ।**
**ಸ್ವಾನುಭೂತ್ಯಾ ಸ್ವಯಂ ಸಾಕ್ಷಾತ್ಸ್ವಾತ್ಮಭೂತಾಂ ಮಹೇಶ್ವರೀಂ ॥೫೪॥**

ಪ್ರಾಣ ಮನಸ್ಸುಗಳು ಹಾಲು ನೀರುಗಳಂತೆ ಬೆರೆದಿರುವುದರಿಂದ ಪ್ರಾಣ ಲಯವಾದ ಮೇಲೆ ಮನೋಲಯವೂ ತಾನಾಗಿಯೇ ತಪ್ಪದೆ ಆಗುತ್ತದೆ. ಆಗ ಆ ಪ್ರಾಣವಾಯುಗಳನ್ನು ಸುಷುಮ್ನನಾಡಿಯ ದ್ವಾರದಿಂದ ನಿತ್ಯವಾದ ಬ್ರಹ್ಮಸ್ವರೂಪ ದಲ್ಲಿ ವಿಲಾಪನಮಾಡುವುದರ ಮೂಲಕವಾಗಿ ಹೋಮಮಾಡಬೇಕು. ಎಂದರೆ ಒಂದುಗೂಡಿಸಬೇಕು. ಹೀಗೆ ಪ್ರಾಣಲಯವೂ ಸಂಕಲ್ಪವಿಕಲ್ಪಗಳ ಲಯವೂ ಆದ ಮೇಲೆ ಸಮಾಧಿಯು ಸಿದ್ಧಿಸುತ್ತದೆ. ಆಗ ನಮ್ಮ ಆತ್ಮಸ್ವರೂಪಕ್ಕೂ, ಅಧಿದೇವತೆ ಯಾದ ಬ್ರಹ್ಮಸ್ವರೂಪಕ್ಕೂ ಇದ್ದ ಎಂದರೆ, ಮೊದಲು ಅಜ್ಞಾನದಶೆಯಲ್ಲಿ ಗುಣ ತ್ರಯವೈಷಮ್ಯಾವಸ್ಥೆಯ ಪರಿಣಾಮದ ಫಲವಾಗಿ ತೋರುತ್ತಿದ್ದ ಭೇದವು ಲೀನವಾ ಗಲು, ಯಾವಾಗಲೂ ವಾಸ್ತವವಾಗಿರುವ ಜೀವಾತ್ಮಪರಮಾತ್ಮರ ಅಭೇದವು ಪ್ರಕಾಶಿ ತವಾಗಿ ನಮ್ಮ ಅಪರೋಕ್ಷವಾದ ಅನುಭವದಿಂದಲೇ ನಾವೇ ನಮ್ಮ ಈ ಹೋಮದ ಅಧಿದೇವತೆಯಾದ ಬ್ರಹ್ಮದ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳುತ್ತೇವೆ. ಇದೇ ಭಾವನಾಮಯವಾದ ಮಾನಸವಾದ ಹೋಮವು ಎಂದು ತಾತ್ಪರ್ಯವು.

**ಸಮಾಧಿನೈವ ಯೋಗೇನ ಧ್ಯಾಯೇಚ್ಚೇತಸ್ಯನಾಕುಲಃ ।**
**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ॥೫೫॥**

ನಿರ್ವಿಷಯವಾಗಿ ತಟಸ್ಥವಾಗಿ ಸಮಾಧಿಸ್ಥಿತಿಯಲ್ಲಿರುವ, ಮನಸ್ಸಿನಲ್ಲಿ ಬೇರೆ ವಿಷಯಗಳ ಸ್ಫುರಣೆ ಬರದಂತೆ ಧ್ಯಾನಮಾಡಬೇಕು. ಹೀಗೆ ಧ್ಯಾನಮಾಡುತ್ತಿರು ವಾಗ ತನ್ನ ಸ್ವರೂಪವೇ ಎಲ್ಲೆಡೆಯಲ್ಲಿಯೂ ಅಧಿಷ್ಠಾನವಾಗಿರುವ ಬ್ರಹ್ಮರೂಪದಿಂದ ಇರುವುದು. ಎಲ್ಲ ಪ್ರಪಂಚವೂ, ರಜ್ಜುವಿನಲ್ಲಿ ಸರ್ಪವು ಹೇಗೋ ಹಾಗೆ ಕಲ್ಪಿತ ವಾಗಿ ನನ್ನಲ್ಲಿಯೇ ಇರುವುದು ಎಂದು ಅಭೇದಜ್ಞಾನವು ಬರುವುದು. ಆಗ ಭಗ ವತೀದೇವಿಯ ಸಾಕ್ಷಾತ್ಕಾರವಾಯಿತೆಂದು ತಿಳಿಯಬೇಕು.

**ಯದಾ ಪಶ್ಯತಿ ಭೂತಾತ್ಮಾ ತದಾ ಪಶ್ಯತಿ ತಾಂ ಶಿವಾಂ ।**
**ದೃಷ್ಟ್ವಾ ತಾಂ ಬ್ರಹ್ಮವಿದ್ಭೂಯಾತ್ಸಚ್ಚಿದಾನಂದರೂಪಿಣೀಂ ॥೫೬॥**

ಹೀಗೆ ಯಾವಾಗ ತಿಳಿಯುವನೋ ಆಗ ಅವನು ಸರ್ವಪ್ರಾಣಿಸ್ವರೂಪನಾಗಿ ಮಂಗಳಕರಳಾದ ಆ ದೇವಿಯನ್ನು ನೋಡುವನು. ಹೀಗೆ ಸತ್ಯಸ್ವರೂಪಳೂ, ಜ್ಞಾನ

ಸ್ವರೂಪಳೂ, ಸುಖಸ್ವರೂಪಳೂ ಆದ ಅವಳನ್ನು ಯಾವಾಗ ನೋಡುವನೋ ಆಗ ಅವನು ಬ್ರಹ್ಮಸ್ವರೂಪವನ್ನು ತಿಳಿದವನಾಗುತ್ತಾನೆ.

**ತದಾ ಮಾಯಾದಿಕಂ ಸರ್ವಂ ದಗ್ಧಂ ಭವತಿ ಭೂಮಿಪ ।**
**ಪ್ರಾರಬ್ಧಕರ್ಮಮಾತ್ರಂ ತು ಯಾವದ್ದೇಹಂ ಚ ತಿಷ್ಠತಿ ॥೫೭॥**

ಓ ರಾಜನೇ, ಆಗ ಅಜ್ಞಾನ, ಅದರಿಂದ ಬಂದ ಕರ್ಮ, ಅದರ ಫಲವನ್ನು ಅನುಭವಿಸುವುದಕ್ಕಾಗಿ ಬರುವ ಜನ್ಮಗಳು, ಶರೀರ ಮುಂತಾದ ಈ ಸಂಸಾರವು, ನಷ್ಟ ವಾಗುವುವು. ಆದರೆ ಪ್ರಾರಬ್ಧಕರ್ಮವು ಮಾತ್ರ ತಾನು ಫಲವನ್ನು ಕೊಡುವುದಕ್ಕೆ ಪ್ರಾರಂಭಿಸಿರುವುದರಿಂದ ಈಗಿನ ಶರೀರ ನಾಶವಾಗುವವರಿಗೂ ಇರುವುದು. ಆದರೂ ಆಗ ಆ ಕರ್ಮವೂ ಶರೀರವೂ ಮುಂಚಿನಂತೆ ಸುಖದುಃಖಗಳನ್ನು ಕೊಡದೆ ಸುಟ್ಟ ಬಟ್ಟೆಯಂತೆ ಇರುವುದು.

**ಜೀವನ್ಮುಕ್ತಸ್ತದಾ ಜಾತೋ ಮೃತೋ ಮೋಕ್ಷಮವಾಪ್ನುಯಾತ್ ।**
**ಕೃತಕೃತ್ಯೋ ಭವೇತ್ತಾತ ಯೋ ಭಜೇಜ್ಜಗದಂಬಿಕಾಂ ॥೫೮॥**

ಪ್ರಾರಬ್ಧಕರ್ಮಶೇಷದಿಂದ ಶರೀರವನ್ನು ಇನ್ನೂ ಧರಿಸಿರುವ ಆ ಜ್ಞಾನಿಯು ಬದುಕಿರುವಾಗಲೇ ಮುಕ್ತನಾಗಿರುತ್ತಾನೆ. ಅವನು ಯಾವಾಗ ಮುಂದೆ ಸಾಯು ವನೋ ಎಂದರೆ, ಆ ಪ್ರಾರಬ್ಧಕರ್ಮದ ಫಲವು ಅನುಭವದಿಂದ ನಾಶವಾಗಿ ದೇಹವು ಹೋಗುವುದೋ, ಆಗ ಅವನಿಗೆ ತಿರುಗುತ್ತಿದ್ದ ಕುಂಬಾರಚಕ್ರವು ವೇಗವು ಮುಗಿದ ಮೇಲೆ ನಿಲ್ಲುವಂತೆಯೂ, ಬಿಟ್ಟ ಬಾಣವು ಬೀಳುವಂತೆಯೂ ಈ ದೇಹವು ಬಿದ್ದು ಹೋಗಲು ಸರಿಯಾದ ಎಂದರೆ ಪ್ರಾಕೃತದೇಹರಹಿತವಾದ ಮುಕ್ತಿಯು ಬರುವುದು. ಈರೀತಿಯಾಗಿ ಯಾರು ಜಗತ್ತಿಗೇ ತಾಯಿಯಾದ ಆ ಆದಿಶಕ್ತಿಯನ್ನು ಧ್ಯಾನಿಸು ವರೋ ಅವರು ಮೇಲೆ ಹೇಳಿದ ರೀತಿಯಿಂದ ಮುಕ್ತಿಯನ್ನು ಪಡೆಯುವರು. ಅಯ್ಯಾ ದೊರೆಯೇ, ಆಮೇಲೆ ಅಂಥವರು ಇನ್ನೇನನ್ನೂ ಮಾಡಬೇಕಾದುದು ಇರುವುದಿಲ್ಲವಾದುದರಿಂದ ಕೃತಕೃತ್ಯರಾಗುತ್ತಾರೆ.

**ತಸ್ಮಾತ್ಸರ್ವಪ್ರಯತ್ನೇನ ಧ್ಯೇಯಾ ಶ್ರೀಭುವನೇಶ್ವರೀ ।**
**ಶ್ರೋತವ್ಯಾ ಚೈವ ಮಂತವ್ಯಾ ಗುರುವಾಕ್ಯಾನುಸಾರತಃ ॥೫೯॥**

ಆದುದರಿಂದ ಜಗತ್ತಿಗೇ ಒಡೆಯಳಾದ ಆ ಆದಿಶಕ್ತಿಯನ್ನು ಗುರುಗಳ ಉಪದೇಶದಂತೆ ಶ್ರವಣಮನನಾದಿಗಳಿಂದ ಅವಳ ಸ್ವರೂಪವು ಮನದಟ್ಟಾದಮೇಲೆ ಧ್ಯಾನವನ್ನು ಮಾಡತಕ್ಕದ್ದು.

**ರಾಜನ್ನೇವಂ ಕೃತೋ ಯಜ್ಞೋ ಮೋಕ್ಷದೋ ನಾತ್ರ ಸಂಶಯಃ ।**
**ಅನ್ಯೇ ಯಜ್ಞಾಃ ಸಕಾಮಾಸ್ತು ಪ್ರಭವಂತಿ ಕ್ಷಯೋನ್ಮುಖಾಃ ॥೬೦॥**

ಎಲೈ ರಾಜನೇ, ಹೀಗೆ ಯಾವ ಫಲೇಚ್ಛೆಯೂ ಇಲ್ಲದೆ ದೇವಿಯ ಯಾಗವನ್ನು ಮಾಡಿದುದೇ ಆದರೆ ಆಗ ಸಂಶಯವಿಲ್ಲದೆ ಮುಕ್ತಿಯು ದೊರೆಯುವುದು. ಇನ್ನುಳಿದ ಸ್ವರ್ಗವೇ ಮೊದಲಾದ ಫಲವು ಬೇಕೆಂದು ಮಾಡುವ ಕಾಮ್ಯವಾದ ಯಾಗಗಳು ಜಾಗ್ರತೆಯಾಗಿ ನಾಶವಾಗತಕ್ಕ ಅಲ್ಪ ಫಲವುಳ್ಳವುಗಳು.

**ಅಗ್ನಿಷ್ಟೋಮೇನ ವಿಧಿವತ್ಸ್ವರ್ಗಕಾಮೋ ಯಜೇದಿತಿ ।**
**ವೇದಾನುಶಾಸನಂ ಚೈತತ್ಪ್ರವದಂತಿ ಮನೀಷಿಣಃ ॥೬೧॥**

ಉದಾಹರಣೆಯಾಗಿ ಜ್ಯೋತಿಷ್ಟೋಮಯಾಗವಿದೆ. ಅದು “ ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ” ಎಂಬ ಸೂತ್ರಶ್ರುತಿವಾಕ್ಯದಿಂದ ವಿಧಾನಮಾಡಲ್ಪಟ್ಟಿದೆ. ಅದನ್ನು ಶಾಸ್ತ್ರನಿಯಮದಂತೆ ಆಚರಿಸಬೇಕೆಂದು ತಿಳಿದವರು ಹೇಳುತ್ತಾರೆ.

**ಕ್ಷೀಣೇ ಪುಣ್ಯೇ ಮೃತ್ಯುಲೋಕಂ ವಿಶಂತಿ ಚ ಯಥಾಮತಿ ।**
**ತಸ್ಮಾತ್ತು ಮಾನಸಃ ಶ್ರೇಷ್ಠೋ ಯಜ್ಞೋಽಪ್ಯಕ್ಷಯ ಏವ ಸಃ ॥೬೨॥**

ಆ ಯಾಗವನ್ನು ಮಾಡಿ ಸ್ವರ್ಗವನ್ನು ಪಡೆದರೂ ಆ ಯಾಗದಿಂದ ಉಂಟಾದ ಪುಣ್ಯವು ಕಾಲಕ್ರಮದಲ್ಲಿ ಮುಗಿಯಿತೆಂದರೆ ಅವರವರ ಸಂಸ್ಕಾರದಂತೆ ಸಾವಿನಿಂದ ಕೂಡಿರುವ ಈ ಭೂಲೋಕದಲ್ಲಿ ಪುನಃ ಪ್ರವೇಶಿಸುತ್ತಾರೆ ಎಂದರೆ ಜನ್ಮವೆತ್ತುತ್ತಾರೆ. ಆದುದರಿಂದ ಹಿಂದೆ ಹೇಳಿದ ಮಾನಸಯಾಗವೇ ಉತ್ತಮವು. ಆ ಯಾಗದ ಫಲವಾದ ಮೋಕ್ಷದ ನಿತ್ಯಸುಖಾನುಭವವು ಎಂದಿಗೂ ನಷ್ಟವಾಗತಕ್ಕದ್ದಲ್ಲವು.

**ನ ರಾಜ್ಞಾ ಸಾಧಿತುಂ ಯೋಗ್ಯೋ ಮಖೋಽಸೌ ಜಯಮಿಚ್ಛತಾ ।**
**ತಾಮಸಸ್ತು ಕೃತಃ ಪೂರ್ವಂ ಸರ್ಪಯಜ್ಞಸ್ತ್ವಯಾಧುನಾ ॥೬೩॥**

ಈ ಮಾನಸಯಾಗವನ್ನು ಜಯವಾಗಬೇಕೆನ್ನುವ ರಾಜನು ಮಾಡುವುದಕ್ಕೆ ಸಾಧ್ಯವಿಲ್ಲವು. ನೀನು ಈ ಹಿಂದೆ ತಾಮಸವಾದ ಕರ್ಮವನ್ನು ಮಾಡಿದ್ದೆ. ಈಗ ಈ ಸರ್ಪಯಜ್ಞವನ್ನು ಮಾಡಿರುತ್ತೀಯೆ.

**ವೈರಂ ನಿರ್ವಾಹಿತಂ ರಾಜಂಸ್ತ್ರಕ್ಷಕಸ್ಯ ದುರಾತ್ಮನಃ ।**
**ಯತ್ಕೃತೇ ನಿಹತಾಃ ಸರ್ಪಾಸ್ತ್ವಯಾಽಗ್ನೌ ಕೋಟಿಶಃ ಪರೇ ॥೬೪॥**

ಓ ದೊರೆಯೇ, ನಿನ್ನ ಈ ಕಾಮ್ಯವೂ, ಹಿಂಸೆಯಿಂದ ಕೂಡಿದ್ದೂ, ಆಗಿರುವ ಸರ್ಪಯಾಗದಿಂದ ದುಷ್ಟನಾದ ತಕ್ಷಕನ ಶತ್ರುತ್ವದ ಹಗೆಯನ್ನು ತೀರಿಸಿಕೊಂಡ ಹಾಗಾಗಿದೆ. ಅದಕ್ಕಾಗಿ ಸರ್ಪಗಳನ್ನು ಕೋಟಿಗಟ್ಟಲೆಯಾಗಿ ಕೊಂದಿರುವೆ. ನಿನ್ನ ತಂದೆಯನ್ನು ಕೊಂದ ಆ ದುಷ್ಟಸ್ವಭಾವವುಳ್ಳ ತಕ್ಷಕನಿಗೆ, ಸರ್ಪಯಾಗವನ್ನು ಮಾಡಿ ಚನ್ನಾಗಿ ಪ್ರತೀಕಾರವನ್ನು ಮಾಡಿರುವೆ.

**ದೇವೀಯಜ್ಞಂ ಕುರುಷ್ವಾದ್ಯ ವಿತತಂ ವಿಧಿಪೂರ್ವಕಂ ।**
**ವಿಷ್ಣುನಾ ಯಃ ಕೃತಃ ಪೂರ್ವಂ ಸೃಷ್ಟ್ಯಾದೌ ನೃಪಸತ್ತಮ ॥೬೫॥**

ಓ ರಾಜಶ್ರೇಷ್ಠನಾದ ಜನಮೇಜಯನೇ, ಹೀಗೆ ರಾಗದ್ವೇಷಗಳು, ಅಪಕಾರ, ಪ್ರತೀಕಾರ, ಪ್ರತ್ಯಪಕಾರ ಇವೇ ಮುಂತಾದವುಗಳಿಂದ ಆತಂಕವು ಹೆಚ್ಚುತ್ತದೆಯೇ ಹೊರತು ಶಾಂತಿ ನೆಮ್ಮದಿಸುಖಗಳು ದೂರದೂರವೇ ಆಗುತ್ತವೆ ಎಂಬುದನ್ನು ಮನಗಂಡು ನೀನೀಗಲಾದರೂ ನಾನು ಹಿಂದೆ ಹೇಳಿದ ದೇವೀಯಜ್ಞವನ್ನು ಶಾಸ್ತ್ರದಲ್ಲಿ ಹೇಳಿದ ನಿಯಮದಂತೆ ಮಾಡು. ಈ ದೇವೀಯಾಗವನ್ನು ಹಿಂದೆ ಸೃಷ್ಟಿಯ ಪ್ರಾರಂಭದಲ್ಲಿ ಶ್ರೀಮಹಾವಿಷ್ಣುವೂ ಮಾಡಿರುವನು.

**ತಥಾ ತ್ವಂ ಕುರು ರಾಜೇಂದ್ರ ವಿಧಿಂ ತೇ ಪ್ರಬ್ರವೀಮ್ಯಹಂ ।**
**ಬ್ರಾಹ್ಮಣಾಃ ಸಂತಿ ರಾಜೇಂದ್ರ ವಿಧಿಜ್ಞಾ ವಿಧಿವತ್ತಮಾಃ ॥೬೬॥**

ಎಲೈ ಚಕ್ರವರ್ತಿಯೇ, ನೀನೂ ಆ ವಿಷ್ಣುವು ಮಾಡಿದಂತೆ ದೇವೀಯಾಗವನ್ನು ಮಾಡು. ನಾನು ನಿನಗೆ ಅದರ ನಿಯಮವನ್ನು ಹೇಳುವೆನು. ಅಲ್ಲದೆ, ಆ ಯಾಗದ ಕ್ರಮ ಮತ್ತು ನಿಯಮಗಳನ್ನು ತಿಳಿದ ಮತ್ತು ಚನ್ನಾಗಿ ವೇದಾಧ್ಯಯನ ಮಾಡಿರುವ ಬ್ರಾಹ್ಮಣರೂ ಬಹಳಮಂದಿ ಇರುತ್ತಾರೆ.

**ದೇವೀಬೀಜವಿಧಾನಜ್ಞಾ ಮಂತ್ರಮಾರ್ಗವಿಚಕ್ಷಣಾಃ ।**
**ಯಾಜಕಾಸ್ತೇ ಭವಿಷ್ಯಂತಿ ಯಜಮಾನಸ್ತ್ವಮೇವ ಹಿ ॥೬೭॥**

ಮತ್ತು ಅವರು ಆ ದೇವಿಯ ಮಂತ್ರದ ಬೀಜಾಕ್ಷರದ ಜಪಕ್ರಮವನ್ನು ತಿಳಿದವರಾಗಿಯೂ, ಆ ದೇವಿಯನ್ನು ಬೀಜಮಂತ್ರದ ಜಪದಿಂದ ಉಪಾಸನೆ ಮಾಡುವ ವಿಧಾನದಲ್ಲಿ ತುಂಬ ಮುಂದುವರಿದು ಬುದ್ಧಿವಂತರಾಗಿಯೂ ಇರುತ್ತಾರೆ. ಅವರು ನಿನಗೆ ಈ ಯಾಗವನ್ನು ಮಾಡಿಸುತ್ತಾರೆ. ಆ ಯಾಗಕ್ಕೆ ಯಜಮಾನನು ನೀನೇ ಆಗಿರುವೆ.

**ಕೃತ್ವಾ ಯಜ್ಞಂ ವಿಧಾನೇನ ದತ್ವಾ ಪುಣ್ಯಂ ಮಖಾರ್ಜಿತಂ ।**
**ಸಮುದ್ಧರ ಮಹಾರಾಜ ಪಿತರಂ ದುರ್ಗತಿಂ ಗತಂ ॥೬೮॥**

ಓ ಮಹಾರಾಜನೇ, ಶಾಸ್ತ್ರದಲ್ಲಿ ಹೇಳಿದಂತೆ ಈ ಯಾಗವನ್ನು ಮಾಡಿ ಅದರಿಂದ ಉಂಟಾಗುವ ಪುಣ್ಯವನ್ನು, ನೀಚಗತಿಯನ್ನು ಪಡೆದಿರುವ ನಿನ್ನ ತಂದೆಯಾದ ಪರೀಕ್ಷಿತರಾಜನಿಗೆ ಕೊಟ್ಟು, ಅವನನ್ನು ಉದ್ಧರಿಸು ಎಂದರೆ ಸದ್ಗತಿಯನ್ನು ಪಡೆಯುವಂತೆ ಮಾಡು.

**ವಿಪ್ರಾವಮಾನಜಂ ಪಾಪಂ ದುರ್ಘಟಂ ನರಕಪ್ರದಂ ।**
**ತಥೈವ ಶಾಪಜೋ ದೋಷಃ ಪ್ರಾಪ್ತಃ ಪಿತ್ರಾ ತವಾನಘ ॥೬೦॥**

ಪಾಪವಿಲ್ಲದೆ ಪರಿಶುದ್ಧನಾದ ಓ ಜನಮೇಜಯನೇ, ಬ್ರಾಹ್ಮಣನನ್ನು ತಿರಸ್ಕಾರ ಮಾಡಿದುದರ ದೋಷವು ತುಂಬ ಕೆಟ್ಟುದು. ಅಂತಹ ದೋಷವು ಯಾವಾಗಲೂ ಬರಬಾರದು. ಅದರಿಂದ ನರಕವೇ ಉಂಟಾಗುವುದು. ಹೀಗಿರುವಾಗ ನಿನ್ನ ತಂದೆಯು ಬ್ರಾಹ್ಮಣತಿರಸ್ಕಾರವನ್ನೇ ಮಾಡಿ ಅದರ ಫಲವಾಗಿ ಬ್ರಾಹ್ಮಣನ ಶಾಪವನ್ನು ಪಡೆದನು.

**ತಥಾ ದುರ್ಮರಣಂ ಪ್ರಾಪ್ತಂ ಸರ್ಪದಂಶೇನ ಭೂಭುಜಾ ।**
**ಅಂತರಾಲೇ ತಥಾ ಮೃತ್ಯುರ್ನ ಭೂಮೌ ಕುಶಸಂಸ್ತರೇ ॥೭೦॥**

ಆ ಶಾಪಕ್ಕನುಗುಣವಾಗಿ ನಿನ್ನ ತಂದೆಯಾದ ಪರೀಕ್ಷಿತರಾಜನು ಹಾವು ಕಚ್ಚಿ ಅಪಮೃತ್ಯುವಿನಿಂದ ಸಾವನ್ನು ಅಕಾಲದಲ್ಲಿ ಹೊಂದಿದನು. ಅದಾದರೂ

ಭೂಮಿಯಲ್ಲಿ ಪವಿತ್ರವಾದ ದರ್ಭೆಯ ಶಯನದಲ್ಲಿ ಆಗಲಿಲ್ಲವು. ಮತ್ತೇನೆಂದರೆ, ಅಂತರಿಕ್ಷದಲ್ಲಿ ಎಂದರೆ ಉಪ್ಪರಿಗೆಯ ಮೇಲೆ ಎತ್ತರದಲ್ಲಿ ಸಂಭವಿಸಿತು.

**ನ ಸಂಗ್ರಾಮೇ ನ ಗಂಗಾಯಾಂ ಸ್ಥಾನದಾನಾದಿವರ್ಜಿತಂ ।**
**ಮರಣಂ ತೇ ಪಿತುಸ್ತತ್ರ ಸೌಧೇ ಜಾತಂ ಕುರೂದ್ವಹ ॥೨೦॥**

ಓ ಕುರುವಂಶದ ರಾಜರನ್ನು ಉದ್ಧರಿಸತಕ್ಕ ಜನಮೇಜಯನೇ, ಅಲ್ಲದೆ, ರಣಭೂಮಿಯಲ್ಲೂ ಅವನಿಗೆ ಸಾವು ಉಂಟಾಗಲಿಲ್ಲ. ಪವಿತ್ರವಾದ ಗಂಗಾನದಿಯಲ್ಲೂ ಅವನು ಸಾಯಲಿಲ್ಲ. ಮತ್ತು ಸ್ನಾನವೂ ಇಲ್ಲದೆ, ಪರಲೋಕಕ್ಕೆ ಸಾಧನವಾದ ದಾನವನ್ನೂ ಮಾಡದೆ ಮನೆಯ ಮೇಲ್ಮಹಡಿಯಲ್ಲಿ ಮೇಲೆ ಹೇಳಿದಂತೆ ಕೆಟ್ಟರೀತಿ ಯಲ್ಲಿ ಅವನಿಗೆ ದುರ್ಮರಣವು ಸಂಭವಿಸಿತು.

**ಕಪೂಣಾನಿ ಚ ಸರ್ವಾಣಿ ನರಕಸ್ಯ ನೃಪೋತ್ತಮ ।**
**ತತ್ರೈಕಂ ಕಾರಣಂ ತಸ್ಯ ನ ಜಾತಂ ಚಾತಿದುರ್ಲಭಂ ॥೨೨॥**

ಕೆಟ್ಟ ಕರ್ಮಗಳೆಲ್ಲವೂ ನರಕಕ್ಕೆ ಸಾಧನಗಳು. ಹೀಗಿರಲು ನಿನ್ನ ತಂದೆಯು ಬ್ರಾಹ್ಮಣತಿರಸ್ಕಾರವೆಂಬ ಕೆಟ್ಟ ಕೆಲಸವನ್ನು ಮಾಡಿ ನರಕವನ್ನು ಹೊಂದಿದನು. ಅವನಿಗೆ ನರಕದಿಂದ ಉದ್ಧಾರವಾಗುವಂತಹ ಉತ್ತಮವಾದ ಕಷ್ಟಸಾಧ್ಯವಾದ ಧರ್ಮ ಸಾಧನವೂ ಉಪಾಯವೂ ಒಂದಾದರೂ ನಡೆಯಲೇ ಇಲ್ಲ.

**ಯತ್ರ ಯತ್ರ ಸ್ಥಿತಃ ಪ್ರಾಣೀ ಜ್ಞಾತ್ವಾ ಕಾಲಂ ಸಮಾಗತಂ ।**
**ಸಾಧನಾನಾಮಭಾವೇಽಪಿ ಹ್ಯವಶಶ್ಚಾತಿಸಂಕಟೇ ॥೨೩॥**

ಮನುಷ್ಯನು ಎಲ್ಲೆಲ್ಲಿದ್ದರೂ ಮೃತ್ಯುವು ಬಂದುದನ್ನು ತಿಳಿದು ಅದರ ದುಃಖ ದಿಂದಲೂ ಮುಂದಿನ ದುರ್ಗತಿಯಿಂದಲೂ ಪಾರಾಗಲು ಯಾವ ಉಪಾಯಗಳೂ ಸಿಕ್ಕದೆ ಯಾವಾಗ ಬಹುಕಷ್ಟದಲ್ಲಿ ಬೀಳುವನೋ,

**ಯದಾ ನಿರ್ವೇದಮಾಯಾತಿ ಮನಸಾ ನಿರ್ಮಲೇನ ವೈ ।**
**ಪಂಚಭೂತಾತ್ಮಕೋ ದೇಹೋ ಮಮ ಕಿಂಚಾತ್ರ ದುಃಖದಂ ॥೨೪॥**

ಅಂತಹ ಸಮಯದಲ್ಲಿ, ಯಾವಾಗ ಮನಸ್ಸು ಪರಿಶುದ್ಧವಾಗಿ ವೈರಾಗ್ಯವನ್ನು ಹೊಂದುವುದೋ ಆಗ, ಈ ನನ್ನ ಶರೀರವು ಪೃಥಿವಿಯೇ ಮೊದಲಾದ ಐದು ಭೂತ

ಗಳ ಪರಿಣಾಮದ ಸ್ವರೂಪವುಳ್ಳದು. ದುಃಖವನ್ನುಂಟುಮಾಡುವ ಈ ಶರೀರಕ್ಕೂ ಸಚ್ಚಿದಾನಂದ ರೂಪನಾದ ಆತ್ಮನಾದ ನನಗೂ ಸಂಬಂಧವೇನು ? ಇದರಲ್ಲಿ ನನಗೆ ದುಃಖವನ್ನುಂಟುಮಾಡಬಲ್ಲದ್ದು ಏನಿದೆ ? ಏನೂ ಇಲ್ಲವು.

**ಪತತ್ವದ್ಯ ಯಥಾಕಾಮಂ ಮುಕ್ತೋಽಹಂ ನಿರ್ಗುಣೋಽವ್ಯಯಃ ।**
**ನಾಶಾತ್ಮಕಾನಿ ತತ್ತ್ವಾನಿ ತತ್ರ ಕಾ ಪರಿವೇದನಾ ॥೭೫॥**

ಈ ಶರೀರವು ಈಗಲೇ ಬೇಕಾದರೂ ಬಿದ್ದುಹೋಗಲಿ. ಆತ್ಮನಾದ ನಾನು ಎಲ್ಲ ಸಂಸಾರಬಂಧನಗಳಿಂದಲೂ ಬಿಡಲ್ಪಟ್ಟವನೂ ಸತ್ತ್ವವೇ ಮೊದಲಾದ ಗುಣಗಳ ಸಂಬಂಧವಿಲ್ಲದವನೂ, ನಾಶವಿಲ್ಲದೆ ನಿತ್ಯನೂ ಆಗಿರುವೆನು. ಉಳಿದ ಎಲ್ಲ ಪದಾರ್ಥಗಳೂ ನಾಶವಾಗತಕ್ಕವು. ಇಂತಹ ವಸ್ತುಗಳ ವಿಚಾರದಲ್ಲಿ ಅಳುವುದೇಕೆ ?

**ಬ್ರಹ್ಮೈವಾಹಂ ನ ಸಂಸಾರೀ ಸದಾ ಮುಕ್ತಃ ಸನಾತನಃ ।**
**ದೇಹೇನ ಮಮ ಸಂಬಂಧಃ ಕರ್ಮಣಾ ಪ್ರತಿಪಾದಿತಃ ॥೭೬॥**

ನಾನು ಸಚ್ಚಿದಾನಂದಸ್ವರೂಪನಾದ ಬ್ರಹ್ಮನೇ ಆಗಿರುವೆನು. ನಾನು ಸಂಸಾರಿಯಲ್ಲವು. ನಾನು ಯಾವಾಗಲೂ ಈ ಸಂಸಾರಬಂಧನದಿಂದ ಬಿಡಲ್ಪಟ್ಟಿರುವವನು. ಮತ್ತು ಈ ಎಲ್ಲ ಪದಾರ್ಥಗಳ ಮೊದಲಿನಲ್ಲೂ ಅನಾದಿಯಾಗಿ ಇರುವವನು. ಈ ಶರೀರದ ಸಂಬಂಧವು ನನ್ನ ಕರ್ತೃತ್ವ ಭೋಕ್ತೃತ್ವದ ಅಭಿಮಾನದಿಂದ ಕೂಡಿ ಜನ್ಮಾಂತರದಲ್ಲಿಯೂ ಇದುವರಿವಿಗೂ ಮಾಡಿದ ಕರ್ಮದಿಂದಲೇ ಉಂಟಾಗಿರುವುದು.

**ತಾನಿ ಸರ್ವಾಣಿ ಭುಕ್ತಾನಿ ಶುಭಾನಿ ಚೇತರಾಣಿ ಚ ।**
**ಮನುಷ್ಯದೇಹಯೋಗೇನ ಸುಖದುಃಖಾನುಸಾಧನಾತ್ ॥೭೭॥**

ಈ ಮನುಷ್ಯ ಶರೀರಸಂಬಂಧದಿಂದ ಸುಖ ಮತ್ತು ದುಃಖಗಳನ್ನು ಅನುಭವಿಸಿದುದರಿಂದ ಜನ್ಮಾಂತರದಲ್ಲಿ ಮಾಡಿದ ಕರ್ಮಗಳ ಕೆಟ್ಟ ಮತ್ತು ಒಳ್ಳೆಯ ಫಲಗಳನ್ನು ಸಂಪೂರ್ಣವಾಗಿ ಅನುಭವಿಸಿದೆನು. ಅದರಿಂದ ಆ ಕರ್ಮಗಳೆಲ್ಲವನ್ನೂ ಅನುಭವಿಸಿದಂತಾಯಿತು.

**ವಿಮುಕ್ತೋಽತಿಭಯಾದ್ಘೋರಾದಸ್ಮಾತ್ಸಂಸಾರಸಂಕಟಾತ್ ।**
**ಇತ್ಯೇವಂ ಚಿಂತ್ಯಮಾನಸ್ತು ಸ್ನಾನದಾನವಿವರ್ಜಿತಃ ॥೭೮॥**

ಅಲ್ಲದೆ ನಾನು ತುಂಬ ಭಯಂಕರವಾದ ಮತ್ತು ಕ್ರೂರವಾದ ಈ ಸಂಸಾರ ವೆಂಬ ವಿಪತ್ತಿನಿಂದ ಬಿಡಲ್ಪಟ್ಟಿರುವವನು. ಹೀಗೆಂದು ಸರ್ವಕಾಲದಲ್ಲಿಯೂ ಯೋಚಿ ಸುತ್ತಾ ಸ್ನಾನ ಮತ್ತು ದಾನ ಇವುಗಳನ್ನು ನೆರವೇರಿಸುವುದರಲ್ಲೂ ಗಮನವಿಲ್ಲದೆ,

**ಮರಣಂ ಚೇದವಾಪ್ನೋತಿ ಸ ಮುಚ್ಯೇಜ್ಜನ್ಮದುಃಖಿತಃ ।**
**ಏಷಾ ಕಾಷ್ಠಾ ಪರಾ ಪ್ರೋಕ್ತಾ ಯೋಗಿನಾಮಪಿ ದುರ್ಲಭಾ ॥೭೯॥**

ಮರಣವನ್ನು ಹೊಂದಿದ ಪುರುಷನು ಪುನರ್ಜನ್ಮಪ್ರಾಪ್ತಿರೂಪವಾದ ಸಂಸಾರ ದುಃಖದಿಂದ ಬಿಡುಗಡೆಯನ್ನು ಹೊಂದುತ್ತಾನೆ. ನಾನು ಹೇಳಿದ ಈ ಸ್ಥಿತಿಯು ಜ್ಞಾನಿಗಳಲ್ಲದವರಿಗೆ ಸಿಕ್ಕದ ಉತ್ತಮಪದವಿಯಾಗಿರುತ್ತದೆ. ಇದು ದೊಡ್ಡದೊಡ್ಡ ಯೋಗಿಗಳಿಗೂ ದೊರೆಯುವುದು ತುಂಬ ಕಷ್ಟವಾಗಿರುತ್ತದೆ.

**ಪಿತಾ ತೇ ನೃಪಶಾರ್ದೂಲ ಶ್ರುತ್ವಾ ಶಾಪಂ ದ್ವಿಜೋದಿತಂ ।**
**ದೇಹೇ ಮಮತ್ವಂ ಕೃತವಾನ್ ನ ನಿರ್ವೇದಮವಾಪ್ತವಾನ್ ॥೮೦॥**

ಓ ರಾಜಶ್ರೇಷ್ಠನಾದ ಜನಮೇಜಯನೇ, ನಿನ್ನ ತಂದೆಯು, ಆ ಬ್ರಾಹ್ಮಣನು ಕೊಟ್ಟ ಶಾಪವನ್ನು ಕೇಳಿ ಮುಂದೆಯೂ ತನ್ನ ಶರೀರದಲ್ಲಿ ಮಮತೆಯಿಂದ ಅದನ್ನು ಯಾವುದಾದರೂ ಉಪಾಯದಿಂದ ರಕ್ಷಿಸಬೇಕೆಂದು ಅಭಿಮಾನವನ್ನು ಮಾಡಿದನೇ ಹೊರತು ಈ ಶರೀರವು ಅನಿತ್ಯವೆಂದು ತಿಳಿದು ವೈರಾಗ್ಯವನ್ನು ಹೊಂದಲಿಲ್ಲ.

**ನೀರೋಗೋ ಮಮ ದೇಹೋಽಯಂ ರಾಜ್ಯಂ ನಿಹತಕಂಟಕಂ ।**
**ಕಥಂ ಜೀವಾಮ್ಯಹಂ ಕಾಮಂ ಮಂತ್ರಜ್ಞಾನಾನಯಂತು ವೈ ॥೮೧॥**

ಅಲ್ಲದೆ ಅದಕ್ಕೆ ಬದಲಾಗಿ ಹೀಗೆ ಆಲೋಚಿಸಿದನು—ಈ ನನ್ನ ಶರೀರವು ಯಾವ ಖಾಯಿಲೆಯೂ ಇಲ್ಲದೆ ಪುಷ್ಟವಾಗಿರುತ್ತದೆ. ರಾಜ್ಯವು ಶತ್ರುಗಳ ಮತ್ತು ರೋಗಾದ್ಯುಪದ್ರವಗಳ ತೊಂದರೆಯಿಲ್ಲದೆ ಅನುಕೂಲವಾಗಿರುತ್ತದೆ. ಇದನ್ನನುಭವಿ ಸಲು ನಾನು ಹೇಗೆ ಮುಂದೆಯೂ ಬಹುಕಾಲ ಬದುಕಿರುವಂತೆ ಮಾಡಿಕೊಳ್ಳಲಿ. ಹಾವು ಕಚ್ಚಿದವನನ್ನು ಬದುಕಿಸುವ, ಮಂತ್ರಜಪಕ್ರಮವನ್ನು ಚನ್ನಾಗಿ ಬಲ್ಲ, ಸಿದ್ಧ ರಾದ ಪಂಡಿತಯೋಗಿಗಳಾದ ವೈದ್ಯರನ್ನು ಕರೆಯಿಸಿ ಎಂದು ಅಪ್ಪಣೆಮಾಡಿ,

**ಔಷಧಂ ಮಣಿಮಂತ್ರೇ ಚ ಯಂತ್ರಂ ಪರಮಕಂ ತಥಾ ।**
**ಆರೋಹಣಂ ತಥಾ ಸೌಧೇ ಕೃತವಾನ್ನೃಪತಿಸ್ತದಾ ॥೮೨॥**

ಹಾವಿನ ವಿಷವನ್ನು ಇಳಿಸಲು ಸಮರ್ಥವಾದ ಔಷಧಿಯನ್ನೂ, ವಿಷವೇರ ದಂತೆ ಪ್ರತಿಬಂಧಕವಾಗುವ ಮಣಿಯನ್ನೂ, ವಿಷವಿಳಿಸುವ ಮಂತ್ರವನ್ನೂ, ಉತ್ತಮ ವಾದ ಯಂತ್ರವನ್ನೂ ಸಂಪಾದಿಸಿ ಅಣಿಮಾಡಿಸಿದನು. ಮತ್ತು ಯಾವ ರೀತಿ ಯಿಂದಲೂ ಹಾವುಗಳು ಹತ್ತಿಬರಲು ಅಸಾಧ್ಯವಾದ ತುಂಬಾ ಎತ್ತರವಾದ ಅರ ಮನೆಯ ಮೇಲ್ಮಹಡಿಯಲ್ಲಿ ಹತ್ತಿ ಆ ರಾಜನು ಅಲ್ಲಿ ವಾಸಿಸಲು ತೊಡಗಿದನು. ಹೀಗೆ ಮನುಷ್ಯಯತ್ನದಲ್ಲಿಯೇ ಭರವಸೆಯನ್ನಿಟ್ಟು ದೇವರ ಧ್ಯಾನಪೂಜಾದಿಗಳನ್ನು ಕೈಬಿಟ್ಟದ್ದನು.

**ನ ಸ್ನಾನಂ ನ ಕೃತಂ ದಾನಂ ನ ದೇವ್ಯಾಃ ಸ್ಮರಣಂ ಕೃತಂ ।**
**ನ ಭೂಮೌ ಶಯನಂ ಚೈವ ದೈವಂ ಮತ್ವಾ ಪರಂ ತಥಾ ॥೮೩॥**

ಅಲ್ಲಿ ಅವನು ಸ್ನಾನವನ್ನೂ, ದಾನವನ್ನೂ, ದೇವಿಯ ಸ್ಮರಣೆಯನ್ನೂ ಮಾಡುತ್ತಿರಲಿಲ್ಲ. ಭೂಮಿಯ ಮೇಲೆ ಮಲಗಿದರೆ ಎಲ್ಲಿ ಹಾವು ಬರುವುದೋ ಎಂದು ನೆಲದಲ್ಲಿ ಮಲಗುತ್ತಲೂ ಇರಲಿಲ್ಲ. ಮುಖ್ಯವಾಗಿ ಜನ್ಮಾಂತರದಲ್ಲೂ ಈಗಲೂ ಮಾಡಿದ ಕರ್ಮವೇ ದೈವವೆಂದೂ ಅದು ಪ್ರಬಲವಾದದ್ದೆಂದೂ, ಪ್ರಾರಬ್ಧಕರ್ಮವೇ ಪ್ರಧಾನವಾದುದೆಂದೂ ತಿಳಿಯದೆ, ತನ್ನ ಪ್ರಯತ್ನದಿಂದಲೇ ವಿಪತ್ತನ್ನು ದಾಟಬಹು ದೆಂದೂ ತಿಳಿದು, ಸಂಸಾರದಲ್ಲಿ ವೈರಾಗ್ಯವನ್ನೂ ಹೊಂದಲಿಲ್ಲ.

**ಮಗ್ನೋ ಮೋಹಾರ್ಣವೇ ಘೋರೇ ಮೃತಃ ಸೌಧೇಽಹಿನಾ ಹತಃ ।**
**ಕೃತ್ವಾ ಪಾಪಂ ಕಲೇರ್ಯೋಗಾತ್ತಾಪಸಸ್ಯಾವಮಾನಜಂ ॥೮೪॥**

ಅಲ್ಲದೆ, ಅಜ್ಞಾನವೆಂಬ ಭಯಂಕರವಾದ ಸಮುದ್ರದಲ್ಲಿ ಮುಳುಗಿದವನಾಗಿ ಆ ಉಪ್ಪರಿಗೆಯಲ್ಲಿಯೂ ತಕ್ಷಕನೆಂಬ ಹಾವಿನಿಂದ ಕಚ್ಚಲ್ಪಟ್ಟು, ಕಲಿಯಸಂಬಂಧ ದಿಂದ, ಮುನಿಗೆ ತಿರಸ್ಕಾರಮಾಡಿದುದರಿಂದುಂಟಾದ ಪಾಪದಿಂದ ಸಾವಿಗೀಡಾದನು.

**ಅವಶ್ಯಮೇವ ನರಕೇ ಏತೈರಾಚರಣೈರ್ಭವೇತ್ ।**
**ತಸ್ಮಾತ್ತ್ವಂ ಪಿತರಂ ಪಾಪಾತ್ಸಮುದ್ಧರ ನೃಪೋತ್ತಮ ॥೮೫॥**

ಅವನು ಮಾಡಿರತಕ್ಕ ಈ ಎಲ್ಲ ಕೆಟ್ಟಕೆಲಸಗಳಿಗಿಂದಲೂ ಅವನಿಗೆ ನರಕವೇ ಉಂಟಾಗಿರುವುದು. ಆದುದರಿಂದ, ರಾಜರಲ್ಲೆಲ್ಲಾ ಉತ್ತಮನಾದ ಎಲೈ ಜನ ಮೇಜಯನೇ, ನಿನ್ನ ತಂದೆಯಾದ ಅವನನ್ನು ಅವನ ಪಾಪದಿಂದ ಬಿಡುಗಡೆ ಹೊಂದುವಂತೆ ಮಾಡಿ ನರಕದಿಂದ ಮೇಲಕ್ಕೆತ್ತುವವನಾಗು.

|| ಸೂತ ಉವಾಚ ||

**ಇತಿ ಶ್ರುತ್ವಾ ವಚಸ್ತಸ್ಯ ವ್ಯಾಸಸ್ಯಾಮಿತತೇಜಸಃ ।**
**ಸಾಶ್ರುಕಂಠೋಽತಿದುಃಖಾರ್ತೋ ಬಭೂವ ಜನಮೇಜಯಃ ॥೮೬॥**

ಸೂತಮುನಿಯು ಹೇಳಿದನು—ಹೀಗೆ ಅಪಾರವಾದ ಬ್ರಹ್ಮತೇಜಸ್ಸುಳ್ಳ ವ್ಯಾಸಮುನಿಯು ಈ ರೀತಿಯಲ್ಲಿ ಹೇಳಿದ ಮಾತುಗಳನ್ನು ಕೇಳಿ ಜನಮೇಜಯನು ಅತಿದುಃಖದಿಂದ ಕಣ್ಣೀರುಳ್ಳವನೂ, ಕತ್ತು ಬಿಗಿದು ಬಂದುದರಿಂದ ಗದ್ಗದವಾದ ಸ್ವರವುಳ್ಳವನೂ ಆದನು.

**ಧಿಗಿದಂ ಜೀವಿತಂ ಮೇಽದ್ಯ ಪಿತಾ ಮೇ ನರಕೇ ಸ್ಥಿತಃ ।**
**ತತ್ಕರೋಮಿ ಯಥೈವಾದ್ಯ ಸ್ವರ್ಗಂ ಯಾತ್ಯುತ್ತರಾಸುತಃ ॥೮೭॥**

ಈಗ ತಂದೆಗೆ ಸದ್ಗತಿಯಾಗುವಂತೆ ಮಾಡದ ನನ್ನ ಬಾಳಿಗೆ ಧಿಕ್ಕಾರವಿರಲಿ. ನನ್ನ ತಂದೆಯು ನರಕದಲ್ಲಿರುವನು. ಆದುದರಿಂದ ಈಗ ನಾನು ಉತ್ತರಾದೇವಿಯ ಮಗನಾದ, ನನ್ನ ತಂದೆಯಾದ ಆ ಪರೀಕ್ಷಿತನು ಯಾವ ಯಜ್ಞದಿಂದ ಸ್ವರ್ಗವನ್ನು ಪಡೆಯುವನೋ ಅಂತಹ-ದೇವೀಯಾಗವನ್ನು ಈಗಲೇ ಮಾಡುವೆನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ದ್ವಾದಶೋಽಧ್ಯಾಯಃ.**

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### || ತ್ರಯೋದಶೋಽಧ್ಯಾಯಃ ||

### ಹದಿಮೂರನೆಯ ಅಧ್ಯಾಯವು

|| ರಾಜೋವಾಚ ||

**ಹರಿಣಾ ತು ಕಥಂ ಯಜ್ಞಃ ಕೃತಃ ಪೂರ್ವಂ ಪಿತಾಮಹ ।**
**ಜಗತ್ಕಾರಣರೂಪೇಣ ವಿಷ್ಣುನಾ ಪ್ರಭವಿಷ್ಣುನಾ ॥೧॥**

ಜನಮೇಜಯರಾಜನು ವ್ಯಾಸಮುನಿಯನ್ನು ಪ್ರಶ್ನೆ ಮಾಡಿದನು. ತಾತನಾದ ಓ ವ್ಯಾಸಮುನಿಯೇ, ಹಿಂದೆ ಈ ಜಗತ್ತಿಗೆ ಕಾರಣಸ್ವರೂಪನಾದ, ಜಗತ್ತಿನ ಆಗು ಹೋಗುಗಳೆಲ್ಲಕ್ಕೂ ನಿಯಾಮಕನಾದ ಮತ್ತು ಎಲ್ಲೆಡೆಯಲ್ಲೂ ವ್ಯಾಪಿಸಿ ಇರುವ ಆ ಹರಿಯು ಹೇಗೆ ದೇವಿಯ ಯಜ್ಞವನ್ನು ಮಾಡಿದನು ?

**ಕೇ ಸಹಾಯಾಸ್ತು ತತ್ರಾಸನ್ ಬ್ರಾಹ್ಮಣಾಃ ಕೇ ಮಹಾಮತೇ ।**
**ಋತ್ವಿಜೋ ವೇದತತ್ತ್ವಜ್ಞಾಸ್ತನ್ಮೇ ಬ್ರೂಹಿ ಪರಂತಪ ॥೨॥**

ವಿಷ್ಣುವು ಮಾಡಿದ ಆ ಯಾಗದಲ್ಲಿ ಯಾವ ಸಾಧನಗಳಿದ್ದುವು? ವೇದ ಸಾರವನ್ನು ತಿಳಿದ ಯಾವ ಬ್ರಾಹ್ಮಣರು ಋತ್ವಿಜರಾಗಿದ್ದರು? ತಪಶ್ಶಕ್ತಿಯಿಂದ ದುಷ್ಟರನ್ನು ನಿಗ್ರಹಿಸುವ ಮಹಾಬುದ್ಧಿಶಾಲಿಯಾದ ಓ ವ್ಯಾಸಮುನಿಯೇ, ಇದನ್ನು ನನಗೆ ಹೇಳು.

**ಪಶ್ಚಾತ್ಕರೋಮ್ಯಹಂ ಯಜ್ಞಂ ವಿಧಿದೃಷ್ಟೇನ ಕರ್ಮಣಾ ।**
**ಶ್ರುತ್ವಾ ವಿಷ್ಣುಕೃತಂ ಯಾಗಮಂಬಿಕಾಯಾಃ ಸಮಾಹಿತಃ ॥೩॥**

ದೇವೀಯಾಗವನ್ನು ಶ್ರೀವಿಷ್ಣುವು ಹೇಗೆ ಮಾಡಿದನೆಂಬುದನ್ನು ಸಾವಧಾನವಾಗಿ ಕೇಳಿ ತಿಳಿದುಕೊಂಡು, ಆ ಮೇಲೆ ಶಾಸ್ತ್ರದಲ್ಲಿ ಹೇಳಿದಂತೆ ಆಯಾಯ ಕರ್ಮಗಳಿಂದ ಅಂಬಾಯಾಗವನ್ನು ನಾನೂ ಮಾಡುತ್ತೇನೆ.

|| ವ್ಯಾಸ ಉವಾಚ ||

**ರಾಜನ್ ಶೃಣು ಮಹಾಭಾಗ ವಿಸ್ತರಂ ಪರಮಾದ್ಭುತಂ ।**
**ಯಥಾ ಭಗವತಾ ಯಜ್ಞಃ ಕೃತಶ್ಚ ವಿಧಿಪೂರ್ವಕಃ ॥೪॥**

ತುಂಬ ಪುಣ್ಯಶಾಲಿಯಾದ ಓ ಜನಮೇಜಯರಾಜನೇ, ಹಿಂದೆ ಆ ಭಗವಂತನಾದ ನಾರಾಯಣನು ಶಾಸ್ತ್ರದ ನಿಯಮದಂತೆ ದೇವೀಯಾಗವನ್ನು ಹೇಗೆ ಮಾಡಿದನೆಂಬ ತುಂಬ ಆಶ್ಚರ್ಯಕರವಾದ ವೃತ್ತಾಂತವನ್ನು ಕೇಳು.

**ವಿಸರ್ಜಿತಾ ಯದಾ ದೇವ್ಯಾ ದತ್ವಾ ಶಕ್ತೀಶ್ಚ ತಾಸ್ತ್ರಯಃ ।**
**ಕಾಜೇಶಾಃ ಪುರುಷಾಃ ಜಾತಾ ವಿಮಾನವರಮಾಸ್ಥಿತಾಃ ॥೫॥**

ಆ ಮಣಿದ್ವೀಪದಲ್ಲಿ ಯಾವಾಗ ಆ ಮೂವರೂ, ಸರಸ್ವತೀ, ಲಕ್ಷ್ಮೀ, ಪಾರ್ವತೀ ರೂಪರಾದ ಮೂರು ಶಕ್ತಿಗಳನ್ನು ಕೊಟ್ಟು ದೇವಿಯಿಂದ ಬ್ರಹ್ಮ ವಿಷ್ಣು ಪರಮೇಶ್ವರರು ಕಳುಹಿಸಲ್ಪಟ್ಟರೋ ಆ ಮೇಲೆ ಅವರು ಪುನಃ ತಮ್ಮ ಪುರುಷರೂಪವನ್ನು ಪಡೆದು ಆ ಶಕ್ತಿಗಳೊಡನೆ ಶ್ರೇಷ್ಠವಾದ ಆ ವಿಮಾನವನ್ನು ಹತ್ತಿದವರಾದರು.

**ಪ್ರಾಪ್ತಾ ಮಹಾರ್ಣವಂ ಘೋರಂ ತ್ರಯಸ್ತೇ ವಿಬುಧೋತ್ತಮಾಃ ।**
**ಚಕ್ರುಃ ಸ್ಥಾನಾನಿ ವಾಸಾರ್ಥಂ ಸಮುತ್ಪಾದ್ಯ ಧರಾಂ ಸ್ಥಿತಾಃ ॥೬॥**

ಮುಂದೆ ಆ ವಿಮಾನದಲ್ಲಿ ಹೋಗುತ್ತಾ ದೇವಶ್ರೇಷ್ಠರಾದ ಅವರು ಭಯಂಕರವಾದ ದೊಡ್ಡ ಸಮುದ್ರವನ್ನು ಸೇರಿದರು. ಅಲ್ಲಿ ಅವರು ವಾಸಕ್ಕಾಗಿ ಭೂಮಿಯನ್ನು ಸೃಷ್ಟಿಸಿ ಅದರ ಮೇಲೆ ತಮ್ಮ ವಾಸಸ್ಥಾನಗಳನ್ನು ಕಲ್ಪಿಸಿಕೊಂಡು ಇರಲು ಪ್ರಾರಂಭಿಸಿದರು.

**ಆಧಾರಶಕ್ತಿರಚಲಾ ಮುಕ್ತಾ ದೇವ್ಯಾ ಸ್ವಯಂ ತತಃ**
**ತದಾ ಧಾರಾ ಸ್ಥಿತಾ ಜಾತಾ ಧರಾ ಮೇದಃಸಮನ್ವಿತಾ ॥೭॥**

ಆ ಭೂಮಿಯು ನಿಲ್ಲುವುದಕ್ಕಾಗಿ ದೇವಿಯು ತಾನೇ ಯಾವಾಗಲೂ ಅಲು ಗಾಡದೆ ಸ್ಥಿರವಾಗಿರುವಂತೆ ಆಧಾರಶಕ್ತಿಯನ್ನು ಭೂಮಿಗೆ ಕೊಟ್ಟಳು. ಆ ಶಕ್ತಿಯ ಆಧಾರದ ಮೇಲೆ ಭೂಮಿಯು ಮಧುಕೈಟಭರ ಮೇದಸ್ಸಿನಿಂದ ಕೂಡಿ ಉಂಟಾಯಿತು.

**ಮಧುಕೈಟಭಯೋರ್ಮೇದಸ್ಸಂಯೋಗಾನ್ಮೇದಿನೀ ಸ್ಮೃತಾ ।**
**ಧಾರಣಾಚ್ಚ ಧರಾ ಪ್ರೋಕ್ತಾ ಪೃಥ್ವೀ ವಿಸ್ತಾರಯೋಗತಃ ॥೮॥**

ಮಧುಕೈಟಭರೆಂಬ ದೈತ್ಯರ ಕೊಬ್ಬಿನ ಸಂಬಂಧ ಉಂಟಾದುದರಿಂದ ಭೂಮಿಯು ಮೇದಿನೀ ಎಂದೂ, ಪ್ರಪಂಚವನ್ನೆಲ್ಲಾ ಧರಿಸಿರುವುದರಿಂದ ಧರೆಯೆಂಬು ದಾಗಿಯೂ, ತುಂಬ ವಿಶಾಲವಾಗಿರುವುದರಿಂದ ಪೃಥ್ವೀ ಎಂದೂ ಹೆಸರುಳ್ಳವಳಾಗಿ ಪ್ರಸಿದ್ಧಳಾದಳು.

**ಮಹೀ ಚಾಪಿ ಮಹೀಯಸ್ತ್ವಾದ್ಧೃತಾ ಸಾ ಶೇಷಮಸ್ತಕೇ ।**
**ಗಿರಯಶ್ಚ ಕೃತಾಃ ಸರ್ವೇ ಧಾರಣಾರ್ಥಂ ಪ್ರವಿಸ್ತರಾಃ ॥೯॥**

ತುಂಬ ದೊಡ್ಡದಾಗಿರುವುದರಿಂದ ಭೂಮಿಯು ಮಹೀ ಎಂದು ಕರೆಯ ಲ್ಪಟ್ಟಿದೆ. ಈ ಭೂಮಿಯು ಶೇಷನೆಂಬ ನಾಗರಾಜನ ತಲೆಯಲ್ಲಿ ಧರಿಸಲ್ಪಟ್ಟಿದೆ. ಈ ಭೂಮಿಯು ಒಂದೇ ಸಮನಾಗಿ ನಿಲ್ಲುವುದಕ್ಕಾಗಿಯೇ ವಿಶಾಲವಾದ ಎಲ್ಲಾ ಪರ್ವತ ಗಳೂ ಅಲ್ಲಲ್ಲಿ ಸೃಷ್ಟಿಸಿಡಲ್ಪಟ್ಟಿವೆ.

**ಲೋಹಕೀಲಂ ಯಥಾ ಕಾಷ್ಠೇ ತಥಾ ತೇ ಗಿರಯಃ ಕೃತಾಃ ।**
**ಮಹೀಧರಾ ಮಹಾರಾಜ ಪ್ರೋಚ್ಯಂತೇ ವಿಬುಧೈರ್ಜನೈಃ ॥೧೦॥**

ಯಾವುದಾದರೊಂದು ಮರದ ವಸ್ತುವು ಸರಿಯಾಗಿ, ಮಟ್ಟವಾಗಿ ಇರುವುದ ಕ್ಕಾಗಿ ಹೇಗೆ ಕಬ್ಬಿಣದ ಮೊಳೆಗಳನ್ನು ಅದರಲ್ಲಿ ಹೊಡೆಯುವರೋ ಅದರಂತೆ ಭೂಮಿಯು ಸರಿಯಾಗಿರುವುದಕ್ಕಾಗಿ ಪರ್ವತಗಳು ಸೃಷ್ಟಿಸಲ್ಪಟ್ಟಿವೆ. ಆದುದರಿಂದ ತಿಳಿದವರು ಪರ್ವತಗಳನ್ನು ಮಹೀಧರಗಳೆನ್ನುವರು.

**ಜಾತರೂಪಮಯೋ ಮೇರುರ್ಬಹುಯೋಜನವಿಸ್ತರಃ ।**
**ಕೃತೋ ಮಣಿಮಯೈಃ ಶೃಂಗೈಃ ಶೋಭಿತಃ ಪರಮಾದ್ಭುತಃ ॥೧೧॥**

ಭಂಗಾರರೂಪವೇ ಆದ ಮತ್ತು ಅನೇಕ ಗಾವುದಗಳಷ್ಟು ವಿಶಾಲವಾಗಿರುವ ರತ್ನಮಯಗಳಾದ ಶಿಖರಗಳಿಂದ ಬೆಳಗುತ್ತಿರುವ, ನೋಡುವವರಿಗೆ ಅತ್ಯಂತ ಆಶ್ಚರ್ಯ ಕರವಾದ ಮೇರುಪರ್ವತವು ಸೃಷ್ಟಿಸಲ್ಪಟ್ಟಿತು.

**ಮರೀಚಿರ್ನಾರದೋಽತ್ರಿಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ।**
**ದಕ್ಷೋ ವಸಿಷ್ಠ ಇತ್ಯೇತೇ ಬ್ರಹ್ಮಣಃ ಪ್ರಥಿತಾಃ ಸುತಾಃ ॥೧೨॥**

ಮರೀಚಿಋಷಿ, ನಾರದಮುನಿ, ಅತ್ರಿಮುನಿ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ವಶಿಷ್ಠಋಷಿ ಈ ಒಂಭತ್ತು ಜನರು ಬ್ರಹ್ಮನ ಪ್ರಸಿದ್ಧರಾದ ಮಾನಸಪುತ್ರರು.

**ಮರೀಚೇಃ ಕಶ್ಯಪೋ ಜಾತೋ ದಕ್ಷಕನ್ಯಾಸ್ತ್ರಯೋದಶ ।**
**ತಾಭ್ಯೋ ದೇವಾಶ್ಚ ದೈತ್ಯಾಶ್ಚ ಸಮುತ್ಪನ್ನಾ ಹ್ಯನೇಕಶಃ ॥೧೩॥**

ಇವರಲ್ಲಿ ಮರೀಚಿಯಿಂದ ಕಾಶ್ಯಪಮುನಿಯು ಹುಟ್ಟಿದನು. ದಕ್ಷಬ್ರಹ್ಮನಿಗೆ ಹದಿಮೂರುಮಂದಿ ಕನ್ಯೆಯರು ಹುಟ್ಟಿದರು. ಆ ಕನ್ಯೆಯರಲ್ಲಿ ಕಶ್ಯಪನಿಂದ ಮುಂದೆ ದೇವತೆಗಳೂ, ರಾಕ್ಷಸರೂ ಹಲವುಬಗೆಗಳಾಗಿ ಜನಿಸಿದರು.

**ತತಸ್ತು ಕಾಶ್ಯಪೀ ಸೃಷ್ಟಿಃ ಪ್ರವೃತ್ತಾ ಚಾತಿವಿಸ್ತರಾ ।**
**ಮನುಷ್ಯಪಶುಸರ್ಪಾದಿಜಾತಿಭೇದೈರನೇಕಧಾ ॥೧೪॥**

ಆ ಮೇಲೆ ಕಶ್ಯಪಬ್ರಹ್ಮನ ಸೃಷ್ಟಿಯು, ಮನುಷ್ಯರು, ಮೃಗಗಳು, ಸರ್ಪಗಳು ಮುಂತಾದ ಅನೇಕಜಾತಿಗಳ ರೂಪವಾಗಿ ತುಂಬ ದೊಡ್ಡದಾಗಿ ವಿಸ್ತಾರವಾಗಿ ಮುಂದುವರಿಯಿತು.

**ಬ್ರಹ್ಮಣಶ್ಚಾರ್ಧದೇಹಾತ್ತು ಮನುಃ ಸ್ವಾಯಂಭವೋಽಭವತ್ ।**
**ಶತರೂಪಾ ತಥಾ ನಾರೀ ಸಂಜಾತಾ ವಾಮಭಾಗತಃ ॥೧೫॥**

ಬ್ರಹ್ಮನ ದೇಹದ ಬಲಗಡೆಯ ಅರ್ಧಭಾಗದಿಂದ ಸ್ವಾಯಂಭುವನೆಂಬ ಮನುವು ಹುಟ್ಟಿದನು. ಎಡಭಾಗದಿಂದ ಶತರೂಪಾ ಎಂದರೆ ಅನೇಕ ರೂಪಗಳುಳ್ಳ ವಳು ಎಂಬ ಹೆಸರಿನ ಸ್ತ್ರೀಯು ಹುಟ್ಟಿದಳು.

**ಪ್ರಿಯವ್ರತೋತ್ತಾನಪಾದೌ ಸುತೌ ತಸ್ಯಾ ಬಭೂವತುಃ ।**
**ತಿಸ್ರಃ ಕನ್ಯಾ ವರಾರೋಹಾ ಹ್ಯಭವನ್ನತಿಸುಂದರಾಃ ॥೧೬॥**

ಆ ಶತರೂಪೆಗೆ ಪ್ರಿಯವ್ರತ, ಉತ್ತಾನಪಾದರೆಂಬಿಬ್ಬರು ಗಂಡುಮಕ್ಕಳೂ ಮತ್ತು ಶ್ರೇಷ್ಠಜಾತಿಯವರಾದ ಕನ್ಯೆಯರೂ ಹುಟ್ಟಿದರು.

**ಏವಂ ಸೃಷ್ಟಿಂ ಸಮುತ್ಪಾದ್ಯ ಭಗವಾನ್ ಕಮಲೋದ್ಭವಃ ।**
**ಚಕಾರ ಬ್ರಹ್ಮಲೋಕಂ ಚ ಮೇರುಶೃಂಗೇ ಮನೋಹರಂ ॥೧೭॥**

ಈ ರೀತಿಯಲ್ಲಿ ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿದ ಬ್ರಹ್ಮನು ಜಗತ್ತಿನ ಸೃಷ್ಟಿಯನ್ನು ಮಾಡಿ, ಮೇಲೆ ಹೇಳಿದ ಮೇರು ಪರ್ವತದ ಶಿಖರದಲ್ಲಿ ಸುಂದರವಾದ ಬ್ರಹ್ಮಲೋಕವನ್ನು (ಸತ್ಯಲೋಕವನ್ನು) ನಿರ್ಮಿಸಿದನು.

**ವೈಕುಂಠಂ ಭಗವಾನ್ವಿಷ್ಣೂ ರಮಾರಮಣಮುತ್ತಮಂ ।**
**ಕ್ರೀಡಾಸ್ಥಾನಂ ಸುರಮ್ಯಂ ಚ ಸರ್ವಲೋಕೋಪರಿ ಸ್ಥಿತಂ ॥೧೮॥**

ಹಾಗೆಯೇ ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವೂ ತನ್ನ ಪತ್ನಿಯಾದ ಲಕ್ಷ್ಮಿಗೆ ಪ್ರೀತಿಕರವಾದ, ಅತ್ಯಂತಸುಂದರವಾದ ಮತ್ತು ಎಲ್ಲ ಲೋಕಗಳಿಗಿಂತಲೂ ತುಂಬ ಮೇಲಿರತಕ್ಕ ವೈಕುಂಠವೆಂಬ ಸ್ಥಳವನ್ನು ತನ್ನ ವಿಹಾರಕ್ಕಾಗಿ ಮಾಡಿಕೊಂಡನು.

**ಶಿವೋಽಪಿ ಪರಮಂ ಸ್ಥಾನಂ ಕೈಲಾಸಾಖ್ಯಂ ಚಕಾರ ಹ ।**
**ಸಮಾಸಾದ್ಯ ಭೂತಗಣಂ ವಿಜಹಾರ ಯಥಾರುಚಿ ॥೧೯॥**

ಪರಮೇಶ್ವರನೂ, ಕೈಲಾಸವೆಂಬ ತುಂಬ ಉತ್ಕೃಷ್ಟವಾದ ಸ್ಥಾನವನ್ನು ಮಾಡಿಕೊಂಡು ಅದರಲ್ಲಿ ಭೂತಗಣಗಳೊಡನೆ ಬೇಕಾದಂತೆ ವಿಹರಿಸತೊಡಗಿದನು.

**ಸ್ವರ್ಗಸ್ತ್ರಿವಿಷ್ಟಪೋ ಮೇರುಶಿಖರೋಪರಿ ಕಲ್ಪಿತಃ ।**
**ತಚ್ಚ ಸ್ಥಾನಂ ಸುರೇಂದ್ರಸ್ಯ ನಾನಾರತ್ನವಿರಾಜಿತಂ ॥೨೦॥**

ಆ ಮೇರುಪರ್ವತದ ಶಿಖರದ ಮೇಲ್ಭಾಗದಲ್ಲಿಯೂ ಪಾತಾಳಲೋಕದಿಂದ ಮೂರನೆಯ ಲೋಕವಾದ ಸ್ವರ್ಗವು ರಚಿತವಾಯಿತು. ಅದು ಕಲ್ಪವೃಕ್ಷ, ಕಾಮ ಧೇನು ಮುಂತಾದ ಅನೇಕ ಶ್ರೇಷ್ಠವಸ್ತುಗಳಿಂದ ಕೂಡಿದುದಾಗಿ ದೇವತೆಗಳಿಗೆಲ್ಲಾ ಒಡೆಯನಾದ ಇಂದ್ರನ ವಾಸಸ್ಥಾನವಾಯಿತು.

**ಸಮುದ್ರಮಥನಾತ್ಪ್ರಾಪ್ತಃ ಪಾರಿಜಾತಸ್ತರೂತ್ತಮಃ ।**
**ಚತುರ್ದಂತಸ್ತಥಾ ನಾಗಃ ಕಾಮಧೇನುಶ್ಚ ಕಾಮದಾ ॥೨೧॥**

ಸಮುದ್ರವನ್ನು ಕಡೆಯುವಿಕೆಯಿಂದ ಹುಟ್ಟಿದ, ವೃಕ್ಷಗಳಲ್ಲಿ ಉತ್ತಮವಾದ ಪಾರಿಜಾತವೃಕ್ಷವೂ, ನಾಲ್ಕು ಕೊಂಬುಗಳುಳ್ಳ ಐರಾವತವೆಂಬ ಆನೆಯೂ, ಎಲ್ಲ ಇಷ್ಟಾರ್ಥಗಳನ್ನೂ ಕರೆಯುವ ಕಾಮಧೇನುವೆಂಬ ಹಸುವೂ,

**ಉಚ್ಚೈಃಶ್ರವಾಸ್ತಥಾಶ್ವೋ ವೈ ರಂಭಾದ್ಯಪ್ಸರಸಸ್ತಥಾ ।**
**ಇಂದ್ರೇಣೋಪಾತ್ತಮಖಿಲಂ ಜಾತಂ ವೈ ಸ್ವರ್ಗಭೂಷಣಂ ॥೨೨॥**

ಉಚ್ಚೈಃಶ್ರವಸ್ಸೆಂಬ ಶ್ರೇಷ್ಠವಾದ ಕುದುರೆಯೂ, ರಂಭೆಯೇ ಮೊದಲಾದ ಅಪ್ಸರಸ್ತ್ರೀಯರೂ ಹುಟ್ಟಿದರು. ಇವೆಲ್ಲವೂ ಸ್ವರ್ಗಾಧಿಪತಿಯಾದ ಇಂದ್ರನಿಗೆ ಲಭಿಸಿತು. ಆದರಿಂದ ಸ್ವರ್ಗಕ್ಕೆ ಮತ್ತಷ್ಟು ಅಲಂಕಾರವಾಯಿತು.

**ಧನ್ವಂತರಿಶ್ಚಂದ್ರಮಾಶ್ಚ ಸಾಗರಾಚ್ಚ ಸಮುದ್ಭವೌ ।**
**ಸ್ವರ್ಗೇ ಸ್ಥಿತೌ ವಿರಾಜೇತೇ ದೇವೌ ಬಹುಗಣೈರ್ವೃತೌ ॥೨೩॥**

ಆ ಸಮುದ್ರದಿಂದಲೇ, ವೈದ್ಯರಾಜನಾದ ಧನ್ವಂತರಿಯೂ, ಚಂದ್ರನೂ ಹುಟ್ಟಿದರು. ಮುಂದೆ ಅನೇಕಬಗೆಯ ತಮ್ಮ ಪರಿವಾರದೊಂದಿಗೆ, ಸ್ವರ್ಗದಲ್ಲಿ ನೆಲಸಿ ಅವರಿಬ್ಬರೂ ಈಗಲೂ ಬೆಳಗುತ್ತಿರುವರು.

**ಏವಂ ಸೃಷ್ಟಿಃ ಸಮುತ್ಪನ್ನಾ ತ್ರಿವಿಧಾ ನೃಪಸತ್ತಮ ।**
**ದೇವತಿರ್ಯಙ್ಮನುಷ್ಯಾದಿಭೇದೈರ್ವಿವಿಧಕಲ್ಪಿತಾ ॥೨೪॥**

ಓ ರಾಜಶ್ರೇಷ್ಠನೇ, ಈ ರೀತಿಯಾಗಿ ದೇವತೆಗಳು, ಮನುಷ್ಯರು ಮತ್ತು ಇತರ ಪಶುಗಳೆಂದು ಮೂರು ವಿಧವಾಗಿ ಸೃಷ್ಟಿಯು ಆಯಿತು. ಈ ದೇವಮನುಷ್ಯಾದಿಗಳಲ್ಲಿ ಅನೇಕ ಭೇದಗಳು ಉಂಟಾದವು.

**ಅಂಡಜಾಃ ಸ್ವೇದಜಾಶ್ಚೈವ ಚೋದ್ಭಿಜ್ಜಾಶ್ಚ ಜರಾಯುಜಾಃ ।**
**ಚತುರ್ಭೇದೈಃ ಸಮುತ್ಪನ್ನಾ ಜೀವಾಃ ಕರ್ಮಯುತಾಃ ಕಿಲ ॥೨೫॥**

ಮೇಲೆ ಹೇಳಿದ ಮೂರುವಿಧ ಪ್ರಾಣಿಗಳೇ ತಮ್ಮ ತಮ್ಮ ಕರ್ಮಗಳಿಂದ ನಾಲ್ಕು ಬಗೆಯ ದೇಹಗಳನ್ನು ಪಡೆಯುತ್ತವೆ ಎಂದೂ ವಿಂಗಡಿಸಬಹುದು. ಹೇಗೆಂ

ದರೆ, ಮೊಟ್ಟೆಯಿಂದ ಹುಟ್ಟುವ ಪಕ್ಷಿ ಮುಂತಾದವು ಅಂಡಜಗಳೆಂದೂ, ಬೆವರಿನಿಂದ ಹುಟ್ಟುವ ಕ್ರಿಮಿಕೀಟಾದಿಗಳು ಸ್ವೇದಜಗಳೆಂದೂ, ಭೂಮಿಯನ್ನು ಒಡೆದು ಮೇಲೆ ಬರತಕ್ಕ ವೃಕ್ಷ ಮೊದಲಾದವುಗಳು ಉದ್ಭಿಜ್ಜಗಳೆಂದೂ, ಗರ್ಭದಲ್ಲಿ ಹುಟ್ಟುವ ಮನುಷ್ಯಾದಿ ಪ್ರಾಣಿಗಳು ಜರಾಯುಜಗಳೆಂದೂ ನಾಲ್ಕು ಬಗೆಯಾಗಿವೆ.

**ಏವಂ ಸೃಷ್ಟಿಂ ಸಮಾಸಾದ್ಯ ಬ್ರಹ್ಮವಿಷ್ಣುಮಹೇಶ್ವರಾಃ ।**
**ವಿಹಾರಂ ಸ್ವೇಷು ಸ್ಥಾನೇಷು ಚಕ್ರುಃ ಸರ್ವೇ ಯಥೇಪ್ಸಿತಂ ॥೨೬॥**

ಹೀಗೆ ಬ್ರಹ್ಮ ವಿಷ್ಣು ಮಹೇಶ್ವರರು ತಮತಮಗೆ ಬೇಕಾದ ಪದಾರ್ಥದ ಸೃಷ್ಟಿಯನ್ನು ಪಡೆದವರಾಗಿ ಎಲ್ಲರೂ ತಮ್ಮ ತಮ್ಮ ಸತ್ಯಲೋಕವೇ ಮೊದಲಾದ ಸ್ಥಾನಗಳಲ್ಲಿ ತಮ್ಮ ಇಷ್ಟಬಂದಂತೆ ವಿಹರಿಸತೊಡಗಿದರು.

**ಏವಂ ಪ್ರವರ್ತಿತೇ ಸರ್ಗೇ ಭಗವಾನ್ ಪ್ರಭುರಚ್ಯುತಃ ।**
**ಮಹಾಲಕ್ಷ್ಮ್ಯಾ ಸಮಂ ತತ್ರ ಚಿಕ್ರೀಡ ಭುವನೇ ಸ್ವಕೇ ॥೨೭॥**

ಹೀಗೆ ಸೃಷ್ಟಿಯು ಮುಂದುವರಿಯಲು, ಷಡ್ಗುಣೈಶ್ವರ್ಯಸಂಪನ್ನನಾದ ಮತ್ತು ಜಗತ್ತಿಗೆ ಒಡೆಯನಾದ ಅಚ್ಯುತನು ತನ್ನ ಪ್ರಿಯೆಯಾದ ಮಹಾಲಕ್ಷ್ಮಿಯೊಡನೆ ತನ್ನ ನಿವಾಸಸ್ಥಾನವಾದ ವೈಕುಂಠದಲ್ಲಿ ವಿಹರಿಸತೊಡಗಿದನು.

ಹೀಗೆ ಇದುವರಿವಿಗೂ ನಡೆದ ಸೃಷ್ಟಿಕಾರ್ಯದಲ್ಲಿ ಬ್ರಹ್ಮವಿಷ್ಣುಮಹೇಶ್ವರರು ಸ್ವತಂತ್ರರಲ್ಲವು. ಪರಾಶಕ್ತಿರೂಪಳಾದ ದೇವಿಯೇ ಸಾಕ್ಷಾತ್ತಾಗಿ ಸ್ವತಂತ್ರವಾಗಿ ಸೃಷ್ಟಿಕಾರ್ಯದ ಈ ಮುಖ್ಯಭಾಗವನ್ನು ನೆರವೇರಿಸಿದಳು. ಇದರಲ್ಲಿ ತ್ರಿಮೂರ್ತಿಗಳು ಆ ಶಕ್ತಿಗೆ ಅಧೀನರು. ಅವರೂ ಆ ಪರಾಶಕ್ತಿಯಿಂದ ಉಂಟಾದವರಾದುದರಿಂದ ಪರಿಮಿತವಾದ ಆಯುಸ್ಸುಳ್ಳವರು. ಆಧ್ಯಾತ್ಮಿಕ ಮೊದಲಾದ ಮೂರು ಬಗೆಯ ತಾಪ ಗಳಿಂದ ಕೂಡಿರುತ್ತಾರೆ. ಅವರೂ ಪಾಂಚಭೌತಿಕವಾದ ಶರೀರವುಳ್ಳವರಾಗಿದ್ದಾರೆ. ಒಂದು ಕಲ್ಪದಷ್ಟು ಆಯುಃಪರಿಮಾಣವುಳ್ಳವರು. ಅವರು ವೈಕುಂಠ ಕೈಲಾಸ ಸತ್ಯ ಲೋಕಗಳಲ್ಲಿ ತಮ್ಮ ತಮ್ಮ ಅಧಿಕಾರಸ್ಥಾನಗಳನ್ನು ಪಡೆದಿರುತ್ತಾರೆ. ಎಂದು ಮೊದ ಲನೆಯ ಅಧ್ಯಾಯದಲ್ಲಿ ಕೇಳಿದ್ದ ಪ್ರಶ್ನೆಗೆ ಉತ್ತರವನ್ನು ಹೇಳಿದುದಾಯಿತು. ಈ ಬ್ರಹ್ಮಾಂಡದ ಉತ್ಪತ್ತಿ ಮುಂತಾದ ವೃತ್ತಾಂತವನ್ನೂ ವಿವರಿಸಿದುದಾಯಿತು. ಈಗ ಅಂಬಾಯಾಗದ ವಿಷಯದಲ್ಲಿ ಸ್ವಲ್ಪಮಟ್ಟಿಗೆ ಸಂಕ್ಷೇಪವಾಗಿ ಹೇಳಿದ್ದ ಉತ್ತರವನ್ನು,

ಇನ್ನು ಮುಂದೆ ವಿಸ್ತಾರವಾಗಿ ವಿವರಗಳೊಡನೆ ನಿರೂಪಿಸಲಾಗುತ್ತದೆ. ಇದುವರೆಗೆ ನಡೆದ ಸಂಗತಿಗಳನ್ನು ಹೇಳಿ ಮುಂದೆ ಏನು ನಡೆಯಿತೆಂಬುದನ್ನು ತಿಳಿಯಿಸುತ್ತಾರೆ.

**ಏಕಸ್ಮಿನ್ ಸಮಯೇ ವಿಷ್ಣುರ್ವೈಕುಂಠೇ ಸಂಸ್ಥಿತಃ ಪುರಾ ।**
**ಸುಧಾಸಿಂಧುಸ್ಥಿತಂ ದ್ವೀಪಂ ಸಸ್ಮಾರ ಮಣಿಮಂಡಿತಂ ॥೨೮॥**

ಹೀಗಿರಲು, ಒಂದುಕಾಲದಲ್ಲಿ ವೈಕುಂಠದಲ್ಲಿರುತ್ತಾ ವಿಷ್ಣುವು ಹಿಂದೆ ಅಮೃತ ಸಮುದ್ರದಲ್ಲಿರತಕ್ಕ ರತ್ನಗಳಿಂದ ಬೆಳಗುತ್ತಲಿರುವ ದೇವಿಯ ವಾಸಸ್ಥಾನವಾದ ಮಣಿದ್ವೀಪವನ್ನು ಸ್ಮರಿಸಿದನು.

**ಯತ್ರ ದೃಷ್ಟ್ವಾ ಮಹಾಮಾಯಾಂ ಮಂತ್ರಶ್ಚಾಸಾದಿತಃ ಶುಭಃ ।**
**ಸ್ಮೃತ್ವಾ ತಾಂ ಪರಮಾಂ ಶಕ್ತಿಂ ಸ್ತ್ರೀಭಾವಂ ಗಮಿತೋ ಯಯಾ ॥೨೯॥**

ವಿಷ್ಣುವು ಯಾವ ಮಣಿದ್ವೀಪದಲ್ಲಿ ಮಹಾಮಾಯಾಸ್ವರೂಪಿಣಿಯಾದ ದೇವಿಯನ್ನು ನೋಡಿ, ಅವಳ ಮಂಗಳಕರವಾದ ಬೀಜಮಂತ್ರವನ್ನು ಪಡೆದು ಮತ್ತು ತುಂಬ ಉತ್ಕೃಷ್ಟಳಾದ ಯಾರ ಶಕ್ತಿಮಹಿಮೆಯಿಂದ ತಾನು ಹೆಣ್ಣುರೂಪವುಳ್ಳವ ನಾಗಿದ್ದನೋ ಅಂತಹ ದೇವಿಯನ್ನು ಆರಾಧಿಸಲು ಅಪೇಕ್ಷೆಯುಳ್ಳವನಾದನು.

**ಯಜ್ಞಂ ಕರ್ತುಂ ಮನಶ್ಚಕ್ರೇ ಅಂಬಿಕಾಯಾ ರಮಾಪತಿಃ ।**
**ಉತ್ತೀರ್ಯ ಭುವನಾತ್ತಸ್ಮಾತ್ಸಮಾಹೂಯ ಮಹೇಶ್ವರಂ ॥೩೦॥**

ಜಗತ್ತಿಗೆ ತಾಯಿಯಾದ ಆ ದೇವಿಯ ಯಾಗವನ್ನು ಮಾಡಲು ಲಕ್ಷ್ಮೀಪತಿ ಯಾದ ವಿಷ್ಣುವು ಸಂಕಲ್ಪಮಾಡಿದನು. ಆಮೇಲೆ ತನ್ನ ಲೋಕದಿಂದ ಬಂದು ಮಹೇಶ್ವರನಾದ ಶಂಕರನನ್ನು ಕರೆದನು.

**ಬ್ರಹ್ಮಾಣಂ ವರುಣಂ ಶಕ್ರಂ ಕುಬೇರಂ ಪಾವಕಂ ಯಮಂ ।**
**ವಸಿಷ್ಠಂ ಕಶ್ಯಪಂ ದಕ್ಷಂ ವಾಮದೇವಂ ಬೃಹಸ್ಪತಿಂ ॥೩೧॥**

ಮತ್ತು ಚತುರ್ಮುಖಬ್ರಹ್ಮನನ್ನೂ, ಇಂದ್ರನನ್ನೂ, ವರುಣನನ್ನೂ, ಕುಬೇರ ನನ್ನೂ, ಅಗ್ನಿಯನ್ನೂ, ಯಮಧರ್ಮರಾಜನನ್ನೂ, ಬ್ರಹ್ಮರ್ಷಿಯಾದ ವಸಿಷ್ಠನನ್ನೂ, ಕಶ್ಯಪಬ್ರಹ್ಮನನ್ನೂ, ದಕ್ಷಪ್ರಜಾಪತಿಯನ್ನೂ, ವಾಮದೇವಮುನಿಯನ್ನೂ, ದೇವಾ ಚಾರ್ಯನಾದ ಬೃಹಸ್ಪತಿಯನ್ನೂ ಕರೆದನು.

**ಸಂಭಾರಂ ಕಲ್ಪಯಾಮಾಸ ಯಜ್ಞಾರ್ಥಂ ಚಾತಿವಿಸ್ತರಂ ।**
**ಮಹಾವಿಭವಸಂಯುಕ್ತಂ ಸಾತ್ತ್ವಿಕಂ ಚ ಮನೋಹರಂ ॥೩೨॥**

ಆ ದೇವೀಯಾಗಕ್ಕಾಗಿ ತುಂಬ ದೊಡ್ಡದಾಗಿಯೂ ಬಹಳ ವೈಭವವುಳ್ಳದ್ದಾಗಿಯೂ, ಸಾತ್ತ್ವಿಕವಾಗಿಯೂ, ಇರುವ ನೋಡುವವರ ಮನಸ್ಸನ್ನು ಸೂರೆಗೊಳ್ಳುವಂತಹ ಸಾಮಗ್ರಿಗಳ ಸಿದ್ಧತೆಯನ್ನು ಮಾಡಿದನು.

**ಮಂಡಪಂ ವಿತತಂ ತತ್ರ ಕಾರಯಾಮಾಸ ಶಿಲ್ಪಿಭಿಃ ।**
**ಋತ್ವಿಜೋ ವರಯಾಮಾಸ ಸಪ್ತವಿಂಶತಿಸುವ್ರತಾನ್ ॥೩೩॥**

ಅಲ್ಲಿ ವಿಶಾಲವಾದ ಯಜ್ಞಶಾಲೆಯನ್ನು ಸುಂದರವಾಗಿ ಶಿಲ್ಪಿಗಳಿಂದ ಕಟ್ಟಿಸಿದನು. ಆ ಯಜ್ಞಕ್ಕಾಗಿ ತುಂಬ ತಪೋನಿರತರಾದ ಇಪ್ಪತ್ತೇಳು ಮಂದಿಋತ್ವಿಕ್ಕುಗಳನ್ನು ಪ್ರಾರ್ಥಿಸಿದನು.

**ಚಿತಿಂ ಚ ಕಾರಯಾಮಾಸ ವೇದೀಶ್ಚೈವ ಸುವಿಸ್ತರಾಃ ।**
**ಪ್ರಜೇಪುರ್ಬ್ರಾಹ್ಮಣಾ ಮಂತ್ರಾನ್ ದೇವ್ಯಾ ಬೀಜಸಮನ್ವಿತಾನ್॥೩೪॥**

ಸುಂದರವಾದ ಹೋಮಕುಂಡವನ್ನೂ, ತುಂಬ ವಿಶಾಲವಾದ ಯಾಗದ ವೇದಿಕೆಗಳನ್ನೂ ಮಾಡಿಸಿದನು. ಅಲ್ಲಿ ಆ ಬ್ರಾಹ್ಮಣರು ದೇವಿಯ ಬೀಜಾಕ್ಷರದಿಂದ ಕೂಡಿರುವ ಮಂತ್ರಗಳನ್ನು ಚೆನ್ನಾಗಿ ಜಪಿಸುತ್ತಿದ್ದರು.

**ಜುಹುವುಸ್ತೇ ಹವಿಃ ಕಾಮಂ ವಿಧಿವತ್ಪರಿಕಲ್ಪಿತೇ ।**
**ಕೃತೇ ತು ವಿತತೇ ಹೋಮೋ ವಾಗುವಾಚಾಶರೀರಿಣೀ ॥೩೫॥**

ಆ ಬ್ರಾಹ್ಮಣರು ಸಂತೋಷದಿಂದ ಶಾಸ್ತ್ರನಿಯಮದಂತೆ ರಚಿಸಲ್ಪಟ್ಟಿದ್ದ ಆ ಹೋಮಕುಂಡಗಳಲ್ಲಿ ಹವಿಸ್ಸಿನ ದ್ರವ್ಯಗಳನ್ನು ದೇವತೆಗಳಿಗಾಗಿ ಸಮರ್ಪಿಸುತ್ತಿದ್ದರು. ತುಂಬ ದೊಡ್ಡದಾದ ಆ ಹೋಮವು ಮುಗಿಯುತ್ತಿರಲು ಮುಂದೆ ಹೇಳುವಂತೆ ಒಂದಾನೊಂದು ಅಶರೀರವಾಣಿಯು ಕೇಳಿಸಿತು.

**ವಿಷ್ಣುಂ ತದಾ ಸಮಾಭಾಷ್ಯ ಸುಸ್ವರಾ ಮಧುರಾಕ್ಷರಾ ।**
**ವಿಷ್ಣೋ ತ್ವಂ ಭವ ದೇವಾನಾಂ ಹರೇ ಶ್ರೇಷ್ಠತಮಃ ಸದಾ ॥೩೬॥**

ಇಂಪಾದ ಧ್ವನಿಯುಳ್ಳ ಮತ್ತು ಮನೋಹರವಾದ ಅಕ್ಷರಗಳುಳ್ಳ ಆ ವಾಣಿಯು ವಿಷ್ಣುವನ್ನು ಸಂಬೋಧಿಸಿ, ಎಲೈ ವಿಷ್ಣುವೇ, ನೀನು ದೇವತೆಗಳಿಗೆಲ್ಲಾ ಯಾವಾಗಲೂ ಅತ್ಯಂತ ಶ್ರೇಷ್ಠನಾಗಿರುವೆ.

**ಮಾನ್ಯಶ್ಚ ಪೂಜನೀಯಶ್ಚ ಸಮರ್ಥಶ್ಚ ಸುರೇಷ್ವಪಿ ।**
**ಸರ್ವೇ ತ್ವಾಮರ್ಚಯಿಷ್ಯಂತಿ ಬ್ರಹ್ಮಾದ್ಯಾಶ್ಚ ಸನಾತನಾಃ ॥೩೭॥**

ತುಂಬ ಗೌರವಶಾಲಿಯೂ, ಎಲ್ಲರಿಂದಲೂ ಪೂಜಿಸಲು ಯೋಗ್ಯನೂ ಎಲ್ಲ ದೇವತೆಗಳಿಗಿಂತಲೂ ತುಂಬ ಸಮರ್ಥನೂ ಆಗು. ಬ್ರಹ್ಮನೇ ಮೊದಲಾದ ಇಂದ್ರನೊಡಗೂಡಿದ ದೇವತೆಗಳೂ ಸಹ ನಿನ್ನನ್ನು ಪೂಜಿಸುವರು.

**ಪ್ರಭವಿಷ್ಯಂತಿ ಭೋ ಭಕ್ತ್ಯಾ ಮಾನವಾ ಭುವಿ ಸರ್ವತಃ ।**
**ವರದಸ್ತ್ವಂ ಚ ಸರ್ವೇಷಾಂ ಭವಿತಾ ಮಾನವೇಷು ವೈ ॥೩೮॥**

ಮತ್ತು, ಎಲೈ ವಿಷ್ಣುವೇ, ಭೂಲೋಕದಲ್ಲಿ ಮನುಷ್ಯರು ನಿನ್ನಲ್ಲಿ ಭಕ್ತಿಯಿಂದ ಕೂಡಿದವರಾಗಿ ಎಲ್ಲ ಬಗೆಯ ಇಷ್ಟಾರ್ಥಗಳನ್ನು ಪಡೆಯುವುದರಲ್ಲಿ ಸಮರ್ಥರಾಗುತ್ತಾರೆ. ನೀನು ಆ ಮನುಷ್ಯರಲ್ಲಿ ಎಲ್ಲ ಭಕ್ತರಿಗೂ ಇಷ್ಟಾರ್ಥವನ್ನು ಕೊಡತಕ್ಕವನಾಗುವೆ.

**ಕಾಮದಃ ಸರ್ವದೇವಾನಾಂ ಪರಮಃ ಪರಮೇಶ್ವರಃ ।**
**ಸರ್ವಯಜ್ಞೇಷು ಮುಖ್ಯಸ್ತ್ವಂ ಪೂಜ್ಯಸ್ಸರ್ವೈಶ್ಚ ಯಾಜ್ಞಿಕೈಃ॥೩೯॥**

ಅಲ್ಲದೆ ನೀನು ಎಲ್ಲ ದೇವತೆಗಳಿಗೂ ಸಹ ಇಷ್ಟಾರ್ಥಗಳನ್ನು ಕೊಡತಕ್ಕವನೂ ಆ ಕಾರಣದಿಂದಲೇ ತುಂಬ ಉತ್ಕೃಷ್ಟನಾದ ಪರಮೇಶ್ವರನೂ ಆಗಿರುವೆ. ನೀನು ಎಲ್ಲಾ ಯಜ್ಞಯಾಗಗಳಲ್ಲೂ ಯಾಗ ಮಾಡತಕ್ಕ ಎಲ್ಲಾ ಯಜಮಾನರುಗಳಿಂದಲೂ ಪ್ರಧಾನವಾಗಿ ಪೂಜಿಸಲ್ಪಡತಕ್ಕವನಾಗುವೆ.

**ತ್ವಾಂ ಜನಾಃ ಪೂಜಯಿಷ್ಯಂತಿ ವರದಸ್ತ್ವಂ ಭವಿಷ್ಯಸಿ ।**
**ಶ್ರಯಿಷ್ಯಂತಿ ಚ ದೇವಾಸ್ತ್ವಾಂ ದಾನವೈರತಿಪೀಡಿತಾಃ ॥೪೦॥**

ನಿನ್ನನ್ನು ಎಲ್ಲಾ ಜನಗಳೂ ಅರ್ಚಿಸುವರು. ಅವರಿಗೆ ನೀನು ಬೇಕಾದುದನ್ನು ಕೊಡತಕ್ಕವನಾಗುವೆ. ಅಲ್ಲದೆ ದೇವತೆಗಳೂ ಸಹ ರಾಕ್ಷಸರಿಂದ ತುಂಬ ತೊಂದರೆಗೊಳಿಸಲ್ಪಟ್ಟವರಾಗಿ ನಿನ್ನನ್ನು ರಕ್ಷಣೆಗಾಗಿ ಆಶ್ರಯಿಸುತ್ತಾರೆ.

**ಶರಣಸ್ತ್ವಂ ಚ ಸರ್ವೇಷಾಂ ಭವಿತಾ ಪುರುಷೋತ್ತಮ ।**
**ಪುರಾಣೇಷು ಚ ಸರ್ವೇಷು ವೇದೇಷು ವಿತತೇಷು ಚ ॥೪೦॥**

ಪುರುಷರಿಗೆಲ್ಲ ಶ್ರೇಷ್ಠನಾದ ಓ ವಿಷ್ಣುವೇ, ನೀನು ಭಯಾರ್ತರಾದ ಸರ್ವರಿಗೂ ರಕ್ಷಕನು ಆಗುತ್ತೀಯೆ. ಅಲ್ಲದೆ, ಎಲ್ಲ ಪುರಾಣಗಳಲ್ಲೂ ವಿಸ್ತಾರವಾದ ವೇದಗಳಲ್ಲೂ ಸಹ,

**ತ್ವಂ ವೈ ಪೂಜ್ಯತಮಃ ಕಾಮಂ ಕೀರ್ತಿಸ್ತವ ಭವಿಷ್ಯತಿ ।**
**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭೂತಲೇ ॥೪೧॥**

ನೀನು ಎಲ್ಲರಿಗಿಂತಲೂ ಹೆಚ್ಚಾಗಿ ಪೂಜಿಸಲ್ಪಡಲು ಅರ್ಹನೆಂದು ನಿನಗೆ ಹೆಚ್ಚಾದ ಕೀರ್ತಿಯು ಬರುವುದು. ಮುಂದೆ ಯಾವಯಾವಾಗ ಈ ಸನಾತನಧರ್ಮಕ್ಕೆ ಅನಾದರವೂ ತಿರಸ್ಕಾರವೂ ಬಂದೊದಗುವುದೋ,

**ತದಾಂಶೇನಾವತೀರ್ಯಾಶು ಕರ್ತವ್ಯಂ ಧರ್ಮರಕ್ಷಣಂ ।**
**ಅವತಾರಾಃ ಸುವಿಖ್ಯಾತಾಃ ಪೃಥಿವ್ಯಾಂ ತವ ಭಾಗಶಃ ॥೪೩॥**

ಆಗಾಗ ನೀನು ನಿನ್ನ ಅಂಶದಿಂದ ಭೂಲೋಕದಲ್ಲಿ ಅವತಾರಮಾಡಿ ಆ ಸನಾತನಧರ್ಮದ ರಕ್ಷಣೆಯನ್ನು ಮಾಡಬೇಕು. ಆಗ ಮಾಡುವ ನಿನ್ನ ಅಂಶಗಳ ಅವತಾರಗಳು ಭೂಮಿಯಲ್ಲಿ ಮತ್ಸ್ಯ, ಕೂರ್ಮ ಮುಂತಾದುವು ಹತ್ತು ಎಂದು ಪ್ರತ್ಯೇಕವಾಗಿ ಪ್ರಸಿದ್ಧಿಹೊಂದುತ್ತವೆ.

**ಭವಿಷ್ಯಂತಿ ಧರಾಯಾಂ ವೈ ಮಾನನೀಯಾ ಮಹಾತ್ಮನಾಂ ।**
**ಅವತಾರೇಷು ಸರ್ವೇಷು ನಾನಾಯೋನಿಷು ಮಾಧವ ॥೪೪॥**

ಓ ಲಕ್ಷ್ಮೀಪ್ರಿಯನಾದ ವಿಷ್ಣುವೇ, ವರಾಹವೇ ಮೊದಲಾದ ನಾನಾಬಗೆಯ ತಿರ್ಯಕ್ಪ್ರಾಣಿಗಳ ಯೋನಿಗಳಲ್ಲಾದರೂ ಆಗುವ ನಿನ್ನ ಅವತಾರಸ್ವರೂಪಗಳನ್ನು ಭೂಮಿಯಲ್ಲಿ ಮಹಾತ್ಮರೂ ಗೌರವಿಸುವರು ಮತ್ತು ಪೂಜಿಸುವರು.

**ವಿಖ್ಯಾತಃ ಸರ್ವಲೋಕೇಷು ಭವಿತಾ ಮಧುಸೂದನ ।**
**ಅವತಾರೇಷು ಸರ್ವೇಷು ಶಕ್ತಿಸ್ತೇ ಸಹಚಾರಿಣೀ ॥೪೫॥**

ಮಧುವೆಂಬ ಅಸುರನನ್ನು ಸಂಹರಿಸಿದ ಓ ವಿಷ್ಣುವೇ, ನೀನು ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧನಾಗುತ್ತೀಯೆ. ಮತ್ತು ನಿನ್ನ ಎಲ್ಲಾ ಅವತಾರಗಳಲ್ಲೂ ಈ ಶಕ್ತಿಯು ಸಹಾಯಕಳಾಗಿ ನಿನ್ನ ಜೊತೆಯಲ್ಲಿ ಇರುತ್ತಾಳೆ.

**ಭವಿಷ್ಯತಿ ಮಮಾಂಶೇನ ಸರ್ವಕಾರ್ಯಪ್ರಸಾಧಿನೀ ।**
**ವಾರಾಹೀ ನಾರಸಿಂಹೀ ಚ ನಾನಾಭೇದೈರನೇಕಧಾ ॥೪೬॥**

ನನ್ನ ಅಂಶದಿಂದಲೇ ಹುಟ್ಟಿದವಳಾದ ಈ ಶಕ್ತಿಯೂ, ವಾರಾಹೀ ಮತ್ತು ನಾರಸಿಂಹೀ ಮುಂತಾದ ಅನೇಕ ರೂಪಗಳಿಂದ ಎಲ್ಲಾ ಕೆಲಸಗಳನ್ನೂ ನಿನಗೆ ಸಾಧಿಸಿಕೊಡುತ್ತಾಳೆ.

**ನಾನಾಯುಧಾಃ ಶುಭಾಕಾರಾಃ ಸರ್ವಾಭರಣಮಂಡಿತಾಃ ।**
**ತಾಭಿರ್ಯುಕ್ತಃ ಸದಾ ವಿಷ್ಣೋ ಸುರಕಾರ್ಯಾಣಿ ಮಾಧವ ॥೪೭॥**

ಓ ವಿಷ್ಣುವೇ, ಆ ವಾರಾಹೀ ಮುಂತಾದ ಶಕ್ತಿಗಳು ಅನೇಕವಿಧವಾದ ಆಯುಧಗಳಿಂದ ಕೂಡಿದವುಗಳಾಗಿಯೂ, ಮಂಗಳಕರವಾದ ಆಕಾರವುಳ್ಳವುಗಳಾಗಿಯೂ ಇರುತ್ತವೆ. ಅವುಗಳಿಂದ ಕೂಡಿದವನಾಗಿ ಓ ರಮಾಪ್ರಿಯನೇ, ದೇವತೆಗಳ ಶತ್ರುಗಳಾದ ರಾಕ್ಷಸರನ್ನು ಕೊಲ್ಲುವುದೇ ಮುಂತಾದ ಎಲ್ಲ ಕೆಲಸಗಳನ್ನೂ,

**ಸಾಧಯಿಷ್ಯಸಿ ತತ್ಸರ್ವಂ ಮದ್ದತ್ತವರದಾನತಃ ।**
**ತಾಸ್ತ್ವಯಾ ನಾವಮಂತವ್ಯಾಃ ಸರ್ವದಾ ಗರ್ವಲೇಶತಃ ॥೪೮॥**

ನಾನು ಕೊಟ್ಟ ವರದ ಬೆಂಬಲದಿಂದ ಸಾಧಿಸುತ್ತೀಯೆ. ಆದುದರಿಂದ ಆ ಶಕ್ತಿಗಳನ್ನು ನೀನು ಯಾವಾಗಲೂ ಸ್ವಲ್ಪವಾಗಿಯಾದರೂ ಅಹಂಕಾರದಿಂದ ಅವಮಾನಪಡಿಸಬಾರದು.

**ಪೂಜನೀಯಾಃ ಪ್ರಯತ್ನೇನ ಮಾನನೀಯಾಶ್ಚ ಸರ್ವಥಾ ।**
**ನೂನಂ ತಾ ಭಾರತೇ ಖಂಡೇ ಶಕ್ತಯಃ ಸರ್ವಕಾಮದಾಃ ॥೪೯॥**

ಅಷ್ಟೇ ಅಲ್ಲದೆ, ನೀನೂ ಆ ಶಕ್ತಿದೇವತೆಗಳನ್ನು ಮನಸ್ಸಿಟ್ಟು ಪೂಜಿಸಬೇಕು. ಮತ್ತು ಎಲ್ಲ ವಿಧದಿಂದಲೂ ಗೌರವಿಸಬೇಕು. ಅವುಗಳು ಈ ಭಾರತಭೂಮಿಯಲ್ಲಿ ಎಲ್ಲಾ ಜನಗಳಿಗೂ ಎಲ್ಲ ಇಷ್ಟಾರ್ಥಗಳನ್ನೂ ನಿಸ್ಸಂಶಯವಾಗಿ ಕೊಡುವುವು.

**ಭವಿಷ್ಯಂತಿ ಮನುಷ್ಯಾಣಾಂ ಪೂಜಿತಾಃ ಪ್ರತಿಮಾಸು ಚ ।**
**ತಾಸಾಂ ತವ ಚ ದೇವೇಶ ಕೀರ್ತಿಃ ಸ್ಯಾದಖಿಲೇಷ್ವಪಿ ॥೫೦॥**

ಮನುಷ್ಯರು ಆ ಶಕ್ತಿಗಳನ್ನು ವಿಗ್ರಹಗಳಲ್ಲಿ ಪೂಜಿಸಿದರೆ ಅವರ ಇಷ್ಟವು ಈಡೇರುವುದು. ಎಲ್ಲ ದೇವತೆಗಳಿಗೆ ಒಡೆಯನಾದ ವಿಷ್ಣುವೇ, ಈ ಎಲ್ಲದರಿಂದಲೂ ಆ ಶಕ್ತಿಗಳಿಗೂ ನಿನಗೂ ಎಲ್ಲ ಕಡೆಯಲ್ಲಿಯೂ ಕೀರ್ತಿಯು ಬರುವುದು.

**ದ್ವೀಪೇಷು ಸಪ್ತಸ್ವಪಿ ಚ ವಿಖ್ಯಾತಾ ಭುವಿ ಮಂಡಲೇ ।**
**ಕಾಶ್ಚ ತ್ವಾಂ ವೈ ಮಹಾಭಾಗ ಮಾನವಾ ಭುವಿ ಮಂಡಲೇ ॥೫೧॥**

ಎಲೈ ಮಹಾಮಹಿಮನಾದ ವಿಷ್ಣುವೇ, ಭೂಲೋಕದಲ್ಲಿ ಜಂಬೂದ್ವೀಪವೇ ಮೊದಲಾದ ಏಳು ದ್ವೀಪಗಳಲ್ಲಿಯೂ ಪ್ರಸಿದ್ಧವಾದ ಆ ಶಕ್ತಿಗಳನ್ನು ಮತ್ತು ನಿನ್ನನ್ನು ಎಲ್ಲಾ ಮನುಷ್ಯರೂ,

**ಅರ್ಚಯಿಷ್ಯಂತಿ ವಾಂಛಾರ್ಥಂ ಸಕಾಮಾಃ ಸತತಂ ಹರೇ ।**
**ಅರ್ಚಾಸು ಚೋಪಹಾರೈಶ್ಚ ನಾನಾಭಾವಸಮನ್ವಿತಾಃ ॥೫೨॥**

ತಮ್ಮ ಇಚ್ಛೆಯ ಫಲವು ದೊರೆಯಬೇಕೆಂಬ ಆಶೆಯುಳ್ಳವರಾಗಿ ಜನರು ನಿಮ್ಮನ್ನು ಯಾವಾಗಲೂ ಪೂಜಿಸುವರು. ಆ ಪೂಜೆಗಳಲ್ಲಿ ಉಪಯೋಗಿಸುವ ವಿಗ್ರಹ ಗಳಲ್ಲಿ ತುಂಬ ಹೆಚ್ಚಾದ ಭಕ್ತಿಭಾವನೆಯಿಂದ ಕೂಡಿದವರಾಗಿ ಉತ್ತಮವಾದ ನೈವೇ ದ್ಯಗಳಿಂದಲೂ,

**ಪೂಜಯಿಷ್ಯಂತಿ ವೇದೋಕ್ತೈರ್ಮಂತ್ರೈರ್ನಾಮಜಪೈಸ್ತಥಾ ।**
**ಮಹಿಮಾ ತವ ಭೂಲೋಕೇ ಸ್ವರ್ಗೇ ಚ ಮಧುಸೂದನ ॥೫೩॥**

ವೇದದಲ್ಲಿ ಹೇಳಿದ ಮಂತ್ರಗಳಿಂದಲೂ ನಿನ್ನ ಮತ್ತು ಶಕ್ತಿಗಳ ಮಂತ್ರ ಗಳನ್ನೂ, ನಾಮಗಳನ್ನೂ, ಜಪಿಸುವುದರಿಂದಲೂ, ನಿನ್ನನ್ನು ಪೂಜಿಸುತ್ತಾರೆ. ಇದರಿಂದ ಮಧುವನ್ನು ಸಂಹರಿಸಿದ ವಿಷ್ಣುವೇ, ನಿನ್ನ ಮಾಹಾತ್ಮ್ಯವು ಭೂಲೋಕದಲ್ಲಿಯೂ ಸ್ವರ್ಗದಲ್ಲಿಯೂ,

**ಪೂಜನಾದ್ದೇವದೇವೇಶ ವೃದ್ಧಿಮೇಷ್ಯತಿ ಮಾನವೈಃ ।**

ಈ ರೀತಿಯಲ್ಲಿ ಮನುಷ್ಯರೂ ಪೂಜಿಸುವುದರಿಂದ, ಎಲ್ಲೈ ದೇವತೆಗಳಿಗೂ ಒಡೆಯನಾದ ಜ್ಞಾನಜ್ಯೋತಿಯ ಪ್ರಕಾಶಸ್ವರೂಪನಾದ ವಿಷ್ಣುವೇ, ನಿನ್ನ ಮಹಿಮೆಯು ಅಭಿವೃದ್ಧಿಯನ್ನು ಹೊಂದುವುದು.

|| ವ್ಯಾಸ ಉವಾಚ ||

**ಇತಿ ದತ್ವಾ ವರಾನ್ ವಾಣೀ ವಿರರಾಮ ಖಸಂಭವಾ ||೫೪||**

ವ್ಯಾಸಮುನಿಯು ಹೇಳಿದನು—ಈ ರೀತಿಯಾಗಿ ಆಕಾಶದಿಂದ ಕೇಳಿ ಬಂದ ಆ ವಾಣಿಯು ವಿಷ್ಣುವಿಗೆ ವರಗಳನ್ನು ಕೊಟ್ಟು ಶಾಂತವಾಯಿತು.

**ಭಗವಾನಪಿ ಪ್ರೀತಾತ್ಮಾ ಹ್ಯಭವಚ್ಛ್ರವಣಾದಿವ ।**
**ಸಮಾಪ್ಯ ವಿಧಿವದ್ಯಜ್ಞಂ ಭಗವಾನ್ ಹರಿರೀಶ್ವರಃ ||೫೫||**

ಆ ಆಕಾಶವಾಣಿಯ ಶ್ರವಣದಿಂದ ಭಗವಂತನಾದ ವಿಷ್ಣುವು ಸಂತುಷ್ಟವಾದ ಮನಸ್ಸುಳ್ಳವನಾದನು. ಮುಂದೆ ಶಾಸ್ತ್ರದಲ್ಲಿ ಹೇಳಿದಂತೆ ಭಗವಂತನಾದ ಮತ್ತು ಜಗತ್ತಿಗೆಲ್ಲಾ ಒಡೆಯನಾದ, ಭಕ್ತರ ಕಷ್ಟವನ್ನು ಹೋಗಲಾಡಿಸುವ ವಿಷ್ಣುವು ದೇವೀಯಾಗವನ್ನು ಮುಗಿಸಿ,

**ವಿಸರ್ಜಯಿತ್ವಾ ತಾನ್ ದೇವಾನ್ ಬ್ರಹ್ಮಪುತ್ರಾನ್ಮುನೀನಥ ।**
**ಜಗಾಮಾನುಚರೈಃ ಸಾರ್ಧಂ ವೈಕುಂಠಂ ಗರುಡಧ್ವಜಃ ||೫೬||**

ಯಜ್ಞಕ್ಕೆ ಕರೆದಿದ್ದ ಎಲ್ಲ ದೇವತೆಗಳನ್ನೂ, ದಕ್ಷನೇ ಮೊದಲಾದ ಬ್ರಹ್ಮನ ಮಾನಸಪುತ್ರರನ್ನೂ, ವಸಿಷ್ಠನೇ ಮೊದಲಾದ ಋಷಿಗಳನ್ನೂ, ಕಳುಹಿಸಿ ಪರಿವಾರದೊಂದಿಗೆ ಗರುಡಧ್ವಜನಾದ ವಿಷ್ಣುವು ತನ್ನ ಸ್ಥಾನವಾದ ವೈಕುಂಠಕ್ಕೆ ತೆರಳಿದನು.

**ಸ್ಥಾನಿ ಸ್ಥಾನಿ ಚ ಧಿಷ್ಣ್ಯಾನಿ ಪುನಃ ಸರ್ವೇ ಸುರಾಸ್ತತಃ ।**
**ಮುನಯೋ ವಿಸ್ಮಿತಾ ವಾರ್ತಾಂ ಕುರ್ವಂತಸ್ತೇ ಪರಸ್ಪರಂ ||೫೭||**

ಆ ಮೇಲೆ, ದೇವತೆಗಳೂ ಸಹ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು. ಹಾಗೆಯೇ, ಋಷಿಗಳೆಲ್ಲರೂ ಸಹ ಆ ಯಜ್ಞದಲ್ಲಿ ನಡೆದ ಸಮಾಚಾರವನ್ನು ಎಂದರೆ ಆಕಾಶವಾಣಿಯನ್ನೂ, ದೇವಿಯು ವಿಷ್ಣುವಿಗೆ ಕೊಟ್ಟ ವರಪ್ರಸಾದ ಮುಂತಾದ ವಿಷಯಗಳನ್ನೂ ತಮ್ಮತಮ್ಮಲ್ಲಿ ಚರ್ಚಿಸುತ್ತಾ,

**ಯಯುಃ ಪ್ರಮುದಿತಾಃ ಕಾಮಂ ಸ್ವಾಶ್ರಮಾನ್ ಪಾವನಾನಥ ॥೫೮॥**

ತುಂಬ ಸಂತೋಷಗೊಂಡು ಮುಂದೆ ತಮ್ಮ ಇಷ್ಟಬಂದಂತೆ ತಮ್ಮ ತಮ್ಮ ಪವಿತ್ರವಾದ ಆಶ್ರಮಗಳಿಗೆ ತೆರಳಿದರು.

**ಶ್ರುತ್ವಾ ವಾಣೀಂ ಪರಮವಿಶದಾಂ ವ್ಯೋಮಜಾಂ ಶ್ರೋತ್ರರಮ್ಯಾಂ**
**ಸರ್ವೇಷಾಂ ವೈ ಪ್ರಕೃತಿವಿಷಯೇ ಭಕ್ತಿಭಾವಶ್ಚ ಜಾತಃ ।**
**ಚಕ್ರುಃ ಸರ್ವೇ ದ್ವಿಜಮುನಿಗಣಾಃ ಪೂಜನಂ ಭಕ್ತಿಯುಕ್ತಾ**
**ಸ್ತಸ್ಯಾಃ ಕಾಮಂ ನಿಖಿಲಫಲದಂ ಚಾಗಮೋಕ್ತಂ ಮುನೀಂದ್ರಾಃ ॥೫೯॥**

ತುಂಬ ಸ್ಪಷ್ಟವಾದ, ಆಕಾಶದಿಂದ ಕೇಳಿ ಬಂದ, ಕಿವಿಗಳಿಗೆ ಇಂಪಾದ ಆ ವಾಣಿಯನ್ನು ಕೇಳಿ ಬಂದಿದ್ದ ಎಲ್ಲ ಜನಗಳಿಗೂ, ಸಮಸ್ತ ಜಗತ್ತಿಗೆ ಕಾರಣಳಾದ ಮೂಲ ಪ್ರಕೃತಿರೂಪಳೂ, ಆದ ಆ ದೇವಿಯಲ್ಲಿ ಭಕ್ತಿಯುಂಟಾಯಿತು. ಅಲ್ಲದೆ ಅಲ್ಲಿ ನೆರೆದಿದ್ದ ಬ್ರಾಹ್ಮಣರೂ ಮುನಿಗಳೂ, ಇವರ ಗುಂಪುಗಳೂ, ಋಷಿಶ್ರೇಷ್ಠರೆಲ್ಲರೂ ಸಹ ಭಕ್ತಿಯಿಂದ ಕೂಡಿದವರಾಗಿ ಸಕಲಫಲವನ್ನೂ ಕೊಡುವ, ಆ ದೇವಿಯ ಪೂಜೆಯನ್ನು ಶಾಸ್ತ್ರದಲ್ಲಿ ಹೇಳಿರತಕ್ಕ ಕ್ರಮದಂತೆ ಮುಂದೆಯೂ ಚನ್ನಾಗಿ ನೆರವೇರಿಸುತ್ತಾ ಬಂದರು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ತ್ರಯೋದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### || ಚತುರ್ದಶೋಽಧ್ಯಾಯಃ ||

### ಹದಿನಾಲ್ಕನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಶ್ರುತೋ ವೈ ಹರಿಣಾ ಕ್ಲೃಪ್ತೋ ಯಜ್ಞೋ ವಿಸ್ತರತೋ ದ್ವಿಜ ।**
**ಮಹಿಮಾನಂ ತಥಾಂಬಾಯಾ ವದ ವಿಸ್ತರತೋ ಮಮ ॥೧॥**

ಜನಮೇಜಯರಾಜನು ವ್ಯಾಸಮುನಿಯನ್ನು ಪ್ರಶ್ನೆಮಾಡಿದನು—ಬ್ರಾಹ್ಮಣೋತ್ತಮನಾದ ಓ ವ್ಯಾಸಮುನಿಯೇ, ಈಗ ನಾನು ಆ ವಿಷ್ಣುವು ಮಾಡಿದ ದೇವೀಯಾಗವನ್ನು ವಿಸ್ತಾರವಾಗಿ ನಿನ್ನ ಮುಖದಿಂದ ಕೇಳಿದುದಾಯಿತು. ಮುಂದೆ ನೀನು ಜಗತ್ತಿಗೇ ತಾಯಿಯಾದ ಆ ದೇವಿಯ ಮಾಹಾತ್ಮ್ಯವನ್ನು ವಿಸ್ತಾರವಾಗಿ ನನಗೆ ಹೇಳು.

**ಶ್ರುತ್ವಾ ದೇವ್ಯಾಶ್ಚರಿತ್ರಂ ವೈ ಕುರ್ವೇ ಮಖಮನುತ್ತಮಂ ।**
**ಪ್ರಸಾದಾತ್ತವ ವಿಪ್ರೇಂದ್ರ ಭವಿಷ್ಯಾಮಿ ಚ ಪಾವನಃ ॥೨॥**

ನೀನು ಹೇಳತಕ್ಕ ದೇವಿಯ ಚರಿತ್ರೆಯನ್ನು ಕೇಳಿದ ಮೇಲೆ ಶ್ರೇಷ್ಠವಾದ ದೇವೀಯಾಗವನ್ನು ಮಾಡುವೆನು. ನೀನು ಹೇಳುವ ದೇವೀಚರಿತ್ರೆಯನ್ನು ಕೇಳಿ ಅದರಿಂದ ಉಂಟಾಗುವ ಅನುಗ್ರಹದಿಂದ ಓ ಬ್ರಾಹ್ಮಣಶ್ರೇಷ್ಠನೇ, ನಾನೂ ಪುನೀತನಾಗುವೆನು.

|| ವ್ಯಾಸ ಉವಾಚ ||

**ಶೃಣು ರಾಜನ್ ಪ್ರವಕ್ಷ್ಯಾಮಿ ದೇವ್ಯಾಶ್ಚರಿತಮುತ್ತಮಂ ।**
**ಇತಿಹಾಸಂ ಪುರಾಣಂ ಚ ಕಥಯಾಮಿ ಸುವಿಸ್ತರಂ ॥೩॥**

ವ್ಯಾಸಮುನಿಯು ಹೇಳಿದನು—ಓ ರಾಜನೇ, ದೇವಿಯ ಚರಿತ್ರೆಯನ್ನೂ, ನಡೆದಿರುವ ವೃತ್ತಾಂತವನ್ನೂ ಮತ್ತು ದೇವಿಯ ಪುರಾಣವನ್ನೂ ನಿನಗೆ ವಿಸ್ತಾರವಾಗಿ ಹೇಳುತ್ತೇನೆ. ಪುರಾಣಲಕ್ಷಣವು ಈರೀತಿ ಉಕ್ತವಾಗಿದೆ—ಸರ್ಗಶ್ಚ ಪ್ರತಿಸರ್ಗಶ್ಚ ವಂಶೋಮನ್ವಂತರಾಣಿ ಚ । ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ ॥ ಪುರಾಣಗಳಿಗೆ ಮುಖ್ಯವಾಗಿ ಐದು ಲಕ್ಷಣಗಳು ಇರಬೇಕು. ಸೃಷ್ಟಿಕ್ರಮ, ಅನುಸೃಷ್ಟಿ, ಪ್ರಳಯ, ಸೃಷ್ಟಿಯ ಪ್ರಾರಂಭದಲ್ಲಿ ಹೊರಟ ರಾಜವಂಶ, ಆ ವಂಶಗಳಿಗೆ ಸಂಬಂಧ ಪಟ್ಟಿರುವ ಚರಿತ್ರೆ ಮತ್ತು ಹದಿನಾಲ್ಕು ಮನ್ವಂತರಗಳು, ಈ ವಿಷಯಗಳ ವರ್ಣನೆ ಯಿರುವ ಗ್ರಂಥವು ಪುರಾಣವೆನಿಸುವುದು.

**ಕೋಸಲೇಷು ನೃಪಶ್ರೇಷ್ಠಃ ಸೂರ್ಯವಂಶಸಮುದ್ಭವಃ ।**
**ಪುಷ್ಪಪುತ್ರೋ ಮಹಾತೇಜಾ ಧ್ರುವಸಂಧಿರಿತಿ ಸ್ಮೃತಃ ॥೪॥**

ಹಿಂದೆ ಕೋಸಲದೇಶದಲ್ಲಿ ಸೂರ್ಯವಂಶದಲ್ಲಿ ಹುಟ್ಟಿದವನಾದ ಪುಷ್ಪನೆಂಬ ರಾಜನ ಮಗನಾದ ಧ್ರುವಸಂಧಿಯೆಂಬ ಮಹಾಪರಾಕ್ರಮಶಾಲಿಯಾದ ರಾಜಶ್ರೇಷ್ಠನು ಆಳುತ್ತಿದ್ದನು.

**ಧರ್ಮಾತ್ಮಾ ಸತ್ಯಸಂಧಶ್ಚ ವರ್ಣಾಶ್ರಮಹಿತೇ ರತಃ ।**
**ಅಯೋಧ್ಯಾಯಾಂ ಸಮೃದ್ಧಾಯಾಂ ರಾಜ್ಯಂ ಚಕ್ರೇ ಶುಚಿವ್ರತಃ ॥೫॥**

ಅವನು ಧರ್ಮಬುದ್ಧಿಯುಳ್ಳವನಾಗಿಯೂ, ಸತ್ಯಪರನಾಗಿಯೂ, ಬ್ರಾಹ್ಮಣಾದಿ ವರ್ಣ ಮತ್ತು ಬ್ರಹ್ಮಚರ್ಯಾದ್ಯಾಶ್ರಮಗಳಿಗೆ ರಕ್ಷಣೆಯನ್ನು ಕೊಡಲು ಅನುಕೂಲ ನಾಗಿಯೂ ಇರುತ್ತಾ, ತುಂಬಾ ಸಂಪತ್ತಿನಿಂದ ಯುಕ್ತವಾದ, ಆ ಕೋಸಲದೇಶದ ರಾಜಧಾನಿಯಾದ ಅಯೋಧ್ಯಾನಗರದಲ್ಲಿ ಸರ್ವದಾ ಪರಿಶುದ್ಧವಾದ ನಡತೆಯುಳ್ಳವ ನಾಗಿ ರಾಜ್ಯವನ್ನಾಳುತ್ತಿದ್ದನು.

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚಾನ್ಯೇ ತಥಾ ದ್ವಿಜಾಃ ।**
**ಸ್ವಾಂ ಸ್ವಾಂ ವೃತ್ತಿಂ ಸಮಾಸ್ಥಾಯ ತದ್ರಾಜ್ಯೇ ಧರ್ಮತೋಽಭವನ್ ॥೬॥**

ಅವನ ಆಳ್ವಿಕೆಯಲ್ಲಿ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಮತ್ತು ಇತರ ಅನುಲೋಮವಿಲೋಮವರ್ಣದವರೂ ಸಹ ತಮ್ಮ ತಮ್ಮ ಕುಲಕ್ಕೆ ಯೋಗ್ಯವಾದ ಜೀವನವೃತ್ತಿಗಳನ್ನು ಆಚರಿಸುತ್ತಾ ಧರ್ಮನಿರತರಾಗಿದ್ದರು.

**ನ ಚೋರಾಃ ಪಿಶುನಾ ಧೂರ್ತಾಸ್ತಸ್ಯ ರಾಜ್ಯೇ ಚ ಕುತ್ರಚಿತ್ ।**
**ದಂಭಾಃ ಕೃತಘ್ನಾ ಮೂರ್ಖಾಶ್ಚ ವಸಂತಿ ಕಿಲ ಮಾನವಾಃ ॥೭॥**

ಅವನ ರಾಜ್ಯದಲ್ಲಿ, ಕಳ್ಳರಾಗಲೀ, ದುಷ್ಟರಾಗಲ್ೀ, ಮೋಸಗಾರರಾಗಲೀ, ಅಹಂಕಾರಿಗಳಾಗಲೀ, ಮಾಡಿದ ಉಪಕಾರವನ್ನು ಮರೆಯುವವರಾಗಲೀ, ದಡ್ಡರಾಗಲೀ ಚಾಡಿಕೋರರಾಗಲೀ ಆಗಿದ್ದ ಮನುಷ್ಯರು ಯಾರೂ ಎಲ್ಲಿಯೂ ವಾಸಮಾಡುತ್ತಿರಲಿಲ್ಲ.

**ಏವಂ ವೈ ವರ್ತಮಾನಸ್ಯ ನೃಪಸ್ಯ ಕುರುಸತ್ತಮ ।**
**ದ್ವೇ ಪತ್ನ್ಯೌ ರೂಪಸಂಪನ್ನೇ ಹ್ಯಾಸತುಃ ಕಾಮಭೋಗದೇ ॥೮॥**

ಕುರುವಂಶೋತ್ಪನ್ನರಲ್ಲಿ ಶ್ರೇಷ್ಠನಾದ ಓ ಜನಮೇಜಯನೇ, ಹೀಗೆ ರಾಜ್ಯ ಭಾರಮಾಡುತ್ತಲಿರುವ ಆ ಧ್ರುವಸಂಧಿಗೆ ತುಂಬ ರೂಪವತಿಯರಾಗಿಯೂ, ಒಳ್ಳೆಯ ಸುಖವನ್ನು ಉಂಟುಮಾಡುವವರಾಗಿಯೂ ಇದ್ದ ಈರ್ವರು ಹೆಂಡತಿಯರು ಇದ್ದರು.

**ಮನೋರಮಾ ಧರ್ಮಪತ್ನೀ ಸುರೂಪಾಽತಿವಿಚಕ್ಷಣಾ ।**
**ಲೀಲಾವತೀ ದ್ವಿತೀಯಾ ಚ ಸಾಪಿ ರೂಪಗುಣಾನ್ವಿತಾ ॥೯॥**

ಅವರಲ್ಲಿ ಮೊದಲನೆಯವಳಾದ ಮನೋರಮೆಯು, ರಾಜನಿಗೆ ಧರ್ಮಕಾರ್ಯ ಗಳಲ್ಲಿ ಸಹಾಯಕಳೂ, ತುಂಬಾ ರೂಪವತಿಯೂ ಬುದ್ಧಿವಂತಳೂ ಆಗಿದ್ದಳು. ಲೀಲಾವತಿ ಎಂಬ ಹೆಸರುಳ್ಳ, ಎರಡನೆಯವಳು ರೂಪವತಿಯೂ ಗುಣಶಾಲಿನಿಯೂ ಆಗಿದ್ದಳು.

**ವಿಜಹಾರ ಸ ಪತ್ನೀಭ್ಯಾಂ ಗೃಹೇಷೂಪವನೇಷು ಚ ।**
**ಕ್ರೀಡಾಗೀತಾ ದೀರ್ಘಿಕಾಸು ಸೌಧೇಷು ವಿವಿಧೇಷು ಚ ॥೧೦॥**

ಆ ಇಬ್ಬರು ಹೆಂಡತಿಯರೊಡನೆ ಆ ರಾಜನು, ಅರಮನೆಗಳಲ್ಲೂ ಉದ್ಯಾನವನ ಗಳಲ್ಲಿಯೂ, ವಿನೋದಾರ್ಥವಾಗಿ ರಚಿಸಿರುವ ಪರ್ವತಗಳಲ್ಲಿಯೂ, ಸರೋವರಗಳ ಲ್ಲಿಯೂ, ನಾನಾವಿಧಗಳಾದ ಉಪ್ಪರಿಗೆಗಳಲ್ಲಿಯೂ ವಿಹರಿಸುತ್ತಿದ್ದನು.

**ಮನೋರಮಾ ಶುಭೇ ಕಾಲೇ ಸುಷುವೇ ಪುತ್ರಮುತ್ತಮಂ ।**
**ಸುದರ್ಶನಾಭಿಧಂ ಪುತ್ರಂ ರಾಜಲಕ್ಷಣಸಂಯುತಂ ॥೧೧॥**

ಮೊದಲನೆಯವಳಾದ ಮನೋರಮೆಯು ಒಳ್ಳೆಯ ಮುಹೂರ್ತದಲ್ಲಿ ರಾಜನಿಗೆ ಇರಬೇಕಾದ ಲಕ್ಷಣಗಳಿಂದ ಕೂಡಿದ ಸುದರ್ಶನನೆಂಬ ಉತ್ತಮಪುತ್ರನನ್ನು ಪ್ರಸವಿಸಿದಳು.

**ಲೀಲಾವತ್ಯಪಿ ತತ್ಪತ್ನೀ ಮಾಸೇನೈಕೇನ ಭಾಮಿನೀ ।**
**ಸುಷುವೇ ಸುಂದರಂ ಪುತ್ರಂ ಶುಭೇ ಪಕ್ಷೇ ದಿನೇ ತಥಾ ॥೧೨॥**

ಎರಡನೆಯವಳಾದ ಲೀಲಾವತಿಯೂ ಕೂಡ ಒಂದು ತಿಂಗಳೊಳಗೆ ಒಳ್ಳೆಯ ಶುಕ್ಲಪಕ್ಷದ ಶುಭದಿನದಲ್ಲಿ ಸುಂದರನಾಗಿರುವ ಪುತ್ರನನ್ನು ಹಡೆದಳು.

**ಚಕಾರ ನೃಪತಿಸ್ತತ್ರ ಜಾತಕರ್ಮಾದಿಕಂ ದ್ವಯೋಃ ।**
**ದದೌ ದಾನಾನಿ ವಿಪ್ರೇಭ್ಯಃ ಪುತ್ರಜನ್ಮಪ್ರಮೋದಿತಃ ॥೧೩॥**

ಈ ರೀತಿ ಹುಟ್ಟಿದ ಆ ಮಕ್ಕಳಿಗೆ, ರಾಜನು ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ನೆರವೇರಿಸಿದನು. ಮಕ್ಕಳು ಹುಟ್ಟಿದುದರಿಂದ ಸಂತೋಷಗೊಂಡವನಾಗಿ ಬ್ರಾಹ್ಮಣರಿಗೆ ಬೇಕಾದಂತೆ ದಾನಗಳನ್ನೂ ಮಾಡಿದನು.

**ಪ್ರೀತಿಂ ತಯೋಃ ಸಮಾಂ ರಾಜಾ ಚಕಾರ ಸುತಯೋರ್ನೃಪ ।**
**ನೃಪಶ್ಚಕಾರ ಸೌಹಾರ್ದೇಷ್ವಂತರಂ ನ ಕದಾಚನ ॥೧೪॥**

ಹುಟ್ಟಿದ ಆ ಇಬ್ಬರು ಮಕ್ಕಳಲ್ಲಿಯೂ ಆ ರಾಜನು ಸಮವಾಗಿ ಪ್ರೀತಿಯನ್ನಿಟ್ಟಿದ್ದನು. ಮತ್ತು ಎಲೈ ಜನಮೇಜಯರಾಜನೇ, ಆ ಧ್ರುವಸಂಧಿರಾಜನು ತನ್ನ ಇಬ್ಬರು ಮಕ್ಕಳಲ್ಲಿ ಇಟ್ಟಿದ್ದ ವಾತ್ಸಲ್ಯದಲ್ಲಿ ಯಾವಾಗಲೂ ಹೆಚ್ಚು ಕಡಿಮೆಯನ್ನು ಎಂದರೆ ಒಬ್ಬನಲ್ಲಿ ಹೆಚ್ಚು ಪ್ರೀತಿಯನ್ನೂ ಮತ್ತೊಬ್ಬ ಮಗನಲ್ಲಿ ಅಲ್ಪಪ್ರೀತಿಯನ್ನೂ ಮಾಡುತ್ತಿರಲಿಲ್ಲ.

**ಚೂಡಾಕರ್ಮ ತಯೋಶ್ಚಕ್ರೇ ವಿಧಿನಾ ನೃಪಸತ್ತಮಃ ।**
**ಯಥಾವಿಭವಮೇವಾಸೌ ಪ್ರೀತಿಯುಕ್ತಃ ಪರಂತಪಃ ॥೧೫॥**

ಶತ್ರುಗಳನ್ನು ಸಂತಾಪಗೊಳಿಸತಕ್ಕ ಆ ರಾಜೋತ್ತಮನು ಆ ಕುಮಾರರಿರ್ವರಿಗೂ ಶಾಸ್ತ್ರನಿಯಮದಂತೆ ತನ್ನ ಅಂತಸ್ತಿಗೆ ತಕ್ಕಂತೆ ಚೂಡಾಕರ್ಮ ಸಂಸ್ಕಾರವನ್ನು ಪ್ರೇಮವುಳ್ಳವನಾಗಿ ಮಾಡಿದನು.

**ಕೃತಚೂಡೌ ಸುತೌ ಕಾಮಂ ಜಹ್ರತುರ್ನೃಪತೇರ್ಮನಃ ।**
**ಕ್ರೀಡಮಾನಾವುಭೌ ಕಾಂತೌ ಲೋಕಾನಾಮನುರಂಜಕೌ ॥೧೬॥**

ಸುಂದರರಾದ ಮತ್ತು ಜನಗಳೆಲ್ಲರ ಕಣ್ಮಣಿಗಳಾದ ಆ ಕುಮಾರರು ಚೂಡಾ ಕರ್ಮಮಾಡಲ್ಪಟ್ಟವರಾಗಿ ಸುಂದರವಾಗಿ ಕುಲಪದ್ಧತಿಯಂತೆ ಜುಟ್ಟುಬಿಡಿಸಲ್ಪಟ್ಟವ ರಾಗಿ ಆಟವಾಡುತ್ತಾ ಆ ರಾಜನ ಮನಸ್ಸನ್ನು ಆಕರ್ಷಿಸುತ್ತಾ ತುಂಬ ಸಂತೋಷ ಗೊಳಿಸಿದರು.

**ತಯೋಃ ಸುದರ್ಶನೋ ಜ್ಯೇಷ್ಠೋ ಲೀಲಾವತ್ಯಾಃ ಸುತಃ ಶುಭಃ ।**
**ಶತ್ರುಜಿತ್ಸಂಜ್ಞಕಃ ಕಾಮಂ ಚಾಟುವಾಕ್ಯೋ ಬಭೂವ ಹ ॥೧೭॥**

ಅವರಿಬ್ಬರು ಕುಮಾರರಲ್ಲಿ, ಲೀಲಾವತಿಯ ಮಗನೂ ವಯಸ್ಸಿದಲ್ಲಿ ಹಿರಿಯ ವನೂ ಆದ ಒಳ್ಳೆಯ ರೂಪವುಳ್ಳ ಸುದರ್ಶನನು ಮೊದಲನೆಯವನಾಗಿದ್ದನು. ಎರಡನೆಯ ಮಗನು ಶತ್ರುಜಿತನೆಂಬ ಹೆಸರನ್ನು ಪಡೆದವನಾಗಿ ತುಂಬ ಪ್ರಿಯವಾದ ಮಾತನ್ನಾಡುವವನಾಗಿದ್ದನು.

**ನೃಪತೇಃ ಪ್ರೀತಿಜನಕೋ ಮಂಜುವಾಕ್ಚಾರುದರ್ಶನಃ ।**
**ಪ್ರಜಾನಾಂ ವಲ್ಲಭಃ ಸೋಽಭೂತ್ತಥಾ ಮಂತ್ರಿಜನಸ್ಯ ವೈ ॥೧೮॥**

ಪ್ರಿಯವಾಗಿ ಮಾತನಾಡುವ ಮತ್ತು ಸುಂದರನಾದ ಆ ಶತ್ರುಜಿತನು ತನ್ನ ತಂದೆಯಾದ ಧ್ರುವಸಂಧಿರಾಜನಿಗೆ ತುಂಬ ಪ್ರೀತಿಪಾತ್ರನಾಗಿದ್ದನು. ಅಲ್ಲದೆ, ಪ್ರಜೆ ಗಳಿಗೂ ಮಂತ್ರಿಗಳಿಗೂ ಮನೋರಂಜಕನಾಗಿ ಬೇಕಾದವನಾಗಿದ್ದನು.

**ಯಥಾ ತಸ್ಮಿನ್ನೃಪಃ ಪ್ರೀತಿಂ ಚಕಾರ ಗುಣಯೋಗತಃ ।**
**ಮಂದಭಾಗ್ಯಾನ್ಮಂದಭಾವೋ ನ ತಥಾ ವೈ ಸುದರ್ಶನೇ ॥೧೯॥**

ರಾಜನು ಶತ್ರುಜಿತನನ್ನು ಅವನ ಗುಣಗಳಿಂದ ಹೇಗೆ ಪ್ರೀತಿಸುತ್ತಲಿದ್ದನೋ ಅದರಂತೆ ಹಿರಿಯನಾದ ಸುದರ್ಶನನಲ್ಲಿಯೂ ಅವನ ದುರದೃಷ್ಟದಿಂದ ಉಂಟಾಗಿದ್ದ ಮೊದ್ದಾದ ಸ್ವಭಾವದಿಂದ ಅವನಿಗೆ ಪ್ರೀತಿಯನ್ನು ತೋರಿಸಲು ಅವಕಾಶವಿರುತ್ತಿ ರಲಿಲ್ಲ.

ಏವಂ ಗಚ್ಛತಿ ಕಾಲೇ ತು ಧ್ರುವಸಂಧಿರ್ನೃಪೋತ್ತಮಃ ।
ಜಗಾಮ ವನಮಧ್ಯೇಽಸೌ ಮೃಗಯಾಭಿರತಃ ಸದಾ ॥೨೦॥

ಹೀಗೆ ಕೆಲವು ಕಾಲವು ಕಳೆಯುತ್ತಿರಲು, ರಾಜಶ್ರೇಷ್ಠನಾದ ಆ ಧ್ರುವ ಸಂಧಿಯು ಯಾವಾಗಲೂ ಬೇಟೆಯಾಡುವುದರಲ್ಲಿ ಆಸಕ್ತಿಯುಳ್ಳವನಾಗಿ ಅರಣ್ಯ ವೊಂದನ್ನು ಹೊಕ್ಕನು.

ನಿಘ್ನನ್ ಮೃಗಾನ್ರುರೂನ್ಕಂಬೂನ್ಸೂಕರಾನ್ ಗವಯಾಞ್ಛಶಾನ್ ।
ಮಹಿಷಾಞ್ಛರಭಾನ್ ಖಡ್ಗಾಂಶ್ಚಿಕ್ರೀಡ ನೃಪತಿರ್ವನೇ ॥೨೧॥

ಆ ಕಾಡಿನಲ್ಲಿ ರಾಜನು ಬಿಳಿಯ ಮತ್ತು ಕರಿಯ ಚುಕ್ಕಿಗಳಿಂದ ಕೂಡಿದ ಚರ್ಮವುಳ್ಳ ಜಿಂಕೆಗಳನ್ನೂ, ಕೃಷ್ಣಸಾರಗಗಳನ್ನೂ, ಕಾಡುಹಂದಿಗಳನ್ನೂ, ಕಾಡು ದನಗಳನ್ನೂ, ಮೊಲಗಳನ್ನೂ, ಕಾಡುಕೋಣಗಳನ್ನೂ, ಶರಭಗಳನ್ನೂ ಖಡ್ಗಮೃಗ ಗಳನ್ನೂ ಕೊಲ್ಲುತ್ತಾ ವಿಹರಿಸಿದನು.

ಕ್ರೀಡಮಾನೇ ನೃಪೇ ತತ್ರ ವನೇ ಘೋರೇಽತಿದಾರುಣೇ ।
ಉದತಿಷ್ಠನ್ನಿಕುಂಜಾತ್ತು ಸಿಂಹಃ ಪರಮಕೋಪನಃ ॥೨೨॥

ಹೀಗೆ ಆ ರಾಜನು ಕ್ರೂರಮೃಗಗಳಿಂದ ಕೂಡಿ ಭಯಂಕರವಾದ ಆ ಕಾಡಿ ನಲ್ಲಿ ವಿಹರಿಸುತ್ತಿರಲು, ಒಂದು ಸಿಂಹವು ಬಹಳ ಸಿಟ್ಟುಗೊಂಡು ಪೊದೆಯೊಂದರಿಂದ ಎದ್ದು ಹೊರಟು ಆ ರಾಜನ ಎದುರಿಗೆ ನುಗ್ಗಿ ಬಂದಿತು.

ರಾಜ್ಞಾ ಶಿಲೀಮುಖೇನಾದೌ ವಿದ್ಧಃ ಕ್ರೋಧವಶಂ ಗತಃ ।
ದೃಷ್ಟ್ವಾಗ್ರೇ ನೃಪತಿಂ ಸಿಂಹೋ ನನಾದ ಮೇಘನಿಃಸ್ವನಃ ॥೨೩॥

ಮೊದಲು ಆ ಸಿಂಹವು ರಾಜನ ಬಾಣದಿಂದ ಹೊಡೆಯಲ್ಪಟ್ಟು ಬಹಳ ಸಿಟ್ಟಿನಿಂದ ಇದ್ದಿತು. ಈಗ ತನ್ನ ಎದುರಿಗೇ ಇರುವ ರಾಜನನ್ನು ನೋಡಿ ಅದು ಗುಡುಗಿನಂತೆ ಗರ್ಜಿಸಿತು.

ಕೃತ್ವಾ ಚೋರ್ಧ್ವಂ ಸಲಾಂಗೂಲಂ ಪ್ರಸಾರಿತಬೃಹತ್ಸಟಃ ।
ಹಂತುಂ ನೃಪತಿಮಾಕಾಶಾದುತ್ಪಪಾತಾತಿಕೋಪನಃ ॥೨೪॥

ಮತ್ತು ಆ ಸಿಂಹವು ತನ್ನ ಬಾಲವನ್ನು ಮೇಲಕ್ಕೆತ್ತಿ ನೀಳವಾದ ಕೇಸರಗಳನ್ನು ಕೆದರಿಕೊಂಡು ರಾಜನನ್ನು ಕೊಲ್ಲಲು ತುಂಬಾ ಕೋಪವುಳ್ಳದ್ದಾಗಿ ಮೇಲ್ಭಾಗದಿಂದ ನೆಗೆದು ಬಂದು ಎದುರಿಸಿತು.

**ನೃಪತಿಸ್ತರಸಾ ವೀಕ್ಷ್ಯ ದಧಾರಾಸಿಂ ಕರೇ ತದಾ ।**
**ವಾಮೇ ಚರ್ಮ ಸಮಾದಾಯ ಸ್ಥಿತಃ ಸಿಂಹ ಇವಾಪರಃ ॥೨೫॥**

ಆ ರಾಜನು, ಸಿಂಹವು ಹಾರಿ ಬರುತ್ತಿರುವುದನ್ನು ನೋಡಿ ಆ ಕೂಡಲೇ ಬಲಗೈಯ್ಯಲ್ಲಿ ಹರಿತವಾದ ಕತ್ತಿಯನ್ನೂ, ಎಡಗೈಯಲ್ಲಿ ಚರ್ಮಮಯವಾದ ಗುರಾಣಿಯನ್ನೂ ಹಿಡಿದು ಎರಡನೆಯ ಸಿಂಹದಂತೆ ಎದುರಿಸಿ ನಿಂತನು.

**ಸೇವಕಾಸ್ತಸ್ಯ ಯೇ ಸರ್ವೇ ತೇಽಪಿ ಬಾಣಾನ್ ಪೃಥಕ್ಪೃಥಕ್ ।**
**ಅಮುಂಚನ್ಕುಪಿತಾಃ ಕಾಮಂ ಸಿಂಹೋಪರಿ ರುಷಾನ್ವಿತಾಃ ॥೨೬॥**

ಆ ರಾಜನ ಸೇವಕರೂ ಕೂಡ ತುಂಬ ಸಿಟ್ಟಿನಿಂದ ಆ ಸಿಂಹದ ಮೇಲೆ ಬೇರೆಬೇರೆಯಾಗಿ ಬಾಣಗಳನ್ನು ಬಿಟ್ಟರು.

**ಹಾಹಾಕಾರೋ ಮಹಾನಾಸೀತ್ಸಂಪ್ರಹಾರಶ್ಚ ದಾರುಣಃ ।**
**ಉತ್ಪಪಾತ ತತಃ ಸಿಂಹೋ ನೃಪಸ್ಯೋಪರಿ ದಾರುಣಃ ॥೨೭॥**

ಆ ಸಿಂಹವು ರಾಜನ ಮೇಲೆ ಬೀಳಲು ನೆಗೆದು ಬಂದುದನ್ನು ನೋಡಿ ಅವರೆಲ್ಲರೂ ಹಾಹಾಕಾರಮಾಡಿದರು. ಸಿಂಹಕ್ಕೂ ಅವರಿಗೂ ಭಯಂಕರವಾದ ಹೊಡೆದಾಟವಾಯಿತು. ಮುಂದೆ ಆ ಕ್ರೂರವಾದ ಸಿಹ್ಮವು ರಾಜನಮೇಲೆಯೇ ಬಿದ್ದಿತು.

**ತಂ ಪತಂತಂ ಸಮಾಲೋಕ್ಯ ಖಡ್ಗೇನಾಭಿಹನನ್ನೃಪಃ ।**
**ಸೋಽಪಿ ಕ್ರೂರೈರ್ನಖಾಗ್ರೈಶ್ಚ ತತ್ರಾಗತ್ಯ ವಿದಾರಿತಃ ॥೨೮॥**

ಮೇಲೆ ಬೀಳುತ್ತಲಿರುವ ಆ ಸಿಂಹವನ್ನು ನೋಡಿ ರಾಜನು ಕತ್ತಿಯಿಂದ ಅದನ್ನು ಬಲವಾಗಿ ಹೊಡೆದನು. ಆ ಸಿಂಹವೂ ರಾಜನನ್ನು ಹರಿತವಾದ ಉಗುರು ಮೊನೆಗಳಿಂದ ಸೀಳಿ ಗಾಯಪಡಿಸಿತು.

**ಸ ನಖೈರಾಹತೋ ರಾಜಾ ಪಪಾತ ಚ ಮಮಾರ ವೈ ।**
**ಚುಕ್ರುಶುಃ ಸೈನಿಕಾಸ್ತೇ ತು ನಿರ್ಜಘ್ನುರ್ವಿಶಿಖೈಸ್ತದಾ ॥೨೯॥**

ಆ ರಾಜನು ಸಿಂಹದ ಉಗುರುಮೊನೆಗಳಿಂದ ಬಗೆಯಲ್ಪಟ್ಟವನಾಗಿ ಭೂಮಿಯಲ್ಲಿ ಬಿದ್ದು ಸತ್ತನು. ಸೈನಿಕರೆಲ್ಲರೂ ಆ ಸಿಂಹವನ್ನು ಬಾಣದಿಂದ ಹೊಡೆದು ಕೊಂದರು.

**ಮೃತಃ ಸಿಂಹೋಽಪಿ ತತ್ರೈವ ಭೂಪತಿಶ್ಚ ತಥಾ ಮೃತಃ ।**
**ಸೈನಿಕೈರ್ಮಂತ್ರಿಮುಖ್ಯಾಶ್ಚ ತತ್ರಾಗತ್ಯ ನಿವೇದಿತಾಃ ॥೩೦॥**

ಹೀಗೆ ಸಿಂಹವೂ ಸತ್ತಿತು. ರಾಜನೂ ಮೃತನಾದನು. ಸೈನಿಕರು ರಾಜಧಾನಿಗೆ ಹಿಂತಿರುಗಿ ಮುಖ್ಯಮಂತ್ರಿಗಳಿಗೆ, ರಾಜನು ಸಿಂಹದಿಂದ ಮೃತನಾದ ಸಮಾಚಾರವನ್ನು ತಿಳಿಸಿದರು.

**ಪರಲೋಕಗತಂ ಭೂಪಂ ಶ್ರುತ್ವಾ ತೇ ಮಂತ್ರಿಸತ್ತಮಾಃ ।**
**ಸಂಸ್ಕಾರಂ ಕಾರಯಾಮಾಸುರ್ಗತ್ವಾ ತತ್ರ ವನಾಂತಿಕೇ ॥೩೧॥**

ರಾಜನು ಪರಲೋಕಗತನಾದುದನ್ನು ಕೇಳಿ ಆ ಮಂತ್ರಿಶ್ರೇಷ್ಠರು ಅವನಿಗೆ ಅಂತ್ಯಸಂಸ್ಕಾರಗಳನ್ನು, ಆ ರಾಜನು ಮೃತಪಟ್ಟ ವನಕ್ಕೆ ಹೋಗಿ ಅಲ್ಲಿಯೇ ನೆರವೇರಿಸಿದರು.

**ಪರಲೋಕಕ್ರಿಯಾಂ ಸರ್ವಾಂ ವಸಿಷ್ಠೋ ವಿಧಿಪೂರ್ವಕಂ ।**
**ಕಾರಯಾಮಾಸ ತತ್ರೈವಂ ಪರಲೋಕಸುಖಾವಹಾಂ ॥೩೨॥**

ಪುರೋಹಿತನಾದ ವಸಿಷ್ಠಮುನಿಯು, ಮೃತನಾದ ಆ ರಾಜನಿಗೆ ಪರಲೋಕದಲ್ಲಿ ಸದ್ಗತಿಯುಂಟಾಗಿ ಸುಖವಾಗಿರುವ ಹಾಗೆ, ಅಂತ್ಯಸಂಸ್ಕಾರಾದಿಗಳನ್ನು ಶಾಸ್ತ್ರದಲ್ಲಿ ಹೇಳಿರುವಂತೆ ಮಾಡಿಸಿದನು.

**ಪ್ರಜಾಃ ಪ್ರಕೃತಯಶ್ಚೈವ ವಸಿಷ್ಠಶ್ಚ ಮಹಾಮುನಿಃ ।**
**ಸುದರ್ಶನಂ ನೃಪಂ ಕರ್ತುಂ ಮಂತ್ರಂ ಚಕ್ರುಃ ಪರಸ್ಪರಂ ॥೩೩॥**

ಪ್ರಜೆಗಳೂ, ಪ್ರಧಾನರೂ, ಮಹಾಮುನಿಯಾದ ವಸಿಷ್ಠನೂ ಎಲ್ಲರೂ ಸೇರಿ ಜ್ಯೇಷ್ಠನಾದ ಸುದರ್ಶನನನ್ನು ರಾಜನನ್ನಾಗಿ ಮಾಡಲು ಪರಸ್ಪರ ಆಲೋಚಿಸಿದರು.

**ಧರ್ಮಪತ್ನೀಸುತಃ ಶಾಂತಃ ಪುರುಷಶ್ಚ ಸುಲಕ್ಷಣಃ ।**
**ಅಯಂ ನೃಪಾಸನಾರ್ಹಶ್ಚ ಹ್ಯಬ್ರುವನ್ಮಂತ್ರಿಸತ್ತಮಾಃ ॥೩೪॥**

ಸುದರ್ಶನನು, ಹಿರಿಯಳೂ ಧರ್ಮಪತ್ನಿಯೂ ಆದ ಮನೋರಮೆಯ ಪುತ್ರ ನಾಗಿರುವನು. ಇವನು ಶಾಂತಸ್ವಭಾವವುಳ್ಳವನಾಗಿಯೂ ಒಳ್ಳೇ ರಾಜಲಕ್ಷಣಗಳಿಂದ ಕೂಡಿದವನಾಗಿಯೂ ಇರುವುದರಿಂದ ಸಿಂಹಾಸನಕ್ಕೆ ಯೋಗ್ಯನು ಎಂದು ಸಚಿವ ಶ್ರೇಷ್ಠರು ಹೇಳಿದರು.

**ವಸಿಷ್ಠೋಽಪಿ ತಥೈವಾಹ ಯೋಗ್ಯೋಽಯಂ ನೃಪತೇಸ್ಸುತಃ ।**
**ಬಾಲೋಽಪಿ ಧರ್ಮವಾನ್ರಾಜಾ ನೃಪಾಸನಮಿಹಾರ್ಹತಿ ॥೩೫॥**

ವಸಿಷ್ಠಮುನಿಯೂ ಅದರಂತೆಯೇ ಹೇಳಿದನು. ರಾಜಕುಮಾರನಾದ ಸುದರ್ಶನನು ರಾಜಗದ್ದುಗೆಗೆ ಯೋಗ್ಯನು. ಬಾಲಕನಾದರೂ ಧರ್ಮನಿಷ್ಠನು. ರಾಜಪೀಠವನ್ನು ಪಡೆದು ರಾಜನಾಗಲು ಅರ್ಹನು.

**ಕೃತೇ ಮಂತ್ರೇ ಮಂತ್ರಿವೃದ್ಧೈರ್ಯುಧಾಜಿನ್ನಾಮ ಪಾರ್ಥಿವಃ ।**
**ತತ್ರಾಜಗಾಮ ತರಸಾ ಶ್ರುತ್ವಾ ತೂಜ್ಜಯಿನೀಪತಿಃ ॥೩೬॥**

ಹೀಗೆ ಸುದರ್ಶನನೇ ರಾಜನಾಗಲು ಯೋಗ್ಯನೆಂದು ತುಂಬ ತಿಳಿವಳಿಕೆಯುಳ್ಳ ಮಂತ್ರಿಗಳು ನಿಶ್ಚಯಿಸಲು, ಉಜ್ಜಯಿನಿಗೆ ಒಡೆಯನಾದ ಯುಧಾಜಿತನೆಂಬ ರಾಜನು ಇದನ್ನು ಕೇಳಿ ಕೂಡಲೇ ಹೊರಟು ಅಲ್ಲಿಗೆ ಬಂದನು.

**ಮೃತಂ ಜಾಮಾತರಂ ಶ್ರುತ್ವಾ ಲೀಲಾವತ್ಯಾಃ ಪಿತಾ ತದಾ ।**
**ತತ್ರಾಜಗಾಮ ತ್ವರಿತೋ ದೌಹಿತ್ರಪ್ರಿಯಕಾಮ್ಯಯಾ ॥೩೭॥**

ಲೀಲಾವತಿಯ ತಂದೆಯಾದ ಆ ಯುಧಾಜಿದ್ರಾಜನು, ತನ್ನ ಅಳಿಯನು ಮೃತನಾದುದನ್ನು ಕೇಳಿ ತನ್ನ ಮೊಮ್ಮಗ ಎಂದರೆ ಮಗಳ ಮಗನಾದ ಶತ್ರುಜಿತನಿಗೆ ಒಳ್ಳೆಯದಾಗಬೇಕೆಂಬ ಅಪೇಕ್ಷೆಯಿಂದ ಜಾಗ್ರತೆಯಾಗಿ ಅಲ್ಲಿಗೆ ಬಂದನು.

**ವೀರಸೇನಸ್ತಥಾಽಽಯಾತಃ ಸುದರ್ಶನಹಿತೇಚ್ಛಯಾ ।**
**ಕಲಿಂಗಾಧಿಪತಿಶ್ಚೈವ ಮನೋರಮಾಪಿತಾ ನೃಪಃ ॥೩೮॥**

ಹಾಗೆಯೇ ಹಿರಿಯವಳಾದ ಮನೋರಮೆಯ ತಂದೆಯಾದ ಕಲಿಂಗದೇಶಕ್ಕೆ ಒಡೆಯನಾದ ವೀರಸೇನರಾಜನೂ ಸಹ ತನ್ನ ಮಗಳ ಮಗನಾದ ಸುದರ್ಶನನಿಗೆ ಒಳ್ಳೆಯದಾಗಬೇಕೆಂಬ ಇಚ್ಛೆಯಿಂದ ಬಂದನು.

**ಉಭೌ ತೌ ಸೈನ್ಯಸಂಯುಕ್ತೌ ನೃಪೌ ಸಾಧ್ವಸಸಂಸ್ಥಿತೌ ।**
**ಚಕ್ರತುರ್ಮಂತ್ರಿಮುಖ್ಯೈಸ್ತೈರ್ಮಂತ್ರ್ಯ ರಾಜ್ಯಸ್ಯ ಕಾರಣಾತ್ ॥೩೯॥**

ವೀರಸೇನ, ಯುಧಾಜಿತ್ ಈ ಇಬ್ಬರು ರಾಜರೂ ತಮ್ಮ ಸೈನ್ಯದಿಂದ ಕೂಡಿದವರಾಗಿ, ಎಲ್ಲಿ ತಮ್ಮ ಮಗಳ ಮಗನಿಗೆ ರಾಜ್ಯವು ತಪ್ಪಿಹೋಗುವುದೋ ಎಂಬ ಹೆದರಿಕೆಯಿಂದ ಕೂಡಿದವರಾಗಿ ಬಂದು ಮುಖ್ಯಸಚಿವರೊಂದಿಗೆ ರಾಜ್ಯಕ್ಕೋಸ್ಕರ ಆಲೋಚನೆಯನ್ನು ನಡೆಸಿದರು.

**ಯುಧಾಜಿತ್ತು ತದಾಽಪೃಚ್ಛಜ್ಜ್ಯೇಷ್ಠಃ ಕಃ ಸುತಯೋರ್ದ್ವಯೋಃ ।**
**ರಾಜ್ಯಂ ಪ್ರಾಪ್ನೋತಿ ಜ್ಯೇಷ್ಠೋ ವೈ ನ ಕನೀಯಾನ್ ಕದಾಚನ ॥೪೦॥**

ಯುಧಾಜಿತ್ತುರಾಜನು, ಈ ಇಬ್ಬರು ಕುಮಾರರಲ್ಲಿ ಯಾರು ಹಿರಿಯವನು ಎಂದು ಕೇಳಿ ತಿಳಿದುಕೊಂಡು, ಹಿರಿಯನೇ ರಾಜ್ಯಕ್ಕೆ ಅರ್ಹನು, ಕಿರಿಯನು ಎಂದಿಗೂ ಅಲ್ಲ ಎಂತಲೂ, ವೀರಸೇನರಾಜನು–ಸುದರ್ಶನನು ವಯಸ್ಸಿನಲ್ಲಿ ಹಿರಿಯವನಾದರೆ ಶತ್ರುಜಿತನು ತಿಳಿವಳಿಕೆ ಪರಾಕ್ರಮ ಮುಂತಾದ ಕ್ಷತ್ರಿಯಗುಣಗಳಲ್ಲಿ ಹಿರಿಯನು ಆದುದರಿಂದ ಅವನೇ ರಾಜನಾಗಲು ಅರ್ಹನು ಎಂತಲೂ, ಉಭಯ ಪಕ್ಷದವರೂ ವಾದಿಸಿದರು.

**ವೀರಸೇನೋಽಪಿ ತತ್ರಾಹ ಧರ್ಮಪತ್ನೀಸುತಃ ಕಿಲ ।**
**ರಾಜ್ಯಾರ್ಹಃ ಸ ಯಥಾ ರಾಜನ್ ಶಾಸ್ತ್ರಜ್ಞೇಭ್ಯೋ ಮಯಾ ಶ್ರುತಂ ॥೪೧॥**

ಮುಂದಿನ ಕಾರ್ಯಗಳು ನೆರವೇರಿದ ಮೇಲೆ ರಾಜ್ಯಭಾರಕ್ಕಾಗಿ ಮಗನಿಗೆ ಪಟ್ಟಾಭಿಷೇಕಮಾಡುವ ಸಂದರ್ಭದಲ್ಲಿ ವೀರಸೇನರಾಜನು ಈ ರೀತಿ ಹೇಳಿದನು— ಶತ್ರುಜಿತನು ಗುಣದಿಂದ ಜ್ಯೇಷ್ಠನಾದರೂ, ನಿಜವಾದ ಜ್ಯೇಷ್ಠನೂ, ಧರ್ಮಪತ್ನಿಯಲ್ಲಿ ಹುಟ್ಟಿದವನೂ ಆದ ಸುದರ್ಶನನೇ ರಾಜ್ಯಕ್ಕೆ ಅರ್ಹನು. ಏಕೆಂದರೆ, ಧರ್ಮಪತ್ನಿಯ ಮಗನೇ ರಾಜ್ಯಕ್ಕೆ ಅರ್ಹನೆಂದು ಶಾಸ್ತ್ರವನ್ನು ತಿಳಿದವರಿಂದ ನಾನು ಕೇಳಿ ತಿಳಿದಿರುವೆನು ಎಂದನು.

**ಯುಧಾಜಿತ್ಪುನರಾಹೇದಂ ಜ್ಯೇಷ್ಠೋಽಯಂ ಚ ಯಥಾಗುಣೈಃ ।**
**ರಾಜಲಕ್ಷಣಸಂಯುಕ್ತೋ ನ ತಥಾಽಯಂ ಸುದರ್ಶನಃ ॥೪೨॥**

ಆದಕ್ಕೆ ಯುಧಾಜಿತನು ಹೀಗೆ ಹೇಳಿದನು—ಶತ್ರುಜಿತನು ಹೇಗೆ ಗುಣಗಳಿಂದ ಜ್ಯೇಷ್ಠನಾಗಿ ರಾಜಲಕ್ಷಣಗಳಿಂದ ಕೂಡಿರುತ್ತಾನೆಯೋ ಆದರಂತೆ ಸುದರ್ಶನನಿಲ್ಲವು. ಆದುದರಿಂದ ಸುದರ್ಶನನು ರಾಜ್ಯಕ್ಕೆ ಯೋಗ್ಯನಲ್ಲವು.

**ವಿವಾದೋಽತ್ರ ಸಮುತ್ಪನ್ನೋ ನೃಪಯೋಸ್ತತ್ರ ಲುಬ್ಧಯೋಃ ।**
**ಕಃ ಸಂದೇಹಮಪಾಕರ್ತುಂ ಕ್ಷಮಃ ಸ್ಯಾದತಿಸಂಕಟೇ ॥೪೩॥**

ರಾಜ್ಯಾಭಿಲಾಷೆಯುಳ್ಳ ಆ ರಾಜರೀರ್ವರಿಗೂ ಮಾತಿನ ಜಗಳವುಂಟಾಯಿತು. ಇಂತಹ ಕ್ಲಿಷ್ಟವಾದ ವಿಷಯದಲ್ಲಿ ಯಾರು ತಾನೇ ಸಂಶಯವನ್ನು ಹೋಗಲಾಡಿಸಿ ಯಾರು ?

**ಯುಧಾಜಿನ್ಮಂತ್ರಿಣಃ ಪ್ರಾಹ ಯೂಯಂ ಸ್ವಾರ್ಥಪರಾಃ ಕಿಲ ।**
**ಸುದರ್ಶನಂ ನೃಪಂ ಕೃತ್ವಾ ಧನಂ ಭೋಕ್ತುಂ ಕಿಲೇಚ್ಛಥ ॥೪೪॥**

ಯುಧಾಜಿತನು ಮಂತ್ರಿಗಳಿಗೆ ಹೀಗೆ ಹೇಳಿದನು——ನೀವುಗಳು ಸ್ವಾರ್ಥದಲ್ಲಿಯೇ ಆಸಕ್ತರಾಗಿರುವಿರಿ. ಅದಕ್ಕಾಗಿಯೇ ಏನೂ ತಿಳಿಯದ ಸುದರ್ಶನನನ್ನು ರಾಜನನ್ನಾಗಿ ಮಾಡಿಕೊಂಡು ಬೇಕಾದಂತೆ ಐಶ್ವರ್ಯವನ್ನು ನೀವು ಅನುಭವಿಸಲು ಇಚ್ಛಿಪಟ್ಟರುವಿರಲ್ಲವೇ ?

**ಯುಷ್ಮಾಕಂ ತು ವಿಚಾರೋಽಯಂ ಮಯಾ ಜ್ಞಾತಸ್ತಥೇಂಗಿತೈಃ ।**
**ಶತ್ರುಜಿತ್ಸಬಲಸ್ತಸ್ಮಾತ್ಸಂಮತೋ ವೋ ನೃಪಾಸನೇ ॥೪೫॥**

ನಿಮ್ಮ ಈ ವಿಚಾರವನ್ನು ನಾನು ನಿಮ್ಮ ನಡತೆ ಮತ್ತು ಮಾತುಗಳಿಂದಲೇ ತಿಳಿದಿರುತ್ತೇನೆ. ಶತ್ರುಜಿತನು ಬಲಿಷ್ಠನು. ಆದುದರಿಂದ ನಿಮ್ಮ ರಾಜ್ಯಗದ್ದುಗೆಗೆ ಅವನೇ ತಕ್ಕವನು ಮತ್ತು ಬಾಧ್ಯನು ಎಂದು ನಿಮ್ಮ ಅಭಿಪ್ರಾಯವಲ್ಲವೇ?

**ಮಯಿ ಜೀವತಿ ಕಃ ಕುರ್ಯಾತ್ಕನೀಯಾಂಸಂ ನೃಪಂ ಕಿಲ ।**
**ತ್ಯಕ್ತ್ವಾ ಜ್ಯೇಷ್ಠಂ ಗುಣಾರ್ಹಂ ಚ ಸೇನಯಾ ಚ ಸಮನ್ವಿತಂ ॥೪೬॥**

ನಾನು ಬದುಕಿರುವಾಗ ಅದಾವ ಮನುಷ್ಯನು ತುಂಬ ಗುಣವಂತನಾಗಿಯೂ ಸೈನ್ಯಸಮೇತನಾಗಿಯೂ ಇರುವ ಹಿರಿಯನನ್ನು ಬಿಟ್ಟು ಕಿರಿಯನನ್ನು ರಾಜನನ್ನಾಗಿ ಮಾಡತಕ್ಕವನು ?

**ನೂನಂ ಯುದ್ಧಂ ಕರಿಷ್ಯಾಮಿ ತಸ್ಮಿನ್ ಖಡ್ಗಸ್ಯ ಮೇದಿನೀ ।**
**ಧಾರಯಾ ಚ ದ್ವಿಧಾ ಭೂಯಾದ್ಯುಷ್ಮಾಕಂ ತತ್ರ ಕಾ ಕಥಾ ॥೪೭॥**

ಹಾಗೆ ಮಾಡುವ ಪಕ್ಷದಲ್ಲಿ ನಾನು ಆ ಸುದರ್ಶನನ ಮೇಲೆ ಯುದ್ಧವನ್ನು ಹೂಡುವೆನು. ನನ್ನ ಖಡ್ಗಪ್ರಹಾರಕ್ಕೆ ಭೂಮಿಯೂ ಸಹ ಎರಡು ಭಾಗವಾದೀತು. ಇನ್ನು ನಿಮ್ಮಗಳ ಮಾತೇನು ?

**ವೀರಸೇನಸ್ತು ತಚ್ಛ್ರುತ್ವಾ ಯುಧಾಜಿತಮಭಾಷತ ।**
**ಬಾಲೌ ತೌ ಸದೃಶಪ್ರಜ್ಞೌ ಕೋ ಭೇದೋಽತ್ರ ವಿಚಕ್ಷಣ ॥೪೮॥**

ಯುಧಾಜಿತನ ಮಾತುಗಳನ್ನು ಕೇಳಿ ವೀರಸೇನನು ಹೇಳಿದನು. ಎಲೈ ಯುಕ್ತಾಯುಕ್ತವನ್ನು ತಿಳಿದಿರುವ ಯುಧಾಜಿತನೇ, ಇಲ್ಲಿ ಕುಮಾರರಿಬ್ಬರೂ ಸಮಾನವಾದ ಬುದ್ಧಿಯುಳ್ಳವರು. ಹೀಗಿರಲು, ಅವರಲ್ಲಿ ಒಬ್ಬನು ಹೆಚ್ಚು ಮತ್ತೊಬ್ಬನಲ್ಲವೆಂಬ ಭೇದವು ಹೇಗೆ ಸಲ್ಲುವುದು ?

**ಏವಂ ವಿವದಮಾನೌ ತೌ ಸಂಸ್ಥಿತೌ ನೃಪತೀ ತದಾ ।**
**ಪ್ರಜಾಶ್ಚ ಋಷಯಶ್ಚೈವ ಬಭೂವುರ್ವ್ಯಗ್ರಮಾನಸಾಃ ॥೪೯॥**

ಹೀಗೆ ವೀರಸೇನ ಮತ್ತು ಯುಧಾಜಿತ್ತು ಇವರಿರ್ವರೂ ವ್ಯಾಜ್ಯವಾಡತೊಡಗಿದರು. ಇದರಿಂದ ಪ್ರಜೆಗಳೂ, ಋಷಿಗಳೂ ಕಾತರವಾದ ಮನಸ್ಸುಳ್ಳವರಾದರು.

**ಸಮಾಜಗ್ಮುಶ್ಚ ಸಾಮಂತಾಃ ಸಸೈನ್ಯಾಃ ಕ್ಲೇಶತತ್ಪರಾಃ ।**
**ವಿಗ್ರಹಂ ಚಾಭಿಕಾಂಕ್ಷಂತಃ ಪರಸ್ಪರಮತಂದ್ರಿತಾಃ ॥೫೦॥**

ಅವರ ಆಶ್ರಿತರಾಜರೂ ಸಹ ತಮ್ಮ ತಮ್ಮ ಸೇನೆಗಳೊಡನೆ ಕಷ್ಟದಿಂದ ಹೆದರದೆ ಆಸಕ್ತಿಯಿಂದ ಕೂಡಿದವರಾಗಿಯೂ, ಸ್ವಲ್ಪವೂ ಉದಾಸೀನತೆಯಿಲ್ಲದವರಾಗಿಯೂ, ಒಬ್ಬರಮೇಲೊಬ್ಬರು ಯುದ್ಧವನ್ನು ಅಪೇಕ್ಷಿಸುವವರಾಗಿ ಹೊರಟುಬಂದರು.

**ನಿಷಾದಾ ಹ್ಯಾಯಯುಸ್ತತ್ರ ಶೃಂಗವೇರಪುರಾಶ್ರಯಾಃ ।**
**ರಾಜದ್ರವ್ಯಮುಪಾಹರ್ತುಂ ಮೃತಂ ಶ್ರುತ್ವಾ ಮಹೀಪತಿಂ ॥೫೧॥**

ಶೃಂಗಬೇರಪುರವೆಂಬ ಪಟ್ಟಣದ ಸಮೀಪದಲ್ಲಿ ವಾಸವಾಗಿರತಕ್ಕ ಬೇಡರೂ ಸಹ ರಾಜನಾದ ಧ್ರುವಸಂಧಿಯು ಮೃತನಾದುದನ್ನು ತಿಳಿದು ಕಪ್ಪವನ್ನು ಕೊಡಲು ಬಂದರು.

**ಪುತ್ರೌ ಚ ಬಾಲಕೌ ಶ್ರುತ್ವಾ ವಿಗ್ರಹಂ ಚ ಪರಸ್ಪರಂ ।**
**ಚೌರಾಸ್ತತ್ರ ಸಮಾಜಗ್ಮುರ್ದೇಶದೇಶಾಂತರಾದಪಿ ॥೫೨॥**

ರಾಜಪುತ್ರರು ಇನ್ನೂ ಬಾಲಕರಾಗಿರುವುದನ್ನೂ ಅವರವರಿಗೆ ಯುದ್ಧವು ಸನ್ನಿಹಿತವಾಗಿರುವುದನ್ನೂ ಕೇಳಿ ತಿಳಿದು ದೇಶದೇಶಾಂತರಗಳಿಂದ ಅನೇಕ ಕಳ್ಳರು ಧನಾಕಾಂಕ್ಷೆಯಿಂದ ಅಲ್ಲಿಗೆ ಬಂದರು.

ಹೀಗೆ ಜಗಳವು ಸನ್ನಿಹಿತವಾಗುತ್ತಿರಲು ಅಲ್ಲಿ ತುಂಬ ಜನಗಳು ಸೇರಿ ಗದ್ದಲವಾಯಿತು. ಯುಧಾಜಿತ್ತುರಾಜನೂ, ವೀರಸೇನಭೂಪತಿಯೂ ಪರಸ್ಪರ ಯುದ್ಧಮಾಡುವ ಅಪೇಕ್ಷೆಯುಳ್ಳವರಾದರು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಚತುರ್ದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### ॥ ಪಂಚದಶೋಽಧ್ಯಾಯಃ ॥

### ಹದಿನೈದನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಸಂಯುಗೇ ಚ ಸತಿ ತತ್ರ ಭೂಪಯೋ-**
**ರಾಹವಾಯ ಸಮುಪಾತ್ತಶಸ್ತ್ರಯೋಃ ।**
**ಕ್ರೋಧಲೋಭವಶಯೋಃ ಸಮಂತತಃ**
**ಸಂಬಭೂವ ತುಮುಲಸ್ತು ವಿಮರ್ದಃ** ॥೧॥

ವ್ಯಾಸಮುನಿಯು ಹೇಳಿದನು—ಹೀಗೆ ಕೋಪವು, ಮತ್ತು ತನ್ನ ಅಳಿಯನಿಗೆ ರಾಜ್ಯವಾಗಬೇಕೆಂಬ ಆಶೆಯು, ಇವುಗಳಿಗೆ ಅಧೀನರಾಗಿ ಇದಕ್ಕಾಗಿ ಯುದ್ಧವನ್ನು ಮಾಡಲೇಬೇಕೆಂದು ಆಯುಧವನ್ನು ಹಿಡಿದು ನಿಂತಿರುವ ಆ ಯುಧಾಜಿತ್ತು, ವೀರ ಸೇನ, ಈ ರಾಜರಿಗೆ ಪರಸ್ಪರ ಯುದ್ಧವು ಗೊತ್ತಾಗಲು, ಆ ಉಭಯಪಕ್ಷದ ಸೇನಾ ನಿವಹದಲ್ಲಿ ತುಂಬ ನಿಬಿಡವಾದ ರಣಗೊಂದಲದ ಸಮಾವೇಶವಾಯಿತು.

**ಸಂಸ್ಥಿತಃ ಸ ಸಮರೇ ಧೃತಚಾಪಃ**
**ಪಾರ್ಥಿವಃ ಪೃಥುಲಬಾಹುಯುಧಾಜಿತ್ ।**
**ಸಂಯುತಃ ಸ್ವಬಲವಾಹನಾದಿಕೈ-**
**ರಾಹವಾಯ ಕೃತನಿಶ್ಚಯೋ ನೃಪಃ** ॥೨॥

ಪುಷ್ಟವಾದ ಭುಜವುಳ್ಳ ಯುಧಾಜಿತ್ತುರಾಜನು ಯುದ್ಧವನ್ನು ಮಾಡ ಬೇಕೆಂಬ ನಿಶ್ಚಯದಿಂದ ಕೂಡಿದವನಾಗಿ ತನ್ನ ಸೈನ್ಯವಾಹನಾದಿಗಳಿದ ಕೂಡಿ ಕೊಂಡು, ಧನುಸ್ಸನ್ನು ಹಿಡಿದು ಯುದ್ಧಮಾಡಲು ಸಿದ್ಧನಾಗಿ ನಿಂತನು.

ವೀರಸೇನ ಇಹ ಸೈನ್ಯಸಂಯುತಃ ।
ಕ್ಷಾತ್ರಧರ್ಮಮನುಸೃತ್ಯ ಸಂಗರೇ ।
ಪುತ್ರಿಕಾತ್ಮಜಹಿತಾಯ ಪಾರ್ಥಿವಃ
ಸಂಸ್ಥಿತಃ ಸುರಪತೇಃ ಸಮತೇಜಾಃ ॥೩॥

ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ವೀರಸೇನರಾಜನೂ ಕೂಡ, ಕ್ಷತ್ರಿಯರ ಧರ್ಮವನ್ನನುಸರಿಸಿ ತನ್ನ ಮಗಳ ಮಗನ ಅನುಕೂಲ್ಯಕ್ಕಾಗಿ ತನ್ನ ಸೈನ್ಯದಿಂದ ಕೂಡಿದವನಾಗಿ ಯುದ್ಧಕ್ಕೆ ಸಿದ್ಧನಾಗಿ ನಿಂತನು.

ಸ ಬಾಣವೃಷ್ಟಿಂ ವಿಸಸರ್ಜ ಪಾರ್ಥಿವೋ
ಯುಧಾಜಿತಂ ವೀಕ್ಷ್ಯ ರಣೇ ಸ್ಥಿತಂ ಚ ।
ಗಿರಿಂ ತಡಿತ್ವಾನಿವ ತೋಯವೃಷ್ಟಿಭಿಃ
ಕ್ರೋಧಾನ್ವಿತಃ ಸತ್ಯಪರಾಕ್ರಮೋಽಸೌ ॥೪॥

ಆ ನಿಜವಾದ ಪರಾಕ್ರಮವುಳ್ಳ ವೀರಸೇನರಾಜನು ಸಿಟ್ಟಿನಿಂದ ಕೂಡಿ ಯುದ್ಧದಲ್ಲಿ ನಿರತನಾಗಿರುವ ಯುಧಾಜಿತನ ಮೇಲೆ ಮೇಘವು ಬೆಟ್ಟದ ಮೇಲೆ ಜಲಧಾರೆಗಳನ್ನು ಸುರಿಸುವಂತೆ ಶರವೃಷ್ಟಿಯನ್ನು ಸುರಿಸಿದನು.

ತಂ ವೀರಸೇನೋ ವಿಶಿಖೈಃ ಶಿಲಾಶಿತೈಃ
ಸಮಾವೃಣೋದಾಶುಗನ್ಯೈರಜಿಹ್ಮಗೈಃ ।
ಚಿಚ್ಛೇದ ಬಾಣೈಶ್ಚ ಶಿಲೀಮುಖಾನಸೌ
ತೇನೈವ ಮುಕ್ತಾನತಿವೇಗಪಾತಿನಃ ॥೫॥

ಅಲ್ಲದೆ, ಆ ವೀರಸೇನರಾಜನು ಯುಧಾಜಿತನನ್ನು ಕಲ್ಲುಗಳಂತೆ ತುಂಬ ಗಟ್ಟಿಯಾದ ಮತ್ತು ತೀಕ್ಷ್ಣವಾದ, ವೇಗವಾಗಿಯೂ, ನೇರವಾಗಿಯೂ ಹೋಗತಕ್ಕ ಶರಗಳಿಂದ ಮುಚ್ಚಿದನು. ಮತ್ತು ಆ ಯುಧಾಜಿತನಿಂದ ಬಿಡಲ್ಪಟ್ಟ ತುಂಬ ವೇಗವಾಗಿ ಹೋಗತಕ್ಕ ಬಾಣಗಳನ್ನು ತನ್ನ ಬಾಣಗಳಿಂದ ಕತ್ತರಿಸಿದನು.

ಗಜರಥತುರಗಾಣಾಂ ಸಂಬಭೂವಾತಿಯುದ್ಧಂ
ಸುರನರಮುನಿಸಂಘೈರ್ವೀಕ್ಷಿತಂ ಚಾತಿಘೋರಂ ।

ವಿತತವಿಹಗವೃಂದೈರಾವೃತಂ ವ್ಯೋಮ ಸದ್ಯಃ
ಪಿಶಿತಮಶಿತುಕಾಮೈಃ ಕಾಕಗೃಧ್ರಾದಿಭಿಶ್ಚ ॥೬॥

ಮನುಷ್ಯರೂ, ದೇವತೆಗಳೂ, ಋಷಿಗಳೂ ಮುಂತಾದವರು ನೋಡುತ್ತಿರಲಾಗಿ, ಅಲ್ಲಿ ಆನೆ, ರಥ, ಕುದುರೆ ಮುಂತಾದವುಗಳಿಗೂ ಯುದ್ಧವು ತುಂಬ ಭಯಂಕರವಾಗಿ ಆಯಿತು. ಆಗ ಮಾಂಸವನ್ನು ತಿನ್ನಲಪೇಕ್ಷೆಯುಳ್ಳ ಕಾಗೆ, ರಣಹದ್ದು, ಗಿಡುಗ ಮುಂತಾದ ಪಕ್ಷಿಗಳ ಸಮೂಹದಿಂದ ಗಗನವು ತುಂಬಿಹೋಯಿತು.

ತತ್ರಾದ್ಭುತಾ ಕ್ಷತಜಸಿಂಧುರುವಾಹ ಘೋರಾ
ವೃಂದೇಭ್ಯ ಏವ ಗಜವೀರತುರಂಗಮಾನಾಂ ।
ತ್ರಾಸಾವಹಾ ನಯನಮಾರ್ಗಗತಾ ನರಾಣಾಂ
ಪಾಪಾತ್ಮನಾಂ ರವಿಜಮಾರ್ಗಭವೇವ ಕಾಮಂ ॥೭॥

ಅಲ್ಲಿ ಆನೆಗಳೂ, ಕುದುರೆಗಳೂ, ವೀರರೂ ಇವರ ಗುಂಪಿನಿಂದಲೇ ಆಶ್ಚರ್ಯಕರವಾದ ಮತ್ತು ಭಯಂಕರವಾದ ರಕ್ತದ ನದಿಯು, ಪಾಪಿಗಳಿಗೆ ವೈತರಣೀ ನದಿಯು ಹೇಗೆ ಭಯಂಕರವಾಗಿ ಕಾಣುವುದೋ ಹಾಗೆಯೇ, ಮನುಷ್ಯರು ನೋಡಿದ ಮಾತ್ರಕ್ಕೇ ಭಯವನ್ನುಂಟುಮಾಡುತ್ತಾ ಹರಿಯಿತು.

ಕೀರ್ಣಾನಿ ಭಿನ್ನಪುಲಿನೇ ನರಮಸ್ತಕಾನಿ
ಕೇಶಾವೃತಾನಿ ಚ ವಿಭಾಂತಿ ಯಥೈವ ಸಿಂಧೌ ।
ತುಂಬೀಫಲಾನಿ ವಿಹಿತಾನಿ ವಿಹರ್ತುಕಾಮೈ-
ರ್ಬಾಲೈರ್ಯಥಾ ರವಿಸುತಾಪ್ರಭವೈಶ್ಚ ನೂನಂ ॥೮॥

ಮರಳುಗುಡ್ಡೆಗಳನ್ನೆಲ್ಲಾ ವ್ಯಾಪಿಸಿರುವ ಆ ರಕ್ತಪ್ರವಾಹದಲ್ಲಿ, ತಲೆಗೂದಲುಗಳಿಂದ ಮುಚ್ಚಲ್ಪಟ್ಟಿರುವ ಮನುಷ್ಯರ ರುಂಡಗಳು, ಯಮುನಾನದಿಯಲ್ಲಿ ಆಟಕ್ಕಾಗಿ ಬಾಲಕರಿಂದ ತೇಲಿಸಲು ಎಸೆದ ಸೋರೆಬುರುಡೆಗಳಂತೆ ಕಾಣಿಸುತ್ತಿದ್ದವು.

ವೀರಂ ಮೃತಂ ಭುವಿ ಗತಂ ಪತಿತಂ ರಥಾದ್ವೈ
ಗೃಧ್ರಃ ಪಲಾರ್ಥಮುಪರಿ ಭ್ರಮತೀತಿ ಮನ್ಯೇ ।
ಜೀವೋಽಪ್ಯಸೌ ನಿಜಶರೀರಮವೇಕ್ಷ್ಯ ಕಾಂತಂ
ಕಾಂಕ್ಷತ್ಯಹೋಽತಿವಿವಶೋಽಪಿ ಪುನಃ ಪ್ರವೇಷ್ಟುಂ ॥೯॥

ಮೃತನಾಗಿ ರಥದಿಂದ ಭೂಮಿಯಲ್ಲಿ ಬಿದ್ದಿರುವ ವೀರನನ್ನು, ಅವನ ಮಾಂಸವನ್ನು ತಿನ್ನುವುದಕ್ಕಾಗಿ ಮೇಲ್ಭಾಗದಲ್ಲಿ ಹಾರುತ್ತಲಿರುವ ಹದ್ದನ್ನು ನೋಡಿ, ಆ ವೀರನ ಜೀವವು ದೇಹವನ್ನು ಬಿಟ್ಟು ಮೇಲಕ್ಕೆ ಹೋದರೂ ಮನೋಹರವಾದ ತನ್ನ ಶರೀರವನ್ನು ನೋಡಿ ಅದನ್ನು ಬಿಟ್ಟು ಹೋಗಲಾರದೆ ತುಂಬ ಮೋಹಗೊಂಡದ್ದಾಗಿ ಸಾಧ್ಯವಿಲ್ಲದಿದ್ದರೂ ತಿರುಗಿ ಆ ಶರೀರವನ್ನು ಪ್ರವೇಶಿಸಲು ಅಪೇಕ್ಷೆ ಪಡುತ್ತಿದೆಯೋ ಎಂದು ನಾನು ಊಹಿಸುತ್ತೇನೆ.

**ಆಜೌ ಹತೋಽಪಿ ನೃವರಃ ಸುವಿಮಾನರೂಢಃ**
**ಸ್ವಾಂಕೇ ಸ್ಥಿತಾ ಸುರವಧೂಂ ಪ್ರವದತ್ಯಭೀಷ್ಟಂ ।**
**ಪಶ್ಯಾಧುನಾ ಮಮ ಶರೀರಮಿದಂ ಪೃಥಿವ್ಯಾಂ**
**ಬಾಣಾಹತಂ ನಿಪತಿತಂ ಕರಭೋರು ಕಾಂತಂ ॥೧೦॥**

ಮಾನವಯೋಧರಲ್ಲಿ ಶ್ರೇಷ್ಠನಾದ ಒಬ್ಬ ವೀರನು ರಣದಲ್ಲಿ ಕೊಲ್ಲಲ್ಪಟ್ಟು, ವಿಮಾನವನ್ನೇರಿದವನಾಗಿ ವೀರಸ್ವರ್ಗವನ್ನು ಪಡೆದು, ಅಲ್ಲಿ ತನ್ನ ತೊಡೆಯಲ್ಲಿ ಕುಳಿತಿರುವ ಅಪ್ಸರಸ್ತ್ರೀಯನ್ನು ಕುರಿತು, ಆನೆಯ ಸೊಂಡಲಿನಂತಿರುವ ತೊಡೆಯುಳ್ಳ ಓ ಕಾಂತೆಯೇ, ನೋಡು; ಅಲ್ಲಿ ಕಾಣುವ ನನ್ನ ಮನೋಹರವಾದ ಶರೀರವು ಬಾಣದಿಂದ ಹೊಡೆಯಲ್ಪಟ್ಟದ್ದಾಗಿ ಭೂಮಿಯಲ್ಲಿ ಬಿದ್ದಿರುತ್ತದೆ ಎಂದನು.

**ಏಕೋ ಹತಸ್ತು ರಿಪುಣೈವ ಗತೋಽನ್ತರಿಕ್ಷಂ**
**ದೇವಾಂಗನಾಂ ಸಮಧಿಗಮ್ಯ ಯುತೋ ವಿಮಾನೇ ।**
**ತಾವತ್ಪ್ರಿಯಾ ಹುತವಹೇ ಸುಸಮರ್ಪ್ಯ ದೇಹಂ**
**ಜಗ್ರಾಹ ಕಾಂತಮಬಲಾ ಸಬಲಾ ಸ್ವಕೀಯಾ ॥೧೧॥**

ಒಬ್ಬ ವೀರನು ಶತ್ರುವಿನಿಂದ ಹತನಾಗಿ ಗಗನವನ್ನು ಸೇರಿ ದೇವತ್ವವನ್ನೂ ಅಪ್ಸರಸ್ತ್ರೀಯನ್ನೂ ಹೊಂದಿ ಯಾವಾಗ ವಿಮಾನವನ್ನು ಹತ್ತಿದನೋ ಆಗಲೇ ಅವನ ಭೂಲೋಕದ ಪತ್ನಿಯು ಅಬಲೆ ಎನ್ನಿಸಿಕೊಂಡವಳಾದರೂ ತನ್ನ ಶರೀರವನ್ನು ಸತೀಧರ್ಮದಿಂದ ಅಗ್ನಿಗೆ ಸಮರ್ಪಿಸಿ, ದಿವ್ಯಲೋಕವನ್ನೂ ದೇಹವನ್ನೂ ಪಡೆದು ತನ್ನ ಪ್ರಿಯತಮನಾದ ಆ ವೀರನನ್ನು ಧರ್ಮಬಲದಿಂದ ಕೂಡಿದವಳಾಗಿ ಅಪ್ಪಿಕೊಂಡಳು.

**ಯುದ್ಧೇ ಮೃತೌ ಚ ಸುಭಟೌ ದಿವಿ ಸಂಗತೌ ತಾ-**
**ವನ್ಯೋನ್ಯಶಸ್ತ್ರನಿಹತೌ ಸಹ ಸಂಪ್ರಯಾತೌ ।**
**ತತ್ರೈವ ಜಘ್ನತುರಲಂ ಪರವಾಹಿತಾಸ್ತ್ರಾ-**
**ವೇಕಾಪ್ಸರೋsರ್ಥವಿಹಿತೌ ಕಲಹಾಕುಲೌ ಚ ॥೧೨॥**

ಶ್ರೇಷ್ಠರಾದ ಇಬ್ಬರು ಯೋಧರು ಪರಸ್ಪರವಾಗಿ ತಮ್ಮ ಆಯುಧಗಳಿಂದಲೇ ಹೊಡೆಯಲ್ಪಟ್ಟು ಮೃತರಾಗಿ, ಗಗನದಲ್ಲಿ ಸೇರಿ ಅಲ್ಲಿಯೂ ಇಬ್ಬರೂ ಸಮಾನಪುಣ್ಯರಾದ್ದರಿಂದ ಓರ್ವ ಅಪ್ಸರಸ್ತ್ರೀಗೋಸ್ಕರ ಅನ್ಯೋನ್ಯವಾಗಿ ಆಯುಧವನ್ನು ಹಿಡಿದು ಜಗಳವಾಡುತ್ತಾ ತುಂಬ ಹೊಡೆದಾಡಿದರು.

**ಕಶ್ಚಿದ್ಯುವಾ ಸಮಧಿಗಮ್ಯ ಸುರಾಂಗನಾಂ ವೈ**
**ರೂಪಾಧಿಕಾಂ ಗುಣವತೀಂ ಕಿಲ ಭಕ್ತಿಯುಕ್ತಃ ।**
**ಸ್ವೀಯಾನ್ಗುಣಾನ್ ಪ್ರವಿತತಾನ್ಪ್ರವದಂಸ್ತದಾಸೌ**
**ತಾಂ ಪ್ರೇಮದಾಮನುಚಕಾರ ಚ ಯೋಗಯುಕ್ತಃ ॥೧೩॥**

ಓರ್ವ ತರುಣನು ಯುದ್ಧದಲ್ಲಿ ಮೃತನಾಗಿ ತನಗಿಂತಲೂ ತುಂಬ ರೂಪವತಿಯೂ, ಗುಣವತಿಯೂ ಆದ ಅಪ್ಸರಸ್ತ್ರೀಯನ್ನು ಹೊಂದಿ ಅವಳ ಪ್ರೇಮಸಂಪಾದನೆಗಾಗಿ ತನ್ನ ಅತಿಶಯವಾದ ಗುಣಗಳನ್ನೆಲ್ಲಾ ಹೇಳುತ್ತಾ ಗೌರವಯುತವಾದ ಪ್ರೇಮದಿಂದ ಕೂಡಿದವನಾಗಿ ಪ್ರೇಮಯುಕ್ತಳಾದ ಅವಳನ್ನು ಅವಳ ಗುಣಗಳಿಗೆ ಅನುರೂಪವಾಗಿಯೇ ಅನುಸರಣೆಯನ್ನು ಮಾಡಿದನು.

**ಭೌಮಂ ರಜೋsತಿವಿತತಂ ದಿವಿ ಸಂಸ್ಥಿತಂ ಚ**
**ರಾತ್ರಿಂ ಚಕಾರ ತರಣಿಂ ಚ ಸಮಾವೃಣೋದ್ಯತ್ ।**
**ಮಗ್ನಂ ತದೇವ ರುಧಿರಾಂಬುನಿಧಾವಕಸ್ಮಾ-**
**ತ್ಪ್ರಾದುರ್ಬಭೂವ ರವಿರಪ್ಯತಿಕಾಂತಿಯುಕ್ತಃ ॥೧೪॥**

ಯುದ್ಧಸಮಯದಲ್ಲಿ ಸೇನಾಸಂಮರ್ದದಿಂದುಂಟಾದ ಯಾವ ಭೂಮಿಯ ಧೂಳಿನ ರಾಶಿಯು ಗಗನಕ್ಕೇರಿ ಸೂರ್ಯನನ್ನು ಮುಚ್ಚಿ ಹಗಲಿನಲ್ಲಿಯೇ ರಾತ್ರಿಯಂತೆ ಕತ್ತಲೆಯನ್ನುಂಟುಮಾಡಿತೋ, ತಿರುಗಿ ಅದೇ ಅಕಸ್ಮಾತ್ತಾಗಿ ಉಂಟಾದ

ರಕ್ತಸಮುದ್ರದಲ್ಲಿ ಬಿದ್ದು ಅಡಗಿಹೋಯಿತು. ಆದುದರಿಂದ ಆಮೇಲೆ ಸೂರ್ಯನು ಮುಂಚಿನಂತೆಯೇ ತುಂಬ ತೇಜಸ್ವಿಯಾಗಿ ಉದಯಿಸಿ ಪ್ರಕಾಶಿಸಿದನು.

**ಕಶ್ಚಿದ್ಗತಸ್ತು ಗಗನಂ ಕಿಲ ದೇವಕನ್ಯಾಂ**
**ಸಂಪ್ರಾಪ್ಯ ಚಾರುವದನಾಂ ಕಿಲ ಭಕ್ತಿಯುಕ್ತಾಂ ।**
**ನಾಂಗೀಚಕಾರ ಚತುರೋ ವ್ರತನಾಶಭೀತೋ**
**ಯಾಸ್ಯತ್ಯಯಂ ಮಮ ವೃಥಾ ಹ್ಯನುಕೂಲಶಬ್ದಃ ॥೧೫॥**

ಓರ್ವ ಬ್ರಹ್ಮಚಾರಿಯಾದ ವೀರನು ಮೃತನಾಗಿ ಆಕಾಶವನ್ನು ಸೇರಿ ಅಲ್ಲಿ, ತನ್ನಲ್ಲಿ ಅನುರಕ್ತಳಾದ ಸುಂದರವಾದ ಮುಖವುಳ್ಳ ಅಪ್ಸರಸ್ತ್ರೀಯನ್ನು ಪಡೆದರೂ ಬುದ್ಧಿವಂತನಾದುದರಿಂದ ತನ್ನ ಬ್ರಹ್ಮಚರ್ಯವ್ರತವು ನಾಶವಾಗುವುದೆಂಬ ಹೆದರಿಕೆ ಯಿಂದಲೂ, ತನಗೆ ಯೋಗ್ಯವಾದ "ಬ್ರಹ್ಮಚಾರಿ" ಎಂಬಬಿರುದಿನ ಶಬ್ದವು ತಪ್ಪಿ ಹೋಗುವುದೆಂದೂ ಯೋಚಿಸಿ ಅವಳನ್ನು ಸ್ವೀಕರಿಸಲೇಇಲ್ಲವು.

**ಸಂಗ್ರಾಮೇ ಸಂವೃತೇ ತತ್ರ ಯುಧಾಜಿತ್ಪೃಥಿವೀಪತಿಃ ।**
**ಜಘಾನ ವೀರಸೇನಂ ತಂ ಬಾಣೈಸ್ತೀವ್ರೈಃಸುದಾರುಣೈಃ ॥೧೬॥**

ಆ ಯುದ್ಧವು ಹೀಗೆ ನಡೆಯುತ್ತಿರಲು, ಯುಧಾಜಿತ್ತುರಾಜನು ತೀಕ್ಷ್ಣ ಗಳಾದ ಮತ್ತು ಆ ಕಾರಣದಿಂದ ತುಂಬ ಕ್ರೂರವಾದ ಬಾಣಗಳಿಂದ ವೀರಸೇನ ರಾಜನನ್ನು ಹೊಡೆದನು.

**ನಿಹತಃ ಸ ಪಪಾತೋರ್ವ್ಯಾಂ ಛಿನ್ನಮೂರ್ಧಾ ಮಹೀಪತಿಃ ।**
**ಪ್ರಭಗ್ನಂ ತದ್ಬಲಂ ಸರ್ವಂ ನಿರ್ಗತಂ ಚ ಚತುರ್ದಿಶಂ ॥೧೭॥**

ಹೀಗೆ ಹೊಡೆಯಲ್ಪಟ್ಟ ಆ ವೀರಸೇನನು ಕತ್ತರಿಸಲ್ಪಟ್ಟ ಶಿರಸ್ಸುಳ್ಳವನಾಗಿ ಭೂಮಿಯಲ್ಲಿ ಬಿದ್ದು ಮೃತನಾದನು. ಅವನ ಸೈನ್ಯವೆಲ್ಲಾ ಸೋಲಿಸಲ್ಪಟ್ಟು ನಾಲ್ಕು ದಿಕ್ಕಿಗೂ ಚದುರಿ ಓಡಿಹೋಯಿತು.

**ಮನೋರಮಾ ಹತಂ ಶ್ರುತ್ವಾ ಪಿತರಂ ರಣಮೂರ್ಧನಿ ।**
**ಭಯತ್ರಸ್ತಾಥ ಸಂಜಾತಾ ಪಿತುರ್ವೈರಮನುಸ್ಮರನ್ ॥೧೮॥**

ವೀರಸೇನನ ಪುತ್ರಿಯಾದ ಮನೋರಮೆಯು ತಂದೆಯು ಮೃತನಾದುದನ್ನು ಕೇಳಿ, ಯುಧಾಜಿತನಿಗೆ ತನ್ನ ತಂದೆಯ ಮೇಲಿನ ವೈರವನ್ನು ಸ್ಮರಿಸಿ ತುಂಬ ಭಯ ದಿಂದ ನಡುಗಿದಳು.

**ಹನಿಷ್ಯತಿ ಯುಧಾಜಿದ್ವೈ ಪುತ್ರಂ ಮಮ ದುರಾಶಯಃ ।**
**ರಾಜ್ಯಲೋಭೇನ ಪಾಪಾತ್ಮಾ ಸೇತಿ ಚಿಂತಾಪರಾಽಭವತ್ ॥೧೯॥**

ಏಕೆಂದರೆ, ಕೆಟ್ಟ ಅಭಿಪ್ರಾಯವುಳ್ಳ, ನನ್ನ ತಂದೆಯ ಮೇಲಿನ ದ್ವೇಷವನ್ನು ಮರೆಯದಿರುವ, ಮತ್ತು ಪಾಪಿಯಾದ ಯುಧಾಜಿತನು ರಾಜ್ಯದ ಮೇಲಿನ ಆಸೆಯಿಂದ ನನ್ನ ಮಗನನ್ನೂ ಕೊಲ್ಲುವನು ಎಂದು ಚಿಂತೆಗೊಳಗಾದಳು.

**ಕಿಂ ಕರೋಮಿ ಕ್ವ ಗಚ್ಛಾಮಿ ಪಿತಾ ಮೇ ನಿಹತೋ ರಣೇ ।**
**ಭರ್ತಾ ಚಾಪಿ ಮೃತೋಽದ್ಯೈವ ಪುತ್ರೋಽಯಂ ಮಮ ಬಾಲಕಃ॥೨೦॥**

ಈಗ ನಾನು ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಏಕೆಂದರೆ ನನ್ನ ತಂದೆಯು ಯುದ್ಧದಲ್ಲಿ ಹತನಾದನು. ನನ್ನ ಪತಿಯೂ ಸ್ವಲ್ಪದಿನಗಳ ಹಿಂದೆಯೇ ಮೃತನಾದನು. ನನ್ನ ಪುತ್ರನಾದರೋ ಇನ್ನೂ ಹುಡುಗನು.

**ಲೋಭೋಽತೀವ ಚ ಪಾಪಿಷ್ಠಸ್ತೇನ ಕೋ ನ ವಶೀಕೃತಃ ।**
**ಕಿಂ ನು ಕುರ್ಯಾತ್ತದಾವಿಷ್ಟಃ ಪಾಪಂ ಪಾರ್ಥಿವಸತ್ತಮಃ ॥೨೧॥**

ಆಸೆಯೆಂಬುದು ತುಂಬ ಕೆಟ್ಟುದು. ಅದು ಪಾಪಕಾರ್ಯವನ್ನಾದರೂ ಮಾಡಿಸುವುದು. ಯಾವನು ತಾನೇ ಅದಕ್ಕೆ ಅಧೀನನಾಗುವುದಿಲ್ಲ? ಆಸೆಯಿಂದ ಕೂಡಿದ ಯುಧಾಜಿತನು ರಾಜರಲ್ಲೆಲ್ಲ ಗಟ್ಟಿಗನು. ಆದುದರಿಂದ ಅವನು ಅತ್ಯಾಶೆಯ ಆವೇಶವುಳ್ಳವನಾಗಿ ಏನನ್ನು ತಾನೇ ಮಾಡಲಾರನು?

**ಪಿತರಂ ಮಾತರಂ ಭ್ರಾತೄನ್ ಗುರೂನ್ ಸ್ವಜನಬಾಂಧವಾನ್ ।**
**ಹಂತಿ ಲೋಭಸಮಾವಿಷ್ಟೋ ಜನೋ ನಾತ್ರ ವಿಚಾರಣಾ ॥೨೨॥**

ಆ ಕೆಟ್ಟ ಆಸೆಯಿಂದ ಕೂಡಿದವನು, ತಂದೆಯನ್ನೂ, ತಾಯಿಯನ್ನೂ, ಸಹೋದರರನ್ನೂ, ಗುರುಗಳನ್ನೂ ಮತ್ತು ಬಂಧುಗಳನ್ನೂ ಸಹ ಕೊಲ್ಲುತ್ತಾನೆ. ಇದರಲ್ಲಿ ವಿವೇಚನೆಯೇ ಉಂಟಾಗುವುದಿಲ್ಲವು.

**ಅಭಕ್ಷ್ಯಭಕ್ಷಣಂ ಲೋಭಾದಗಮ್ಯಾಗಮನಂ ತಥಾ ।**
**ಕರೋತಿ ಕಿಲ ತೃಷ್ಣಾರ್ತೋ ಧರ್ಮತ್ಯಾಗಂ ತಥಾಪುನಃ ॥೨೩॥**

ಆಸೆಯಿಂದಲೇ ಮನುಷ್ಯನು ತಿನ್ನಬಾರದುದನ್ನೂ ತಿನ್ನುವನು. ಸೇರಬಾರದ ಸ್ತ್ರೀಯರಲ್ಲಿ ಸಂಗವನ್ನು ಮಾಡುವನು. ಹೆಚ್ಚೇನು? ಆ ಕೆಟ್ಟ ಆಸೆಯಿಂದ ಕೂಡಿದ ಮನುಷ್ಯನು ತನ್ನ ಧರ್ಮವನ್ನೂ ಬಿಡುವನು.

**ನ ಸಹಾಯೋಽಸ್ತಿ ಮೇ ಕಶ್ಚಿನ್ನಗರೇಽತ್ರ ಮಹಾಬಲಃ ।**
**ಯದಾಧಾರೇ ಸ್ಥಿತಾ ಚಾಹಂ ಪಾಲಯಾಮಿ ಸುತಂ ಶುಭಂ ॥೨೪॥**

ಈ ಪಟ್ಟಣದಲ್ಲಿ ಯಾವ ಮನುಷ್ಯನು ಯುಧಾಜಿತನನ್ನು ಎದುರಿಸುವಷ್ಟು ಬಲಿಷ್ಠನಾದವನೋ, ಯಾವನ ಆಶ್ರಯದಲ್ಲಿ 'ನನ್ನ ಮಂಗಳಕರನಾದ ಪುತ್ರನನ್ನು ಕಾಪಾಡಬಹುದೋ ಅಂತಹ ಯಾವ ಪುರುಷನೂ ನನ್ನ ಸಹಾಯಕ್ಕೆ ದೊರೆಯುವುದಿಲ್ಲ.

**ಹತೇ ಪುತ್ರೇ ನೃಪೇಣಾದ್ಯ ಕಿಂ ಕರಿಷ್ಯಾಮ್ಯಹಂ ಪುನಃ ।**
**ನ ಮೇ ತ್ರಾತಾಸ್ತಿ ಭುವನೇ ಯೇನಾಹಂ ಸುಸ್ಥಿತಾ ಹ್ಯಹಂ ॥೨೫॥**

ಯುಧಾಜಿತನು ನನ್ನ ಮಗನನ್ನು ಕೊಂದರೆ, ಮುಂದೆ ನಾನು ಏನನ್ನು ಮಾಡಲಿ? ಏಕೆಂದರೆ, ಈ ಲೋಕದಲ್ಲಿ ಯಾವನಿಂದ ನಾನು ಸುಖವಾಗಿರ ಬಹುದೋ ಅಂತಹ ಕಾಪಾಡುವವನು ಯಾರೂ ಇರುವುದಿಲ್ಲವು.

**ಸಾಪಿ ವೈರಯುತಾ ಕಾಮಂ ಸಪತ್ನೀ ಸರ್ವದಾ ಭವೇತ್ ।**
**ಲೀಲಾವತೀ ನ ಮೇ ಪುತ್ರೇ ಭವಿಷ್ಯತಿ ದಯಾವತೀ ॥೨೬॥**

ನನ್ನ ಸವತಿಯಾದ ಲೀಲಾವತಿಯೂ ಸಹ ಯಾವಾಗಲೂ ನಮ್ಮ ಮೇಲೆ ದ್ವೇಷದಿಂದಲೇ ಕೂಡಿರುವವಳು ಆಗಿರುತ್ತಾಳೆ. ಆದುದರಿಂದ ಆವಳು ಎಂದಿಗೂ ನನ್ನ ಮಗನ ಮೇಲೆ ದಯೆಯುಳ್ಳವಳಾಗುವುದಿಲ್ಲವು.

**ಯುಧಾಜಿತಿ ಸಮಾಯಾತೇ ನ ಮೇ ನಿಸ್ಸರಣಂ ಭವೇತ್ ।**
**ಜ್ಞಾತ್ವಾ ಬಾಲಂ ಸುತಂ ಸೋಽದ್ಯ ಕಾರಾಗಾರಂ ನಯಿಷ್ಯತಿ ॥೨೭॥**

ಯುಧಾಜಿತನು ಈ ಪಟ್ಟಣಕ್ಕೆ ಬಂದರೆ ನಾನು ಇಲ್ಲಿಂದ ತಪ್ಪಿಸಿಕೊಂಡು ಹೋಗುವಂತಿಲ್ಲ. ಅವನು ನನ್ನ ಮಗನನ್ನು ಬಾಲಕನೆಂದು ತಿಳಿದು ಈಗಲೇ ಸೆರೆ ಮನೆಯಲ್ಲಿ ಬಂಧನದಲ್ಲಿ ಇಡುವನು.

**ಶ್ರೂಯತೇ ಹಿ ಪುರೇಂದ್ರೇಣ ಮಾತುರ್ಗರ್ಭಗತಃ ಶಿಶುಃ ।**
**ಕೃಂತಿತಃ ಸಪ್ತಧಾ ಪಶ್ಚಾತ್ಕೃತಾಸ್ತೇ ಸಪ್ತ ಸಪ್ತಧಾ ॥೨೮॥**

ಹಿಂದೆ ದೇವೇಂದ್ರನೂ ಸಹ ತನ್ನ ತಾಯಿಯ ಗರ್ಭದಲ್ಲಿದ್ದ ಶಿಶುವನ್ನು ಮೊದಲು ಏಳು ಭಾಗವಾಗಿ ಸೀಳಿ, ಆ ಮೇಲೆ ಆ ಏಳು ಭಾಗಗಳನ್ನೂ ಏಳು ಏಳು ಭಾಗಗಳಾಗಿ ಸೀಳಿದನು.

**ಪ್ರವಿಶ್ಯ ಚೋದರಂ ಮಾತುಃ ಕರೇ ಕೃತ್ವಾಲ್ಪಕಂ ಪವಿಂ ।**
**ಏಕೋನಪಂಚಾಶದಪಿ ತೇಽಭವನ್ಮರುತೋ ದಿವಿ ॥೨೯॥**

ಆಗ ಇಂದ್ರನು ತಾಯಿಯ ಹೊಟ್ಟೆಯೊಳಕ್ಕೆ ಸಣ್ಣದಾದ ವಜ್ರಾಯುಧವನ್ನು ಹಿಡಿದು ಪ್ರವೇಶಿಸಿ ಆ ಶಿಶುವನ್ನು ಮೇಲೆ ಹೇಳಿದಂತೆ ನಲವತ್ತೊಂಬತ್ತು ಭಾಗ ಗಳಾಗಿ ಸೀಳಿದನು. ಮುಂದೆ ಆ ನಲವತ್ತೊಂಬತ್ತು ಭಾಗಗಳೂ ಆಕಾಶದಲ್ಲಿ ಸಂಚರಿ ಸುವ ವಾಯುಗಳಾದುವು.

**ಸಪತ್ನ್ಯೈ ಗರಲಂ ದತ್ತಂ ಸಪತ್ನ್ಯಾ ನೃಪಭಾರ್ಯಯಾ ।**
**ಗರ್ಭನಾಶಾರ್ಥಮುದ್ದಿಶ್ಯ ಪುರೈತದ್ವೈ ಮಯಾ ಶ್ರುತಂ ॥೩೦॥**

ರಾಜನ ಪತ್ನಿಯು ಹಿಂದೆ ತನ್ನ ಸವತಿಗೆ ಉಂಟಾಗಿದ್ದ ಗರ್ಭವು ನಾಶವಾಗ ಲೆಂದು ಉದ್ದೇಶಿಸಿ ಅಸೂಯೆಯಿಂದ ವಿಷವನ್ನು ಉಣ್ಣಿಸಿದಳು. ಇದನ್ನು ನಾನು ಕೇಳಿರುತ್ತೇನೆ.

**ಜಾತಸ್ತು ಬಾಲಕಃ ಪಶ್ಚಾದ್ದೇಹೇ ವಿಷಯುತಃ ಕಿಲ ।**
**ತೇನಾಸೌ ಸಗರೋ ನಾಮ ವಿಖ್ಯಾತೋ ಭುವಿಮಂಡಲೇ ॥೩೧॥**

ಆ ಮೇಲೆ ಶರೀರದಲ್ಲಿ ವಿಷದಿಂದ ಕೂಡಿಯೇ ಮಗುವು ಹುಟ್ಟಿತು. ಆದುದ ರಿಂದ ಆ ಮಗುವು ಮುಂದೆ ಸಗರನೆಂದು, ಎಂದರೆ ವಿಷದಿಂದ ಕೂಡಿರುವವನೆಂದು, ಭೂಲೋಕದಲ್ಲಿ ಪ್ರಸಿದ್ಧನಾದನು.

**ಜೀವಮಾನೋऽಥ ಭರ್ತಾ ವೈ ಕೈಕೇಯ್ಯಾ ನೃಪಭಾರ್ಯಯಾ ।**
**ರಾಮಃ ಪ್ರವ್ರಾಜಿತೋ ಜ್ಯೇಷ್ಠೋ ಮೃತೋ ದಶರಥೋ ನೃಪಃ ॥೩೨॥**

ಹಾಗೆಯೇ ತನ್ನ ಪತಿಯು ಬದುಕಿರುವಾಗಲೇ ದಶರಥರಾಜನ ಪತ್ನಿಯಾದ ಕೈಕೇಯಿಯು ಜ್ಯೇಷ್ಠಪುತ್ರನಾದ ರಾಮುನನ್ನು ಕಾಡಿಗೆ ಅಟ್ಟಿದಳು. ಅದರಿಂದ ಕೂಡಲೆ ದಶರಥರಾಜನೂ ಪುತ್ರಶೋಕದ ವ್ಯಸನದಿಂದ ಮೃತನಾದನು.

**ಮಂತ್ರಿಣಸ್ತ್ವವಶಾಃ ಕಾಮಂ ಯೇ ಮೇ ಪುತ್ರಂ ಸುದರ್ಶನಂ ।**
**ರಾಜಾನಂ ಕರ್ತುಕಾಮಾ ವೈ ಯುಧಾಜಿದ್ವಶಗಾಶ್ಚ ತೇ ॥೩೩॥**

ಮೊದಲು ನನ್ನ ಪುತ್ರನನ್ನೇ ರಾಜನನ್ನಾಗಿ ಮಾಡಬೇಕೆಂದಿದ್ದ ಮಂತ್ರಿಗಳೂ ಈಗ ಅಸ್ವತಂತ್ರರು. ಅವರೂ ಮುಂದೆ ಯುಧಾಜಿತನ ವಶವರ್ತಿಗಳಾಗುವರು; ಎಂದರೆ ಅಧೀನರಾಗುವರು.

**ನ ಮೇ ಭ್ರಾತಾ ತಥಾ ಶೂರೋ ಯೋ ಮೇ ಬಂಧಾತ್ಪ್ರಮೋಚಯೇತ್ ।**
**ಮಹತ್ಕಷ್ಟಂ ಚ ಸಂಪ್ರಾಪ್ತಂ ಮಯಾ ವೈ ದೈವಯೋಗತಃ ॥೩೪॥**

ನನ್ನನ್ನು ಬಂಧನದಿಂದ ಬಿಡಿಸತಕ್ಕ ವೀರನಾದ ಸಹೋದರನೂ ನನಗೆ ಇರುವುದಿಲ್ಲವು. ನನ್ನ ದುರದೃಷ್ಟದಿಂದ ನನಗೆ ತುಂಬ ದೊಡ್ಡದಾದ ಕಷ್ಟವು ಬಂದೊದಗಿತು.

**ಉದ್ಯಮಃ ಸರ್ವಥಾ ಕಾರ್ಯಃ ಸಿದ್ಧಿರ್ದೈವಾದ್ವಿಜಾಯತೇ ।**
**ಉಪಾಯಂ ಪುತ್ರರಕ್ಷಾರ್ಥಂ ಕರೋಮ್ಯದ್ಯ ತ್ವರಾನ್ವಿತಾ ॥೩೫॥**

ಆದರೂ ಮಾನವರು ಎಲ್ಲಾ ವಿಧವಾಗಿಯೂ ತಮ್ಮ ಕೈಯಿಂದ ಆಗುವಷ್ಟು ಪ್ರಯತ್ನವನ್ನು ಮಾಡಬೇಕು. ಇಷ್ಟಸಿದ್ಧಿಯು ಅದೃಷ್ಟದಿಂದ ಆಗುತ್ತದೆ. ಈಗ ಆದಷ್ಟು ಜಾಗ್ರತೆಯಾಗಿ ಪುತ್ರನನ್ನು ಕಾಪಾಡಲು ಉಪಾಯವನ್ನು ಮಾಡುತ್ತೇನೆ.

**ಇತಿ ಸಂಚಿಂತ್ಯ ಸಾ ಬಾಲಾ ವಿದಲ್ಲಂ ಜಾತಿಮಾನಿನಂ ।**
**ನಿಪುಣಂ ಸರ್ವಕಾರ್ಯೇಷು ಚಿಂತ್ಯಂ ಮಂತ್ರಿವರೋತ್ತಮಂ ॥೩೬॥**

ಹೀಗೆ ಆಲೋಚಿಸಿ ಆ ಚಿಕ್ಕವಯಸ್ಸಿನವಳಾದ ಮನೋರಮೆಯು ಎಲ್ಲಾ ಕೆಲಸಗಳಲ್ಲಿಯೂ ಸಮರ್ಥನಾದ, ನಂಬಿಕೆಯಿಂದ ಹಿತಕರವಾದ ಆಲೋಚನೆಗೆ ತಕ್ಕ

ವನಾದ ಮತ್ತು ತುಂಬ ಮಾನಿಷ್ಠನೂ ಗಂಭೀರವಾದ ಸ್ವಭಾವವುಳ್ಳವನೂ ಆದ ವಿದಲ್ಲನೆಂಬ ಮಂತ್ರಿಶ್ರೇಷ್ಠನನ್ನು,

**ಸಮಾಹೂಯ ತನೇಕಾಂತೇ ಪ್ರೋವಾಚ ಬಹುದುಃಖಿತಾ ।**
**ಗೃಹೀತ್ವಾ ಬಾಲಕಂ ಹಸ್ತೇ ರುದತೀ ದೀನಮಾನಸಾ ॥೩೭॥**

ಕರೆಯಿಸಿ, ರಹಸ್ಯದಲ್ಲಿ ದೀನವಾದ ಮನಸ್ಸುಳ್ಳ ಆ ಮನೋರಮೆಯು ತುಂಬ ದುಃಖದಿಂದ ಕೂಡಿದವಳಾಗಿ ಅಳುತ್ತಾ ತನ್ನ ಪುತ್ರನನ್ನು ಕೈಯಲ್ಲಿ ಹಿಡಿದು ಕೊಂಡು, ಅವನನ್ನು ಕುರಿತು ಹೀಗೆ ಹೇಳಿದಳು.

**ಪಿತಾ ಮೇ ನಿಹತಃ ಸಂಖ್ಯೇ ಪುತ್ರೋಽಯಂ ಬಾಲಕಸ್ತಥಾ।**
**ಯುಧಾಜಿದ್ಬಲವಾನ್ರಾಜಾ ಕಿಂ ವಿಧೇಯಂ ವದಸ್ವ ಮೇ ॥೩೮॥**

ಓ ಮಂತ್ರಿಯೇ, ನನ್ನ ತಂದೆಯು ಯುದ್ಧದಲ್ಲಿ ಮಡಿದನು. ಈ ನನ್ನ ಪುತ್ರನು ಇನ್ನೂ ಚಿಕ್ಕವಯಸ್ಸಿನ ಹುಡುಗನು. ಯುಧಾಜಿತ್ತುವಾದರೋ ಬಲಿಷ್ಠನಾದ ರಾಜನು. ಇಂತಹ ಇಕ್ಕಟ್ಟಿನಲ್ಲಿ ಏನನ್ನು ಮಾಡಬೇಕು, ಹೇಳು.

**ತಾಮುವಾಚ ವಿದಲ್ಲೋಽಸೌ ನಾತ್ರ ಸ್ಥಾತವ್ಯಮೇವ ಚ ।**
**ಗಮಿಷ್ಯಾಮೋ ವನೇ ಕಾಮಂ ವಾರಾಣಸ್ಯಾಃ ಪುನಃ ಕಿಲ ॥೩೯॥**

ಆ ವಿದಲ್ಲನು ಮನೋರಮೆಯನ್ನು ಕುರಿತು ಇಂತೆಂದನು—ಈಗ ಇಲ್ಲಿ ಇರಬಾರದು. ಕೂಡಲೇ ಕಾಡಿನಲ್ಲಿ ಬೇಕಾದೆಡೆಗೆ ಹೋಗೋಣ. ಮುಂದೆ ಅಲ್ಲಿಂದ ಕಾಶಿಗೆ ಹೋಗೋಣ.

**ತತ್ರ ಮೇ ಮಾತುಲಃ ಶ್ರೀಮಾನ್ವರ್ತತೇ ಬಲವತ್ತರಃ ।**
**ಸುಬಾಹುರಿತಿ ವಿಖ್ಯಾತೋ ರಕ್ಷಿತಾ ಸ ಭವಿಷ್ಯತಿ ॥೪೦॥**

ಕಾಶಿಯಲ್ಲಿ ಸುಬಾಹುವೆಂದು ಪ್ರಸಿದ್ಧನಾದ, ತುಂಬ ಬಲಿಷ್ಠನಾದ ಮತ್ತು ಐಶ್ವರ್ಯವಂತನಾದ ನನ್ನ ಸೋದರಮಾವನೊಬ್ಬನಿರುವನು. ಅವನು ನಮ್ಮನ್ನು ಕಾಪಾಡುವನು.

**ಯುಧಾಜಿದ್ದರ್ಶನೋತ್ಕಂಠಮನಸಾ ನಗರಾದ್ಬಹಿಃ ।**
**ನಿರ್ಗತ್ಯ ರಥಮಾರುಹ್ಯ ಗಂತವ್ಯಂ ನಾತ್ರ ಸಂಶಯಃ ॥೪೧॥**

ಯುಧಾಜಿತನನ್ನು ನೋಡಬೇಕೆಂದು ತವಕಪಡುವ ಮನಸ್ಸಿನಿಂದ ಹೊರಡು ತ್ತೇನೆಂದು ಪ್ರಕಟನೆಮಾಡಿ, ರಥವನ್ನು ಹತ್ತಿ ಹೊರಟು ಪಟ್ಟಣದಿಂದ ಹೊರಬಿದ್ದು ಹೋಗಬೇಕು. ಈ ವಿಚಾರದಲ್ಲಿ ಸಂಶಯದಿಂದ ಸಾವಕಾಶಮಾಡಿ ಪ್ರಯೋಜನವಿಲ್ಲ.

**ಇತ್ಯುಕ್ತ್ವಾ ತೇನ ಸಾ ರಾಜ್ಞೀ ಗತ್ವಾ ಲೀಲಾವತೀಂ ಪ್ರತಿ ।**
**ಉವಾಚ ಪಿತರಂ ದ್ರಷ್ಟುಂ ಗಚ್ಛಾಮ್ಯದ್ಯ ಸುಲೋಚನೇ ॥೪೨॥**

ಹೀಗೆ ಆ ವಿದಲ್ಲನು ಹೇಳಲು, ಆ ರಾಣಿಯು ಅಂತಃಪುರಕ್ಕೆ ಹೋಗಿ ಲೀಲಾವತಿಯನ್ನು ಕುರಿತು, ಎಲೌ ಸುಂದರನಯನೆಯೇ, ನಾನು ಈಗ ನಿನ್ನ ತಂದೆ ಯನ್ನು ನೋಡಲು ಹೋಗುತ್ತೇನೆ ಎಂದಳು.

**ಇತ್ಯುಕ್ತ್ವಾ ರಥಮಾರುಹ್ಯ ಸೈರಂಧ್ರೀಸಂಯುತಾ ತದಾ ।**
**ವಿದಲ್ಲೇನ ಚ ಸಂಯುಕ್ತಾ ನಿಸ್ಸೃತಾ ನಗರಾದ್ಬಹಿಃ ॥೪೩॥**

ಹೀಗೆಂದು ಅವಳಿಗೆ ಹೇಳಿ ಆ ಮನೋರಮೆಯು ಮಗನೊಡನೆಯೂ, ಅಲಂಕಾರಮಾಡಲು ನಿಯಮಿತಳಾಗಿದ್ದ ಓರ್ವ ದಾಸಿಯೊಂದಿಗೂ, ಆ ವಿದಲ್ಲ ನೊಂದಿಗೂ ಕೂಡಿ ರಥವನ್ನು ಹತ್ತಿಕೊಂಡು ಪಟ್ಟಣದಿಂದ ಹೊರಕ್ಕೆ ಹೊರಟಳು.

**ತ್ರಸ್ತಾ ಹ್ಯಾರ್ತಾತಿಕೃಪಣಾ ಪಿತುಃ ಶೋಕಸಮಾಕುಲಾ ।**
**ದೃಷ್ಟ್ವಾ ಯುಧಾಜಿತಂ ಭೂಪಂ ಪಿತರಂ ಗತಜೀವಿತಂ ॥೪೪॥**

ಹೆದರಿದವಳಾಗಿಯೂ, ದುಃಖಿತಳಾಗಿಯೂ ಇದ್ದ ಆ ಮನೋರಮೆಯು ತುಂಬ ದೀನಳಾಗಿ, ತಂದೆಯ ಮರಣದಿಂದ ಉಂಟಾದ ವ್ಯಸನದಿಂದ ಕೂಡಿದವ ಳಾಗಿ, ಅಲ್ಲಿ ಯುಧಾಜಿತ್ತುರಾಜನನ್ನೂ, ಮೃತನಾದ ತಂದೆಯನ್ನೂ ನೋಡಿ,

**ಸಂಸ್ಕಾರ್ಯ ಚ ತ್ವರಾಯುಕ್ತಾ ವೇಪಮಾನಾ ಭಯಾಕುಲಾ ।**
**ದಿನದ್ವಯೇನ ಸಂಪ್ರಾಪ್ತಾ ರಾಜ್ಞೀ ಭಾಗೀರಥೀತಟಂ ॥೪೫॥**

ಹೆದರಿಕೆಯಿಂದ ಕೂಡಿ ನಡುಗುತ್ತ, ತ್ವರೆಯಿಂದ ತನ್ನ ತಂದೆಯ ಅಂತ್ಯ ಸಂಸ್ಕಾರವನ್ನು ಮಾಡಿಸಿ ಮುಂದೆ ಆ ರಾಣಿಯು ಎರಡು ದಿವಸಗಳಲ್ಲಿಯೇ ಗಂಗಾ ನದಿಯ ದಡವನ್ನು ಸೇರಿದಳು.

**ನಿಷಾದೈರ್ಲುಂಠಿತಾ ತತ್ರ ಗೃಹೀತಂ ಸಕಲಂ ವಸು ।**
**ರಥಂ ಚಾಪಿ ಗೃಹೀತ್ವಾ ತೇ ನಿರ್ಗತಾ ದಸ್ಯವಃ ಶಠಾಃ ॥೪೬॥**

ಅಲ್ಲಿ ದುಷ್ಟರಾದ ಬೇಡರು ಇವರನ್ನು ಕೊಳ್ಳೇಹೊಡೆದು ಇವರಲ್ಲಿದ್ದ ಧನವೆಲ್ಲವನ್ನೂ ಅಪಹರಿಸಿದರು. ಮತ್ತು ಆ ನೀಚರಾದ ಕಳ್ಳರು ಅವರ ರಥವನ್ನೂ ತೆಗೆದುಕೊಂಡರು.

**ರುದತೀ ಸುತಮಾದಾಯ ಚಾರುವಸ್ತ್ರಾ ಮನೋರಮಾ ।**
**ನಿರ್ಯಯೌ ಜಾಹ್ನವೀತೀರೇ ಸೈರಂಧ್ರೀಕರಲಂಬಿತಾ ॥೪೭॥**

ಉತ್ತಮವಾದ ವಸ್ತ್ರವನ್ನು ಧರಿಸಿದ್ದ ಆ ಮನೋರಮೆಯು ಅಳುತ್ತಾ ಮಗನನ್ನು ಕರೆದುಕೊಂಡು, ಸೈರಂಧ್ರಿಯೆಂಬ ತನ್ನ ಆಪ್ತದಾಸಿಯ ಕೈಯನ್ನು ಹಿಡಿದುಕೊಂಡು ಗಂಗೆಯ ದಡದಲ್ಲಿಯೇ ಹೊರಟಳು.

**ಆರುಹ್ಯ ಚ ಭಯಾಚ್ಛೀಘ್ರಮುಡುಪಂ ಸಾ ಭಯಾಕುಲಾ ।**
**ತೀರ್ತ್ವಾ ಭಾಗೀರಥೀಂ ಪುಣ್ಯಾಂ ಯಯೌ ತ್ರಿಕೂಟಪರ್ವತಂ ॥೪೮॥**

ಹೆದರಿಕೆಯಿಂದ ಗಾಬರಿಪಡುತ್ತಾ ಅವಳು ಅಂಜಿಕೆಯಿಂದಲೇ ದೋಣಿಯನ್ನು ಹತ್ತಿ, ಪವಿತ್ರವಾದ ಗಂಗಾನದಿಯನ್ನು ದಾಟಿ ಚಿತ್ರಕೂಟಪರ್ವತಕ್ಕೆ ಹೋದಳು.

**ಭಾರದ್ವಾಜಾಶ್ರಮಂ ಪ್ರಾಪ್ತಾ ತ್ವರಯಾ ಚ ಭಯಾಕುಲಾ ।**
**ಸಂವೀಕ್ಷ್ಯ ತಾಪಸಾಂಸ್ತತ್ರ ಸಂಜಾತಾ ನಿರ್ಭಯಾ ತದಾ ॥೪೯॥**

ಹೆದರಿಕೆಯಿಂದ ಗಾಬರಿಗೊಂಡು ಅವಳು ಜಾಗ್ರತೆಯಾಗಿ ಭರದ್ವಾಜ ಮುನಿಯ ಆಶ್ರಮವನ್ನು ತಲಪಿ ಅಲ್ಲಿ ಆ ಋಷಿಗಳನ್ನು ನೋಡಿದಮೇಲೆ ಹೆದರಿಕೆಯಿಲ್ಲದವಳಾದಳು.

**ಮುನಿನಾ ಸಾ ತತಃ ಪೃಷ್ಟಾ ಕಾಽಸಿ ಕಸ್ಯ ಪರಿಗ್ರಹಃ ।**
**ಕಷ್ಟೇನಾತ್ರ ಕಥಂ ಪ್ರಾಪ್ತಾ ಸತ್ಯಂ ಬ್ರೂಹಿ ಶುಚಿಸ್ಮಿತೇ ॥೫೦॥**

ಆಮೇಲೆ ಆ ಮುನಿಯು ಅವಳನ್ನು ಈ ರೀತಿಯಲ್ಲಿ ಕೇಳಿದನು—ಓ ನಿರ್ಮಲವಾದ ಮಂದಹಾಸವುಳ್ಳವಳೇ, ನೀನು ಯಾರು? ಯಾರ ಪತ್ನಿಯು? ಇಲ್ಲಿಗೆ ಇಷ್ಟು ಕಷ್ಟದಿಂದ ಏಕೆ ಬಂದಿರುವೆ? ನಿಜವನ್ನು ಹೇಳು.

**ದೇವೀ ವಾ ಮಾನುಷೀ ವಾಽಸಿ ಬಾಲಪುತ್ರಾ ವನೇ ಕಥಂ ।**
**ರಾಜ್ಯಭ್ರಷ್ಟೇವ ವಾಮೋರು ಭಾಸಿ ತ್ವಂ ಕಮಲೇಕ್ಷಣೇ ॥೫೧॥**

ನೀನು ದೇವಸ್ತ್ರೀಯೋ, ಅಥವಾ ಮನುಷ್ಯಸ್ತ್ರೀಯೋ? ಇನ್ನೂ ಬಾಲಕನಾದ ಪುತ್ರನುಳ್ಳ ನೀನು ಈ ವನಕ್ಕೆ ಹೇಗೆ ಬಂದೆ? ಸುಂದರವಾದ ತೊಡೆಯುಳ್ಳ ಮತ್ತು ಕಮಲದಂತಿರತಕ್ಕ ನಯನವುಳ್ಳ ಎಲೌ ಸ್ತ್ರೀಯೇ, ನಿನ್ನನ್ನು ನೋಡಿದರೆ ರಾಜ್ಯದಿಂದ ಓಡಿಸಲ್ಪಟ್ಟವಳಾಗಿ ಕಾಣಿಸುತ್ತೀಯೆ.

**ಏವಂ ಸಾ ಮುನಿನಾ ಪೃಷ್ಟಾ ನೋವಾಚ ವರವರ್ಣಿನೀ ।**
**ರುದತೀ ದುಃಖಸಂತಪ್ತಾ ವಿದಲ್ಲಂ ಚ ಸಮಾದಿಶತ್ ॥೫೨॥**

ಹೀಗೆ ಆ ಮುನಿಯು ಕೇಳಲು, ಉತ್ತಮಸ್ತ್ರೀಯಾದ ಆ ಮನೋರಮೆಯು ಪ್ರತ್ಯುತ್ತರವಾಗಿ ಮಾತನ್ನಾಡಲಿಲ್ಲ. ದುಃಖದಿಂದ ಅಳುತ್ತಾ, ಮಂತ್ರಿಯಾದ ವಿದಲ್ಲನಿಗೆ ಉತ್ತರವನ್ನು ಹೇಳುವಂತೆ ಹೇಳಿದಳು.

**ವಿದಲ್ಲಸ್ತಮುವಾಚೇದಂ ಧ್ರುವಸಂಧಿರ್ನೃಪೋತ್ತಮಃ ।**
**ತಸ್ಯ ಭಾರ್ಯಾ ಧರ್ಮಪತ್ನೀ ನಾಮ್ನಾ ಚೇಯಂ ಮನೋರಮಾ ॥೫೩॥**

ಆ ವಿದಲ್ಲನು ಮುನಿಯನ್ನು ಕುರಿತು ಹೀಗೆ ಹೇಳಿದನು-- ಧ್ರುವಸಂಧಿಯೆಂಬ ರಾಜಶ್ರೇಷ್ಠನಿದ್ದನು. ಇವಳು ಅವನ ಹೆಂಡತಿಯು, ಮತ್ತು ಧರ್ಮಪತ್ನಿಯು. ಇವಳ ಹೆಸರು ಮನೋರಮೆ ಎಂದು.

**ಸಿಂಹೇನ ನಿಹತೋ ರಾಜಾ ಸೂರ್ಯವಂಶೀ ಮಹಾಬಲಃ ।**
**ಪುತ್ರೋಽಯಂ ನೃಪತೇಸ್ತಸ್ಯ ನಾಮ್ನಾ ಚೈವ ಸುದರ್ಶನಃ ॥೫೪॥**

ಓ ಭರದ್ವಾಜಋಷಿಯೇ, ಸೂರ್ಯವಂಶದವನೂ ತುಂಬ ಬಲಿಷ್ಠನೂ ಆದ ಆ ರಾಜನು ಬೇಟೆಯಲ್ಲಿ ಸಿಂಹದಿಂದ ಕೊಲ್ಲಲ್ಪಟ್ಟನು. ಈ ಬಾಲಕನು ಆ ರಾಜನ ಪುತ್ರನು. ಇವನ ಹೆಸರು ಸುದರ್ಶನನೆಂದು.

**ಅಸ್ಯಾಃ ಪಿತಾತಿಧರ್ಮಾತ್ಮಾ ದೌಹಿತ್ರಾರ್ಥೇ ಮೃತೋ ರಣೇ ।**
**ಯುಧಾಜಿದ್ಭಯಸಂತ್ರಸ್ತಾ ಸಂಪ್ರಾಪ್ತಾ ವಿಜನೇ ವನೇ ॥೫೫॥**

ಈ ಮನೋರಮೆಯ ತಂದೆಯು ತುಂಬ ಧರ್ಮಪರನಾದವನು. ಅವನು ತನ್ನ ಈ ಮಗಳ ಮಗನಿಗೆ ರಾಜ್ಯವನ್ನು ಸಾಧಿಸುವುದಕ್ಕೋಸ್ಕರ ಉಂಟಾದ ಯುದ್ಧದಲ್ಲಿ ಮಡಿದನು. ಇವಳು ಯುಧಾಜಿತ್ತನಿಂದ ಅಪಾಯವಾದೀತೆಂಬ ಹೆದರಿಕೆಯಿಂದ ಜನರ ಸುಳಿವಿಲ್ಲದ ಕಾಡನ್ನು ಸೇರಿದಳು.

ತ್ವಾಮೇವ ಶರಣಂ ಪ್ರಾಪ್ತಾ ಬಾಲಪುತ್ರಾ ನೃಪಾತ್ಮಜಾ ।
ತ್ರಾತಾ ಭವ ಮಹಾಭಾಗ ತ್ವಮಸ್ಯಾ ಮುನಿಸತ್ತಮ ॥೫೬॥

ಓ ಋಷಿಶ್ರೇಷ್ಠನೇ, ಇನ್ನೂ ಬಾಲಕನಾದ ಮಗನುಳ್ಳ ಈ ರಾಜಪುತ್ರಿಯು ನಿನ್ನನ್ನೇ ರಕ್ಷಕನನ್ನಾಗಿ ಎಣಿಸಿ ನಿನ್ನಲ್ಲಿಗೆ ಬಂದಿರುವಳು. ಎಲೈ ಮಹಾಪುಣ್ಯಶಾಲಿಯಾದ ಮುನಿಶ್ರೇಷ್ಠನೇ ಇವಳನ್ನು ನೀನು ಕಾಪಾಡುವವನಾಗು.

ಆರ್ತಸ್ಯ ರಕ್ಷಣೇ ಪುಣ್ಯಂ ಯಜ್ಞಾಧಿಕಮುದಾಹೃತಂ ।
ಭಯತ್ರಸ್ತಸ್ಯ ದೀನಸ್ಯ ವಿಶೇಷಫಲದಂ ಸ್ಮೃತಂ ॥೫೭॥

ದುಃಖಿತನನ್ನು ರಕ್ಷಿಸಿದರೆ ಯಜ್ಞವನ್ನು ಮಾಡಿದುದಕ್ಕಿಂತಲೂ ಹೆಚ್ಚು ಪುಣ್ಯವು ಬರುವುದೆಂದು ಹೇಳಿರುತ್ತದೆ. ಅದರಲ್ಲೂ ತುಂಬ ಭಯದಿಂದ ಕಂಗೆಟ್ಟಿರುವವರನ್ನು ರಕ್ಷಿಸಿದರೆ ಇನ್ನೂ ಹೆಚ್ಚಿನ ಪುಣ್ಯಫಲವು ಬರುವುದೆಂದು ಹೇಳಿರುತ್ತದೆ.

ನಿರ್ಭಯಾ ವಸ ಕಲ್ಯಾಣಿ ಪುತ್ರಂ ಪಾಲಯ ಸುವ್ರತೇ ।
ನ ತೇ ಭಯಂ ವಿಶಾಲಾಕ್ಷಿ ಕರ್ತವ್ಯಂ ಶತ್ರುಸಂಭವಂ ॥೫೮॥

ಭರದ್ವಾಜಮುನಿಯು ಹೀಗೆ ಹೇಳಿದನು— ಓ ಮಂಗಳಕರಳಾದ ಪತಿವ್ರತೆಯಾದ ಮನೋರಮೆಯೇ, ನೀನು ಇಲ್ಲಿ ಯಾವ ಭಯವೂ ಇಲ್ಲದೆ ನಿನ್ನ ಪುತ್ರನನ್ನು ಕಾಪಾಡುತ್ತಾ ವಾಸಮಾಡಿಕೊಂಡಿರು. ಎಲೌ ವಿಶಾಲವಾದ ನಯನವುಳ್ಳವಳೇ, ನಿನಗೆ ಇಲ್ಲಿ ಶತ್ರುವಿನ ಭಯವು ಬರಲಾರದು.

ಪಾಲಯಸ್ವ ಸುತಂ ಕಾಂತಂ ರಾಜಾ ತೇಽಯಂ ಭವಿಷ್ಯತಿ ।
ನಾತ್ರ ದುಃಖಂ ತಥಾ ಶೋಕಃ ಕದಾಚಿತ್ಸಂಭವಿಷ್ಯತಿ ॥೫೯॥

ಓ ಮಂಗಳಕರಳೇ, ಸುಂದರನಾದ ಈ ನಿನ್ನ ಪುತ್ರನನ್ನು ಇಲ್ಲಿ ರಕ್ಷಿಸುತ್ತಿರು. ಇವನು ಮುಂದೆ ರಾಜನಾಗುವನು. ಈ ಆಶ್ರಮದಲ್ಲಿ ನಿನಗೆ ಯಾವಾಗಲೂ ದುಃಖವಾಗಲೀ, ವ್ಯಸನವಾಗಲೀ ಆಗುವುದಿಲ್ಲವು.

॥ ವ್ಯಾಸ ಉವಾಚ ॥

**ಇತ್ಯುಕ್ತಾ ಮುನಿನಾ ರಾಜ್ಞೀ ಸ್ವಸ್ಥಾ ಸಾ ಸಂಬಭೂವ ಹ ।**
**ಉಟಜೇ ಮುನಿನಾ ದತ್ತೇ ವೀತಶೋಕಾ ತದಾಽವಸತ್ ॥೬೦॥**

ವ್ಯಾಸಮುನಿಯು ಹೇಳಿದನು—ಹೀಗೆ ಆ ಮುನಿಯಿಂದ ಹೇಳಲ್ಪಟ್ಟವಳಾಗಿ ಆ ರಾಣಿಯು ಮನಸ್ಸಮಾಧಾನವನ್ನು ಹೊಂದಿದಳು. ಆಮೇಲೆ ಆ ಮುನಿಯು ಬಿಡಿಸಿಕೊಟ್ಟ ಪರ್ಣಕುಟೀರದಲ್ಲಿ ಯಾವ ವ್ಯಸನವೂ ಇಲ್ಲದೆ ವಾಸಮಾಡಿ ಕೊಂಡಿದ್ದಳು.

**ಸೈರಂಧ್ರೀಸಹಿತಾ ತತ್ರ ವಿದಲ್ಲೇನ ಚ ಸಂಯುತಾ ।**
**ಸುದರ್ಶನಂ ಪಾಲಯಾನಾ ನ್ಯವಸತ್ಸಾ ಮನೋರಮಾ ॥೬೧॥**

ಅಲ್ಲಿ ಆ ಮನೋರಮೆಯು ತನ್ನ ಆಪ್ತದಾಸಿಯೊಂದಿಗೂ, ವಿದಲ್ಲನೆಂಬ ಮಂತ್ರಿಯೊಂದಿಗೂ ಯುಕ್ತಳಾಗಿ ತನ್ನ ಪುತ್ರನಾದ ಸುದರ್ಶನನನ್ನು ಕಾಪಾಡುತ್ತಾ ವಾಸಮಾಡುತ್ತಿದ್ದಳು.

**ಇತಿ ಶ್ರೀ ದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಪಂಚದಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದಲ್ಲಿ ಮೂರನೆಯ ಸ್ಕಂಧದಲ್ಲಿ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### ॥ ಷೋಡಶೋಽಧ್ಯಾಯಃ ॥

### ಹದಿನಾರನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಯುಧಾಜಿತ್ತ್ವಥ ಸಂಗ್ರಾಮಾದ್ಗತ್ವಾಯೋಧ್ಯಾಂ ಮಹಾಬಲಃ ।**
**ಮನೋರಮಾಂ ಚ ಪಪ್ರಚ್ಛ ಸುದರ್ಶನಜಿಘಾಂಸಯಾ ॥೧॥**

ವ್ಯಾಸಮುನಿಯು ಹೇಳಿದನು—ಅನಂತರದಲ್ಲಿ ಅತ್ತಲಾಗಿ ತುಂಬ ಬಲಶಾಲಿಯಾದ ಯುಧಾಜಿತನು ಯುದ್ಧಭೂಮಿಯಿಂದ ಹಿಂತಿರುಗಿ ಅಯೋಧ್ಯೆಗೆ ಹೋಗಿ, ಮನೋರಮೆಯ ಪುತ್ರನಾದ ಸುದರ್ಶನನನ್ನು ಕೊಲ್ಲುವ ಇಚ್ಛೆಯಿಂದ ಮನೋರಮೆಯನ್ನೂ ಸುದರ್ಶನನನ್ನೂ ಎಲ್ಲಿ ಎಂದು ಕೇಳಿದನು.

**ಸೇವಕಾನ್ ಪ್ರೇಷಯಾಮಾಸ ಕ್ವ ಗತೇತಿ ಮುಹುರ್ವದನ್ ।**
**ಶುಭೇ ದಿನೇಽಥ ದೌಹಿತ್ರಂ ಸ್ಥಾಪಯಾಮಾಸ ಚಾಸನೇ ॥೨॥**

ಮನೋರಮೆಯು ಎಲ್ಲಿಗೆ ಹೋದಳೆಂದು ಬಾರಿಬಾರಿಗೂ ಕೇಳುತ್ತಾ ಅವಳನ್ನು ಹುಡುಕುವುದಕ್ಕಾಗಿ ದೂತರನ್ನು ಕಳುಹಿಸಿದನು. ಮಂಗಳಕರವಾದ ದಿವಸದಲ್ಲಿ ತನ್ನ ಮಗಳ ಮಗನಾದ ಶತ್ರುಜಿತನನ್ನು ಸಿಂಹಾಸನದಲ್ಲಿ ಪ್ರತಿಷ್ಠಿಸಿ ಪಟ್ಟಾಭಿಷೇಕವನ್ನು ಮಾಡಿಸಿದನು.

**ಮಂತ್ರಿಭಿಶ್ಚ ವಸಿಷ್ಠೇನ ಮಂತ್ರೈರಾಥರ್ವಣೈಃ ಶುಭೈಃ ।**
**ಅಭಿಷಿಕ್ತಶ್ಚ ಸಂಪೂರ್ಣೈಃ ಕಲಶೈರ್ಜಲಪೂರಿತೈಃ ॥೩॥**

ಶತ್ರುಜಿತನು ಮಂತ್ರಿಗಳಿಂದಲೂ, ಪುರೋಹಿತನಾದ ವಸಿಷ್ಠನಿಂದಲೂ, ಅಥರ್ವಣವೇದೋಕ್ತವಾದ ಮಂತ್ರಗಳಿಂದ ಅಭಿಮಂತ್ರಿಸಿದ ಸರ್ವತೀರ್ಥಜಲಗಳಿಂದ ತುಂಬಿರುವ ಕಲಶಗಳಿಂದ ರಾಜ್ಯಪಟ್ಟದಲ್ಲಿ ಅಭಿಷಿಕ್ತನಾದನು.

**ಭೇರೀಶಂಖನಿನಾದೈಶ್ಚ ತೂರ್ಯಾಣಾಂ ಚಾಥ ನಿಃಸ್ವನೈಃ ।**
**ಉತ್ಸವಸ್ತು ನಗರ್ಯಾಂ ವೈ ಸಂಬಭೂವ ಕುರೂದ್ವಹ ॥೪॥**

ಓ ಕುರುಶ್ರೇಷ್ಠನಾದ ಜನಮೇಜಯರಾಜನೇ, ಆಗ ನಗಾರಿ, ಶಂಖ ಇವುಗಳ ಧ್ವನಿಗಳಿಂದಲೂ ಮತ್ತು ವಾದ್ಯಗಳ ಮಧುರವಾದ ಸ್ವರಗಳೊಡನೆಯೂ ಆ ಅಯೋಧ್ಯೆಯಲ್ಲಿ ಸಂತೋಷದ ಉತ್ಸವವಾಯಿತು.

**ವಿಪ್ರಾಣಾಂ ವೇದಪಾಠೈಶ್ಚ ಬಂದಿನಾಂ ಸ್ತುತಿಭಿಸ್ತಥಾ ।**
**ಅಯೋಧ್ಯಾ ಮುದಿತೇವಾಸೀಜ್ಜಯಶಬ್ದೈಃ ಸುಮಂಗಲೈಃ ॥೫॥**

ಬ್ರಾಹ್ಮಣರ ವೇದಘೋಷಗಳಿಂದಲೂ, ಹೊಗಳುಭಟ್ಟರ ಸ್ತೋತ್ರಗಳಿಂದಲೂ, ಮಂಗಳಕರವಾದ ಜಯಶಬ್ದಗಳಿಂದಲೂ, ಜನರ ಹರ್ಷಧ್ವನಿಗಳಿಂದಲೂ ಅಯೋಧ್ಯಾನಗರವೇ ಸಂತೋಷವನ್ನು ಹೊಂದಿರುವಂತೆ ಆಯಿತು.

**ಹೃಷ್ಟಪುಷ್ಟಜನಾಕೀರ್ಣಾ ಸ್ತುತಿವಾದಿತ್ರನಿಃಸ್ವನಾ ।**
**ನವೇ ತಸ್ಮಿನ್ಮಹೀಪಾಲೇ ಪೂರ್ಬಭೌ ನೂತನೇವ ಸಾ ॥೬॥**

ಹೀಗೆ ಹೊಸರಾಜನಿಗೆ ಪಟ್ಟವಾಗಲು ಸಂತುಷ್ಟರಾದ ಮತ್ತು ಆರೋಗ್ಯದೃಢಕಾಯರಾದ ಜನಗಳಿಂದ ತುಂಬಿರುವ ಮತ್ತು ಸ್ತೋತ್ರ ಮತ್ತು ವಾದ್ಯಗಳ ಧ್ವನಿಗಳಿಂದ ಕೂಡಿರುವ ಆ ನಗರಿಯು ತಾನೂ ಹೊಸದಾಗಿರುವಂತೆ ಪ್ರಕಾಶಿಸಿತು.

**ಕೇಚಿತ್ಸಾಧುಜನಾ ಯೇ ವೈ ಚಕ್ರುಃ ಶೋಕಂ ಗೃಹೇ ಸ್ಥಿತಾಃ ।**
**ಸುದರ್ಶನಂ ವಿಚಿಂತ್ಯಾದ್ಯ ಕ್ವ ಗತೋಽಸೌ ನೃಪಾತ್ಮಜಃ ॥೭॥**

ಆದರೂ ಸತ್ಪುರುಷರಾಗಿದ್ದ ಕೆಲವರು ಮಾತ್ರ ಮನೆಯಲ್ಲಿಯೇ ಇದ್ದುಕೊಂಡು ಸುದರ್ಶನನನ್ನು ಕುರಿತು ರಾಜಪುತ್ರನಾದ ಸುದರ್ಶನನು ಎಲ್ಲಿ ಹೋದನು? ಎಂದು ಆಗಲೂ ಯೋಚಿಸುತ್ತಾ ತುಂಬ ವ್ಯಸನಪಟ್ಟರು.

**ಮನೋರಮಾ್ಯತಿಸಾಧ್ವೀ ಸಾ ಕ್ವ ಗತಾ ಸುತಸಂಯುತಾ ।**
**ಪಿತಾಽಸ್ಯಾ ನಿಹತಃ ಸಂಖ್ಯೇ ರಾಜ್ಯಲೋಭೇನ ವೈರಿಣಾ ॥೮॥**

ತುಂಬ ಪತಿವ್ರತೆಯಾದ ಆ ಮನೋರಮೆಯು ಮಗನೊಂದಿಗೆ ಎಲ್ಲಿಗೆ ಹೋದಳು? ಪಾಪ! ಅವಳ ತಂದೆಯು ಯುದ್ಧದಲ್ಲಿ ರಾಜ್ಯದಾಸೆಯುಳ್ಳ ಶತ್ರುವಿನಿಂದ ಕೊಲ್ಲಲ್ಪಟ್ಟನು.

**ಇತ್ಯೇವಂ ಚಿಂತ್ಯಮಾನಾಸ್ತೇ ಸಾಧವಃ ಸಮಬುದ್ಧಯಃ ।**
**ಅತಿಷ್ಠನ್ ದುಃಖಿತಾಸ್ತತ್ರ ಶತ್ರುಜಿದ್ವಶವರ್ತಿನಃ ॥೯॥**

ಹೀಗೆ ಪಕ್ಷಪಾತವಿಲ್ಲದ ನ್ಯಾಯಪರರಾದ ಆ ಸತ್ಪುರುಷರು ಚಿಂತಿಸುವವರಾಗಿ ಶತ್ರುಜಿತನ ಅಧಿಕಾರದ ಆಡಳಿತಕ್ಕೆ ಒಳಪಟ್ಟವರಾಗಿರುತ್ತಾ ಅಲ್ಲಿ ತುಂಬ ವ್ಯಸನದಿಂದ ಇದ್ದರು.

**ಯುಧಾಜಿದಪಿ ದೌಹಿತ್ರಂ ಸ್ಥಾಪಯಿತ್ವಾ ವಿಧಾನತಃ ।**
**ರಾಜ್ಯಂ ಚ ಮಂತ್ರಿಸಾತ್ಕೃತ್ವಾ ಚಲಿತಃ ಸ್ವಾಂ ಪುರೀಂ ಪ್ರತಿ ॥೧೦॥**

ಅನಂತರದಲ್ಲಿ ಯುಧಾಜಿದ್ರಾಜನೂ ಸಹ ಮಗಳ ಮಗನನ್ನು ಶಾಸ್ತ್ರದಲ್ಲಿ ಹೇಳಿರುವ ನಿಯಮಾನುಸಾರವಾಗಿ ರಾಜ್ಯದಲ್ಲಿ ಪ್ರತಿಷ್ಠಿಸಿ ಆಮೇಲೆ ರಾಜ್ಯಾಡಳಿತವನ್ನು ಮಂತ್ರಿಗಳ ವಶಕ್ಕೆ ಕೊಟ್ಟು ತನ್ನ ಪಟ್ಟಣವನ್ನು ಕುರಿತು ಹೊರಟನು.

**ಶ್ರುತ್ವಾ ಸುದರ್ಶನಂ ತತ್ರ ಮುನೀನಾಮಾಶ್ರಮೇ ಸ್ಥಿತಂ ।**
**ಹಂತುಕಾಮೋ ಜಗಾಮಾಶು ಚಿತ್ರಕೂಟಂ ಸ ಪರ್ವತಂ ॥೧೧॥**

ಹೀಗೆ ತನ್ನ ಪಟ್ಟಣಕ್ಕೆ ಹೋಗುತ್ತಾ, ಸುದರ್ಶನನು ತಾಯಿಯೊಂದಿಗೆ ಭರದ್ವಾಜಮುನಿಗಳ ಆಶ್ರಮದಲ್ಲಿರುವನೆಂದು ಕೇಳಿ ಅವನನ್ನು ಕೊಲ್ಲುವ ಅಪೇಕ್ಷೆಯಿಂದ ಶೀಘ್ರವಾಗಿ ಚಿತ್ರಕೂಟಪರ್ವತಕ್ಕೆ ಬಂದನು.

**ನಿಷಾದಾಧಿಪತಿಂ ಶೂರಂ ಪುರಸ್ಕೃತ್ಯ ಬಲಾಭಿಧಂ ।**
**ದುರ್ದರ್ಶಾಖ್ಯಮುಗಾದಾಶು ಶೃಂಗವೇರಪುರಾಧಿಪಂ ॥೧೨॥**

ಯುಧಾಜಿದ್ರಾಜನು ಶೂರನಾದ ಬಲನೆಂಬ ಬೇಡರ ಅಧಿಪತಿಯನ್ನೂ, ಶೃಂಗವೇರಪುರಕ್ಕೆ ಒಡೆಯನಾದ ದುರ್ದರ್ಶನೆಂಬುವನನ್ನೂ ಕೂಡಿಕೊಂಡು ಭರದ್ವಾಜಮುನಿಯ ಆಶ್ರಮಕ್ಕೆ ತೆರಳಿದನು.

**ಶ್ರುತ್ವಾ ಮನೋರಮಾ ತತ್ರ ಬಭೂವಾತಿಸುದುಃಖಿತಾ ।**
**ಆಗಚ್ಛಂತಂ ಬಾಲಪುತ್ರಾ ಭಯಾರ್ತಾ ಸೈನ್ಯಸಂಯುತಂ ॥೧೩॥**

ಬಾಲಕನಾದ ಮಗನುಳ್ಳ ಮನೋರಮೆಯು, ಯುಧಾಜಿತನು ಸೈನ್ಯದೊಡನೆ ಬರುತ್ತಿರುವನೆಂದು ಕೇಳಿ ಹೆದರಿಕೆಯಿಂದ ಪೀಡಿಸಲ್ಪಟ್ಟವಳಾಗಿ ತುಂಬ ದುಃಖವನ್ನು ಹೊಂದಿದಳು.

**ತಮುವಾಚಾತಿಶೋಕಾರ್ತಾ ಮುನಿಂ ಸಾಶ್ರುವಿಲೋಚನಾ ।**
**ಕಿಂ ಕರೋಮಿ ಕ್ವ ಗಚ್ಛಾಮಿ ಯುಧಾಜಿತ್ಸಮುಪಸ್ಥಿತಃ ॥೧೪॥**

ತುಂಬ ದುಃಖಿತಳಾದ ಅವಳು ಕಣ್ಣೀರಿನಿಂದ ತುಂಬಿದ ನಯನವುಳ್ಳವಳಾಗಿ ಆ ಭರದ್ವಾಜಮುನಿಯನ್ನು ಕುರಿತು ಹೇಳಿದಳು—ನಾನು ಈಗ ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಯುಧಾಜಿತನು ಇಲ್ಲಿಗೂ ಬಂದೇಬಿಟ್ಟನು.

**ಪಿತಾ ಮೇ ನಿಹತೋಽನೇನ ದೌಹಿತ್ರೋ ಭೂಪತಿಃ ಕೃತಃ ।**
**ಸುತಂ ಮೇ ಹಂತುಕಾಮೋಽತ್ರ ಸಮಾಯಾತಿ ಬಲಾನ್ವಿತಃ ॥೧೫॥**

ಓ ಋಷಿಯೇ, ಇವನಿಂದ ನನ್ನ ತಂದೆಯು ಕೊಲ್ಲಲ್ಪಟ್ಟನು. ಇವನು ತನ್ನ ಮಗಳ ಮಗನನ್ನು ರಾಜನನ್ನಾಗಿ ಮಾಡಿದನು. ಈಗ ಇವನು ನನ್ನ ಪುತ್ರನನ್ನು ಕೊಲ್ಲಬೇಕೆಂಬ ಅಪೇಕ್ಷೆಯಿಂದ ಸೈನ್ಯಸಮೇತನಾಗಿ ಬರುತ್ತಲಿದ್ದಾನೆ.

**ಪುರಾ ಶ್ರುತಂ ಮಯಾ ಸ್ವಾಮಿನ್ ಪಾಂಡವಾ ವೈ ವನೇ ಸ್ಥಿತಾಃ ।**
**ಮುನೀನಾಮಾಶ್ರಮೇ ಪುಣ್ಯೇ ಪಾಂಚಾಲ್ಯಾ ಸಹಿತಾಸ್ತದಾ ॥೧೬॥**

ಓ ಸ್ವಾಮಿಯಾದ ಭರದ್ವಾಜಮುನಿಯೇ, ಹೀಗೆ ನಾನು ಕೇಳಿರುತ್ತೇನೆ. ಹಿಂದೆ ಪಾಂಡವರು ಕಾಡಿನಲ್ಲಿ ಮುನಿಗಳ ಪವಿತ್ರವಾದ ಆಶ್ರಮದಲ್ಲಿ ದ್ರೌಪದಿಯೊಂದಿಗೆ ವಾಸಮಾಡುತ್ತಲಿದ್ದರು.

**ಗತಾಸ್ತೇ ಮೃಗಯಾಂ ಪಾರ್ಥಾ ಭ್ರಾತರಃ ಪಂಚ ಏವ ತೇ ।**
**ದ್ರೌಪದೀ ಸಂಸ್ಥಿತಾ ತತ್ರ ಮುನೀನಾಮಾಶ್ರಮೇ ಶುಭೇ ॥೧೭॥**

ಒಂದು ದಿವಸ, ಅಣ್ಣತಮ್ಮಂದಿರಾದ ಆ ಐದು ಜನ ಪಾಂಡವರೂ ಬೇಟೆಗಾಗಿ ಹೊರಟುಹೋದರು. ದ್ರೌಪದಿಯು ಮಾತ್ರ ಆಗ ಆ ಮುನಿಗಳ ಮಂಗಳಕರವಾದ ಆಶ್ರಮದಲ್ಲಿಯೇ ಇದ್ದಳು.

**ಧೌಮ್ಯೋಽತ್ರಿರ್ಗಾಲವಃ ಪೈಲೋ ಜಾಬಾಲಿರ್ಗೌತಮೋ ಭೃಗುಃ ।**
**ಚ್ಯವನಶ್ಚಾತ್ರಿಗೋತ್ರಶ್ಚ ಕಣ್ವಶ್ಚೈವ ಜತುಃ ಕ್ರತುಃ ॥೧೮॥**

ಆಗ, ಧೌಮ್ಯಮುನಿ, ಗಾಲವಮುನಿ, ಪೈಲಮುನಿ, ಜಾಬಾಲಿಋಷಿ, ಗೌತಮಋಷಿ, ಅತ್ರಿಋಷಿಯ ವಂಶದವನಾದ ಚ್ಯವನಋಷಿ, ಕಣ್ವಋಷಿ, ಜತುಮುನಿ, ಕ್ರತುಮುನಿ, ಇವರೂ,

**ವೀತಿಹೋತ್ರಃ ಸುಮಂತುಶ್ಚ ಯಜ್ಞದತ್ತೋಽಥ ವತ್ಸಲಃ ।**
**ರಾಶಾಸನಃ ಕಹೋಡಶ್ಚ ಯವಕ್ರೀರ್ಯಜ್ಞಕೃತ್ಕ್ರತುಃ ॥೧೯॥**

ಮತ್ತು ವೀತಿಹೋತ್ರಋಷಿ, ಸುಮಂತುಋಷಿ, ಯಜ್ಞದತ್ತಮುನಿ, ವತ್ಸಲಮುನಿ, ರಾಶಾಸನನೆಂಬ ಋಷಿ, ಮತ್ತು ಯಜ್ಞವನ್ನು ಮಾಡುವ ಕ್ರತುಮುನಿ ಇವರೂ,

**ಏತೇ ಚಾನ್ಯೇ ಚ ಮುನಯೋ ಭಾರದ್ವಾಜಾದಯಃ ಶುಭಾಃ ।**
**ವೇದಪಾಠಯುತಾಸ್ಸರ್ವೇ ಸಂಸ್ಥಿತಾಶ್ಚಾಶ್ರಮೇ ಸ್ಥಿತಾಃ ॥೨೯॥**

ಇವರಲ್ಲದೆ, ಇನ್ನೂ ಕೆಲವರು ಮುನಿಗಳೂ ಸಹ ಶ್ರೇಷ್ಠರಾದ ಭಾರದ್ವಾಜಾದಿಋಷಿಗಳೂ ಇವರೊಡನೆ ಆ ಆಶ್ರಮದಲ್ಲಿ ವೇದಪಾಠವನ್ನು ನಡೆಸುತ್ತಾ ಇದ್ದರು.

**ದಾಸೀಭಿಃ ಸಹಿತಾ ತತ್ರ ಯಾಜ್ಞಸೇನೀ ಸ್ಥಿತಾ ಮುನೇ ।**
**ಆಶ್ರಮೇ ಚಾರುಸರ್ವಾಂಗೀ ನಿರ್ಭಯಾ ಮುನಿಸಂವೃತೇ ॥೨೧॥**

ಓ ಋಷಿಯೇ, ಹೀಗೆ ಈ ಎಲ್ಲ ಋಷಿಗಳಿಂದ ತುಂಬಿರುವ ಆ ಆಶ್ರಮದಲ್ಲಿ ಸುಂದರವಾದ ಎಲ್ಲ ಅವಯವಗಳುಳ್ಳ ಆ ದ್ರೌಪದಿಯು ಯಾವ ಹೆದರಿಕೆಯೂ ಇಲ್ಲದೆ ಸೇವಿಕೆಯರೊಡನೆ ಇದ್ದಳು.

**ಪಾರ್ಥಾ ಮೃಗಾನುಗಾಸ್ತಾವತ್ಪ್ರಯಾತಾಶ್ಚ ವನಾದ್ವನಂ ।**
**ಧನುರ್ಬಾಣಧರಾ ವೀರಾಃ ಪಂಚೈವ ಶತ್ರುತಾಪನಾಃ ॥೨೨॥**

ಅತ್ತಲಾಗಿ ವೈರಿಗಳನ್ನು ಸಂತಾಪಗೊಳಿಸತಕ್ಕ ವೀರರಾದ ಪಾಂಡವರೈದು ಜನರೂ ಧನುರ್ಬಾಣಗಳನ್ನು ಹಿಡಿದು, ಸಿಂಹವೇ ಮೊದಲಾದ ಮೃಗಗಳನ್ನು ಅಟ್ಟಿಸಿಕೊಂಡು ಹೋಗುತ್ತಾ ಕಾಡಿನಿಂದ ಮತ್ತೊಂದು ಕಾಡಿಗೆ ಹೋದರು.

**ತಾವತ್ಸಿಂಧುಪತಿಃ ಶ್ರೀಮಾನ್ಮಾರ್ಗಸ್ಥೋ ಬಲಸಂಯುತಃ ।**
**ಆಗತಶ್ಚಾಶ್ರಮಾಭ್ಯಾಶೇ ಶ್ರುತ್ವಾ ತು ನಿಗಮಧ್ವನಿಂ ॥೨೩॥**

ಅಷ್ಟರಲ್ಲಿ ದಾರಿಯಲ್ಲಿ ಪ್ರಯಾಣಮಾಡುತ್ತಿದ್ದ ಸೈನ್ಯಸಮೇತನಾದ ಸಿಂಧುದೇಶಕ್ಕೆ ಒಡೆಯನಾದ ಜಯದ್ರಥನು ಆಶ್ರಮದಲ್ಲಿ ನಡೆಯುತ್ತಿದ್ದ ಮುನಿಗಳ ವೇದಾಧ್ಯಯನದ ಧ್ವನಿಯನ್ನು ಕೇಳಿ ಆ ಆಶ್ರಮದ ಹತ್ತಿರಕ್ಕೆ ಬಂದನು.

**ಶ್ರುತ್ವಾ ವೇದಧ್ವನಿಂ ರಾಜಾ ಮುನೀನಾಂ ಭಾವಿತಾತ್ಮನಾಂ ।**
**ಉತ್ತತಾರ ರಥಾತ್ತೂರ್ಣಂ ದರ್ಶನಾಕಾಂಕ್ಷಯಾ ನೃಪಃ ॥೨೪॥**

ಶಾಸ್ತ್ರೋಕ್ತವಾದ ಸಂಸ್ಕಾರಗಳಿಂದ ಪರಿಶುದ್ಧವಾದ ಮನಸ್ಸುಳ್ಳ ಆ ಋಷಿಗಳ ವೇದಘೋಷವನ್ನು ಕೇಳಿ ಆ ರಾಜನು ಅವರ ದರ್ಶನವನ್ನು ಮಾಡಬೇಕೆಂಬ ಅಪೇಕ್ಷೆಯಿಂದ ಕೂಡಲೇ ರಥದಿಂದ ಇಳಿದನು.

**ಯದಾ ನಿರಗಮತ್ತತ್ರ ಭೃತ್ಯದ್ವಯಸಮನ್ವಿತಃ ।**
**ವೇದಪಾಠಯುತಾನ್ವೀಕ್ಷ್ಯ ಮುನೀನುದ್ಯಮಸಂಸ್ಥಿತಃ ॥೨೫॥**

ಯಾವಾಗ ಆ ಜಯದ್ರಥನು ಪ್ರಯತ್ನಪೂರ್ವಕವಾಗಿ ಇಬ್ಬರು ಸೇವಕರೊಡನೆ ಆಶ್ರಮಕ್ಕೆ ಬಂದನೋ ಆಗ ಅಲ್ಲಿ ವೇದಾಭ್ಯಾಸವನ್ನು ಮಾಡುತ್ತಲಿರುವ ಮುನಿಗಳನ್ನು ನೋಡಿ,

**ಕೃತಾಂಜಲಿಪುಟಃ ಸ್ವಾಮಿನ್ ಸಂಸ್ಥಿತೋಽಥ ಜಯದ್ರಥಃ ।**
**ಆಶ್ರಮೇ ಮುನಿಭಿರ್ಜುಷ್ಟೇ ಭೂಪತಿಃ ಸಂವಿವೇಶ ಹ ॥೨೬॥**

ಎಲೈ ಸ್ವಾಮಿಯಾದ ಭರದ್ವಾಜಮುನಿಯೇ, ಈರೀತಿ ಜಯದ್ರಥನು ಕೈಗಳನ್ನು ಜೋಡಿಸಿಕೊಂಡು ಬಂದು ಮುನಿಗಳಿಂದ ತುಂಬಿರುವ ಆಶ್ರಮದಲ್ಲಿ ಬಂದು ಒಂದೆಡೆಯಲ್ಲಿ ಕುಳಿತನು.

**ತತೋಽಪವಿಷ್ಟಂ ರಾಜಾನಂ ದ್ರಷ್ಟುಕಾಮಾಃ ಸ್ತ್ರಿಯಸ್ತದಾ ।**
**ಆಯಯುರ್ಮುನಿಭಾರ್ಯಾಶ್ಚ ಕೋಽಯಮಿತ್ಯಬ್ರುವನ್ನೃಪಂ ॥೨೭॥**

ಆ ಆಶ್ರಮದಲ್ಲಿ ಕುಳಿತಿರುವ ಆ ರಾಜನನ್ನು ನೋಡಲೋಸುಗ ಋಷಿಪತ್ನಿಯರೇ ಮೊದಲಾದ ಹೆಂಗಸರು ಬಂದರು. ಮತ್ತು ಈ ರಾಜನು ಯಾರೆಂದು ಕೇಳಿದರು.

**ತಾಸಾಂ ಮಧ್ಯೇ ವರಾರೋಹಾ ಯಾಜ್ಞಸೇನೀ ಸಮಾಗತಾ ।**
**ಜಯದ್ರಥೇನ ದೃಷ್ಟಾ ಸಾ ರೂಪೇಣ ಶ್ರೀರಿವಾಪರಾ ॥೨೮॥**

ಆ ಸ್ತ್ರೀಯರ ಗುಂಪಿನಲ್ಲಿ ಉತ್ತಮಸ್ತ್ರೀಯಾದ ಮತ್ತು ಸೌಂದರ್ಯದಲ್ಲಿ ಎರಡನೆಯ ಲಕ್ಷ್ಮಿಯಂತಿರುವ ದ್ರೌಪದಿಯೂ ಬಂದಿದ್ದಳು. ಅವಳನ್ನು ಜಯದ್ರಥನು ನೋಡಿದನು.

**ತಾಂ ವಿಲೋಕ್ಯಾಸಿತಾಪಾಂಗೀಂ ದೇವಕನ್ಯಾಮಿವಾಪರಾಂ ।**
**ಪಪ್ರಚ್ಛ ನೃಪತಿರ್ಧೌಮ್ಯಂ ಕೇಯಂ ಶ್ಯಾಮಾ ವರಾನನಾ ॥೨೯॥**

ಕಪ್ಪಾದ ಕಡೆಗಣ್ಣುಳ್ಳ ಮತ್ತು ಎರಡನೆಯ ದೇವಸ್ತ್ರೀಯಂತಿರತಕ್ಕ ಅವಳನ್ನು ನೋಡಿ ಜಯದ್ರಥನು ಧೌಮ್ಯಮುನಿಯನ್ನು ಕುರಿತು, ತುಂಬಿದ ಯೌವನವುಳ್ಳ ಸುಂದರವಾದ ಮುಖವುಳ್ಳ ಇವಳು ಯಾರು? ಎಂದು ಕೇಳಿದನು.

**ಭಾರ್ಯಾ ಕಸ್ಯ ಸುತಾ ಕಸ್ಯ ನಾಮ್ನಾ ಕಾ ವರವರ್ಣಿನೀ ।**
**ರೂಪಲಾವಣ್ಯಸಂಯುಕ್ತಾ ಶಚೀವ ವಸುಧಾಂ ಗತಾ ॥೩೦॥**

ಓ ಮುನಿಯೇ, ಇವಳು ಯಾರ ಪತ್ನಿಯು? ಯಾರ ಮಗಳು? ಉತ್ತಮ ಸ್ತ್ರೀಯಾದ ಇವಳ ಹೆಸರೇನು? ರೂಪಸೌಂದರ್ಯಗಳಿಂದ ಶೋಭಿಸುವ ಇವಳು ಕಾರಣಾಂತರದಿಂದ ಭೂಲೋಕಕ್ಕೆ ಬಂದಿರುವ ಇಂದ್ರಾಣಿಯಂತೆ ತೋರುತ್ತಿರುವಳು.

**ಬಬ್ಬೂಲವನಮಧ್ಯಸ್ಥಾ ಲವಂಗಲತಿಕಾ ಯಥಾ ।**
**ರಾಕ್ಷಸೀವೃಂದಗಾ ನೂನಂ ರಂಭೇವಾಽಽಭಾತಿ ಭಾಮಿನೀ ॥೩೧॥**

ಓ ಧೌಮ್ಯನೇ, ಈ ಸುಂದರಿಯು, ಮುಳ್ಳುಗಿಡಗಳ ಅರಣ್ಯದ ಮಧ್ಯದಲ್ಲಿರುವ ಲವಂಗದ ಲತೆಯಂತೆಯೂ, ಮತ್ತು ರಾಕ್ಷಸಸ್ತ್ರೀಯರ ಸಮೂಹದಲ್ಲಿರುವ ರಂಭೆಯಂತೆಯೂ, ಪ್ರಕಾಶಿಸುತ್ತಾಳೆ.

**ಸತ್ಯಂ ವದ ಮಹಾಭಾಗ ಕಸ್ಯೇಯಂ ವಲ್ಲಭಾಽಬಲಾ ।**
**ರಾಜಪತ್ನೀವ ಚಾಽಽಭಾತಿ ನೈಷಾ ಮುನಿವಧೂರ್ದ್ವಿಜ ॥೩೨॥**

ತುಂಬ ಭಾಗ್ಯಶಾಲಿಯಾದ ಓ ಧೌಮ್ಯನೇ, ನಿಜವನ್ನು ಹೇಳು. ಇವಳು ಯಾರ ಪ್ರಿಯತಮೆಯು? ಎಲೈ ಬ್ರಾಹ್ಮಣನೇ, ಇವಳು ಯಾವನೋ ರಾಜನ ಪತ್ನಿಯಂತೆ ತೋರುತ್ತಿರುವಳು, ಇವಳು ಋಷಿಗಳ ಸ್ತ್ರೀಯು ಅಲ್ಲವು.

**ಪಾಂಡವಾನಾಂ ಪ್ರಿಯಾ ಭಾರ್ಯಾ ದ್ರೌಪದೀ ಶುಭಲಕ್ಷಣಾ ।**
**ಪಾಂಚಾಲೀ ಸಿಂಧುರಾಜೇಂದ್ರ ವಸತ್ಯತ್ರ ವರಾಶ್ರಮೇ ॥೩೩॥**

ಧೌಮ್ಯಮುನಿಯು ಹೇಳಿದನು. ಸಿಂಧುದೇಶಕ್ಕೆ ಒಡೆಯನಾದ ಓ ಜಯ ದ್ರಥನೇ, ಇವಳು ಪಾಂಡವರ ಪ್ರಿಯಪತ್ನಿಯಾದ ದ್ರೌಪದಿಯು. ಮಂಗಳಕರ ವಾದ ಲಕ್ಷಣಗಳುಳ್ಳ, ಮತ್ತು ಪಾಂಚಾಲದೇಶದ ಒಡೆಯನಾದ ದ್ರುಪದನ ಪುತ್ರಿಯಾದ ಇವಳು ಶ್ರೇಷ್ಠವಾದ ಈ ಆಶ್ರಮದಲ್ಲಿ ವಾಸಮಾಡಿಕೊಂಡಿರುತ್ತಾಳೆ.

॥ ಜಯದ್ರಥ ಉವಾಚ ॥

**ಕ್ವ ಗತಾಃ ಪಾಂಡವಾಃ ಪಂಚ ಶೂರಾಃ ಸಂಪ್ರತಿ ವಿಶ್ರುತಾಃ ।**
**ವಸಂತ್ಯತ್ರ ವನೇ ವೀರಾ ವೀತಶೋಕಾ ಮಹಾಬಲಾಃ ॥೩೪॥**

ಜಯದ್ರಥರಾಜನು ಕೇಳಿದನು—ವೀರರಾದ ಮತ್ತು ಪ್ರಸಿದ್ಧರಾದ ಐವರು ಪಾಂಡವರು ಈಗ ಎಲ್ಲಿಗೆ ಹೋಗಿರುವರು? ತುಂಬ ಬಲಶಾಲಿಗಳಾದ ಅವರು ಈ ವನದಲ್ಲಿ ವ್ಯಸನವನ್ನು ಬಿಟ್ಟವರಾಗಿ ವಾಸಮಾಡುತ್ತಿರುವರಷ್ಟೆ?

॥ ಧೌಮ್ಯ ಉವಾಚ ॥

**ಮೃಗಯಾರ್ಥಂ ಗತಾಃ ಪಂಚ ಪಾಂಡವಾ ರಥಸಂಸ್ಥಿತಾಃ ।**
**ಆಗಮಿಷ್ಯಂತಿ ಮಧ್ಯಾಹ್ನೇ ಮೃಗಾನಾದಾಯ ಪಾರ್ಥಿವಾಃ ॥೩೫॥**

ಧೌಮ್ಯಮುನಿಯು ಹೇಳಿದನು—ಆ ಐವರು ಪಾಂಡವರೂ ರಥವೇರಿ ಬೇಟೆಗೆ ಹೋಗಿರುತ್ತಾರೆ. ಮಧ್ಯಾಹ್ನಕ್ಕೆ ಸರಿಯಾಗಿ ರಾಜರಾದ ಅವರು ಬೇಟೆಯಾಡಿ ಕೊಂದ ಮೃಗಗಳನ್ನು ತೆಗೆದುಕೊಂಡು ಬರುತ್ತಾರೆ.

**ತಚ್ಛ್ರುತ್ವಾ ವಚನಂ ತಸ್ಯ ಉದತಿಷ್ಠದಸೌ ನೃಪಃ ।**
**ದ್ರೌಪದೀಸನ್ನಿಧೌ ಗತ್ವಾ ಪ್ರಣಮ್ಯೇದಮುವಾಚ ಹ ॥೩೬॥**

ಧೌಮ್ಯಮುನಿಯ ಆ ಮಾತನ್ನು ಕೇಳಿ, ಜಯದ್ರಥರಾಜನು ತಾನು ಕುಳಿತಿದ್ದ ಸ್ಥಳದಿಂದ ಎದ್ದನು. ಮತ್ತು ದ್ರೌಪದಿಯ ಸಮೀಪಕ್ಕೆ ಹೋಗಿ ನಮಸ್ಕರಿಸಿ ಮುಂದೆ ಹೇಳುವಂತೆ ಹೇಳಿದನು.

**ಕುಶಲಂ ತೇ ವರಾರೋಹೇ ಕ್ವ ಗತಾಃ ಪತಯಶ್ಚ ತೇ ।**
**ಏಕಾದಶ ಗತಾನ್ಯದ್ಯ ವರ್ಷಾಣಿ ಚ ವನೇ ಕಿಲ ॥೩೭॥**

ಉತ್ತಮಸ್ತ್ರೀಯಾದ ಓ ದ್ರೌಪದಿಯೇ, ನಿನಗೆ ಕ್ಷೇಮವೇ? ನಿನ್ನ ಪತಿಗಳು ಎಲ್ಲಿಗೆ ಹೋಗಿರುವರು? ಈಗ ನಿಮಗೆ ಕಾಡಿನಲ್ಲಿ ಹನ್ನೊಂದು ವರ್ಷಗಳು ಕಳೆದವಷ್ಟೆ?

**ದ್ರೌಪದೀ ತು ತದೋವಾಚ ಸ್ವಸ್ತಿ ತೇಽಸ್ತು ನೃಪಾತ್ಮಜ ।**
**ವಿಶ್ರಮಸ್ವಾಶ್ರಮಾಭ್ಯಾಶೇ ಕ್ಷಣಾದಾಯಾಂತಿ ಪಾಂಡವಾಃ ॥೩೮॥**

ಆಗ ದ್ರೌಪದಿಯು ಹೇಳಿದಳು—ಓ ರಾಜಪುತ್ರನೇ ನಿನಗೆ ಮಂಗಳವಾಗಲಿ. ಇಲ್ಲಿಯೇ ಈ ಆಶ್ರಮದ ಸಮೀಪದಲ್ಲಿ ವಿಶ್ರಮಿಸು. ಸ್ವಲ್ಪಹೊತ್ತಿನಲ್ಲಿಯೇ ಪಾಂಡವರು ಬರುವರು.

**ಏವಂ ಬ್ರುವಂತ್ಯಾಂ ತಸ್ಯಾಂ ತು ಲೋಭಾವಿಷ್ಟಃ ಸ ಭೂಪತಿಃ ।**
**ಜಹಾರ ದ್ರೌಪದೀಂ ವೀರೋಽನಾದೃತ್ಯ ಮುನಿಸತ್ತಮಾನ್ ॥೩೯॥**

ಹೀಗೆ ದ್ರೌಪದಿಯು ಹೇಳುತ್ತಿರಲು, ವೀರನಾದ ಆ ಜಯದ್ರಥರಾಜನು ಅವಳ ಮೇಲೆ ಕೆಟ್ಟ ಅಭಿಲಾಷೆಯನ್ನು ಹೊಂದಿದವನಾಗಿ, ಅಲ್ಲಿರತಕ್ಕ ಋಷಿಶ್ರೇಷ್ಠರನ್ನೆಲ್ಲಾ ಗಣನೆಗೆ ತಾರದೆ ಅವಳನ್ನು ಅಪಹರಿಸಿದನು.

**ಕಸ್ಯಚಿನ್ನೈವ ವಿಶ್ವಾಸಃ ಕರ್ತವ್ಯಃ ಸರ್ವಥಾ ಬುಧೈಃ ।**
**ಕುರ್ವನ್ ದುಃಖಮವಾಪ್ನೋತಿ ದೃಷ್ಟಾಂತಸ್ತ್ವತ್ರ ವೈ ಬಲಿಃ ॥೪೦॥**

ಓ ಮುನಿಯೇ, ಆದುದರಿಂದ ತಿಳಿದವನು ಯಾವಾಗಲೂ ಯಾವನೊಬ್ಬನ ಮೇಲೂ ನಂಬಿಕೆಯನ್ನು ಇಡಬಾರದು. ಹಾಗೆ ಇಟ್ಟರೆ, ಅವನು ಮುಂದೆ ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಇದಕ್ಕೆ ಬಲಿಚಕ್ರವರ್ತಿಯೇ ಉದಾಹರಣೆಯು.

**ವೈರೋಚನಸುತಃ ಶ್ರೀಮಾನ್ ಧರ್ಮಿಷ್ಠಃ ಸತ್ಯಸಂಗರಃ ।**
**ಯಜ್ಞಕರ್ತಾ ಚ ದಾತಾ ಚ ಶರಣ್ಯಃ ಸಾಧುಸಂಮತಃ ॥೪೧॥**

ವಿರೋಚನನ ಪುತ್ರನಾದ ಮತ್ತು ಶ್ರೀಮಂತನಾದ ಆ ಬಲಿಯು ಧರ್ಮಪರ ನಾಗಿಯೂ, ನ್ಯಾಯವಾಗಿ ಯುದ್ಧವನ್ನು ಮಾಡತಕ್ಕವನಾಗಿಯೂ ಮತ್ತು ಅನೇಕ ಯಾಗಗಳನ್ನು ಮಾಡಿದವನಾಗಿಯೂ, ತುಂಬ ದಾನಮಾಡುವವನಾಗಿಯೂ, ಸರ್ವ ರಿಗೂ ರಕ್ಷಕನಾಗಿಯೂ, ಸತ್ಪುರುಷರಿಗೆ ಬೇಕಾದವನಾಗಿಯೂ ಇದ್ದನು.

**ನಾಧರ್ಮೇ ನಿರತಃ ಕ್ವಾಪಿ ಪ್ರಹ್ಲಾದಸ್ಯ ಚ ಪೌತ್ರಕಃ ।**
**ಏಕೋನಶತಯಜ್ಞಾನ್ವೈ ಸ ಚಕಾರ ಸದಕ್ಷಿಣಾನ್ ॥೪೨॥**

ವಿಷ್ಣುಭಕ್ತನಾದ ಪ್ರಹ್ಲಾದನ ಮೊಮ್ಮಗನಾದ ಅವನು ಎಲ್ಲಿಯೂ, ಯಾವಾ ಗಲೂ ಅಧರ್ಮದಲ್ಲಿ ಆಸಕ್ತನಾಗಿರಲಿಲ್ಲ. ಅವನು ತುಂಬ ದಕ್ಷಿಣೆಯುಳ್ಳ ತೊಂಬ ತ್ತೊಂಬತ್ತು ಯಾಗಗಳನ್ನು ಮಾಡಿದ್ದನು.

**ಸತ್ತ್ವಮೂರ್ತಿಃ ಸದಾ ವಿಷ್ಣುಃ ಸೇವ್ಯಸ್ಸ ಯೋಗಿನಾಮಪಿ ।**
**ನಿರ್ವಿಕಾರೋಽಪಿ ಭಗವಾನ್ ದೇವಕಾರ್ಯಾರ್ಥಸಿದ್ಧಯೇ ॥೪೩॥**

ಸತ್ವಗುಣಪ್ರಧಾನನಾದ ಮತ್ತು ಯೋಗಿಗಳಿಂದ ಯಾವಾಗಲೂ ಸೇವಿಸ ಲ್ಪಡತಕ್ಕವನಾದ, ಸಮಸ್ತ ಐಶ್ವರ್ಯಗಳಿಂದ ಕೂಡಿರುವ ವಿಷ್ಣುವು ಕಾಮ ಕ್ರೋಧಾದಿ ವಿಕಾರಗಳಿಂದ ರಹಿತನಾಗಿದ್ದರೂ ದೇವತೆಗಳ ಇಷ್ಟಾರ್ಥವನ್ನು ಈಡೇ ರಿಸುವುದಕ್ಕಾಗಿ,

**ಕಶ್ಯಪಾಚ್ಚ ಸಮುದ್ಭೂತೋ ವಿಷ್ಣುಃ ಕಪಟವಾಮನಃ ।**
**ರಾಜ್ಯಂ ಛಲೇನ ಹೃತವಾನ್ಮಹೀಂ ಚೈವ ಸಸಾಗರಾಂ ॥೪೪॥**

ಆ ವಿಷ್ಣುವು ಕಶ್ಯಪಬ್ರಹ್ಮನಿಂದ ಕೃತ್ರಿಮವಾದ ವಾಮನರೂಪವುಳ್ಳವನಾಗಿ ಹುಟ್ಟಿ, ಆ ಬಲಿಯ ರಾಜ್ಯವನ್ನೂ, ಸಮುದ್ರಪರ್ಯಂತವಾದ ಭೂಮಿಯನ್ನೂ ಸಹ ಮೋಸದಿಂದ ಅಪಹರಿಸಿದನು.

**ಸೋಽಭವತ್ಸತ್ಯವಾಗ್ರಾಜಾ ಬಲಿರ್ವೈರೋಚನಿಸ್ತದಾ ।**
**ಕಪಟಂ ಕೃತವಾನ್ವಿಷ್ಣುರಿಂದ್ರಾರ್ಥೇ ತು ಮಯಾ ಶ್ರುತಂ ॥೪೫॥**

ವಿರೋಚನನ ಪುತ್ರನಾದ ಆ ಬಲಿರಾಜನು ತುಂಬ ಸತ್ಯವಂತನಾಗಿದ್ದನು. ಇಂತಹವನಿಗೆ ವಿಷ್ಣುವು ಇಂದ್ರನಿಗೋಸ್ಕರವಾಗಿ ಮೋಸವನ್ನು ಮಾಡಿದನೆಂದು ನಾನು ಕೇಳಿರುತ್ತೇನೆ.

**ಅನ್ಯಃ ಕಿಂ ನ ಕರೋತ್ಯೇವಂ ಕೃತಂ ವೈ ಸತ್ತ್ವಮೂರ್ತಿನಾ ।**
**ವಾಮನಂ ರೂಪಮಾಸ್ಥಾಯ ಯಜ್ಞಪಾತಂ ಚಿಕೀರ್ಷತಾ ॥೪೬॥**

ಸ್ವಯಂ ಸತ್ತ್ವಗುಣಶಾಲಿಯಾದ ವಿಷ್ಣುವೇ ವಾಮನರೂಪವನ್ನು ಕೈಗೊಂಡು ಬಲಿಯ ಯಜ್ಞವನ್ನು ನಾಶಮಾಡುತ್ತಾ ಅವನಿಗೆ ಅನ್ಯಾಯವನ್ನು ಮಾಡಿರುತ್ತಾನೆ. ಹೀಗಿರುವಾಗ ಸಾಮಾನ್ಯ ಮನುಷ್ಯನು ಹೀಗೆ ಮೋಸವನ್ನು ಮಾಡಲಾರನೇ ?

**ನ ಚ ವಿಶ್ವಸಿತವ್ಯಂ ವೈ ಕದಾಚಿತ್ಕೇನ ಚಿತ್ತಥಾ ।**
**ಲೋಭಶ್ಚೇತಸಿ ಚೇತ್ಸ್ವಾಮಿನ್ ಕೀದೃಕ್ಪಾಪಕೃತಂ ಭಯಂ ॥೪೭॥**

ಆದುದರಿಂದ ಹಾಗೆ ಯಾವನೂ ಯಾರಲ್ಲಿಯೂ ನಂಬಿಕೆಯನ್ನು ಇಡಬಾರದು. ಮನಸ್ಸಿನಲ್ಲಿ ಕೆಟ್ಟ ಅಭಿಲಾಷೆಯಿದ್ದುದೇ ಆದರೆ ಅವನಿಗೆ ಪಾಪ ಬರುವುದೆಂಬ ಹೆದರಿಕೆಯು ಎಷ್ಟರದು ?

**ಲೋಭಹತಾಃ ಪ್ರಕುರ್ವಂತಿ ಪಾಪಾನಿ ಪ್ರಾಣಿನಃ ಕಿಲ ।**
**ಪರಲೋಕಾದ್ಭಯಂ ನಾಸ್ತಿ ಕಸ್ಯಚಿತ್ಕರ್ಹಿಚಿನ್ಮುನೇ ॥೪೮॥**

ಆ ಕೆಟ್ಟ ಆಸೆಯಿಂದ ಕೂಡಿದವರಾಗಿಯೇ ಎಲ್ಲಾ ಪ್ರಾಣಿಗಳೂ ಪಾಪಗಳನ್ನು ಮಾಡುತ್ತವೆ. ಓ ಮುನಿಯೇ, ಆ ಆಸೆಯಿಂದ ಕೂಡಿದವನಿಗೆ ಪರಲೋಕದಲ್ಲಿ ನರಕದ ಭಯವು ಯಾವಾಗಲೂ ಯಾರಿಗೂ ಇರುವುದಿಲ್ಲವು.

**ಮನಸಾ ಕರ್ಮಣಾ ವಾಚಾ ಪರಸ್ವಾದಾನಹೇತುತಃ ।**
**ಪ್ರಪತಂತಿ ನರಾಃ ಸಮ್ಯಗ್ಲೋಭೋಪಹತಚೇತಸಃ ॥೪೯॥**

ಮನಸ್ಸಿನಿಂದಲೂ, ಕಾರ್ಯದಿಂದಲೂ, ಮಾತುಗಳಿಂದಲೂ, ಪರರ ಧನವನ್ನಪ ಹರಿಸಬೇಕೆಂಬ ಇಚ್ಛೆಯು ಕಾರಣದಿಂದ, ಆ ದುರಾಸೆಯಿಂದ ಮೂಢವಾದ ಮನಸ್ಸುಳ್ಳ ಜನಗಳು ಖಂಡಿತವಾಗಿಯೂ ಪಾಪಗಳನ್ನು ಮಾಡಿ ನರಕದಲ್ಲಿ ಬೀಳುತ್ತಾರೆ.

**ದೇವಾನಾರಾಧ್ಯ ಸತತಂ ವಾಂಛಂತಿ ಚ ಧನಂ ನರಾಃ ।**
**ನ ದೇವಾಸ್ತತ್ಕರೇ ಕೃತ್ವಾ ಸಮರ್ಥಾ ದಾತುಮಂಜಸಾ ॥೫೦॥**

ಅಂತಹ ಮನುಷ್ಯರು ನಿರಂತರವಾಗಿ ದೇವತೆಗಳನ್ನು ಪೂಜಿಸಿ, ಅವರಿಂದ ಧನವನ್ನಪೇಕ್ಷಿಸುತ್ತಾರೆ. ಆದರೆ, ಆ ದೇವತೆಗಳು ಆ ಕೂಡಲೇ ತಮ್ಮ ಸ್ವಂತ ಕೈಯಿಂದಲೇ ಧನವನ್ನು ತಂದು ಕೊಡಲು ಶಕ್ತರಲ್ಲವು.

**ಅನ್ಯಸ್ಯಾನೀಯತೇ ವಿತ್ತಂ ಪ್ರಯಚ್ಛಂತಿ ಮನೀಷಿತಂ ।**
**ವಾಣಿಜ್ಯೇನಾಥ ದಾನೇನ ಚೌರ್ಯೇಣಾಪಿ ಬಲೇನ ವಾ ॥೫೧॥**

ಮತ್ತೇನೆಂದರೆ, ಆ ದೇವತೆಗಳು ವ್ಯಾಪಾರದ ನಿಮಿತ್ತದಿಂದಾಗಲೀ, ದಾನದಿಂದಾಗಲೀ, ಕಳ್ಳತನದಿಂದಾಗಲೀ, ಬಲದಿಂದಾಗಲೀ, ಒಬ್ಬರಿಗೆ ಬೇಕಾಗಿರುವ ಐಶ್ವರ್ಯವನ್ನು ಮತ್ತೊಬ್ಬರಿಂದ ತರಿಸಿ ಕೊಡಿಸುತ್ತಾರೆ.

**ವಿಕ್ರಯಾರ್ಥಂ ಗೃಹೀತ್ವಾ ಚ ಧಾನ್ಯವಸ್ತ್ರಾದಿಕಂ ಬಹು ।**
**ದೇವಾನರ್ಚಯತೇ ವೈಶ್ಯೋ ಮಹರ್ಧಿರ್ಮೇ ಭವೇದಿತಿ ॥೫೨॥**

ವೈಶ್ಯನು ವ್ಯಾಪಾರಕ್ಕಾಗಿ ದಿನಸಿ, ಬಟ್ಟೆ ಮುಂತಾದುವುಗಳನ್ನು ಹೆಚ್ಚಾಗಿ ತಂದು ಐಶ್ವರ್ಯವು ಹೆಚ್ಚಲೆಂದು ದೇವತೆಗಳನ್ನು ಪೂಜಿಸಿ ಪ್ರಾರ್ಥಿಸುತ್ತಾನೆ.

**ನಾತ್ರ ಕಿಂ ಪರವಿತ್ತೇಚ್ಛಾ ವಾಣಿಜ್ಯೇನ ಪರಂತಪ ।**
**ಗ್ರಹಣಕಾಲೇ ಸಂಪ್ರಾಪ್ತೇ ಮಹಾರ್ಘಂ ಚಾಪಿ ಕಾಂಕ್ಷತಿ ॥೫೩॥**

ದುಷ್ಟರನ್ನು ಸಂತಾಪಗೊಳಿಸತಕ್ಕ ಓ ಮುನಿಯೇ, ವ್ಯಾಪಾರಗಾರನು ಪದಾರ್ಥಗಳನ್ನು ವಿಕ್ರಯಮಾಡುವಾಗ ಅದಕ್ಕೆ ತಾನು ಕೊಟ್ಟಿದ್ದ ಹಣಕ್ಕಿಂತ ತುಂಬ ಹೆಚ್ಚಾಗಿ ಲಾಭವನ್ನಪೇಕ್ಷಿಸುತ್ತಾನಷ್ಟೆ. ಈರೀತಿಯಾದ ವ್ಯಾಪಾರದಲ್ಲಿ ಇನ್ನೊಬ್ಬರ ಧನದ ಅಪೇಕ್ಷೆಯಿಲ್ಲವೇ ?

**ಏವಂ ಹಿ ಪ್ರಾಣಿನಃ ಸರ್ವೇ ಪರಸ್ವಾದಾನತತ್ಪರಾಃ ।**
**ವರ್ತಂತೇ ಸತತಂ ಬ್ರಹ್ಮನ್ ವಿಶ್ವಾಸಃ ಕೀದೃಶಃ ಪುನಃ ॥೫೪॥**

ಇದೇರೀತಿಯಾಗಿ ಎಲ್ಲ ಪ್ರಾಣಿಗಳೂ ಇನ್ನೊಬ್ಬರ ದ್ರವ್ಯವನ್ನು ಅಪಹರಿಸುವುದರಲ್ಲಿಯೇ, ಆಸಕ್ತರಾಗಿರುತ್ತಾರೆ. ಹೀಗಿರುವಾಗ ಓ ಬ್ರಾಹ್ಮಣೋತ್ತಮನೇ, ಇಂತಹವರಲ್ಲಿ ವಿಶ್ವಾಸವು ಎಂತಹುದು ?

**ವೃಥಾ ತೀರ್ಥಂ ವೃಥಾ ದಾನಂ ವೃಥಾಧ್ಯಯನಮೇವ ಚ ।**
**ಲೋಭಮೋಹವೃತಾನಾಂ ವೈ ಕೃತಂ ತದಕೃತಂ ಭವೇತ್ ॥೫೫॥**

ಆದುದರಿಂದ ತೀರ್ಥಾಟನೆಯೂ, ದಾನವೂ, ವೇದಾಧ್ಯಯನವೂ, ಸಹ ವ್ಯರ್ಥವು. ದುರಾಶೆ, ಅಜ್ಞಾನ ಇವುಗಳಿಂದ ತುಂಬಿರುವ ಜನಗಳು ಅವೆಲ್ಲವನ್ನು ಮಾಡಿದರೂ ಮಾಡದಿದ್ದಂತೆಯೇ ಆಗುತ್ತದೆ.

**ತಸ್ಮಾದೇನಂ ಮಹಾಭಾಗ ವಿಸರ್ಜಯ ಗೃಹಂ ಪ್ರತಿ ।**
**ಸಪುತ್ರಾಹಂ ವಸಿಷ್ಯಾಮಿ ಜಾನಕೀವದ್ದ್ವಿಜೋತ್ತಮ ॥೫೬॥**

ಆದುದರಿಂದ ಎಲೈ ಮಹಾಮಹಿಮನೇ, ಈ ಯುಧಾಜಿತನನ್ನು ಹಾಗೆಯೇ ಹಿಂತಿರುಗಿಸಿ ಅವನ ಮನೆಗೆ ಕಳುಹಿಸು. ಓ ಬ್ರಾಹ್ಮಣೋತ್ತಮನೇ, ನಾನು ಇಲ್ಲಿಯೇ ಕಾಡಿನಲ್ಲಿ ಮಗನೊಂದಿಗೆ ಸೀತೆಯಂತೆ ವಾಸಮಾಡುತ್ತಿರುತ್ತೇನೆ.

**ಇತ್ಯುಕ್ತೋऽಸೌ ಮುನಿಸ್ತಾವದ್ಗತ್ವಾ ಯುಧಾಜಿತಂ ನೃಪಂ ।**
**ಉವಾಚ ವಚನಂ ರಾಜ್ಞೇ ಭಾರದ್ವಾಜಃ ಪ್ರತಾಪವಾನ್ ॥೫೭॥**

ಹೀಗೆ ಮನೋರಮೆಯು ಹೇಳಲಾಗಿ, ತುಂಬ ತಪಸ್ಸಿನಿಂದ ತೇಜಸ್ವಿಯಾದ ಆ ಭರದ್ವಾಜಮುನಿಯು ಯುಧಾಜಿತ್ತುರಾಜನ ಬಳಿಗೆ ತೆರಳಿ ಅವನನ್ನು ಕುರಿತು ಮುಂದೆ ಹೇಳುವರೀತಿಯಲ್ಲಿ ಮಾತನ್ನು ಹೇಳಿದನು.

**ಗಚ್ಛ ರಾಜನ್ ಯಥಾಕಾಮಂ ಸ್ವಪುರಂ ನೃಪಸತ್ತಮ ।**
**ನೇಯಂ ಮನೋರಮಾಽಭ್ಯೇತಿ ಬಾಲಪುತ್ರಾ ಸುದುಃಖಿತಾ ॥೫೮॥**

ಓ ರಾಜೋತ್ತಮನಾದ ಯುಧಾಜಿತ್ತುರಾಜನೇ, ನಿನ್ನ ಪಟ್ಟಣವನ್ನು ಕುರಿತು ನೀನು ಬೇಕಾದಂತೆ ಹಿಂತಿರುಗಿ ಹೋಗು. ಇನ್ನೂ ಹಸುಳೆಯಾದ ಪುತ್ರನುಳ್ಳ ಮತ್ತು ತುಂಬ ದುಃಖದಿಂದ ಕೂಡಿರುವ ಈ ಮನೋರಮೆಯು ನಿನ್ನ ಜೊತೆಯಲ್ಲಿ ಬರುವುದಿಲ್ಲವು.

|| ಯುಧಾಜಿದುವಾಚ ||

**ಮುನೇ ಮುಂಚ ಹಠಂ ಸೌಮ್ಯ ವಿಸರ್ಜಯ ಮನೋರಮಾಂ ।**
**ನ ಚ ಯಾಸ್ಯಾಮ್ಯಹಂ ಮುಕ್ತ್ವಾ ನೇಷ್ಯಾಮ್ಯದ್ಯ ಬಲಾತ್ಪುನಃ ॥೫೯॥**

ಯುಧಾಜಿದ್ರಾಜನು ಹೇಳಿದನು—ಶಾಂತಸ್ವಭಾವವುಳ್ಳ ಓ ಮುನಿಯೇ, ಈ ಒರಟುತನದ ಛಲವನ್ನು ಬಿಡು. ಮನೋರಮೆಯನ್ನು ನನ್ನ ವಶಕ್ಕೆ ಬಿಟ್ಟು ಕೊಡು. ಇವಳನ್ನು ಬಿಟ್ಟು ನಾನು ಹೋಗುವುದಿಲ್ಲ. ಬಲಾತ್ಕಾರದಿಂದಲಾದರೂ ಇವಳನ್ನು ನಾನು ಕರೆದುಕೊಂಡು ಹೋಗುವೆನು.

|| ಋಷಿರುವಾಚ ||

**ನಯಸ್ವ ಯದಿ ಶಕ್ತಿಸ್ತೇ ಬಲೇನಾದ್ಯ ಮಮಾಶ್ರಮಾತ್ ।**
**ವಿಶ್ವಾಮಿತ್ರೋ ಯಥಾ ಧೇನುಂ ವಸಿಷ್ಠಸ್ಯ ಮುನೇಃ ಪುರಾ ॥೬೦॥**

ಭರದ್ವಾಜಋಷಿಯು ಹೇಳಿದನು—ಹಿಂದೆ ವಸಿಷ್ಠಮುನಿಯ ಕಾಮಧೇನುವನ್ನು ವಿಶ್ವಾಮಿತ್ರನು ತೆಗೆದುಕೊಂಡು ಹೋಗಲು ಯತ್ನಿಸಿದಂತೆ, ನಿನಗೆ ಶಕ್ತಿಯಿರುವುದೇ ಆದರೆ ಮನೋರಮೆಯನ್ನು ನನ್ನ ಆಶ್ರಮದಿಂದ ನೀನೂ ಬಲಾತ್ಕಾರವಾಗಿ ಕರೆದುಕೊಂಡು ಹೋಗು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಷೋಡಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಹದಿನಾರನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ತೃತೀಯಸ್ಕಂಧೇ

### ॥ ಸಪ್ತದಶೋಽಧ್ಯಾಯಃ ॥

### ಹದಿನೇಳನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಇತ್ಯಾಕರ್ಣ್ಯ ವಚಸ್ತಸ್ಯ ಮುನೇಸ್ತತ್ರಾವನೀಪತಿಃ ।**
**ಮಂತ್ರಿವೃದ್ಧಂ ಸಮಾಹೂಯ ಪಪ್ರಚ್ಛ ತಮತಂದ್ರಿತಃ ॥೧॥**

ವ್ಯಾಸಮುನಿಯು ಹೇಳಿದನು—ಆ ಭಾರದ್ವಾಜಮುನಿಯ ಮಾತುಗಳನ್ನು ಕೇಳಿ ಆ ಯುಧಾಜಿದ್ರಾಜನು ವೃದ್ಧನಾದ ತನ್ನ ಮಂತ್ರಿಯನ್ನು ಕರೆಯಿಸಿ ಆಲಸ್ಯವಿಲ್ಲದವನಾಗಿ ಈ ರೀತಿ ಕೇಳಿದನು.

**ಕಿಂ ಕರ್ತವ್ಯಂ ಸುಬುದ್ಧೇಽತ್ರ ಮಯಾದ್ಯ ವದ ಸುವ್ರತ ।**
**ಬಲಾನ್ನಯಾಮಿ ತಾಂ ಕಾಮಂ ಸಪುತ್ರಾಂ ಚ ಸುಭಾಷಿಣೀಂ ॥೨॥**

ತುಂಬ ಬುದ್ಧಿವಂತನಾದ ಮತ್ತು ಒಳ್ಳೆಯದಾದ ಆಚರಣೆಯುಳ್ಳ ಎಲೈ ಮಂತ್ರಿವರ್ಯನೇ, ಇಲ್ಲಿ ನಾನು ಈಗ ಏನನ್ನು ಮಾಡಲಿ? ಹೇಳು. ಇಂಪಾಗಿ ಮಾತನಾಡುವ ಆ ಮನೋರಮೆಯನ್ನು ಮಗನಾದ ಸುದರ್ಶನನೊಡನೆ ನನ್ನಿಷ್ಟದಂತೆ ಒಯ್ಯುತ್ತೇನೆ.

**ರಿಪುರಲ್ಪೋಽಪಿ ನೋಪೇಕ್ಷ್ಯಃ ಸರ್ವಥಾ ಶುಭಮಿಚ್ಛತಾ ।**
**ರಾಜಯಕ್ಷ್ಮೇವ ಸಂವೃದ್ಧೋ ಮೃತ್ಯವೇ ಪರಿಕಲ್ಪಯೇತ್ ॥೩॥**

ಒಳ್ಳೆಯದನ್ನು ಅಪೇಕ್ಷಿಸುವವನು, ತನ್ನ ಶತ್ರುವು, ಅವನು ಚಿಕ್ಕವನಾಗಿದ್ದರೂ ಖಂಡಿತವಾಗಿಯೂ ಉದಾಸೀನಮಾಡಿಬಿಡಬಾರದು. ಹಾಗೆ ಉದಾಸೀನಮಾಡಿ

ದರೆ ಮುಂದೆ ಆ ಶತ್ರುವು, ಕ್ಷಯರೋಗದಂತೆ, ಅಭಿವೃದ್ಧಿಯನ್ನು ಹೊಂದಿ ನಮ್ಮ ನಾಶವನ್ನು ಉಂಟುಮಾಡುವುದಕ್ಕೂ ಸಮರ್ಥನಾದಾನು !

**ನಾತ್ರ ಸೈನ್ಯಂ ನ ಯೋದ್ಧಾಽಸ್ತಿ ಯೋ ಮಾಮತ್ರ ನಿವಾರಯೇತ್ ।**
**ಗೃಹೀತ್ವಾ ಹನ್ಮಿ ತಂ ತತ್ರ ದೌಹಿತ್ರಸ್ಯ ರಿಪುಂ ಕಿಲ ॥೪॥**

ಇಲ್ಲಿ ಅವನಿಗೆ ಸಹಾಯವಾಗಿ ಸೈನ್ಯವಾಗಲಿ, ಭಟನಾಗಲಿ ಇರುವುದಿಲ್ಲವು. ಇಲ್ಲಿ ನನ್ನನ್ನು ಯಾವನು ತಡೆಯಬಲ್ಲನು ? ಆದುದದರಿಂದ ಆ ಸುದರ್ಶನನನ್ನು ಹಿಡಿದುಕೊಂಡುಹೋಗಿ ನನ್ನ ಮೊಮ್ಮಗನ ಶತ್ರುವಾದ ಅವನನ್ನು ಅಲ್ಲಿ ಕೊಲ್ಲುತ್ತೇನೆ.

**ನಿಷ್ಕಂಟಕಂ ಭವೇದ್ರಾಜ್ಯಂ ಯತಾಮ್ಯದ್ಯ ಬಲಾದಹಂ ।**
**ಹತೇ ಸುದರ್ಶನೇ ನೂನಂ ನಿರ್ಭಯೋಽಸೌ ಭವೇದಿತಿ ॥೫॥**

ಶತ್ರುಜಿತನ ರಾಜ್ಯವು ಶತ್ರುಗಳ ತೊಂದರೆಯಿಲ್ಲದುದಾಗುತ್ತದೆ. ಆದುದ ರಿಂದ ನಾನು ಈಗ ಬಲದಿಂದಲೇ ಪ್ರಯತ್ನಮಾಡುತ್ತೇನೆ. ಸುದರ್ಶನನು ಮೃತನಾ ದರೆ ಶತ್ರುಜಿತನು ನಿಶ್ಚಯವಾಗಿಯೂ ಯಾವ ಭಯವೂ ಇಲ್ಲದವನಾಗುವನು ಎಂದು ಹೇಳಿದನು.

॥ ಪ್ರಧಾನ ಉವಾಚ ॥

**ಸಾಹಸಂ ನಹಿ ಕರ್ತವ್ಯಂ ಶ್ರುತಂ ರಾಜನ್ಮುನೇರ್ವಚಃ ।**
**ವಿಶ್ವಾಮಿತ್ರಸ್ಯ ದೃಷ್ಟಾಂತಃ ಕಥಿತಸ್ತೇನ ಮಾರಿಷ ॥೬॥**

ಮಂತ್ರಿಯು ಹೇಳಿದನು—ಎಲೈ ರಾಜನೇ, ಸಾಹಸವನ್ನು ದುಡುಕಿ ಮಾಡ ಬಾರದು. ಭಾರದ್ವಾಜಮುನಿಯ ಮಾತುಗಳನ್ನು ಕೇಳಿರುವೆಯಲ್ಲವೇ ? ಆರ್ಯನಾದ ಓ ಯುಧಾಜಿತನೇ, ವಿಶ್ವಾಮಿತ್ರನ ಉದಾಹರಣೆಯನ್ನೂ ಆ ಮುನಿಯು ಹೇಳಿರು ವನಲ್ಲವೆ ?

**ಪುರಾ ಗಾಧಿಸುತಃ ಶ್ರೀಮಾನ್ವಿಶ್ವಾಮಿತ್ರೋಽತಿವಿಶ್ರುತಃ ।**
**ವಿಚರನ್ ಸ ನೃಪಶ್ರೇಷ್ಠೋ ವಸಿಷ್ಠಾಶ್ರಮಮಭ್ಯಗಾತ್ ॥೭॥**

ಹಿಂದೆ ಗಾಧಿರಾಜನ ಪುತ್ರನಾದ, ಐಶ್ವರ್ಯಶಾಲಿಯಾದ ಮತ್ತು ಪ್ರಸಿದ್ಧ ನಾದ ವಿಶ್ವಾಮಿತ್ರನು ರಾಜನಾಗಿದ್ದಾಗ ಸಂಚಾರಮಾಡುತ್ತಾ ವಸಿಷ್ಠಮುನಿಯ ಆಶ್ರಮಕ್ಕೆ ಬಂದನು.

**ನಮಸ್ಕೃತ್ಯ ಚ ತಂ ರಾಜಾ ವಿಶ್ವಾಮಿತ್ರಃ ಪ್ರತಾಪವಾನ್ ।**
**ಉಪವಿಷ್ಟೋ ನೃಪಶ್ರೇಷ್ಠೋ ಮುನಿನಾ ದತ್ತವಿಷ್ಟರಃ ॥೮॥**

ಪರಾಕ್ರಮಶಾಲಿಯಾದ ವಿಶ್ವಾಮಿತ್ರರಾಜನು ಆ ವಸಿಷ್ಠಮುನಿಯನ್ನು ನಮಸ್ಕರಿಸಿ, ಆ ಮುನಿಯಿಂದ ಕೊಡಲ್ಪಟ್ಟ ದರ್ಭಾಸನವುಳ್ಳವನಾಗಿ ಆ ರಾಜಶ್ರೇಷ್ಠನು ಕುಳಿತುಕೊಂಡನು.

**ನಿಮಂತ್ರಿತೋ ವಸಿಷ್ಠೇನ ಭೋಜನಾಯ ಮಹಾತ್ಮನಾ ।**
**ಸಸೈನ್ಯಶ್ಚ ಸ್ಥಿತೋ ರಾಜಾ ಗಾಧಿಪುತ್ರೋ ಮಹಾಯಶಾಃ ॥೯॥**

ಮಹಾತ್ಮನಾದ ವಸಿಷ್ಠಮುನಿಯಿಂದ ತುಂಬ ಕೀರ್ತಿಶಾಲಿಯಾದ ಗಾಧಿರಾಜನ ಮಗನಾದ ವಿಶ್ವಾಮಿತ್ರನು ಭೋಜನಕ್ಕೆ ಆಹ್ವಾನಿಸಲ್ಪಟ್ಟವನಾಗಿ ತನ್ನ ಸೈನ್ಯದೊಂದಿಗೆ ಅಲ್ಲಿಯೇ ನಿಂತನು.

**ನಂದಿನ್ಯಾಽಽಸಾದಿತಂ ಸರ್ವಂ ಭಕ್ಷ್ಯಭೋಜ್ಯಾದಿಕಂ ಚ ಯತ್ ।**
**ಭುಕ್ತ್ವಾ ರಾಜಾ ಸಸೈನ್ಯಶ್ಚ ವಾಂಛಿತಂ ತತ್ರ ಭೋಜನಂ ॥೧೦॥**

ಭಕ್ಷ್ಯಭೋಜ್ಯಾದಿಗಳು ಯಾವುಯಾವುದಿರುವವೋ ಅವೆಲ್ಲವೂ ಕಾಮಧೇನುವಿನ ಮಗಳಾದ ನಂದಿನೀಧೇನುವಿನಿಂದ ತನ್ನ ಮಾಹಾತ್ಮ್ಯಬಲದಿಂದ ಸಿದ್ಧಗೊಳಿಸಲ್ಪಟ್ಟುವು. ರಾಜನು ಅಲ್ಲಿ ಸೈನ್ಯಸಮೇತನಾಗಿ ತನ್ನ ಮನಸ್ಸಿಗೆ ಬೇಕಾದ ಹಾಗೆ ಊಟವನ್ನು ಮಾಡಿದನು.

**ಪ್ರತಾಪಂ ತಂ ಚ ನಂದಿನ್ಯಾಃ ಪರಿಜ್ಞಾಯ ಸ ಪಾರ್ಥಿವಃ ।**
**ಯಯಾಚೇ ನಂದಿನೀಂ ರಾಜಾ ವಸಿಷ್ಠಂ ಮುನಿಸತ್ತಮಂ ॥೧೧॥**

ನಂದಿನೀಧೇನುವಿನ ಆ ಮಾಹಾತ್ಮ್ಯವನ್ನು ನೋಡಿ ಆ ವಿಶ್ವಾಮಿತ್ರರಾಜನು ಋಷಿಶ್ರೇಷ್ಠನಾದ ವಸಿಷ್ಠನನ್ನು ಕುರಿತು ಆ ನಂದಿನೀಧೇನುವನ್ನು ತನಗೆ ಕೊಡಬೇಕೆಂದು ಪ್ರಾರ್ಥಿಸಿದನು.

॥ ವಿಶ್ವಾಮಿತ್ರ ಉವಾಚ ॥

**ಮುನೇ ಧೇನುಸಹಸ್ರಂ ತೇ ಘಟೋಧ್ನೀನಾಂ ದದಾಮ್ಯಹಂ ।**
**ನಂದಿನೀಂ ದೇಹಿ ಮೇ ಧೇನುಂ ಪ್ರಾರ್ಥಯಾಮಿ ಪರಂತಪ ॥೧೨॥**

ವಿಶ್ವಾಮಿತ್ರರಾಜನು ಹೇಳಿದನು--ಎಲೈ ದುಷ್ಟರನ್ನು ಶಿಕ್ಷಿಸುವ ವಸಿಷ್ಠ ಋಷಿಯೇ, ಮಡಕೆಯಂತೆ ದೊಡ್ಡದಾದ ಕೆಚ್ಚಲುಳ್ಳ, ಎಂದರೆ ತುಂಬ ಹಾಲು ಕರೆಯುವ, ಒಂದು ಸಾವಿರ ಹಸುಗಳನ್ನು ನಾನು ನಿನಗೆ ಕೊಡುತ್ತೇನೆ. ಅದಕ್ಕೆ ಪ್ರತಿಯಾಗಿ ಈ ನಂದಿನೀಧೇನುವನ್ನು ನನಗೆ ಕೊಡು.

|| ವಸಿಷ್ಠ ಉವಾಚ ||

**ಹೋಮಧೇನುರಿಯಂ ರಾಜನ್ ನ ದದಾಮಿ ಕಥಂಚನ ।**
**ಸಹಸ್ರಂ ಚಾಪಿ ಧೇನೂನಾಂ ತವೇದಂ ತವ ತಿಷ್ಠತು ॥೧೩॥**

ವಸಿಷ್ಠಮುನಿಯು ಹೇಳಿದನು—ಎಲೈ ರಾಜನೇ, ಈ ನನ್ನ ಹಸುವು ಯಜ್ಞಕ್ಕೆ ಬೇಕಾಗುವ ಪದಾರ್ಥಗಳನ್ನು ಪಡೆಯಲು ಉತ್ತಮವಾದ ಸಾಧನವಾಗಿರುತ್ತದೆ. ಇದನ್ನು ನಾನು ಖಂಡಿತವಾಗಿಯೂ ಕೊಡುವುದಿಲ್ಲವು. ನಿನ್ನ ಸಾವಿರ ಹಸುಗಳೂ ನಿನಗೇ ಇರಲಿ.

|| ವಿಶ್ವಾಮಿತ್ರ ಉವಾಚ ||

**ಅಯುತಂ ವಾಥ ಲಕ್ಷಂ ವಾ ದದಾಮಿ ಮನಸೇಪ್ಸಿತಂ ।**
**ದೇಹಿ ಮೇ ನಂದಿನೀಂ ಸಾಧೋ ಗೃಹೀಷ್ಯಾಮಿ ಬಲಾದಥ ॥೧೪॥**

ವಿಶ್ವಾಮಿತ್ರರಾಜನು ಹೇಳಿದನು. ನಿನ್ನ ಮನಸ್ಸಿಗೆ ಒಪ್ಪುವಂತಹ ಹತ್ತು ಸಾವಿರವಾಗಲೀ, ಒಂದು ಲಕ್ಷವಾಗಲೀ ಹಸುಗಳನ್ನು ಕೊಡುತ್ತೇನೆ. ಎಲೈ ಶಾಂತ ಸ್ವಭಾವದವನಾದ ಮುನಿಯೇ, ಈ ನಂದಿನೀಧೇನುವನ್ನು ನನಗೆ ಕೊಡು. ಇಲ್ಲದಿದ್ದರೆ ಬಲಾತ್ಕಾರವಾಗಿ ತೆಗೆದುಕೊಳ್ಳುವೆನು.

|| ವಸಿಷ್ಠ ಉವಾಚ ||

**ಕಾಮಂ ಗೃಹಾಣ ನೃಪತೇ ಬಲಾದದ್ಯ ಯಥಾರುಚಿ ।**
**ನಾಹಂ ದದಾಮಿ ತೇ ರಾಜನ್ ಸ್ವೇಚ್ಛಯಾ ನಂದಿನೀಂ ಗೃಹಾತ್ ॥೧೫॥**

ವಸಿಷ್ಠಮುನಿಯು ಹೇಳಿದನು—ಎಲೈ ರಾಜನೇ, ಹಾಗೆಯೇ ಆಗಲಿ, ನಿನ್ನ ಇಷ್ಟದಂತೆ ಬಲಾತ್ಕಾರವಾಗಿ ನನ್ನ ಹಸುವನ್ನು ನಿನಗೆ ಶಕ್ತಿಯಿದ್ದರೆ ತೆಗೆದುಕೊ.

ಆದರೆ ನಾನು ನನ್ನ ಇಚ್ಛೆಯಿಂದ ನಂದಿನೀಧೇನುವನ್ನು ನನ್ನ ಮನೆಯಿಂದ ಹೊರಕ್ಕೆ ಕಳುಹಿಸಿಕೊಡುವುದಿಲ್ಲವು.

**ತಚ್ಛ್ರುತ್ವಾ ನೃಪತಿರ್ಭೃತ್ಯಾನಾದಿದೇಶ ಮಹಾಬಲಾನ್ ।**
**ನಯಧ್ವಂ ನಂದಿನೀಂ ಧೇನುಂ ಬಲದರ್ಪಸುಸಂಸ್ಥಿತಾಃ ॥೧೬॥**

ವಸಿಷ್ಠಮುನಿಯ ಆ ಮಾತನ್ನು ಕೇಳಿ, ವಿಶ್ವಾಮಿತ್ರರಾಜನು ತುಂಬ ಬಲಿಷ್ಠರಾದ ತನ್ನ ಸೇವಕರನ್ನು ಕುರಿತು, ಎಲೈ ಬಲದಿಂದಲೂ, ದರ್ಪದಿಂದಲೂ ಕೂಡಿದ ಭಟರೇ, ಈ ನಂದಿನೀಧೇನುವನ್ನು ತೆಗೆದುಕೊಂಡು ಹೊರಡಿರಿ, ಎಂದು ಅಪ್ಪಣೆ ಮಾಡಿದನು.

**ತೇ ಭೃತ್ಯಾ ಜಗೃಹುರ್ಧೇನುಂ ಹಠಾದಾಕ್ರಮ್ಯ ಯಂತ್ರಿತಾಂ ।**
**ವೇಪಮಾನಾ ಮುನಿಂ ಪ್ರಾಹ ಸುರಭಿಃ ಸಾಶ್ರುಲೋಚನಾ ॥೧೭॥**

ಅನಂತರದಲ್ಲಿ ಆ ರಾಜದೂತರು ಆ ನಂದಿನೀಧೇನುವನ್ನು ಬಲಾತ್ಕಾರದಿಂದ ಹಿಡಿದು ಹಗ್ಗದಿಂದ ಬಂಧಿಸಿ ತಮ್ಮ ವಶಕ್ಕೆ ತೆಗೆದುಕೊಂಡರು. ಆ ಹಸುವು ನಡುಗುತ್ತಾ ಕಣ್ಣೀರನ್ನು ಸುರಿಸುತ್ತಾ ಆ ವಸಿಷ್ಠಮುನಿಯನ್ನು ಕುರಿತು ಹೇಳಿತು---

**ಮುನೇ ತ್ಯಜಸಿ ಮಾಂ ಕಸ್ಮಾತ್ಕರ್ಷಯಂತಿ ಸುಯಂತ್ರಿತಾಂ ।**
**ಮುನಿಸ್ತಾಂ ಪ್ರತ್ಯುವಾಚೇದಂ ತ್ಯಜೇನಾಹಂ ಸುದುಗ್ಧದೇ ॥೧೮॥**

ಎಲೈ ಮುನಿಯೇ, ನನ್ನನ್ನು ನೀನು ಏಕೆ ಬಿಡುವೆ? ಈ ರಾಜದೂತರು ಚನ್ನಾಗಿ ಬಂಧಿಸಿ ನನ್ನನ್ನು ಎಳೆಯುತ್ತಲಿದ್ದಾರೆ, ಎಂದು ಕೇಳಲು, ವಸಿಷ್ಠಮುನಿಯು ಎಲೈ ಹೆಚ್ಚಾಗಿ ಒಳ್ಳೆಯ ಹಾಲನ್ನು ಕರೆಯುವ ನಂದಿನಿಯೇ, ನಾನಾಗಿ ನಿನ್ನನ್ನು ಬಿಡುತ್ತಿಲ್ಲವು ಎಂದು ಹೇಳಿದನು.

**ಬಲಾನ್ನಯತಿ ರಾಜಾಸೌ ಪೂಜಿತೋಽದ್ಯ ಮಯಾ ಶುಭೇ ।**
**ಕಿಂ ಕರೋಮಿ ನ ಚೇಚ್ಛಾಮಿ ತ್ಯಕ್ತುಂ ತ್ವಾಂ ಮನಸಾ ಕಿಲ ॥೧೯॥**

ಈಗತಾನೇ ನನ್ನಿಂದ ತುಂಬ ಉತ್ತಮವಾದ ಅತಿಥಿಸತ್ಕಾರವನ್ನು ಪಡೆದ ಈ ರಾಜನು ನಿನ್ನನ್ನು ಬಲಾತ್ಕಾರದಿಂದ ಒಯ್ಯುತ್ತಲಿದ್ದಾನೆ. ಎಲೌ ಮಂಗಳಕರಳಾದ

ನಂದಿನಿಯೇ, ನಾನೇನನ್ನು ಮಾಡಲಿ? ನಿನ್ನನ್ನು ಬಿಡಬೇಕೆಂದು ನಾನು ಮನಸ್ಸಿನಿಂದಲೂ ಅಪೇಕ್ಷಿಸುತ್ತಿಲ್ಲವು.

**ಇತ್ಯುಕ್ತಾ ಮುನಿನಾ ಧೇನುಃ ಕ್ರೋಧಯುಕ್ತಾ ಬಭೂವ ಹ ।**
**ಹಂಬಾರವಂ ಚಕಾರಾಶು ಕ್ರೂರಶಬ್ದಂ ಸುದಾರುಣಂ ॥೨೦॥**

ಹೀಗೆ ಆ ವಸಿಷ್ಠಮುನಿಯು ಹೇಳಲಾಗಿ, ಆ ಹಸುವು ತುಂಬ ಕೋಪಗೊಂಡು, ಭಯಂಕರವಾದ ಶಬ್ದವುಳ್ಳ ಹಂಬಾ ಎಂಬ ಧ್ವನಿಯನ್ನು ಮಾಡಿತು.

**ಉದ್ಗತಾಸ್ತತ್ರ ದೇಹಾತ್ತು ದೈತ್ಯಾ ಘೋರತರಾಸ್ತದಾ ।**
**ಸಾಯುಧಾಸ್ತಿಷ್ಠ್ಯೇತಿ ತಿಷ್ಠ್ಯೇತಿ ಬ್ರುವಂತಃ ಕವಚಾವೃತಾಃ ॥೨೧॥**

ಅನಂತರದಲ್ಲಿ ಅಲ್ಲಿ ಆ ಹಸುವಿನ ಶರೀರದಿಂದ ತುಂಬ ಭಯಂಕರರಾದ ರಾಕ್ಷಸರು ಕಬ್ಬಿಣದ ಅಂಗಿಯನ್ನು ಕೊಟ್ಟು, ಆಯುಧಗಳನ್ನು ಹಿಡಿದುಕೊಂಡು ನಿಲ್ಲು ನಿಲ್ಲೆಂದು ಗರ್ಜಿಸುತ್ತಾ ಹೊರಬಿದ್ದರು.

**ಸೈನ್ಯಂ ಸರ್ವಂ ಹತಂ ತೈಸ್ತು ನಂದಿನೀ ಪ್ರತಿಮೋಚಿತಾ ।**
**ಏಕಾಕೀ ನಿರ್ಗತೋ ರಾಜಾ ವಿಶ್ವಾಮಿತ್ರೋಽತಿದುಃಖಿತಃ ॥೨೨॥**

ಆ ರಾಕ್ಷಸರಿಂದ ವಿಶ್ವಾಮಿತ್ರನ ಸೈನ್ಯವೆಲ್ಲವೂ ನಾಶವಾಯಿತು. ನಂದಿನೀ ಧೇನುವು ಬಿಡಲ್ಪಟ್ಟಿತು. ರಾಜನಾದ ವಿಶ್ವಾಮಿತ್ರನು ತುಂಬ ದುಃಖವನ್ನು ಹೊಂದಿದವನಾಗಿ ಒಬ್ಬನೇ ಆ ಆಶ್ರಮದಿಂದ ಹೊರಟು ಹೋದನು.

**ಹಂತ ಪಾಪೋಽತಿದೀನಾತ್ಮಾ ನಿಂದನ್ ಕ್ಷಾತ್ರಬಲಂ ಮಹತ್ ।**
**ಬ್ರಾಹ್ಮಂ ಬಲಂ ದುರಾರಾಧ್ಯಂ ಮತ್ವಾ ತಪಸಿ ಸಂಸ್ಥಿತಃ ॥೨೩॥**

ಅಯ್ಯೋ ಪಾಪ! ತುಂಬ ದುಃಖಿತವಾದ ಮನಸ್ಸುಳ್ಳ ಪಾಪಿಷ್ಠನಾದ ಆ ರಾಜನು ಹೆಚ್ಚಿನದಾದರೂ ಕ್ಷತ್ರಿಯರ ಬಲವನ್ನು ಕೀಳಾದುದೆಂದು ನಿಂದಿಸುತ್ತಾ, ಬ್ರಹ್ಮತೇಜಸ್ಸಿನ ಬಲವೇ ಶ್ರೇಷ್ಠವಾದುದು. ಅದರ ಸಿದ್ಧಿಯನ್ನು ದೇಹಶಕ್ತಿಯಿಂದ ಎದುರಿಸಲೂ ಪಡೆಯಲೂ ಆಗುವುದಿಲ್ಲವೆಂದು ತಿಳಿದು, ಅದರ ಪ್ರಾಪ್ತಿಗಾಗಿ ತಪಸ್ಸನ್ನು ಮಾಡತೊಡಗಿದನು.

**ತಪ್ತ್ವಾ ಬಹೂನಿ ವರ್ಷಾಣಿ ತಪೋ ಘೋರಂ ಮಹಾವನೇ ।**
**ಋಷಿತ್ವಂ ಪ್ರಾಪ ಗಾಧೇಯಸ್ತ್ಯಕ್ತ್ವಾ ಕ್ಷಾತ್ರಂ ವಿಧಿಂ ಪುನಃ ॥೨೪॥**

ಗಾಧಿರಾಜನ ಪುತ್ರನಾದ ಆ ವಿಶ್ವಾಮಿತ್ರನು ಮುಂದೆ ದೊಡ್ಡದಾದ ಅರಣ್ಯ ದಲ್ಲಿ ಅನೇಕವರ್ಷಗಳ ಪರ್ಯಂತವಾಗಿ ಕಠಿನವೂ ಭಯಂಕರವೂ ಆದ ತಪಸ್ಸನ್ನು ಮಾಡಿ ಕ್ಷತ್ರಿಯ ನಿಯಮವನ್ನು ಬಿಟ್ಟು ಬ್ರಹ್ಮಋಷಿಯಾದನು.

**ತಸ್ಮಾತ್ತ್ವಮಪಿ ರಾಜೇಂದ್ರ ಮಾ ಕೃಥಾ ವೈರಮದ್ಭುತಂ ।**
**ಕುಲನಾಶಕರಂ ನೂನಂ ತಾಪಸೈಃ ಸಹ ಸಂಯುಗಂ ॥೨೫॥**

ಆದುದರಿಂದ ಎಲೈ ರಾಜೋತ್ತಮನಾದ ಯುಧಾಜಿತನೇ, ನೀನೂ ಸಹ ಋಷಿಗಳೊಡನೆ ಅನರ್ಥಹೇತುವಾದ ಪರಿಣಾಮವುಳ್ಳ ದ್ವೇಷವನ್ನು ಕಟ್ಟಿಕೊಳ್ಳಬೇಡ. ತಪಸ್ವಿಗಳೊಡನೆ ಯುದ್ಧವನ್ನು ಮಾಡಿದರೆ ಖಂಡಿತವಾಗಿಯೂ ಕುಲವೇ ನಾಶ ವಾಗುತ್ತದೆ.

**ಮುನಿವರ್ಯಂ ಪ್ರಜಾದ್ಯ ತ್ವಂ ಸಮಾಶ್ವಾಸ್ಯ ತಪೋನಿಧಿಂ ।**
**ಸುದರ್ಶನೋಽಪಿ ರಾಜೇಂದ್ರ ತಿಷ್ಠತ್ವತ್ರ ಯಥಾಸುಖಂ ॥೨೬॥**

ಈಗ ನೀನು ತುಂಬ ತಪಸ್ವಿಯಾದ ಭರದ್ವಾಜಮುನಿಶ್ರೇಷ್ಠನನ್ನು ಸಮಾ ಧಾನಗೊಳಿಸಿ ಹೊರಡು. ಎಲೈ ರಾಜೋತ್ತಮನೇ, ಸುದರ್ಶನಕುಮಾರನು ಇಲ್ಲಿಯೇ ಮೊದಲಿನಂತೆ ಸುಖವಾಗಿರಲಿ.

**ಬಾಲೋಽಯಂ ನಿರ್ಧನಃ ಕಿಂ ತೇ ಕರಿಷ್ಯತಿ ನೃಪಾಹಿತಂ ।**
**ವೃಥಾ ತೇ ವೈರಭಾವೋಽಯಮನಾಥೇ ದುರ್ಬಲೇ ಶಿಶೌ ॥೨೭॥**

ಇವನು ಇನ್ನೂ ಹಸುಳೆಯು. ಅಲ್ಲದೆ ಹಣದ ಸಹಾಯವಿಲ್ಲದ ದರಿದ್ರನು. ಎಲೈ ರಾಜನೇ, ಇಂತಹನು ನಿನಗೇನು ಕೆಟ್ಟದ್ದನ್ನು ಮಾಡಿಯಾನು? ರಕ್ಷಕರಿಲ್ಲದ ಮತ್ತು ಸ್ವಶಕ್ತಿಯೂ ಇಲ್ಲದಿರುವ ದುರ್ಬಲನಾದ ಹಸುಳೆಯಲ್ಲಿ ನಿನಗೆ ದ್ವೇಷವು ನಿಷ್ಕಾರಣವಾದುದರಿಂದ ವ್ಯರ್ಥವೇಸರಿ.

**ದಯಾ ಸರ್ವತ್ರ ಕರ್ತವ್ಯಾ ದೈವಾಧೀನಮಿದಂ ಜಗತ್ ।**
**ಈರ್ಷ್ಯಯಾ ಕಿಂ ನೃಪಶ್ರೇಷ್ಠ ಯದ್ಭಾವ್ಯಂ ತದ್ಭವಿಷ್ಯತಿ ॥೨೮॥**

ಎಲ್ಲರಲ್ಲಿಯೂ ಕರುಣೆಯನ್ನು ಮಾಡಬೇಕು. ಈ ಜಗತ್ತೆಲ್ಲವೂ ಅದೃಷ್ಟಕ್ಕೆ ಅಧೀನವಾದದ್ದು. ಓ ರಾಜೋತ್ತಮನೇ, ಅಸೂಯೆಯನ್ನು ಮಾಡಿ ಏನು ಆಗಬೇಕು? ಅದರಿಂದ ಯಾವ ಪ್ರಯೋಜನವಾದೀತು? ದೈವಯೋಗದಿಂದ ಆಗತಕ್ಕುದು ಆಗಿಯೇ ಆಗುತ್ತದೆ.

**ವಜ್ರಂ ತೃಣಾಯತೇ ರಾಜನ್ ದೈವಯೋಗಾನ್ನ ಸಂಶಯಃ ।**
**ತೃಣಂ ವಜ್ರಾಯತೇ ಕ್ವಾಪಿ ಸಮಯೇ ದೈವಯೋಗತಃ ॥೨೯॥**

ಎಲೈ ರಾಜನೇ, ಅದೃಷ್ಟಯೋಗದಿಂದ ವಜ್ರಾಯುಧವೂ ಹುಲ್ಲಿಗೆ ಸಮಾನವಾಗಿ ಕಾರ್ಯಕಾರಿಯಲ್ಲದ್ದಾಗುತ್ತದೆ. ಕೆಲವು ಸಮಯದಲ್ಲಿ ಹುಲ್ಲೂ ಸಹ ವಜ್ರಾಯುಧಕ್ಕೆ ಸಮಾನವಾದ ಶಕ್ತಿಯುಳ್ಳದ್ದಾಗುತ್ತದೆ. ಇದು ನಿಶ್ಚಯವು.

**ಶಶಕೋ ಹಂತಿ ಶಾರ್ದೂಲಂ ಮಶಕೋ ವೈ ಯಥಾ ಗಜಂ ।**
**ಸಾಹಸಂ ಮುಂಚ ಮೇಧಾವಿನ್ ಕುರು ಮೇ ವಚನಂ ಹಿತಂ ॥೩೦॥**

ಒಂದು ಸಣ್ಣದಾದ ಮೊಲವು ಉಪಾಯದಿಂದ ಹುಲಿಯನ್ನು ಕೊಲ್ಲುತ್ತದೆ. ಆದುದರಿಂದ ತುಂಬ ತಿಳಿವಳಿಕೆಯುಳ್ಳ ಯುಧಾಜಿತನೇ, ಅಪಾಯಕರವಾದ ದೊಡ್ಡಕಾರ್ಯಕ್ಕೆ ನುಗ್ಗುವ ಸಾಹಸವನ್ನು ಬಿಡು. ಪಥ್ಯವಾದ ಎಂದರೆ ಹಿತಕರವಾದ ನನ್ನ ಮಾತನ್ನು ನಡೆಯಿಸು.

|| ವ್ಯಾಸ ಉವಾಚ ||

**ತಚ್ಛ್ರುತ್ವಾ ವಚನಂ ತಸ್ಯ ಯುಧಾಜಿನ್ನೃಪಸತ್ತಮಃ ।**
**ಪ್ರಣಮ್ಯ ತಂ ಮುನಿಂ ಮೂರ್ಧ್ನಾ ಜಗಾಮ ಸ್ವಂ ಪುರಂ ನೃಪಃ ॥೩೧॥**

ವ್ಯಾಸಮುನಿಯು ಹೇಳಿದನು—ಆ ವೃದ್ಧಮಂತ್ರಿಯ ಈ ವಿಧವಾದ ಹಿತಕರವಾದ ಮಾತುಗಳನ್ನು ಕೇಳಿ, ರಾಜಶ್ರೇಷ್ಠನಾದ ಆ ಯುಧಾಜಿತನು ಆ ಭರದ್ವಾಜಮುನಿಗೆ ಶಿರಸ್ಸನ್ನು ಬಗ್ಗಿಸಿ ನಮಸ್ಕಾರಮಾಡಿ ತನ್ನ ಪಟ್ಟಣಕ್ಕೆ ತೆರಳಿದನು.

**ಮನೋರಮಾಪಿ ಸ್ವಸ್ಥಾಭೂದಾಶ್ರಮೇ ತತ್ರ ಸಂಸ್ಥಿತಾ ।**
**ಪಾಲಯಾಮಾಸ ಪುತ್ರಂ ತಂ ಸುದರ್ಶನಮೃತವ್ರತಂ ॥೩೨॥**

ಇತ್ತಲಾಗಿ ಮನೋರಮೆಯೂ ಸಮಾಧಾನಗೊಂಡಳು. ಹಾಗೆಯೇ ಆ ಆಶ್ರಮದಲ್ಲಿರುತ್ತಾ ನ್ಯಾಯವಾದ ನಡತೆಯುಳ್ಳ, ನೀತಿಯನ್ನು ಪಾಲಿಸುವ ನಿಯಮವುಳ್ಳ, ಪುತ್ರನಾದ ಆ ಸುದರ್ಶನಕುಮಾರನನ್ನು ಕಾಪಾಡುತ್ತಲಿದ್ದಳು.

**ದಿನೇ ದಿನೇ ಕುಮಾರೋಽಸೌ ಜಗಾಮೋಪಚಯಂ ತತಃ ।**
**ಮುನಿಬಾಲಗತಃ ಕ್ರೀಡನ್ನಿರ್ಭಯಃ ಸರ್ವತಃ ಶುಭಃ ॥೩೩॥**

ಮಂಗಳಕರನಾದ ಆ ಸುದರ್ಶನಕುಮಾರನು ದಿನದಿನವೂ ಮುನಿಕುಮಾರರೊಡನೆ ಸೇರಿಕೊಂಡು ಆಟವಾಡುತ್ತಾ ಯಾವ ವಿಧವಾದ ಭಯವೂ ಇಲ್ಲದೆ ಅಭಿವೃದ್ಧಿಯನ್ನು ಹೊಂದುತ್ತಲಿದ್ದನು.

**ಏಕಸ್ಮಿನ್ಸಮಯೇ ತತ್ರ ವಿದಲ್ಲಂ ಸಮುಪಾಗತಂ ।**
**ಕ್ಲೀಬೇತಿ ಮುನಿಪುತ್ರಸ್ತಮಾಮಂತ್ರಯತ್ತದಂತಿಕೇ ॥೩೪॥**

ಒಂದು ದಿವಸ ಅಲ್ಲಿ ಸಮೀಪದಲ್ಲಿ ಬಂದಿದ್ದ ವಿದಲ್ಲಮಂತ್ರಿಯನ್ನು ಓರ್ವ ಮುನಿಕುಮಾರನು ಚೇಷ್ಟೆಗಾಗಿ ಕ್ಲೀಬ ಎಂದರೆ ನಪುಂಸಕನೆಂದು ಸಂಬೋಧಿಸಿ ಕರೆದನು.

**ಸುದರ್ಶನಸ್ತು ತಚ್ಛ್ರುತ್ವಾ ದಧಾರೈಕಾಕ್ಷರಂ ಸ್ಫುಟಂ ।**
**ಅನುಸ್ವಾರಯುತಂ ತಚ್ಚ ಪ್ರೋವಾಚಾತಿ ಪುನಃಪುನಃ ॥೩೫॥**

ಸುದರ್ಶನನು ಅದನ್ನು ಕೇಳಿ ಅದರಲ್ಲಿ ತನಗೆ ಸ್ಫುಟವಾಗಿ ಕೇಳಿಸಿದ ಕ್ಲೀ ಎಂಬ ಒಂದು ಅಕ್ಷರವನ್ನು ಮಾತ್ರ ಮನಸ್ಸಿನಲ್ಲಿ ಧರಿಸಿದನು, ಎಂದರೆ ಜ್ಞಾಪಕದಲ್ಲಿಟ್ಟುಕೊಂಡನು. ಮುಂದೆ ಆ ಅಕ್ಷರವನ್ನು ಅನುಸ್ವಾರ ಸಹಿತವಾಗಿ ಕ್ಲೀಂ ಎಂದು ತಿರುಗಿ ಉಚ್ಚರಿಸಿದನು.

**ಬೀಜಂ ವೈ ಕಾಮರಾಜಾಖ್ಯಂ ಗೃಹೀತಂ ಮನಸಾ ತದಾ ।**
**ಜಜಾಪ ಬಾಲಕೋಽತ್ಯರ್ಥಂ ಧೃತ್ವಾ ಚೇತಸಿ ಸಾದರಂ ॥೩೬॥**

ಆ ಕ್ಲೀಂ ಎಂಬ ಅಕ್ಷರವು ಕಾಮರಾಜವೆಂಬ ಬೀಜಮಂತ್ರವು. ಅದನ್ನೇ ಆ ಸುದರ್ಶನಕುಮಾರನು ಮನಸ್ಸಿನಲ್ಲಿ ಗ್ರಹಿಸಿ ಆ ಬೀಜಾಕ್ಷರವನ್ನು ಆಸಕ್ತಿಯಿಂದ ಅನೇಕಸಾರಿ ಉಚ್ಚಾರಮಾಡುತ್ತಾ ಜಪಿಸಿದನು.

**ಭಾವಿಯೋಗಾನ್ಮಹಾರಾಜ ಕಾಮರಾಜಾಖ್ಯಮುದ್ಧೃತಂ ।**
**ಸ್ವಭಾವೇನೈವ ತೇನೇತ್ಥಂ ಗೃಹೀತಂ ಬಾಲಕೇನ ವೈ ॥೩೭॥**

ಮಹಾರಾಜನಾದ ಎಲೈ ಜನಮೇಜಯನೇ, ಮುಂದೆ ಏನೋ ಆಗತಕ್ಕದ್ದಿದ್ದುದರಿಂದ ಆಶ್ಚರ್ಯಕರವಾದ ಆ ಕಾಮರಾಜಮಂತ್ರವನ್ನು ಸುದರ್ಶನಕುಮಾರನು ಈ ರೀತಿಯಾಗಿ ದೈವಸಹಾಯದಿಂದ ತಾನಾಗಿಯೇ ಗ್ರಹಿಸಿದನು.

**ತದಾಸೌ ಪಂಚಮೇ ವರ್ಷೇ ಪ್ರಾಪ್ಯ ಮಂತ್ರಮನುತ್ತಮಂ ।**
**ಋಷಿಚ್ಛಂದೋವಿಹೀನಂ ಚ ಧ್ಯಾನನ್ಯಾಸವಿವರ್ಜಿತಂ ॥೩೮॥**

ಆಗ ಸುದರ್ಶನನು ತನ್ನ ಐದನೆಯ ವರ್ಷದಲ್ಲಿಯೇ ಶ್ರೇಷ್ಠವಾದ ಆ ಮಂತ್ರವನ್ನು ಪಡೆದು ಋಷಿ, ಛಂದಸ್ಸು, ಇವುಗಳ ತಿಳಿವಳಿಕೆಯೂ ಇಲ್ಲದೆಯೇ ಆ ದೇವತೆಯ ಧ್ಯಾನ, ಅಂಗನ್ಯಾಸಾದಿಗಳೂ ಇಲ್ಲದೆಯೇ, ಗ್ರಹಿಸಿ

**ಪ್ರಜಪನ್ಮನಸಾ ನಿತ್ಯಂ ಕ್ರೀಡತ್ಯಪಿ ಸ್ವಪಿತ್ಯಪಿ ।**
**ವಿಸಸ್ಮಾರ ನ ತಂ ಮಂತ್ರಂ ಜ್ಞಾತ್ವಾ ಸಾರಮಿತಿ ಸ್ವಯಂ ॥೩೯॥**

ಆ ಮಂತ್ರವನ್ನು ಮನಸ್ಸಿನಲ್ಲಿಯೇ ಜಪಿಸುತ್ತಾ ಆಟವಾಡುತ್ತಲಿದ್ದರೂ, ನಿದ್ರೆಮಾಡುತ್ತಲಿದ್ದರೂ, ಅದು ತುಂಬ ಉತ್ಕೃಷ್ಟವಾದುದೆಂದು ತಾನೇ ತಿಳಿದುಕೊಂಡು ಅದನ್ನು ಮರೆಯಲಿಲ್ಲವು.

**ವರ್ಷೇ ಚೈಕಾದಶೇ ಪ್ರಾಪ್ತೇ ಕುಮಾರೋಽಸೌ ನೃಪಾತ್ಮಜಃ ।**
**ಮುನಿನಾ ಚೋಪನೀತೋಽಥ ವೇದಮಧ್ಯಾಪಿತಸ್ತಥಾ ॥೪೦॥**

ಆ ಮೇಲೆ ರಾಜಕುಮಾರನಾದ ಆ ಸುದರ್ಶನನಿಗೆ ಹನ್ನೊಂದು ವರ್ಷವಾಗಲು, ಭಾರದ್ವಾಜಮುನಿಯು ಅವನಿಗೆ ಉಪನಯನವನ್ನು ಮಾಡಿದನು. ಮತ್ತು ವೇದವನ್ನು ಅಧ್ಯಯನಮಾಡಿಸಿದನು.

**ಧನುರ್ವೇದಂ ತಥಾ ಸಾಂಗಂ ನೀತಿಶಾಸ್ತ್ರಂ ವಿಧಾನತಃ ।**
**ಅಭ್ಯಸ್ತಾ ಸಕಲಾ ವಿದ್ಯಾ ತೇನ ಮಂತ್ರಬಲಾದಿವ ॥೪೧॥**

ಹಾಗೆಯೇ ಧನುರ್ವೇದವನ್ನೂ, ನೀತಿಶಾಸ್ತ್ರವನ್ನೂ ನಿಯಮಾನುಸಾರವಾಗಿ ಅಧ್ಯಯನಮಾಡಿಸಿದನು. ಆ ಕಾಮರಾಜಮಂತ್ರದ ಮಾಹಾತ್ಮ್ಯದಿಂದಲೋ ಎಂಬಂತೆ ಅವನು ಎಲ್ಲ ವಿದ್ಯೆಗಳನ್ನೂ ಅಭ್ಯಾಸಮಾಡಿದನು.

**ಕದಾಚಿತ್ಸೋಽಪಿ ಪ್ರತ್ಯಕ್ಷಂ ದೇವೀರೂಪಂ ದದರ್ಶ ಹ ।**
**ರಕ್ತಾಂಬರಂ ರಕ್ತವರ್ಣಂ ರಕ್ತಸರ್ವಾಂಗಭೂಷಣಂ ॥೪೨॥**

ದೈವಸಹಾಯದಿಂದ ಉಂಟಾದ ಸದ್ಬುದ್ಧಿಯಿಂದ ಮಾಡಿದ ಇದರ ಜಪವು ಉಪಾಸನೆಯಾಗಿ ಪರಿಣಮಿಸಿತು. ಹೀಗಿರುತ್ತಿರಲು, ಒಂದಾನೊಂದು ದಿವಸದಲ್ಲಿ ಆ ಸುದರ್ಶನಕುಮಾರನು ಕೆಂಪುವರ್ಣದ ಬಟ್ಟೆಯನ್ನುಟ್ಟ ಮತ್ತು ಕೆಂಪುವರ್ಣದ ಆಭರಣಗಳನ್ನು ಧರಿಸಿರುವ, ಕೆಂಪಾದ ಶರೀರಕಾಂತಿಯುಳ್ಳ ದೇವಿಯ ಸ್ವರೂಪವನ್ನು ಪ್ರತ್ಯಕ್ಷವಾಗಿ ನೋಡಿದನು.

**ಗರುಡೇ ವಾಹನೇ ಸಂಸ್ಥಾಂ ವೈಷ್ಣವೀಂ ಶಕ್ತಿಮದ್ಭುತಾಂ ।**
**ದೃಷ್ಟ್ವಾ ಪ್ರಸನ್ನವದನಃ ಸ ಬಭೂವ ನೃಪಾತ್ಮಜಃ ॥೪೩॥**

ವಾಹನವಾದ ಗರುಡನನ್ನೇರಿ ಕುಳಿತಿರುವ, ತುಂಬ ಆಶ್ಚರ್ಯಕರಳಾದ ವೈಷ್ಣವೀ ಎಂದರೆ ವಿಷ್ಣುವಿನ ಸಂಬಂಧಿನಿಯಾದ ಶಕ್ತಿದೇವಿಯನ್ನು ನೋಡಿ, ಆ ರಾಜಕುಮಾರನು ತುಂಬ ಸಂತೋಷದಿಂದ ಅರಳಿದ ಮುಖವುಳ್ಳವನಾದನು.

**ವನೇ ತಸ್ಮಿನ್ ಸ್ಥಿತಃ ಸೋಽಥ ಸರ್ವವಿದ್ಯಾರ್ಥತತ್ತ್ವವಿತ್ ।**
**ಮಾತರಂ ಸೇವಮಾನಸ್ತು ವಿಜಹಾರ ನದೀತಟೇ ॥೪೪॥**

ಆ ಸುದರ್ಶನಕುಮಾರನು ಹೀಗೆ ಆ ಅರಣ್ಯದಲ್ಲಿ ವಾಸಮಾಡುತ್ತಾ ಎಲ್ಲ ವಿದ್ಯೆಗಳ ರಹಸ್ಯಾರ್ಥವನ್ನು ತಿಳಿದವನಾಗಿ, ತನ್ನ ತಾಯಿಯ ಸೇವೆಯನ್ನು ಮಾಡುತ್ತಾ ಗಂಗಾನದಿಯ ದಡದಲ್ಲಿ ವಿಹಾರಮಾಡುತ್ತಾ ಇದ್ದನು.

**ಶರಾಸನಂ ಚ ಸಂಪ್ರಾಪ್ತಂ ವಿಶಿಖಾಶ್ಚ ಶಿಲಾಶಿತಾಃ ।**
**ತೂಣೀರಂ ಕವಚಂ ತಸ್ಮೈ ದತ್ತಂ ಚಾಂಬಿಕಯಾ ವನೇ ॥೪೫॥**

ಒಳ್ಳೆಯ ಧನುಸ್ಸು, ಕಲ್ಲಿನಂತೆ ಗಟ್ಟಿಯಾದ ಮತ್ತು ತೀಕ್ಷ್ಣವಾದ ಬಾಣಗಳು, ಬತ್ತಳಿಕೆ, ಕಬ್ಬಿಣದ ಅಂಗಿ, ಇವೆಲ್ಲವೂ ಆ ಅರಣ್ಯದಲ್ಲಿ ಅವನಿಗೆ ದೇವಿಯಿಂದ ಕೊಡಲ್ಪಟ್ಟುವು.

**ಏತಸ್ಮಿನ್ಸಮಯೇ ಪುತ್ರೀ ಕಾಶೀರಾಜಸ್ಯ ಸುಪ್ರಿಯಾ ।**
**ನಾಮ್ನಾ ಶಶಿಕಲಾ ದಿವ್ಯಾ ಸರ್ವಲಕ್ಷಣಸಂಯುತಾ ॥೪೬॥**

ಇದೇ ಸಮಯದಲ್ಲಿ ಎಲ್ಲ ರಾಜಯೋಗ್ಯವಾದ ಶುಭಲಕ್ಷಣಗಳಿಂದ ಕೂಡಿದ, ತುಂಬ ಕಾಂತಿಮತಿಯಾದ ಶಶಿಕಲೆ ಎಂಬ ಕಾಶೀರಾಜನ ಪ್ರಿಯಪುತ್ರಿಯು,

**ಶುಶ್ರಾವ ನೃಪಪುತ್ರಂ ತಂ ವನಸ್ಥಂ ಚ ಸುದರ್ಶನಂ ।**
**ಸರ್ವಲಕ್ಷಣಸಂಪನ್ನಂ ಶೂರಂ ಕಾಮಮಿವಾಪರಂ ॥೪೭॥**

ಎಲ್ಲಾ ರಾಜಲಕ್ಷಣಗಳಿಂದಲೂ ಶೋಭಿಸುತ್ತಲಿರುವ, ಎರಡನೆಯ ಮನ್ಮಥ ನಂತಿರತಕ್ಕ ಮತ್ತು ಶೂರನಾದ, ಕಾಡಿನಲ್ಲಿರುವ ರಾಜಕುಮಾರ ಸುದರ್ಶನನ ವಿಷಯ ವನ್ನು ಕೇಳಿದಳು.

**ವಂದೀಜನಮುಖಾಚ್ಛ್ರುತ್ವಾ ರಾಜಪುತ್ರಂ ಸುಸಂಮತಂ ।**
**ಚಕಮೇ ಮನಸಾ ತಂ ವೈ ವರಂ ವರಯಿತುಂ ಧಿಯಾ ॥೪೮॥**

ಹೊಗಳುಭಟ್ಟರ ಮುಖದಿಂದ ತನಗೆ ಅನುರೂಪನಾದ ಮತ್ತು ಇಷ್ಟವಾದ ಆ ರಾಜಕುಮಾರನ ವಿಷಯವನ್ನು ಕೇಳಿ ಮನಸ್ಸಿನಲ್ಲಿಯೇ ಅವನನ್ನು ಕಾಮಿಸಿ ದಳು. ಮತ್ತು ಅವನನ್ನೇ ಪತಿಯನ್ನಾಗಿ ವರಿಸಲು ಮನಸ್ಸಿನಲ್ಲಿ ನಿಶ್ಚಯಿಸಿದಳು.

**ಸ್ವಪ್ನೇ ತಸ್ಯಾಃ ಸಮಾಗಮ್ಯ ಜಗದಂಬಾ ನಿಶಾಂತರೇ ।**
**ಉವಾಚ ವಚನಂ ಚೇದಂ ಸಮಾಶ್ವಾಸ್ಯ ಸುಸಂಸ್ಥಿತಾ ॥೪೯॥**

ಜಗತ್ತಿಗೆ ಮಾತೆಯಾದ ದೇವಿಯು, ರಾತ್ರಿಯಲ್ಲಿ ಆ ಶಶಿಕಲೆಯ ಸ್ವಪ್ನದಲ್ಲಿ ಬಂದು ದರ್ಶನವನ್ನು ಅನುಗ್ರಹಿಸಿ, ಅವಳನ್ನು ಸಮಾಧಾನಮಾಡಿ ಹೀಗೆ ಹೇಳಿದಳು

**ವರಂ ವರಯ ಸುಶ್ರೋಣಿ ಮಮ ಭಕ್ತಃ ಸುದರ್ಶನಃ ।**
**ಸರ್ವಕಾಮಪ್ರದಸ್ತೇಽಸ್ತು ವಚನಾನ್ಮಮ ಭಾಮಿನಿ ॥೫೦॥**

ಸುಂದರವಾದ ಕಟಿಭಾಗವುಳ್ಳ ಓ ಶಶಿಕಲೆಯೇ, ನಿನಗೆ ಇಷ್ಟನಾದ ಸುದರ್ಶನ ನನ್ನೇ ವರಿಸು. ಅವನು ನನ್ನ ಭಕ್ತನು. ಎಲೌ ಕಾಂತಿಯ ಸಂಪತ್ತುಳ್ಳ ಸುಂದ ರಿಯೇ, ನನ್ನ ಮಾತಿನಿಂದ ಅವನು ನಿನ್ನ ಎಲ್ಲ ಇಚ್ಛೆಯನ್ನೂ ನೆರವೇರಿಸುವಂತೆ ಆಗಲಿ.

**ಏವಂ ಶಶಿಕಲಾ ದೃಷ್ಟ್ವಾ ಸ್ವಪ್ನೇ ರೂಪಂ ಮನೋಹರಂ ।**
**ಅಂಬಾಯಾ ವಚನಂ ಸ್ಮೃತ್ವಾ ಜಹರ್ಷ ಭೃಶಮಾನಿನೀ ॥೫೧॥**

ಹೀಗೆ ಶಶಿಕಲೆಯು ಸ್ವಪ್ನದಲ್ಲಿ ಮನಸ್ಸನ್ನು ಅಪಹರಿಸುವ ದೇವಿಯ ರೂಪವನ್ನು ನೋಡಿ, ಜಗತ್ತಿಗೆಲ್ಲಕ್ಕೂ ತಾಯಿಯಾದ ಅವಳ ವಚನವನ್ನು ಕೇಳಿ ನೆನೆಸಿಕೊಳ್ಳುತ್ತಾ ಆ ಸುಂದರಳಾದ ಮತ್ತು ತುಂಬ ಮಾನಿಷ್ಠಳಾದ ಶಶಿಕಲೆಯು ತುಂಬ ಸಂತೋಷಗೊಂಡಳು.

**ಉತ್ಥಿತಾ ಸಾ ಮುದಾ ಯುಕ್ತಾ ಪೃಷ್ಟಾ ಮಾತ್ರಾ ಪುನಃ ಪುನಃ ।**
**ಪ್ರಮೋದೇ ಕಾರಣಂ ಬಾಲಾ ನೋವಾಚಾತಿತ್ರಪಾನ್ವಿತಾ ॥೫೨॥**

ಹೀಗೆ ಅವಳು ತುಂಬ ಸಂತೋಷವುಳ್ಳವಳಾಗಿ ಹಾಸಿಗೆಯಿಂದ ಎದ್ದಳು. ಅವಳ ಈ ಸಂತುಷ್ಟತೆಯನ್ನು ನೋಡಿ ಅವಳ ತಾಯಿಯು ಅದರ ಕಾರಣವನ್ನೆಷ್ಟು ಬಾರಿ ಕೇಳಿದರೂ ತುಂಬ ನಾಚಿಕೆಗೊಂಡವಳಾಗಿ ಏನನ್ನೂ ಹೇಳಲಿಲ್ಲ.

**ಜಹಾಸ ಮುದಮಾಪನ್ನಾ ಸ್ಮೃತ್ವಾ ಸ್ವಪ್ನಂ ಮುಹುರ್ಮುಹುಃ ।**
**ಸಖೀಂ ಪ್ರಾಹ ತದಾಽನ್ಯಾಂ ವೈ ಸ್ವಪ್ನವೃತ್ತಂ ಸವಿಸ್ತರಂ ॥೫೩॥**

ಆದರೂ ಮತ್ತೆ ಮತ್ತೆ ಸ್ವಪ್ನವನ್ನು ನೆನಸಿಕೊಂಡು ಆ ಶಶಿಕಲೆಯು ಸಂತುಷ್ಟಳಾಗಿ ತುಂಬ ನಕ್ಕಳು. ಅಲ್ಲದೆ, ಇನ್ನೊಬ್ಬ ಸಖಿಯನ್ನು ಕರೆದು ತನ್ನ ಸ್ವಪ್ನದ ಸಮಾಚಾರವನ್ನೆಲ್ಲಾ ವಿಸ್ತಾರವಾಗಿ ಹೇಳಿದಳು.

**ಕದಾಚಿತ್ಸಾ ವಿಹಾರಾರ್ಥಮವಾಪೋಪವನಂ ಶುಭಂ ।**
**ಸಖೀಯುಕ್ತಾ ವಿಶಾಲಾಕ್ಷೀ ಚಂಪಕೈರುಪಶೋಭಿತಂ ॥೫೪॥**

ಹೀಗಿರಲು ಒಂದು ದಿವಸ ಸುಂದರವಾದ ದೊಡ್ಡ ಕಣ್ಣುಗಳುಳ್ಳ ಆ ಶಶಿಕಲೆಯು ಕ್ರೀಡೆಗಾಗಿ, ಸಂಪಿಗೆವೃಕ್ಷಗಳಿಂದ ಶೋಭಿಸುವ ಉದ್ಯಾನವನವನ್ನು ತನ್ನ ಸಖಿಯರೊಡನೆ ಪ್ರವೇಶಿಸಿದಳು.

**ಪುಷ್ಪಾಣಿ ಚಿನ್ವತೀ ಬಾಲಾ ಚಂಪಕಾಧಃಸ್ಥಿತಾಽಬಲಾ ।**
**ಅಪಶ್ಯದ್ಬ್ರಾಹ್ಮಣಂ ಮಾರ್ಗೇ ಆಗಚ್ಛಂತಂ ತ್ವರಾನ್ವಿತಂ ॥೫೫॥**

ಬಾಲಿಕೆಯಾದ ಆ ಸ್ತ್ರೀಯು ಅಲ್ಲಿ ಪುಷ್ಪಗಳನ್ನು ಕೊಯ್ಯುತ್ತಾ ಚಂಪಕ ವೃಕ್ಷದ ಕೆಳಗಿದ್ದುಕೊಂಡು, ಅದೇ ದಾರಿಯಲ್ಲಿ ಅತಿವೇಗವಾಗಿ ಬರುತ್ತಲಿರುವ ಓರ್ವ ಬ್ರಾಹ್ಮಣನನ್ನು ನೋಡಿದಳು.

**ತಂ ಪ್ರಣಮ್ಯ ದ್ವಿಜಂ ಶ್ಯಾಮಾ ಬಭಾಷೇ ಮಧುರಂ ವಚಃ ।**
**ಕುತೋ ದೇಶಾನ್ಮಹಾಭಾಗ ಕೃತಮಾಗಮನಂ ತ್ವಯಾ ॥೫೬॥**

ಯೌವನಶಾಲಿನಿಯಾದ ಅವಳು ಆ ಬ್ರಾಹ್ಮಣನನ್ನು ನಮಸ್ಕರಿಸಿ, ಎಲೈ ಮಹಾಮಹಿಮನೇ, ನೀನು ಯಾವ ಸ್ಥಳದಿಂದ ಬರುತ್ತಲಿರುವೆ? ಎಂದು ಮಧುರ ವಾದ ಮಾತುಗಳಿಂದ ಕೇಳಿದಳು.

॥ ದ್ವಿಜ ಉವಾಚ ॥

**ಭಾರದ್ವಾಜಾಶ್ರಮಾದ್ಬಾಲೇ ನೂನಮಾಗಮನಂ ಮಮ ।**
**ಜಾತಂ ವೈ ಕಾರ್ಯಯೋಗೇನ ಕಿಂ ಪೃಚ್ಛಸಿ ವದಸ್ವ ಮೇ ॥೫೭॥**

ಆ ಬ್ರಾಹ್ಮಣನು ಹೇಳಿದನು—ಎಲೌ ಬಾಲಿಕೆಯೇ, ನಾನು ಯಾವುದೋ ಒಂದು ಕೆಲಸದ ನಿಮಿತ್ತವಾಗಿ, ಭಾರದ್ವಾಜಮುನಿಗಳ ಆಶ್ರಮದಿಂದ ಬರುತ್ತಲಿದ್ದೇನೆ. ನೀನು ಏತಕ್ಕೋಸ್ಕರ ನನ್ನನ್ನು ಕೇಳುತ್ತೀಯೆ, ಹೇಳು.

॥ ಶಶಿಕಲೋವಾಚ ॥

**ತತ್ರಾಶ್ರಮೇ ಮಹಾಭಾಗ ವರ್ಣನೀಯಂ ಕಿಮಸ್ತಿ ವೈ ।**
**ಲೋಕಾತಿಗಂ ವಿಶೇಷೇಣ ಪ್ರೇಕ್ಷಣೀಯತಮಂ ಕಿಲ ॥೫೮॥**

ಶಶಿಕಲೆಯು ಹೇಳಿದಳು—ಎಲೈ ಭಾಗ್ಯಶಾಲಿಯೇ, ಆ ಆಶ್ರಮದಲ್ಲಿ ವರ್ಣಿಸಲು ಯೋಗ್ಯವಾದ ಯಾವ ವಸ್ತುವು ಇರುತ್ತದೆ? ಮತ್ತು ಲೋಕೋತ್ಕೃಷ್ಟವಾಗಿಯೂ, ನೋಡುವುದಕ್ಕೆ ತುಂಬ ಯೋಗ್ಯವಾಗಿಯೂ ಯಾವ ವಸ್ತುವಿರುತ್ತದೆ?

॥ ಬ್ರಾಹ್ಮಣ ಉವಾಚ ॥

**ಧ್ರುವಸಂಧಿಸುತಃ ಶ್ರೀಮಾನಾಸ್ತೇ ಸುದರ್ಶನೋ ನೃಪಃ ।**
**ಯಥಾರ್ಥನಾಮಾ ಸುಶ್ರೋಣಿ ವರ್ತತೇ ಪುರುಷೋತ್ತಮಃ ॥೫೯॥**

ಬ್ರಾಹ್ಮಣನು ಹೇಳಿದನು— ಅಲ್ಲಿ ಧ್ರುವಸಂಧಿರಾಜನ ಮಗನಾದ ಮತ್ತು ತುಂಬ ತೇಜಸ್ವಿಯಾದ ಸುದರ್ಶನನೆಂಬ ರಾಜಕುಮಾರನಿರುವನು. ಎಲೌ ಸುಂದರವಾದ ಕಟಪ್ರದೇಶವುಳ್ಳ ಶಶಿಕಲೆಯೇ, ಆ ಪುರುಷಶ್ರೇಷ್ಠನು ತನ್ನ ಹೆಸರಿಗೆ ತಕ್ಕಂತೆ ಸುದರ್ಶನ ಎಂದರೆ ನೋಡುವುದಕ್ಕೆ ಸುಂದರನಾಗಿ ಇರುತ್ತಾನೆ.

**ತಸ್ಯ ಲೋಚನಮತ್ಯಂತಂ ನಿಷ್ಫಲಂ ಪ್ರತಿಭಾತಿ ಮೇ ।**
**ಯೇನ ದೃಷ್ಟೋ ನ ವಾಮೋರು ಕುಮಾರಸ್ತು ಸುದರ್ಶನಃ ॥೬೦॥**

ಓ ಸುಂದರವಾದ ಊರುಪ್ರದೇಶವುಳ್ಳವಳೇ, ಯಾವನು ಸುದರ್ಶನಕುಮಾರನನ್ನು ನೋಡಲಿಲ್ಲವೋ ಅವನ ಕಣ್ಣುಗಳು ಖಂಡಿತವಾಗಿಯೂ ಪ್ರಯೋಜನವಿಲ್ಲದವುಗಳೆಂದು ನನಗೆ ತೋರುತ್ತದೆ.

**ಏಕತ್ರ ನಿಹಿತಾ ಧಾತ್ರಾ ಗುಣಾಃ ಸರ್ವೇ ಸಿಸೃಕ್ಷುಣಾ ।**
**ಗುಣಾನಾಮಾಕರಂ ದ್ರಷ್ಟುಂ ಮನ್ಯೇ ತೇನೈವ ಕೌತುಕಾತ್ ॥೬೧॥**

ಎಲ್ಲಾ ಸುಗುಣಗಳ ಸಮುದಾಯವನ್ನು ಒಂದೆಡೆಯಲ್ಲಿ ಸೃಷ್ಟಿಸಿ ನೋಡಬೇಕೆಂಬ ಅಪೇಕ್ಷೆಯಿಂದ ಆ ಬ್ರಹ್ಮನೇ ಈ ಸುದರ್ಶನನಲ್ಲಿ ಗುಣಗಳೆಲ್ಲವನ್ನೂ ಕುತೂಹಲದಿಂದ ಇಟ್ಟಿರುವನೋ ಎಂದು ನಾನು ತಿಳಿಯುತ್ತೇನೆ.

**ತವ ಯೋಗ್ಯಃ ಕುಮಾರೋಽಸೌ ಭರ್ತಾ ಭವಿತುಮರ್ಹತಿ ।**
**ಯೋಗೋಽಯಂ ವಿಹಿತೋಽಸ್ಯಾಸೀನ್ಮಣಿಕಾಂಚನಯೋರಿವ ॥೬೨॥**

ಆ ಸುದರ್ಶನಕುಮಾರನು ನಿನಗೆ ಅನುರೂಪನಾದ ಪತಿಯಾಗಲು ಯೋಗ್ಯನಾಗಿರುತ್ತಾನೆ. ನಿಮ್ಮಿಬ್ಬರಿಗೂ ಸಂಬಂಧವಾದರೆ ರತ್ನಸುವರ್ಣಗಳನ್ನು ಸೇರಿಸಿದಂತೆ ಆಗುತ್ತದೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಸಪ್ತದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

॥ ಅಷ್ಟಾದಶೋಽಧ್ಯಾಯಃ ॥

### ಹದಿನೆಂಟನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಶ್ರುತ್ವಾ ತದ್ವಚನಂ ಶ್ಯಾಮಾ ಪ್ರೇಮಯುಕ್ತಾ ಬಭೂವ ಹ ।**
**ಪ್ರತಸ್ಥೇ ಬ್ರಾಹ್ಮಣಸ್ತಸ್ಮಾತ್ ಸ್ಥಾನಾದುಕ್ತ್ವಾ ಸಮಾಹಿತಃ ॥೧॥**

ವ್ಯಾಸಮುನಿಯು ಹೇಳಿದನು—ಆ ಬ್ರಾಹ್ಮಣನ ಮಾತುಗಳನ್ನು ಕೇಳಿ ತುಂಬಿದ ಯೌವನವುಳ್ಳ ಶಶಿಕಲೆಯು ಸುದರ್ಶನಕುಮಾರನಲ್ಲಿ ಹೆಚ್ಚಿನ ಪ್ರೇಮವುಳ್ಳವಳಾದಳು. ಆ ಬ್ರಾಹ್ಮಣನು ಇಷ್ಟು ಹೇಳಿ ಸಮಾಧಾನದಿಂದ ಆ ಸ್ಥಳವನ್ನು ಬಿಟ್ಟು ತೆರಳಿದನು.

**ಸಾ ತು ಪೂರ್ವಾನುರಾಗಾದ್ವೈ ಮಗ್ನಾ ಪ್ರೇಮ್ಣಾತಿಚಂಚಲಾ ।**
**ಕಾಮಬಾಣಹತೇವಾಸ ಗತೇ ತಸ್ಮಿನ್ ದ್ವಿಜೋತ್ತಮೇ ॥೨॥**

ಆ ಬ್ರಾಹ್ಮಣೋತ್ತಮನು ಹೊರಟುಹೋದಮೇಲೆ, ಅವಳು ಹಿಂದಿನ ಅನುರಾಗದಿಂದಲೂ ಈಗ ತಿರುಗಿ ಹೆಚ್ಚಿದ ಪ್ರೇಮದಿಂದಲೂ ಕೂಡಿ, ಹೆಚ್ಚಾಗಿ ಚಂಚಲವಾದ ಮನಸ್ಸುಳ್ಳವಳಾಗಿ ಮನ್ಮಥನ ಬಾಣಗಳಿಂದ ಹೊಡೆಯಲ್ಪಟ್ಟವಳಂತೆ ಆದಳು.

**ಅಥ ಕಾಮಾರ್ದಿತಾ ಪ್ರಾಹ ಸಖೀಂ ಛಂದೋಽನುವರ್ತಿನೀಂ ।**
**ವಿಕಾರಶ್ಚ ಸಮುತ್ಪನ್ನೋ ದೇಹೇ ಯಚ್ಛ್ರವಣಾದನು ॥೩॥**

ಹೀಗೆ ಆ ಶಶಿಕಲೆಯು ಮನ್ಮಥನಿಂದ ಪೀಡಿಸಲ್ಪಟ್ಟವಳಾಗಿ ತನಗನುಕೂಲಳಾಗಿರುವ ಓರ್ವ ಸಖಿಯೊಂದಿಗೆ ಹೀಗೆ ಹೇಳಿದಳು—ಓ ಸಖಿಯೇ ಸುದರ್ಶನ

ಕುಮಾರನ ರೂಪಗುಣಗಳನ್ನು ಕೇಳುವುದರಿಂದ ಈಚೆಗೆ ನನ್ನ ಮನಸ್ಸಿನಲ್ಲಿ ಚಾಂಚಲ್ಯವುಂಟಾಗಿದೆ.

**ಅಜ್ಞಾತರಸವಿಜ್ಞಾನಂ ಕುಮಾರಂ ಕುಲಸಂಭವಂ ।**
**ದುನೋತಿ ಮದನಃ ಪಾಪಃ ಕಿಂ ಕರೋಮಿ ಕ್ವ ಯಾಮಿ ಚ ॥೪॥**

ಅವನು ಸತ್ಕುಲಪ್ರಸೂತನು. ಇನ್ನೂ ಶೃಂಗಾರರಸದ ತಿಳಿವಳಿಕೆಯಿಲ್ಲದವನು, ಕುಮಾರನು, ಈಗತಾನೆ ಉದಯವಾಗುತ್ತಿರುವ ಯೌವನವುಳ್ಳವನು. ಆದರೂ ನನ್ನ ಮನಸ್ಸಿನ ಭಾವವನ್ನು ಅವನು ಹೇಗೆ ತಿಳಿಯುವನು? ಪಾಪಿಯಾದ ಮನ್ಮಥನು ನನ್ನನ್ನು ಸಂಕಟಪಡಿಸುತ್ತಿದ್ದಾನೆ. ಆದುದರಿಂದ ಈಗೇನು ಮಾಡಲಿ? ಎಲ್ಲಿಗೆ ಹೋಗಲಿ?

**ಸ್ವಪ್ನೇಷು ವಾ ಮಯಾ ದೃಷ್ಟಃ ಪಂಚಬಾಣ ಇವಾಪರಃ ।**
**ತಪತೇ ಮೇ ಮನೋಽತ್ಯರ್ಥಂ ವಿರಹಾಕುಲಿತಂ ಮೃದು ॥೫॥**

ಓ ಸಖಿಯೇ, ಎರಡನೆಯ ಮನ್ಮಥನೋ ಎಂಬಂತೆ ಇರುವ ಸುಂದರನಾದ ಆ ಕುಮಾರನನ್ನು ನಾನು ಸ್ವಪ್ನಗಳಲ್ಲಿ ಅನೇಕಬಾರಿ ನೋಡಿರುವೆನು. ಕೋಮಲವಾದ ನನ್ನ ಮನಸ್ಸು ಆ ಸುದರ್ಶನನ ವಿಯೋಗದಿಂದ ತುಂಬ ವ್ಯಥೆಯನ್ನು ಅನುಭವಿಸುತ್ತಲಿದೆ.

**ಚಂದನಂ ದೇಹಲಗ್ನಂ ಮೇ ವಿಷವದ್ಭಾತಿ ಭಾಮಿನಿ ।**
**ಸ್ರಗಿಯಂ ಸರ್ಪವಚ್ಚೈವ ಚಂದ್ರಪಾದಾಶ್ಚ ವಹ್ನಿವತ್ ॥೬॥**

ಶರೀರಕ್ಕೆ ಲೇಪಿಸಿದ ಶೀತಲವಾದ ಈ ಚಂದನವು ವಿಷದಂತೆ ತೋರುತ್ತದೆ. ಓ ಸುಂದರಿಯೇ, ಈ ಕಂಠಕ್ಕೆ ಹಾಕಿರುವ ಪುಷ್ಪಮಾಲೆಯೂ ಸಹ ಹಾವಿನಂತೆ ಸಂತಾಪವನ್ನು ಕೊಡುತ್ತಲಿದೆ. ಚಂದ್ರನ ಕಿರಣಗಳು ಬೆಂಕಿಯಂತೆ ನನ್ನನ್ನು ಸುಡುತ್ತಲಿವೆ.

**ನ ಚ ಹರ್ಮ್ಯೇ ವನೇ ಶಂ ಮೇ ದೀರ್ಘಿಕಾಯಾಂ ನ ಪರ್ವತೇ ।**
**ನ ದಿವಾ ನ ನಿಶಾಯಾಂ ವಾ ನ ಸುಖಂ ಸುಖಸಾಧನೈಃ ॥೭॥**

ಓ ಗೆಳತಿಯೇ, ನನಗೆ ಮನೋಹರವಾದ ಮಹಡಿಮನೆಯಲ್ಲಾಗಲೀ, ಸರೋವರದಲ್ಲಾಗಲೀ, ಕ್ರೀಡಾಪರ್ವತದಲ್ಲಾಗಲೀ ಈಗ ಸುಖವಾಗುತ್ತಿಲ್ಲವು.

ಮತ್ತು ಹಗಲೂ ರಾತ್ರಿಯೂ ಸುಖವನ್ನುಂಟುಮಾಡುವ ಚಂದನ, ಮಲಯ ಮಾರುತ ಮುಂತಾದವುಗಳಿಂದಲೂ ಸಹ ಸುಖವಾಗುತ್ತಿಲ್ಲವು.

**ನ ಶಯ್ಯಾ ನ ಚ ತಾಂಬೂಲಂ ನ ಗೀತಂ ನ ಚ ವಾದನಂ ।**
**ಪ್ರೀಣಯಂತಿ ಮನೋ ಮೇಽದ್ಯ ನ ತೃಪ್ತೇ ಮಮ ಲೋಚನೇ ॥೮॥**

ಒಳ್ಳೆಯ ಹಾಸಿಗೆಯಾಗಲೀ, ತಾಂಬೂಲವಾಗಲೀ, ಸಂಗೀತದ ಮಧುರಧ್ವನಿಯಾಗಲೀ, ವೀಣೆಮೊದಲಾದುವನ್ನು ನುಡಿಸುವುದಾಗಲಿ, ಇವುಗಳಾವವೂ ಈಗ ನನ್ನ ಮನಸ್ಸನ್ನು ಸಂತೋಷಗೊಳಿಸಲಾರವು. ನನ್ನ ಕಣ್ಣಿಗೆ ಏನನ್ನು ನೋಡಿದರೂ ತೃಪ್ತಿಯಿಲ್ಲವು.

**ಪ್ರಯಾಮ್ಯದ್ಯ ವನೇ ತತ್ರ ಯತ್ರಾಸೌ ವರ್ತತೇ ಶಠಃ ।**
**ಭೀತಾಸ್ಮಿ ಕುಲಲಜ್ಜಾಯಾಃ ಪರತಂತ್ರಾ ಪಿತುಸ್ತಥಾ ॥೯॥**

ಶಠ ಎಂದರೆ ತಿಳಿಯದಂತೆ ಒಳಗೇ ಸಂತಾಪವನ್ನುಂಟುಮಾಡುವ ಆ ಸುದರ್ಶನನು ಎಲ್ಲಿರುವನೋ, ಆ ವನಸಮೀಪಕ್ಕೆ ಹೋಗಬೇಕೆನ್ನಿಸುತ್ತದೆ. ಆದರೆ ಕುಲಸ್ತ್ರೀಯರಿಗೆ ಸಹಜವಾದ ನಾಚಿಕೆಯಿಂದ ಹೆದರಿಕೊಳ್ಳುತ್ತೇನೆ. ಅಲ್ಲದೆ, ನಾನು ನನ್ನ ತಂದೆಯ ಅಧೀನಳು.

**ಸ್ವಯಂವರಂ ಪಿತಾ ಮೇಽದ್ಯ ನ ಕರೋತಿ ಕರೋಮಿ ಕಿಂ ।**
**ದಾಸ್ಯಾಮಿ ರಾಜಪುತ್ರಾಯ ಕಾಮಂ ಸುದರ್ಶನಾಯ ವೈ ॥೧೦॥**

ನನ್ನ ತಂದೆಯು ಈಗ ಸ್ವಯಂವರವನ್ನೂ ಸಹ ಮಾಡದೇ ಇದ್ದಾನೆ. ಏನನ್ನು ಮಾಡಲಿ? ನಾನು ನನ್ನನ್ನು ದೊರೆಯ ಮಗನಾದ ಸುದರ್ಶನನಿಗೆ ಮನಃಪೂರ್ವಕವಾಗಿ ಒಪ್ಪಿಸುವೆನು.

**ಸಂತ್ಯನ್ಯೇ ಪೃಥಿವೀಪಾಲಾಃ ಶತಶಃ ಸಂಭೃತರ್ದ್ಧಯಃ ।**
**ರಮಣೀಯಾ ನ ಮೇ ತೇಽದ್ಯ ರಾಜ್ಯಹೀನೋಽಪ್ಯಸೌ ಮತಃ ॥೧೧॥**

ತುಂಬ ಐಶ್ವರ್ಯವುಳ್ಳ ಬೇರೆ ರಾಜರು ನೂರಾರು ಜನರು ಇರುವರು. ಆದರೆ, ಅವರು ಈಗ ನನಗೆ ಸಂತೋಷವನ್ನುಂಟುಮಾಡುವವರಾಗಿ ಕಾಣುವುದಿಲ್ಲವು.

ಅವರಲ್ಲಿ ನನಗೆ ಪ್ರೇಮವಿಲ್ಲವು. ಸುದರ್ಶನನು ರಾಜ್ಯವಿಲ್ಲದವನಾದರೂ ನನಗೆ ಒಪ್ಪಿಬಂದವನಾಗಿದ್ದಾನೆ.

|| ವ್ಯಾಸ ಉವಾಚ ||

**ಏಕಾಕೀ ನಿರ್ಧನಶ್ಚೈವ ಬಲಹೀನಃ ಸುದರ್ಶನಃ ।**
**ವನವಾಸೀ ಫಲಾಹಾರಸ್ತಸ್ಯಾಶ್ಚಿತ್ತೇ ಸುಸಂಸ್ಥಿತಃ ॥೧೨॥**

ವ್ಯಾಸಮುನಿಯು ಹೇಳಿದನು—ಸುದರ್ಶನಕುಮಾರನು ಅಸಾಹಯನಾದ ಒಬ್ಬಂಟಿಗನು, ಹಣವಿಲ್ಲದವನು, ಬಲವಿಲ್ಲದವನು, ಕಾಡಿನಲ್ಲಿ ವಾಸಿಸುತ್ತಾ ಹಣ್ಣುಗಳನ್ನು ತಿಂದು ಜೀವಿಸುವವನು. ಹೀಗಿದ್ದರೂ ಆ ಶಶಿಕಲೆಯ ಮನಸ್ಸಿನಲ್ಲಿ ಆತನು ದೃಢವಾಗಿ ನಿಂತನು.

**ವಾಗ್ಬೀಜಸ್ಯ ಜಪಾತ್ಸಿದ್ಧಿಸ್ತಸ್ಯಾ ಏಷಾಽಪ್ಯುಪಸ್ಥಿತಾ ।**
**ಸೋಽಪಿ ಧ್ಯಾನಪರೋಽತ್ಯಂತಂ ಜಜಾಪ ಮಂತ್ರಮುತ್ತಮಂ ॥೧೩॥**

ಆ ಸುದರ್ಶನನು ಜಪಿಸಿದ ದೇವಿಯ ಕ್ಲೀಂ ಎಂಬ ವಾಗ್ಬೀಜದ ಸಿದ್ಧಿಯಿಂದಲೇ ಶಶಿಕಲೆಯು ತಾನಾಗಿ ಅವನನ್ನು ಪ್ರೀತಿಸಿದಳು. ಆ ಸುದರ್ಶನನು ಆ ಉತ್ತಮವಾದ ಮಂತ್ರವನ್ನು ತುಂಬ ಆದರದಿಂದ ಜಪಿಸುವುದರಲ್ಲಿ ಆಸಕ್ತಿಯುಳ್ಳವನಾಗಿದ್ದನು.

**ಸ್ವಪ್ನೇ ಪಶ್ಯತ್ಯಸೌ ದೇವೀಂ ವಿಷ್ಣುಮಾಯಾಮಖಂಡಿತಾಂ ।**
**ವಿಶ್ವಮಾತರಮವ್ಯಕ್ತಾಂ ಸರ್ವಸಂಪತ್ಕರಾಂಬಿಕಾಂ ॥೧೪॥**

ಆ ಜಪದ ಮಹಿಮೆಯಿಂದ ಆತನು ಸ್ವಪ್ನದಲ್ಲಿ, ವ್ಯಾಪಕವಾದ ವಿಷ್ಣುಮಾಯಾಸ್ವರೂಪಳಾದ, ದೋಷರಹಿತಳಾದ, ಕಣ್ಣು ಮೊದಲಾದ ಇಂದ್ರಿಯಗಳಿಂದ ನೋಡಲಶಕ್ಯಳಾದ ಎಲ್ಲ ಬಗೆಯ ಸಂಪತ್ತುಗಳನ್ನೂ ಅನುಗ್ರಹಿಸುವವಳಾದ, ಮತ್ತು ಜಗತ್ತಿಗೆ ತಾಯಿಯಾದ ಆ ದೇವಿಯನ್ನು ನೋಡುತ್ತಿದ್ದನು.

**ಶೃಂಗವೇರಪುರಾಧ್ಯಕ್ಷೋ ನಿಷಾದಃ ಸಮುಪೇತ್ಯ ತಂ ।**
**ದದೌ ರಥವರಂ ತಸ್ಮೈ ಸರ್ವೋಪಸ್ಕರಸಂಯುತಂ ॥೧೫॥**

ಶೃಂಗವೇರಪಟ್ಟಣಕ್ಕೆ ಒಡೆಯನಾದ ಬೇಡನು ಬಂದು ಆ ಸುದರ್ಶನನಿಗೆ ಕುದುರೆ ಮೊದಲಾದ ಎಲ್ಲ ಪರಿಕರಗಳಿಂದ ಕೂಡಿದ ಉತ್ತಮವಾದ ರಥವೊಂದನ್ನು ಕೊಟ್ಟನು.

**ಚತುರ್ಭಿಸ್ತುರಗೈರ್ಯುಕ್ತಂ ಪತಾಕಾವರಮಂಡಿತಂ ।**
**ಜೈತ್ರಂ ರಾಜಸುತಂ ಜ್ಞಾತ್ವಾ ದದೌ ಚೋಪಾಯನಂ ತದಾ ॥೧೬॥**

ಆ ಬೇಡನು, ಸುದರ್ಶನಕುಮಾರನು ಜಯಶಾಲಿಯಾಗುವವನಾದ ರಾಜ ಕುಮಾರನೆಂದು ತಿಳಿದು ನಾಲ್ಕು ಕುದುರೆಗಳನ್ನು ಕಟ್ಟಿರುವ ಮತ್ತು ಶ್ರೇಷ್ಠವಾದ ಧ್ವಜಗಳಿಂದ ಶೋಭಿಸುತ್ತಿರುವ ಆ ರಥವನ್ನು ರಾಜನಿಗೆ ಕಾಣಿಕೆಯಂತೆ ಕೊಟ್ಟನು.

**ಸೋಽಪಿ ಜಗ್ರಾಹ ತಂ ಪ್ರೀತ್ಯಾ ಮಿತ್ರತ್ವೇನ ಸುಸಂಸ್ಥಿತಂ ।**
**ವನ್ಯೈರ್ಮೂಲಫಲೈಃ ಸಮ್ಯಗರ್ಚಯಾಮಾಸ ಶಂಬರಂ ॥೧೭॥**

ಆ ಸುದರ್ಶನನೂ ಕೂಡ ಆ ರಥವನ್ನು ಸಂತೋಷದಿಂದ ಸ್ವೀಕರಿಸಿ, ಸ್ನೇಹ ದಿಂದ ಕೂಡಿದ ಆ ಬೇಡರ ರಾಜನನ್ನು ಕಾಡಿನಲ್ಲಿ ದೊರೆಯುವ ಗೆಡ್ಡೆಗೆಣಸು, ಹಣ್ಣು ಮುಂತಾದ ಪರಿಕರಗಳಿಂದ ಚನ್ನಾಗಿ ಅತಿಥಿಸತ್ಕಾರದಿಂದ ಗೌರವಿಸಿ ಸಂತೋಷ ಗೊಳಿಸಿದನು.

**ಕೃತಾತಿಥ್ಯೇ ಗತೇ ತಸ್ಮಿನ್ನಿಷಾದಾಧಿಪತೌ ತದಾ ।**
**ಮುನಯಃ ಪ್ರೀತಿಯುಕ್ತಾಸ್ತೇ ತಮೂಚುಸ್ತಾಪಸಾ ಮಿಥಃ ॥೧೮॥**

ಸುದರ್ಶನನ ಅತಿಥಿಸತ್ಕಾರವನ್ನು ಸ್ವೀಕರಿಸಿ ಆ ಬೇಡರ ರಾಜನು ಹೊರಟು ಹೋಗಲು, ಅಲ್ಲಿ ಋಷಿಗಳು ತುಂಬ ಪ್ರೀತಿಯಿಂದ ಕೂಡಿದವರಾಗಿ ಆ ಸುದರ್ಶನ ನನ್ನು ಕುರಿತು ಪರಸ್ಪರವಾಗಿ ಮಾತನಾಡಿಕೊಂಡರು ಮತ್ತು ಅವನಲ್ಲಿಗೆ ಬಂದು ಹೇಳಿದರು.

**ರಾಜಪುತ್ರ ಧ್ರುವಂ ರಾಜ್ಯಂ ಪ್ರಾಪ್ಸ್ಯಸಿ ತ್ವಂ ಚ ಸರ್ವಥಾ ।**
**ಸ್ವಲ್ಪೈರಹೋಭಿರವ್ಯಗ್ರಃ ಪ್ರತಾಪಾನ್ನಾತ್ರ ಸಂಶಯಃ ॥೧೯॥**

ಓ ರಾಜಪುತ್ರನಾದ ಸುದರ್ಶನನೇ, ನೀನು ಇನ್ನು ಸ್ವಲ್ಪದಿನಗಳಲ್ಲಿಯೇ ನಿನ್ನ ಪರಾಕ್ರಮದಿಂದಲೂ, ಒಮ್ಮುಖವಾದ ಪ್ರಯತ್ನದಿಂದಲೂ, ಖಂಡಿತವಾಗಿಯೂ ರಾಜ್ಯವನ್ನು ಪಡೆಯುತ್ತೀಯೆ. ಇದರಲ್ಲಿ ಸಂಶಯವಿಲ್ಲವು.

**ಪ್ರಸನ್ನಾ ತೇಽಮ್ಬಿಕಾ ದೇವೀ ವರದಾ ವಿಶ್ವಮೋಹಿನೀ ।**
**ಸಹಾಯಸ್ತು ಸುಸಂಪನ್ನೋ ನ ಚಿಂತಾಂ ಕುರು ಸುವ್ರತ ॥೨೦॥**

ಒಳ್ಳೆಯ ಆಚರಣೆಯುಳ್ಳ, ಸುದರ್ಶನನೇ, ಎಲ್ಲ ಇಷ್ಟಾರ್ಥವನ್ನೂ ಕೊಡುವ, ಜಗತ್ತನ್ನೇ ಮೋಹಗೊಳಿಸತಕ್ಕ ಮತ್ತು ಜಗನ್ಮಾತೆಯಾದ ದೇವಿಯು ನಿನಗೆ ಪ್ರಸನ್ನಳಾಗಿರುತ್ತಾಳೆ. ಈ ಬೇಡರಾಜನ ಸಹಾಯವೂ ನಿನಗೆ ಬಂದೊದಗಿರುತ್ತದೆ. ಇನ್ನು ನೀನು ಆತಂಕದ ಆಲೋಚನೆಯನ್ನು ಮಾಡಬೇಡ.

**ಮನೋರಮಾಂ ತಥೋಚುಸ್ತೇ ಮುನಯಃ ಸಂಶಿತವ್ರತಾಃ ।**
**ಪುತ್ರಸ್ತೇಽದ್ಯ ಧರಾಧೀಶೋ ಭವಿಷ್ಯತಿ ಶುಚಿಸ್ಮಿತೇ ॥೨೧॥**

ತುಂಬ ತಪಸ್ಸುಗಳನ್ನು ಆಚರಿಸತಕ್ಕ ಆ ಮುನಿಗಳು ಅವನ ತಾಯಿಯಾದ ಮನೋರಮೆಯನ್ನು ಕುರಿತು ಹೀಗೆ ಹೇಳಿದರು. ಓ ಶುಭ್ರವಾದ ಮಂದಹಾಸವುಳ್ಳ ಮನೋರಮೆಯೇ, ನಿನ್ನ ಪುತ್ರನು ಈಗ ಭೂಮಿಗೆ ಒಡೆಯನಾದ ರಾಜನು ಆಗುವನು.

**ಸಾ ತಾನುವಾಚ ತನ್ವಂಗೀ ವಚನಂ ವೋಽಸ್ತು ಸತ್ಫಲಂ ।**
**ದಾಸೋಽಯಂ ಭವತಾಂ ವಿಪ್ರಾಃ ಕಿಂ ಚಿತ್ರಂ ಸದುಪಾಸನಾತ್ ॥೨೨॥**

ಸೂಕ್ಷ್ಮವಾದ ಅವಯವವುಳ್ಳ ಆ ಮನೋರಮೆಯು ಆ ಮುನಿಗಳನ್ನು ಕುರಿತು ಹೀಗೆ ಹೇಳಿದಳು. ಓ ಬ್ರಾಹ್ಮಣೋತ್ತಮರೇ, ನಿಮ್ಮ ವಚನವು ನಿಜವಾದ ಫಲವುಳ್ಳದ್ದಾಗಲಿ. ಈ ನನ್ನ ಕುಮಾರನು ನಿಮ್ಮೆಲ್ಲರ ಸೇವಕನು. ನಿಮ್ಮಂತಹ ಸತ್ಪುರುಷರ ಸೇವೆಯಿಂದ ಯಾವುದು ತಾನೇ ಆಗಲಾರದು? ಇದರಲ್ಲಿ ಆಶ್ಚರ್ಯವೇನು?

**ನ ಸೈನ್ಯಂ ಸಚಿವಾಃ ಕೋಶೋ ನ ಸಹಾಯಶ್ಚ ಕಶ್ಚನ ।**
**ಕೇನ ಯೋಗೇನ ಪುತ್ರೋ ಮೇ ರಾಜ್ಯಂ ಪ್ರಾಪ್ತುಮಿಹಾರ್ಹತಿ ॥೨೩॥**

ಆದರೆ ಸೈನ್ಯವಿಲ್ಲವು, ಮಂತ್ರಿಗಳಿಲ್ಲವು, ತುಂಬಿದ ಹಣವುಳ್ಳ ಬೊಕ್ಕಸವಿಲ್ಲವು, ಮತ್ತಿನ್ನಾವವಿಧವಾದ ಸಹಾಯವೂ ಇಲ್ಲವು. ಹೀಗಿರಲು ನನ್ನ ಮಗನು ಅದಾವ ಉಪಾಯದಿಂದ ರಾಜ್ಯವನ್ನು ಪಡೆಯಲು ಯೋಗ್ಯನಾಗುತ್ತಾನೆ?

**ಆಶೀರ್ವಾದೈಶ್ಚ ವೋ ನೂನಂ ಪುತ್ರೋऽಯಂ ಮೇ ಮಹೀಪತಿಃ ।**
**ಭವಿಷ್ಯತಿ ನ ಸಂದೇಹೋ ಭವಂತೋ ಮಂತ್ರವಿತ್ತಮಾಃ ॥೨೪॥**

ಆದುದರಿಂದ ನಿಮ್ಮೆಲ್ಲರ ಆಶೀರ್ವಾದದಿಂದಲೇ ನನ್ನ ಮಗನು ರಾಜನಾಗುವನು. ಇದರಲ್ಲಿ ಸಂಶಯವಿಲ್ಲವು. ನೀವೆಲ್ಲರೂ ಒಳ್ಳೆಯ ಮಂತ್ರಗಳನ್ನು ಬಲ್ಲವರಲ್ಲಿ ಶ್ರೇಷ್ಠರಾದ ಮಹಾಮಹಿಮರಾಗಿರುವಿರಿ.

**ರಥಾರೂಢಃ ಸ ಮೇಧಾವೀ ಯತ್ರ ಯಾತಿ ಸುದರ್ಶನಃ ।**
**ಅಕ್ಷೌಹಿಣೀಸಮಾವೃತ ಇವಾऽऽಭಾತಿ ಸ ತೇಜಸಾ ॥೨೫॥**

ಆ ಬುದ್ಧಿಶಾಲಿಯಾದ ಸುದರ್ಶನನು ಆ ರಥವನ್ನು ಏರಿ ಯಾವಯಾವ ಕಡೆಗೆ ಹೋದರೂ, ಅವನು ಒಬ್ಬನೇ ಆದರೂ, ಪರಾಕ್ರಮದಿಂದ ಅಕ್ಷೌಹಿಣೀಸೈನ್ಯಗಳಿಂದ ಕೂಡಿದವನಂತೆ ತೋರುತ್ತಿದ್ದನು.

**ಪ್ರತಾಪೋ ಮಂತ್ರಬೀಜಸ್ಯ ನಾನ್ಯಃ ಕಶ್ಚನ ಭೂಪತೇ ।**
**ಏವಂ ವೈ ಜಪತಸ್ತಸ್ಯ ಪ್ರೀತಿಯುಕ್ತಸ್ಯ ಸರ್ವಥಾ ॥೨೬॥**

ಓ ಜನಮೇಜಯನೇ, ಹೀಗೆ ಅಕ್ಷೌಹಿಣೀಸೈನ್ಯಗಳಿಂದ ಕೂಡಿರುವಂತೆ ಕಾಣಿಸುವುದು ಆ ದೇವಿಯ ಬೀಜಮಂತ್ರಜಪದ ಮಾಹಾತ್ಮ್ಯೆಯಲ್ಲದೆ ಇನ್ನೇನೂ ಅಲ್ಲವು. ಆ ಸುದರ್ಶನನು ಆ ಮಂತ್ರವನ್ನು ಅಷ್ಟು ಆದರದಿಂದ ಜಪಿಸುತ್ತಿರುವುದರ ಫಲವೇ ಅದಾಗಿರುವುದು. ಇದರಲ್ಲಿ ಸಂಶಯವಿಲ್ಲವು.

**ಸಂಪ್ರಾಪ್ಯ ಸದ್ಗುರೋರ್ಬೀಜಂ ಕಾಮರಾಜಾಖ್ಯಮದ್ಭುತಂ ।**
**ಜಪೇದ್ಯಸ್ತು ಶುಚಿಃ ಶಾಂತಃ ಸರ್ವಾನ್ ಕಾಮಾನವಾಪ್ನುಯಾತ್ ॥೨೭॥**

ಹೀಗೆ ಒಳ್ಳೆಯ ಗುರುವಿನಿಂದ ಆಶ್ಚರ್ಯಕರವಾದ ಕಾಮರಾಜವೆಂಬ ಆ ಮಂತ್ರವನ್ನು ಉಪದೇಶಿಸಿಕೊಂಡು ಯಾವನಾದರೂ ನಿರ್ಮಲನಾಗಿಯೂ ಮನಸ್ಸಮಾಧಾನದಿಂದಲೂ ಜಪಿಸಿದರೆ, ಎಲ್ಲ ಇಷ್ಟಾರ್ಥಗಳನ್ನೂ ಅವನು ಪಡೆಯುವನು.

**ನ ತದಸ್ತಿ ಪೃಥಿವ್ಯಾಂ ವಾ ದಿವಿ ವಾಪಿ ಸುದುರ್ಲಭಂ ।**
**ಪ್ರಸನ್ನಾಯಾಃ ಶಿವಾಯಾಶ್ಚ ಯದಪ್ರಾಪ್ಯಂ ನೃಪೋತ್ತಮ ॥೨೮॥**

ಓ ರಾಜಶ್ರೇಷ್ಠನಾದ ಜನಮೇಜಯನೇ, ಆ ಮಂತ್ರಜಪದಿಂದ ಮಂಗಳ ಸ್ವರೂಪಳಾದ ಆ ದೇವಿಯು ಸಂತುಷ್ಟಳಾಗಿರಲು, ಅವಳ ಅನುಗ್ರಹದಿಂದ ಭೂಮಿಯಲ್ಲಾಗಲೀ ಸ್ವರ್ಗದಲ್ಲಿಯಾಗಲೀ ಪಡೆಯಲಾರದಂತಹ ವಸ್ತುವು ಒಂದೂ ಉಳಿಯಲಾರದು.

**ತೇ ಮಂದಾಸ್ತೇಽತಿದುರ್ಭಾಗ್ಯಾ ರೋಗೈಸ್ತೇ ಸಮಭಿದ್ರುತಾಃ ।**
**ಯೇಷಾಂ ಚಿತ್ತೇ ನ ವಿಶ್ವಾಸೋ ಭವೇದಂಬಾರ್ಚನಾದಿಷು ॥೨೯॥**

ಯಾರ ಮನಸ್ಸಿನಲ್ಲಿ ಆ ದೇವಿಯ ಪೂಜೆ, ಮಂತ್ರದ ಜಪ ಮುಂತಾದವುಗಳಲ್ಲಿ ನಂಬಿಕೆಯುಂಟಾಗುವುದಿಲ್ಲವೋ, ಅಂತಹವರು ಏನೂ ತಿಳಿವಳಿಕೆಯಿಲ್ಲದವರು. ತುಂಬ ಅದೃಷ್ಟಹೀನರು, ಅಥವಾ ಯಾವುದಾದರೂ ಒಂದು ಬಲವಾದ ಮಹಾ ರೋಗದಿಂದ ವ್ಯಾಪಿಸಲ್ಪಟ್ಟವರೂ ಆಗಿರುತ್ತಾರೆನ್ನಬೇಕು.

**ಯಾ ಮಾತಾ ಸರ್ವದೇವಾನಾಂ ಯುಗಾದೌ ಪರಿಕೀರ್ತಿತಾ ।**
**ಆದಿಮಾತೇತಿ ವಿಖ್ಯಾತಾ ನಾಮ್ನಾ ತೇನ ಕುರೂದ್ವಹ ॥೩೦॥**

ಯಾವ ಆ ದೇವಿಯು ಸೃಷ್ಟಿಯ ಆದಿಯಲ್ಲಿ ದೇವತೆಗಳನ್ನೂ ಸಹ ಸೃಷ್ಟಿಸಿರುತ್ತಾಳೆಯೋ ಆದುದರಿಂದಲೇ, ಕುರುಶ್ರೇಷ್ಠನಾದ ಜನಮೇಜಯನೇ, ಅವಳು ಆದಿಮಾತಾ ಎಂಬ ಹೆಸರಿನಿಂದ ಎಂದರೆ ಜಗತ್ತಿಗೆ ಮೊದಲನೆಯ ತಾಯಿ ಎಂದು ಪ್ರಸಿದ್ಧಳಾಗಿರುತ್ತಾಳೆ.

**ಬುದ್ಧಿಃ ಕೀರ್ತಿರ್ಧೃತಿರ್ಲಕ್ಷ್ಮೀಃ ಶಕ್ತಿಃ ಶ್ರದ್ಧಾ ಮತಿಃ ಸ್ಮೃತಿಃ ।**
**ಸರ್ವೇಷಾಂ ಪ್ರಾಣಿನಾಂ ಸಾ ವೈ ಪ್ರತ್ಯಕ್ಷಂ ವೈ ವಿಭಾಸತೇ ॥೩೧॥**

ಮತ್ತೂ ಅವಳು ಬುದ್ಧಿಸ್ವರೂಪಳೂ, ಯಶಸ್ಸಿನ ಸ್ವರೂಪಳೂ ಧೈರ್ಯದ ಸ್ವರೂಪಳೂ, ಐಶ್ವರ್ಯದ ಸ್ವರೂಪಳೂ, ಬಲಸ್ವರೂಪಳೂ ಮುಂದೆ ನಡೆಯತಕ್ಕ ವಿಷಯಗಳ ತಿಳಿವಳಿಕೆಯ ರೂಪವಾದ ಮತಿಸ್ವರೂಪಳೂ, ಸ್ಮರಣೆಯ ಸ್ವರೂಪಳೂ ಆಗಿದ್ದು ಈರೀತಿಯಾಗಿ ಬುದ್ಧಿಯೇ ಮೊದಲಾದ ರೂಪದಿಂದ ಪ್ರತಿಯೊಂದು ಜಂತುವಿಗೂ ಪ್ರತ್ಯಕ್ಷವಾಗಿ ಕಾಣಿಸುತ್ತಿರುತ್ತಾಳೆ.

**ನ ಜಾನಂತಿ ನರಾ ಯೇ ವೈ ಮೋಹಿತಾ ಮಾಯಯಾ ಕಿಲ ।**
**ನ ಭಜಂತಿ ಕುತರ್ಕಜ್ಞಾ ದೇವೀಂ ವಿಶ್ವೇಶ್ವರೀಂ ಶಿವಾಂ ॥೩೨॥**

ಹೀಗಿದ್ದರೂ ಯಾವ ಮನುಷ್ಯರು, ಕೆಟ್ಟ ತರ್ಕ ಎಂದರೆ, ದೇವಿಯೆಂಬುವ ಳೊಬ್ಬಳು ಇರುವುದೇ ಇಲ್ಲ, ಇದ್ದರೆ ಕಾಣಿಸುತ್ತಿದ್ದಳು, ಎಂದು ಮುಂತಾದ ರೀತಿಯ ಕೆಟ್ಟ ಯುಕ್ತಿ ಊಹೆಗಳಿಂದ ಕೂಡಿರುತ್ತಾ, ಅಜ್ಞಾನದಿಂದ ಮೋಹಗೊಳಿಸಲ್ಪಟ್ಟವ ರಾಗಿ ಆ ದೇವಿಯನ್ನು ತಿಳಿಯುವುದಿಲ್ಲವೋ, ಅವರು ಜಗತ್ತಿಗೆ ಒಡೆಯಳಾದ ಮಂಗಳ ಸ್ವರೂಪಳಾದ ಮತ್ತು ಜ್ಞಾನಜ್ಯೋತಿಯ ಪ್ರಕಾಶಸ್ವರೂಪಳಾದ ಆ ದೇವಿಯನ್ನು ಪಡೆಯಲಾರರು.

**ಬ್ರಹ್ಮಾ ವಿಷ್ಣುಸ್ತಥಾ ಶಂಭುರ್ವಾಸವೋ ವರುಣೋ ಯಮಃ ।**
**ವಾಯುರಗ್ನಿಃ ಕುಬೇರಶ್ಚ ತ್ವಷ್ಟಾ ಪೂಷಾಶ್ವಿನೌ ಭಗಃ ॥೩೩॥**

ಬ್ರಹ್ಮನೂ, ವಿಷ್ಣುವೂ, ಈಶ್ವರನೂ, ಇಂದ್ರನೂ, ವರುಣನೂ, ಯಮನೂ, ವಾಯುವೂ, ಅಗ್ನಿಯೂ, ಕುಬೇರನೂ, ವಿಶ್ವಕರ್ಮನೂ, ಸೂರ್ಯನೂ, ಅಶ್ವಿನೀ ದೇವತೆಗಳೂ, ಭಗನೆಂಬ ಆದಿತ್ಯನೂ,

**ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।**
**ಸರ್ವೇ ಧ್ಯಾಯಂತಿ ತಾಂ ದೇವೀಂ ಸೃಷ್ಟಿಸ್ಥಿತ್ಯಂತಕಾರಿಣೀಂ ॥೩೪॥**

ಹನ್ನೆರಡುಜನ ಸೂರ್ಯರೂ, ಎಂಟು ಜನ ವಸುಗಳೂ, ಹನ್ನೊಂದುಜನ ರುದ್ರರೂ, ವಿಶ್ವೇದೇವತೆಗಳೂ ಏಳು ವಾಯುಗಳ ಗುಂಪುಗಳೂ, ಎಲ್ಲರೂ ಜಗತ್ತಿನ ಉತ್ಪತ್ತಿ, ಪಾಲನೆ, ಪ್ರಳಯಗಳನ್ನು ಮಾಡತಕ್ಕ ಆ ದೇವಿಯನ್ನು ಧ್ಯಾನಮಾಡುತ್ತಾ ಸ್ತುತಿಸುತ್ತಾರೆ.

**ಕೋ ನ ಸೇವೇತ ವಿದ್ವಾನ್ವೈ ತಾಂ ಶಕ್ತಿಂ ಪರಮಾತ್ಮಿಕಾಂ ।**
**ಸುದರ್ಶನೇನ ಸಾ ಜ್ಞಾತಾ ದೇವೀ ಸರ್ವಾರ್ಥದಾ ಶಿವಾ ॥೩೫॥**

ಹೀಗಿರಲು, ಪರಮಾತ್ಮಸ್ವರೂಪಳಾದ ಮತ್ತು ಆ ಶಕ್ತಿಸ್ವರೂಪಳಾದ ದೇವಿ ಯನ್ನು ತಿಳಿವಳಿಕೆಯುಳ್ಳವನು ಯಾವನು ತಾನೇ ಸೇವಿಸಲಾರನು. ಇಂತಹ ಮಂಗಳ ಸ್ವರೂಪಳಾದ, ಎಲ್ಲ ಇಷ್ಟಾರ್ಥವನ್ನೂ ಕೊಡುವ ದೇವಿಯನ್ನು ಸುದರ್ಶನನು ತಿಳಿ ದಿದ್ದನು. ಆದುದರಿಂದಲೇ ಅವನಿಗೆ ಅಂತಹ ಫಲವುಂಟಾಯಿತೆಂದು ಅಭಿಪ್ರಾಯವು.

**ಬ್ರಹ್ಮೈವ ಸಾಽತಿದುಷ್ಪ್ರಾಪಾ ವಿದ್ಯಾಽವಿದ್ಯಾಸ್ವರೂಪಿಣೀ ।**
**ಯೋಗಗಮ್ಯಾ ಪರಾ ಶಕ್ತಿರ್ಮುಮುಕ್ಷೂಣಾಂ ಚ ವಲ್ಲಭಾ ॥೩೬॥**

ಆ ಶಕ್ತಿರೂಪಳಾದ ದೇವಿಯು ಬ್ರಹ್ಮಸ್ವರೂಪಳೇ ಹೊರತು ಬೇರೆ ಅಲ್ಲವು. ಅಗ್ನಿಯಲ್ಲಿರುವ ಸುಡುವ ಶಕ್ತಿಯು ಅಗ್ನಿಗಿಂತಲೂ ಹೇಗೆ ಬೇರೆಯಲ್ಲವೋ ಅದರಂತೆ ಬ್ರಹ್ಮದ ಶಕ್ತಿಯಾದ ಅವಳು ಬ್ರಹ್ಮಕ್ಕಿಂತಲೂ ಬೇರೆಯಲ್ಲವು. ಅವಳನ್ನು ಪಡೆಯುವುದು ತುಂಬ ಕಷ್ಟವು. ಅವಳು ಜ್ಞಾನಸ್ವರೂಪಳೂ ಆಗಿರುತ್ತಾಳೆ. ಸುಖ, ದುಃಖ, ಚಿನ್ನ, ಮಣ್ಣು ಮುಂತಾದ ಅಜ್ಞಾನ ಕಾರ್ಯಗಳೂ ಅವಳ ಸ್ವರೂಪಗಳು. ಸಮದೃಷ್ಟಿ ರೂಪವಾದ ಯೋಗದಿಂದ ಅವಳನ್ನು ಪಡೆಯಬಹುದು. ಜಗತ್ತಿನ ಎಲ್ಲಾ ಶಕ್ತಿಗಳಿಗಿಂತಲೂ ಉತ್ಕೃಷ್ಟವಾದ ಆ ಶಕ್ತಿದೇವಿಯು ಮುಕ್ತಿಯನ್ನು ಪಡೆಯಬೇಕೆನ್ನುವವರಿಗೆ ತುಂಬ ಬೇಕಾದವಳು.

**ಪರಮಾತ್ಮಸ್ವರೂಪಂ ಕೋ ವೇತ್ತುಮರ್ಹತಿ ತಾಂ ವಿನಾ ।**
**ಯಾ ಸೃಷ್ಟಿಂ ತ್ರಿವಿಧಾಂ ಕೃತ್ವಾ ದರ್ಶಯತ್ಯಖಿಲಾತ್ಮನೇ ॥೩೭॥**

ಆ ದೇವಿಯು ಮಾಯಾವಿಶಿಷ್ಟಬ್ರಹ್ಮಸ್ವರೂಪಳೇ ಆದುದರಿಂದ ಅವಳನ್ನು ಬಿಟ್ಟು ಅದಾವನು ಆ ಬ್ರಹ್ಮಸ್ವರೂಪವನ್ನು ತಿಳಿಯಬಲ್ಲನು ? ಅವಳೇ ದೇವ, ತಿರ್ಯಕ್, ಮನುಷ್ಯರೆಂದು ಮೂರು ವಿಧವಾದ ಸೃಷ್ಟಿಯನ್ನು ಮಾಡಿ ಸರ್ವಾತ್ಮಕವಾದ ಆ ಬ್ರಹ್ಮವಸ್ತುವಿಗೆ ತೋರಿಸುತ್ತಾಳೆ.

**ಸುದರ್ಶನಸ್ತು ತಾಂ ದೇವೀಂ ಮನಸಾ ಪರಿಚಿಂತಯನ್ ।**
**ರಾಜ್ಯಲಾಭಾತ್ಪರಂ ಪ್ರಾಪ್ಯ ಸುಖಂ ವೈ ಕಾನನೇ ಸ್ಥಿತಃ ॥೩೮॥**

ಪ್ರಕೃತದಲ್ಲಿ ಆ ಸುದರ್ಶನಕುಮಾರನು ಆ ದೇವಿಯನ್ನು ಮನಸ್ಸಿನಲ್ಲಿ ತುಂಬ ಆದರದಿಂದ ಧ್ಯಾನಿಸುತ್ತಾ ರಾಜ್ಯಪ್ರಾಪ್ತಿಗಿಂತಲೂ ಹೆಚ್ಚಾದ ಸುಖವನ್ನು ಹೊಂದಿ ಆ ಕಾಡಿನಲ್ಲಿರುತ್ತಿದ್ದನು.

**ಸಾಽಪಿ ಚಂದ್ರಕಲಾತ್ಯರ್ಥಂ ಕಾಮಬಾಣಪ್ರಪೀಡಿತಾ ।**
**ನಾನೋಪಚಾರೈರನಿಶಂ ದಧಾರ ದುಃಖಿತಂ ವಪುಃ ॥೩೯॥**

ಇತ್ತಲಾಗಿ ಆ ಶಶಿಕಲೆಯೂ ಸಹ ಮನ್ಮಥನ ಬಾಣಗಳಿಂದ ತುಂಬ ಪೀಡಿಸಲ್ಪಟ್ಟವಳಾಗಿ ತುಂಬ ದುಃಖಿತವಾದ ತನ್ನ ಶರೀರವನ್ನು ಅನೇಕ ಬಗೆಯ ಉಪಚಾರಗಳಿಂದ ಬಹು ಕಷ್ಟದಿಂದ ಧರಿಸಿದ್ದಳು.

**ತಾವತ್ತಸ್ಯಾಃ ಪಿತಾ ಜ್ಞಾತ್ವಾ ಕನ್ಯಾಂ ಪುತ್ರವರಾರ್ಥಿನೀಂ ।**
**ಸುಬಾಹುಃ ಕಾರಯಾಮಾಸ ಸ್ವಯಂವರಮತಂದ್ರಿತಃ ॥೪೦॥**

ಅಷ್ಟರಲ್ಲಿ ಅವಳ ತಂದೆಯಾದ ಸುಬಾಹುವೂ ಸಹ ಶಶಿಕಲೆಯು ವರನನ್ನಪೇಕ್ಷಿಸುತ್ತಿರುವಳೆಂದು ತಿಳಿದು ಸ್ವಲ್ಪವೂ ಉದಾಸೀನತೆಯಿಲ್ಲದೆ ಜಾಗ್ರತೆಯಾಗಿ ಸ್ವಯಂವರಕ್ಕೆ ಅಣಿಮಾಡಿದನು.

**ಸ್ವಯಂವರಸ್ತು ತ್ರಿವಿಧೋ ವಿದ್ವದ್ಭಿಃ ಪರಿಕೀರ್ತಿತಃ ।**
**ರಾಜ್ಞಾಂ ವಿವಾಹಯೋಗ್ಯೋ ವೈ ನಾನ್ಯೇಷಾಂ ಕಥಿತಃ ಕಿಲ ॥೪೧॥**

ಈ ಸ್ವಯಂವರವು ಮೂರುವಿಧವಾಗಿರುವುದೆಂದು ತಿಳಿದವರು ಹೇಳುತ್ತಾರೆ. ರಾಜರ ವಿವಾಹದಲ್ಲಿ ಮಾತ್ರ ಈ ಸ್ವಯಂವರವು ಹೇಳಿದೆಯೇ ವಿನಾ ಇತರರಿಗೆ ಅಲ್ಲವು. ಸ್ವಯಂವರವೆಂದರೆ ವಧುವು ತನಗೆ ಬೇಕಾದ ವರನನ್ನು ತಾನೇ ಆರಿಸಿಕೊಳ್ಳುವುದು.

**ಇಚ್ಛಾಸ್ವಯಂವರಶ್ಚೈಕೋ ದ್ವಿತೀಯಶ್ಚ ಪಣಾಭಿಧಃ ।**
**ಯಥಾ ರಾಮೇಣ ಭಗ್ನಂ ವೈ ತ್ರ್ಯಂಬಕಸ್ಯ ಶರಾಸನಂ ॥೪೨॥**

ಮೂರುವಿಧ ಸ್ವಯಂವರಗಳಲ್ಲಿ ಮೊದಲನೆಯ ಸ್ವಯಂವರವು ವಧುವಿನ ಇಷ್ಟದಂತೆಯೇ ಆಗತಕ್ಕದ್ದು. ನೆರೆದ ರಾಜರ ಸಭೆಯಲ್ಲಿ ವಧುವು ತನಗೆ ಬೇಕಾದ ಪುರುಷನನ್ನು ಆರಿಸಿಕೊಳ್ಳುವುದು. ಎರಡನೆಯ ಸ್ವಯಂವರವು, ಯಾವುದಾದರೂ ಅಸಾಧಾರಣವಾದ ಪಣ ಅಥವಾ ಪಂದ್ಯವನ್ನಿಟ್ಟು ವರನ ಪರಾಕ್ರಮಕೌಶಲಗಳ ಪರೀಕ್ಷೆಯನ್ನು ಮಾಡತಕ್ಕದು. ಹೇಗೆಂದರೆ, ಹಿಂದೆ ರಾಮನು ಈಶ್ವರನ ಧನುರ್ಭಂಗವನ್ನು ಮಾಡಲು ಸೀತೆಯು ಅವನನ್ನು ವರಿಸುವಂತೆ ಏರ್ಪಡಿಸಿದುದು.

**ತೃತೀಯಃ ಶೌರ್ಯಶುಲ್ಕಶ್ಚ ಶೂರಾಣಾಂ ಪರಿಕೀರ್ತಿತಃ ।**
**ಇಚ್ಛಾಸ್ವಯಂವರಂ ತತ್ರ ಚಕಾರ ನೃಪಸತ್ತಮಃ ॥೪೩॥**

ಮೂರನೆಯ ಸ್ವಯಂವರವು, ವೀರರಿಗೆ ಪರಾಕ್ರಮವೇ ಶುಲ್ಕವಾಗಿರತಕ್ಕುದು. ಎಂದರೆ, ವಧುವನ್ನು ಮದುವೆಯಾಗುವವನು ಅಲ್ಲಿ ನೆರದಿರುವ ರಾಜರುಗಳನ್ನೆಲ್ಲಾ ಪರಾಕ್ರಮದಿಂದ ಜಯಿಸಿ ವಧುವನ್ನು ಅಪಹರಿಸುವುದು. ಇವುಗಳಲ್ಲಿ

ಇಚ್ಛಾಪೂರ್ವಕವಾದ ಸ್ವಯಂವರವನ್ನೇ ಆ ರಾಜೋತ್ತಮನಾದ ಸುಬಾಹುವು ಏರ್ಪಡಿಸಿದನು,

**ಶಿಲ್ಪಿಭಿಃ ಕಾರಿತಾ ಮಂಚಾಃ ಶುಭ್ರೈರಾಸ್ತರಣೈರ್ಯುತಾಃ ।**
**ತತಶ್ಚ ವಿವಿಧಾಕಾರಾಃ ಸುಕ್ಲೃಪ್ತಾಃ ಸಭ್ಯಮಂಡಪಾಃ ॥೪೪॥**

ಆ ಸ್ವಯಂವರಕ್ಕಾಗಿ ಒಳ್ಳೆಯ ರತ್ನಗಂಬಳಿಗಳ ಹಾಸಿಗೆಗಳಿಂದ ಕೂಡಿರುವ ಮಂಚಗಳು, ಆಯಾಯ ರಾಜರು ಮಂಡಿಸುವುದಕ್ಕಾಗಿ ಶಿಲ್ಪಿಗಳಿಂದ ಮಾಡಿಸಲ್ಪಟ್ಟುವು. ಮತ್ತು ಅನೇಕಬಗೆಯ ಆಕೃತಿಗಳುಳ್ಳ ಮಂಡಪಗಳು ಸಭಿಕರಿಗಾಗಿ ಮಾಡಲ್ಪಟ್ಟುವು.

**ಏವಂ ಕೃತೇಽತಿಸಂಭಾರೇ ವಿವಾಹಾರ್ಥಂ ಸುವಿಸ್ತರೇ ।**
**ಸಖೀಂ ಶಶಿಕಲಾ ಪ್ರಾಹ ದುಃಖಿತಾ ಚಾರುಲೋಚನಾ ॥೪೫॥**

ಹೀಗೆ ಮದುವೆಗಾಗಿ ಎಲ್ಲ ಬಗೆಯ ಸಿದ್ಧತೆಗಳೂ ತುಂಬ ದೊಡ್ಡ ರೀತಿಯಲ್ಲಿ ಆಗುತ್ತಿರಲು, ಸುಂದರವಾದ ನಯನಗಳುಳ್ಳ ಶಶಿಕಲೆಯು ದುಃಖಗೊಂಡವಳಾಗಿ ತನ್ನ ಸಖಿಯನ್ನು ಕುರಿತು ಹೀಗೆ ಹೇಳಿದಳು.

**ಇದಂ ಮೇ ಮಾತರಂ ಬ್ರೂಹಿ ತ್ವಮೇಕಾಂತೇ ವಚೋ ಮಮ ।**
**ಮಯಾ ವೃತಃ ಪತಿಶ್ಚಿತ್ತೇ ಧ್ರುವಸಂಧಿಸುತಃ ಶುಭಃ ॥೪೬॥**

ಓ ಸಖಿಯೇ, ನೀನು ನನ್ನ ತಾಯಿಯಲ್ಲಿಗೆ ಹೋಗಿ ಗುಟ್ಟಿನಲ್ಲಿ ನನ್ನ ಈ ಮಾತುಗಳನ್ನು ಹೇಳು. ನಾನು ಮಂಗಳಕರನಾದ ಧ್ರುವಸಂಧಿಯ ಮಗನಾದ ಸುದರ್ಶನನನ್ನು ಮನಸ್ಸಿನಲ್ಲಿಯೇ ವರಿಸಿರುತ್ತೇನೆ.

**ನಾನ್ಯಂ ವರಂ ವರಿಷ್ಯಾಮಿ ತಮೃತೇ ವೈ ಸುದರ್ಶನಂ ।**
**ಸ ಮೇ ಭರ್ತಾ ನೃಪಸುತೋ ಭಗವತ್ಯಾ ಪ್ರತಿಷ್ಠಿತಃ ॥೪೭॥**

ಆ ಸುದರ್ಶನನನ್ನು ಬಿಟ್ಟು ಬೇರೆ ಯಾವ ವರನನ್ನೂ ನಾನು ವರಿಸಲಾರೆನು. ಪೂಜ್ಯಳಾದ ಆದಿಶಕ್ತಿಯು ಅವನನ್ನೇ ನನ್ನ ಪತಿಯನ್ನಾಗಿ ಕಲ್ಪಿಸಿಗೊತ್ತುಮಾಡಿರುತ್ತಾಳೆ.

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ಸಾ ಸಖೀ ಗತ್ವಾ ಮಾತರಂ ಪ್ರಾಹ ಸತ್ವರಾ ।**
**ವೈದರ್ಭೀಂ ವಿಜನೇ ವಾಕ್ಯಂ ಮಧುರಂ ಮಂಜುಭಾಷಿಣೀ ೪೮॥**

ವ್ಯಾಸಮುನಿಯು ಹೇಳಿದನು—ಹೀಗೆ ಹೇಳಲ್ಪಟ್ಟವಳಾಗಿ ಆ ಸಖಿಯು ವಿದರ್ಭದೇಶದವಳಾದ ಶಶಿಕಲೆಯ ತಾಯಿಯು ಇದ್ದ ಎಡೆಗೆ ಹೋಗಿ, ಮತ್ತು ಇಂಪಾಗಿ ಮಾತನಾಡುವ ಸ್ವಭಾವವುಳ್ಳ ಆ ಸಖಿಯು ಶಶಿಕಲೆಯ ತಾಯಿಯನ್ನು ಕುರಿತು ಏಕಾಂತದಲ್ಲಿ ಮನೋಹರವಾದ ವಾಕ್ಯವನ್ನು ಹೀಗೆ ಹೇಳಿದಳು.

**ಪುತ್ರೀ ತೇ ದುಃಖಿತಾ ಪ್ರಾಹ ಸಾಧ್ವಿ ತ್ವಾಂ ಮನ್ಮುಖೇನ ಯತ್ ।**
**ಶೃಣು ತ್ವಂ ಕುರು ಕಲ್ಯಾಣಿ ತದ್ಧಿತಂ ತ್ವರಿತಾಽಧುನಾ ॥೪೯॥**

ಓ ಪತಿವ್ರತೆಯೇ, ನಿನ್ನ ಮಗಳು ದುಃಖಗೊಂಡವಳಾಗಿ ಏನನ್ನು ಹೇಳಿರುವಳೋ ಅದನ್ನು ನನ್ನ ಮುಖದಿಂದ ಕೇಳಿ ತಿಳಿದುಕೊಳ್ಳುವವಳಾಗು. ಓ ಮಂಗಳ ಸ್ವರೂಪಳೇ, ಈಗಲೇ ತ್ವರೆಯಿಂದ ಆ ನಿನ್ನ ಮಗಳಿಗೆ ಹಿತವನ್ನು ಮಾಡು.

**ಭಾರದ್ವಾಜಾಶ್ರಮೇ ಪುಣ್ಯೇ ಧ್ರುವಸಂಧಿಸುತೋಽಸ್ತಿ ಯಃ ।**
**ಸ ಮೇ ಭರ್ತಾ ವೃತಶ್ಚಿತ್ತೇ ನಾನ್ಯಂ ಭೂಪಂ ವೃಣೋಮ್ಯಹಂ ॥೫೦॥**

ಆ ನಿನ್ನ ಮಗಳು, "ಪವಿತ್ರವಾದ ಭಾರದ್ವಾಜಮುನಿಗಳ ಆಶ್ರಮದಲ್ಲಿ ವಾಸವಾಗಿರುವ, ಧ್ರುವಸಂಧಿರಾಜನ ಮಗನಾದ ಸುದರ್ಶನಕುಮಾರನನ್ನೇ ಮನಸ್ಸಿನಲ್ಲಿ ವರಿಸಿರುತ್ತೇನೆ. ಅವನನ್ನು ಬಿಟ್ಟು ಇನ್ನೊಬ್ಬರಾಜನನ್ನು ನಾನು ವರಿಸಲಾರೆನು", ಎಂದು ಹೇಳಿರುತ್ತಾಳೆ.

|| ವ್ಯಾಸ ಉವಾಚ ||

**ರಾಜ್ಞೀ ತದ್ವಚನಂ ಶ್ರುತ್ವಾ ಸ್ವಪತೌ ಗೃಹಮಾಗತೇ ।**
**ನಿವೇದಯಾಮಾಸ ತದಾ ಪುತ್ರೀವಾಕ್ಯಂ ಯಥಾತಥಂ ॥೫೧॥**

ವ್ಯಾಸಋಷಿಯು ಹೇಳಿದನು—ಆ ರಾಣಿಯು ಆ ಮಾತುಗಳನ್ನು ಕೇಳಿ ತನ್ನ ಪತಿಯಾದ ಸುಬಾಹುವು ಮನೆಗೆ ಬರಲು ಅವನಿಗೆ ತನ್ನ ಮಗಳ ವಾಕ್ಯವನ್ನು ಅವಳು ಹೇಳಿ ಕಳುಹಿಸಿದಂತೆಯೇ ಹೇಳಿದಳು.

**ತಚ್ಛ್ರುತ್ವಾ ವಚನಂ ರಾಜಾ ವಿಸ್ಮಿತಃ ಪ್ರಹಸನ್ಮುಹುಃ ।**
**ಭಾರ್ಯಾಮುವಾಚ ವೈದರ್ಭೀಂ ಸುಬಾಹುಸ್ತು ಋತಂ ವಚಃ ॥೫೨॥**

ಆ ಮಾತುಗಳನ್ನು ಕೇಳಿ ಸುಬಾಹುರಾಜನು ತುಂಬ ಆಶ್ಚರ್ಯಗೊಂಡು ತಿರುಗಿತಿರುಗಿ ತುಂಬ ನಗುತ್ತಾ ವಿದರ್ಭರಾಜನ ಮಗಳಾದ ತನ್ನ ಹೆಂಡತಿಯನ್ನು ಕುರಿತು ನಿಜವಾಗಿರುವ ಮಾತುಗಳನ್ನು ಹೇಳಿದನು.

**ಸುಭ್ರು ಜಾನಾಸಿ ಬಾಲೋಽಸೌ ರಾಜ್ಯಾನ್ನಿಷ್ಕಾಸಿತೋ ವನೇ ।**
**ಏಕಾಕೀ ಸಹಮಾತ್ರಾ ವೈ ವಸತೇ ನಿರ್ಜನೇ ವನೇ ॥೫೩॥**

ಸುಂದರವಾದ ಹುಬ್ಬುಗಳುಳ್ಳ ಓ ಸುಂದರಿಯೇ, ಆ ಸುದರ್ಶನನು ಬಾಲಕನಾಗಿರುವಾಗಲೇ ರಾಜ್ಯದಿಂದ ಓಡಿಸಲ್ಪಟ್ಟು ಅಸಹಾಯನಾಗಿ ತನ್ನ ತಾಯಿಯೊಂದಿಗೆ ಜನರ ಸುಳಿವಿಲ್ಲದ ಅರಣ್ಯದಲ್ಲಿ ವಾಸಮಾಡುತ್ತಿರುತ್ತಾನೆ ಎಂಬ ವಿಷಯವನ್ನು ನೀನೂ ತಿಳಿದಿರುವೆ.

**ತತ್ಕೃತೇ ನಿಹತೋ ರಾಜಾ ವೀರಸೇನೋ ಯುಧಾಜಿತಾ ।**
**ಸ ಕಥಂ ನಿರ್ಧನೋ ಭರ್ತಾ ಯೋಗ್ಯಃಸ್ಯಾಚ್ಚಾರುಲೋಚನೇ ॥೫೪॥**

ಆ ಸುದರ್ಶನನಿಗೋಸ್ಕರವಾಗಿಯೇ ರಾಜನಾದ ವೀರಸೇನನು ಯುಧಾಜಿತನಿಂದ ಕೊಲ್ಲಲ್ಪಟ್ಟನು. ಹೀಗಿರುವಲ್ಲಿ ಓ ಸುಂದರವಾದ ನಯನವುಳ್ಳವಳೇ, ಇಂತಹ ದರಿದ್ರನು ನಮ್ಮ ಶಶಿಕಲೆಗೆ ಹೇಗೆ ಯೋಗ್ಯನಾದ ಪತಿಯಾದಾನು ?

**ಬ್ರೂಹಿ ಪುತ್ರೀಂ ತತೋ ವಾಕ್ಯಂ ಕದಾಚಿದಪಿ ವಿಪ್ರಿಯಂ ।**
**ಆಗಮಿಷ್ಯಂತಿ ರಾಜಾನಃ ಸ್ಥಿತಿಮಂತಃ ಸ್ವಯಂವರೇ ॥೫೫॥**

ಆದುದರಿಂದ ಮಗಳಿಗೆ ಚನ್ನಾಗಿ ತಿಳಿಯಹೇಳು. "ಸ್ವಯಂವರಕ್ಕಾಗಿ ಒಳ್ಳೆಯ ಐಶ್ವರ್ಯ ಮತ್ತು ಮರ್ಯಾದೆಯುಳ್ಳ ರಾಜರು ಬರುತ್ತಾರೆ. ಅವರಿಗೆ ಎಂದೆಂದಿಗೂ ಇಂತಹ ಹಿತವಲ್ಲದುದನ್ನು ಯಾವಾಗಲೂ ಮಾಡಬಾರದು" ಎಂದು ವಿವರಿಸಿ ಹೇಳು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಅಷ್ಟಾದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ತೃತೀಯಸ್ಕಂಧೇ

### ॥ ಏಕೋನವಿಂಶೋಽಧ್ಯಾಯಃ ॥

### ಹತ್ತೊಂಬತ್ತನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಭರ್ತ್ರಾ ಸಾಽಭಿಹಿತಾ ಬಾಲಾಂ ಪುತ್ರೀಂ ಕೃತ್ವಾಂಕಸಂಸ್ಥಿತಾಂ ।**
**ಉವಾಚ ವಚನಂ ಶ್ಲಕ್ಷ್ಣಂ ಸಮಾಶ್ವಾಸ್ಯ ಶುಚಿಸ್ಮಿತಾಂ ॥೧॥**

ವ್ಯಾಸಮುನಿಯು ಹೇಳಿದನು—ಆ ರಾಣಿಯು ತನ್ನ ಪತಿಯಿಂದ ಹೀಗೆ ಹೇಳಲ್ಪಟ್ಟವಳಾಗಿ ಬಾಲಿಕೆಯಾದ ತನ್ನ ಮಗಳಾದ ಆ ಶಶಿಕಲೆಯನ್ನು ತೊಡೆಯ ಮೇಲೆ ಕೂರಿಸಿಕೊಂಡು ಶುಭ್ರವಾದ ಮುಗುಳುನಗೆಯುಳ್ಳ ಅವಳನ್ನು ಸಮಾಧಾನ ಗೊಳಿಸುತ್ತಾ ಹೀಗೆ ನಯವಾದ ಮಾತುಗಳನ್ನು ಹೇಳಿದಳು.

**ಕಿಂ ವೃಥಾ ಸುದತಿ ತ್ವಂ ಹಿ ವಿಪ್ರಿಯಂ ಮಮ ಭಾಷಸೇ ।**
**ಪಿತಾ ತೇ ದುಃಖಮಾಪ್ನೋತಿ ವಾಕ್ಯೇನಾನೇನ ಸುವ್ರತೇ ॥೨॥**

ಸುಂದರವಾದ ದಂತಪಂಕ್ತಿಯುಳ್ಳ ಎಲೌ ಮಗಳೇ, ವ್ಯರ್ಥವಾಗಿ ಹಿತವಲ್ಲದ ಮಾತುಗಳನ್ನೇಕೆ ಆಡುತ್ತೀಯೆ? ವಿನಯವೇ ಮೊದಲಾದ ಒಳ್ಳೆಯ ನಡತೆಯುಳ್ಳ ವಳೇ, ಈ ನಿನ್ನ ಮಾತುಗಳಿಂದ ನಿನ್ನ ತಂದೆಯು ತುಂಬ ದುಃಖವನ್ನು ಹೊಂದು ತ್ತಲಿದ್ದಾನೆ.

**ಸುದರ್ಶನೋಽತಿದುರ್ಭಾಗ್ಯೋ ರಾಜ್ಯಭ್ರಷ್ಟೋ ನಿರಾಶ್ರಯಃ ।**
**ಬಲಕೋಶವಿಹೀನಶ್ಚ ಪರಿತ್ಯಕ್ತಸ್ತು ಬಾಂಧವೈಃ ॥೩॥**

ನೀನು ವರಿಸಲಿಚ್ಛಿಸಿರುವ ಸುದರ್ಶನನು ತುಂಬ ಅದೃಷ್ಟಹೀನನು. ಆದುದರಿಂದಲೇ ಅವನು ರಾಜ್ಯದಿಂದ ಓಡಿಸಲ್ಪಟ್ಟವನಾಗಿರುತ್ತಾನೆ. ಅವನಿಗೆ ಇನ್ನಾವ ಆಶ್ರಯವೂ ಇಲ್ಲವು. ಸೈನ್ಯ, ಧನ ಮುಂತಾದ ಯಾವ ಸಹಾಯವೂ ಅವನಲ್ಲಿ ಇಲ್ಲವು. ಬಂಧುಗಳೂ ಅವನನ್ನು ತ್ಯಜಿಸಿರುತ್ತಾರೆ.

**ಮಾತ್ರಾ ಸಹ ವನಂ ಪ್ರಾಪ್ತಃ ಫಲಮೂಲಾಶನಃ ಕೃಶಃ ।**
**ನ ತೇ ಯೋಗ್ಯೋ ವರೋಽಯಂ ವೈ ವನವಾಸೀ ಚ ದುರ್ಭಗಃ ॥೪॥**

ಆದುದರಿಂದಲೇ ಅವನು ತಾಯಿಯೊಂದಿಗೆ ಕಾಡನ್ನು ಸೇರಿ ಗೆಡ್ಡೆಗೆಣಸುಗಳನ್ನು ತಿಂದು ಜೀವಿಸುತ್ತಾ ತುಂಬ ಕೃಶನಾಗಿರುತ್ತಾನೆ. ಇಂತಹ ಅದೃಷ್ಟಹೀನನಾದ ಮತ್ತು ಕಾಡಿನಲ್ಲಿ ವಾಸಮಾಡುತ್ತಿರುವ ಅವನು ನಿನಗೆ ಯೋಗ್ಯನಾದ ವರನಲ್ಲವು.

**ರಾಜಪುತ್ರಾಃ ಕೃತಪ್ರಜ್ಞಾ ರೂಪವಂತಃ ಸುಸಂಮತಾಃ ।**
**ತವಾರ್ಹಾಃ ಪುತ್ರಿ ಸಂತ್ಯನ್ಯೇ ರಾಜಚಿಹ್ನೈರಲಂಕೃತಾಃ ॥೫॥**

ತುಂಬ ವಿದ್ಯಾವಂತರಾದ ಮತ್ತು ಸುಂದರರಾದ, ಛತ್ರಚಾಮರವೇ ಮೊದಲಾದ ರಾಜಲಕ್ಷಣಗಳಿಂದಲೂ, ಮರ್ಯಾದೆಗಳಿಂದಲೂ ಕೂಡಿರುವಂತಹ, ನಿನಗೆ ತುಂಬ ಅನುರೂಪರಾಗಿರುವ ಬೇರೆ ರಾಜಕುಮಾರರು ಬೇಕಾದಷ್ಟು ಮಂದಿ ಇರುವರು.

**ಭ್ರಾತಾಸ್ಯ ವರ್ತತೇ ಕಾಂತಃ ಸ ರಾಜ್ಯಂ ಕೋಸಲೇಷು ವೈ ।**
**ಕರೋತಿ ರೂಪಸಂಪನ್ನಃ ಸರ್ವಲಕ್ಷಣಸಂಯುತಃ ॥೬॥**

ಅಲ್ಲದೆ, ಆ ಸುದರ್ಶನನ ಸಹೋದರನೇ ಇರುತ್ತಾನೆ. ಅವನು ತುಂಬ ಮನೋಹರನಾದ, ಎಲ್ಲಾ ರಾಜಲಕ್ಷಣಗಳಿಂದಲೂ ಕೂಡಿದವನಾದ ಮತ್ತು ತುಂಬ ಸೌಂದರ್ಯಶಾಲಿಯಾದ ರಾಜಕುಮಾರನು. ಈಗ ಅವನು ಕೋಸಲದೇಶದಲ್ಲಿ ರಾಜ್ಯವಾಳುತ್ತಲಿದ್ದಾನೆ.

**ಅನ್ಯಚ್ಚ ಕಾರಣಂ ಸುಭ್ರು ಶೃಣು ಯಚ್ಚ ಮಯಾ ಶ್ರುತಂ ।**
**ಯುಧಾಜಿತ್ಸತತಂ ತಸ್ಯ ವಧಕಾಮೋಽಸ್ತಿ ಭೂಮಿಪಃ ॥೭॥**

ಸುಂದರವಾದ ಹುಬ್ಬುಗಳುಳ್ಳ ಓ ಮಗಳೇ, ಆ ಸುದರ್ಶನನು ನಿನಗೆ ಯೋಗ್ಯ ನಲ್ಲವೆಂಬುದಕ್ಕೆ ಇನ್ನೊಂದು ಕಾರಣವನ್ನು ನಾನು ಕೇಳಿರುವುದನ್ನು ನಿನಗೆ ಹೇಳು ತ್ತೇನೆ, ಕೇಳು. ಆ ಯುಧಾಜಿತುರಾಜನು ಸದಾ ಆ ಸುದರ್ಶನನನ್ನು ಕೊಲ್ಲಬೇಕೆಂಬ ಇಚ್ಛೆಯುಳ್ಳವನಾಗಿರುತ್ತಾನೆ.

**ದೌಹಿತ್ರಃ ಸ್ಥಾಪಿತಸ್ತೇನ ರಾಜ್ಯೇ ಕೃತ್ವಾsತಿಸಂಗರಂ ।**
**ವೀರಸೇನಂ ನೃಪಂ ಹತ್ವಾ ಸಂಮಂತ್ರ್ಯ ಸಚಿವೈಃ ಸಹ ॥೮॥**

ಆ ಯುಧಾಜಿತ್ತುರಾಜನು ರಾಜ್ಯಕ್ಕಾಗಿ ದೊಡ್ಡದಾಗಿ ಯುದ್ಧವನ್ನು ಮಾಡಿ ಈ ಸುದರ್ಶನನ ಸಹಾಯಕ್ಕೆ ಬಂದ ಅವನ ಮಾತಾಮಹನಾದ ವೀರಸೇನರಾಜನನ್ನು ಕೊಂದು, ಮಂತ್ರಿಗಳೊಡನೆ ಆಲೋಚಿಸಿ ತನ್ನ ಮಗಳ ಮಗನಾದ ಶತ್ರುಜಿತನನ್ನೇ ರಾಜ್ಯದಲ್ಲಿ ಸ್ಥಾಪಿಸಿರುವನು.

**ಭಾರದ್ವಾಜಾಶ್ರಮಂ ಪ್ರಾಪ್ತಂ ಹಂತುಕಾಮಃ ಸುದರ್ಶನಂ ।**
**ಮುನಿನಾ ವಾರಿತಃ ಪಶ್ಚಾಜ್ಜಗಾಮ ನಿಜಮಂದಿರಂ ॥೯॥**

ಅಲ್ಲದೆ ಆ ಯುಧಾಜಿತನು ಭಾರದ್ವಾಜಮುನಿಗಳ ಆಶ್ರಮದಲ್ಲಿಯೂ ಈ ಸುದರ್ಶನನನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ಬಂದನು. ಆದರೆ ಆ ಭಾರದ್ವಾಜ ಮುನಿಗಳಿಂದ ತಡೆಯಲ್ಪಟ್ಟವನಾಗಿ ತನ್ನ ಮನೆಗೆ ಹಾಗೆಯೇ ಹಿಂತಿರುಗಿ ಹೋದನು.

|| ಶಶಿಕಲೋವಾಚ ||

**ಮಾತರ್ಮಮೇಪ್ಸಿತಃ ಕಾಮೇ ವನಸ್ಥೋsಪಿ ನೃಪಾತ್ಮಜಃ ।**
**ಶರ್ಯಾತಿವಚನೇನೈವ ಸುಕನ್ಯಾ ಚ ಪತಿವ್ರತಾ ॥೧೦॥**

ಶಶಿಕಲೆಯು ಹೇಳಿದಳು—ಓ ಮಾತೆಯೇ, ಕಾಡಿನಲ್ಲಿ ವಾಸಮಾಡುವವನಾ ದರೂ ಆ ಸುದರ್ಶನಕುಮಾರನೇ ನನ್ನ ಮನೋರಥಕ್ಕೆ ವಿಷಯನಾದವನು. ಎಂದರೆ ನನಗೆ ಒಪ್ಪಿದವನು. ತುಂಬ ಪತಿವ್ರತೆಯಾದ ಸುಕನ್ಯೆಯು ತನ್ನ ತಂದೆಯಾದ ಶರ್ಯಾತಿರಾಜನ ಮಾತಿನಿಂದಲೇ,

**ಚ್ಯವನಂ ಚ ಯಥಾ ಪ್ರಾಪ್ಯ ಪತಿಶುಶ್ರೂಷಣೇ ರತಾ ।**
**ಭರ್ತೃಶುಶ್ರೂಷಣಂ ಸ್ತ್ರೀಣಾಂ ಸ್ವರ್ಗದಂ ಮೋಕ್ಷದಂ ತಥಾ ॥೧೧॥**

ಮುದುಕನಾದ ಚ್ಯವನಮಹರ್ಷಿಯನ್ನು ಪತಿಯಾಗಿ ಪಡೆದು ರಾಜ್ಯಸುಖದಾಸೆಯಿಲ್ಲದೆ, ಪತಿಸೇವೆಯಲ್ಲಿಯೇ ತತ್ಪರಳಾಗಿದ್ದಳೋ, ಅದರಂತೆ ನಾನೂ ರಾಜ್ಯಸುಖದಾಸೆಯನ್ನು ಬಿಟ್ಟು ಆ ಸುದರ್ಶನನನ್ನು ಸೇವಿಸುತ್ತೇನೆ. ಸ್ತ್ರೀಯರಿಗೆ ಪತಿಯ ಸೇವೆಯೇ ಸ್ವರ್ಗವನ್ನೂ ಮೋಕ್ಷವನ್ನೂ ಕೊಡುವುದು.

**ಅಕೈತವಕೃತಂ ನೂನಂ ಸುಖದಂ ಭವತಿ ಸ್ತ್ರಿಯಃ ।**
**ಭಗವತ್ಯಾ ಸಮಾದಿಷ್ಟಂ ಸ್ವಪ್ನೇ ವರಮನುತ್ತಮಂ ॥೧೨॥**

ಮತ್ತು ಕಪಟವಿಲ್ಲದೆ ಮಾಡಿರತಕ್ಕ ಆ ಪತಿಸೇವೆಯೇ ಸ್ತ್ರೀಗೆ ಸುಖವನ್ನು ಕೊಡುತ್ತದೆ. ಅಲ್ಲದೆ ಪೂಜ್ಯಳಾದ ಆದಿಶಕ್ತಿದೇವಿಯೇ ನನಗೆ ಸ್ವಪ್ನದಲ್ಲಿ ಆ ಸುದರ್ಶನನೇ ಶ್ರೇಷ್ಠನಾದ ವರನೆಂದು ಅಪ್ಪಣೆಮಾಡಿರುತ್ತಾಳೆ.

**ತಮೃತೇಽಹಂ ಕಥಂ ಚಾನ್ಯಂ ಸಂಶ್ರಯಾಮಿ ನೃಪಾತ್ಮಜಂ ।**
**ಮಚ್ಚಿತ್ತಭಿತ್ತೌ ಲಿಖಿತೋ ಭಗವತ್ಯಾ ಸುದರ್ಶನಃ ॥೧೩॥**

ಹೀಗಿರುವಾಗ ಆ ಸುದರ್ಶನನನ್ನು ಬಿಟ್ಟು ಇನ್ನೊಬ್ಬ ರಾಜಕುಮಾರನನ್ನು ನಾನು ಹೇಗೆ ವರಿಸಲಿ? ಪೂಜ್ಯಳಾದ ಆ ದೇವಿಯು ಆ ಸುದರ್ಶನನನ್ನು ನನ್ನ ಮನಸ್ಸೆಂಬ ಗೋಡೆಯಲ್ಲಿ ಅಳಿಸದಂತೆ ಬರೆದಿಟ್ಟಿರುತ್ತಾಳೆ.

**ತಂ ವಿಹಾಯ ಪ್ರಿಯಂ ಕಾಂತಂ ಕರಿಷ್ಯೇಽಹಂ ನ ಚಾಪರಂ ।**

ಆದುದರಿಂದ ಮನೋಹರನಾದ ಆ ಸುದರ್ಶನನನ್ನು ಪ್ರಿಯತಮನನ್ನಾಗಿ ಮಾಡಿಕೊಳ್ಳುವುದನ್ನು ಬಿಟ್ಟು ಇನ್ನೊಬ್ಬನನ್ನು ಪ್ರಿಯನನ್ನಾಗಿ ಮಾಡಿಕೊಳ್ಳಲಾರೆನು.

॥ ವ್ಯಾಸ ಉವಾಚ ॥

**ಪ್ರತ್ಯಾದಿಷ್ಟಾಽಥ ವೈದರ್ಭೀ ತಯಾ ಬಹುನಿದರ್ಶನೈಃ ॥೧೪॥**

ವ್ಯಾಸಮುನಿಯು ಹೇಳಿದನು—ಹೀಗೆ ಆ ಶಶಿಕಲೆಯು ಸುಕನ್ಯೆ ಮೊದಲಾದವರ ಅನೇಕ ದೃಷ್ಟಾಂತಗಳನ್ನು ಕೊಟ್ಟು ತನ್ನ ತಾಯಿಯ ಮಾತುಗಳನ್ನು ತಿರಸ್ಕರಿಸಿದಳು.

**ಭರ್ತಾರಂ ಸರ್ವಮಾಚಷ್ಟ ಪುತ್ರ್ಯೋಕ್ತಂ ವಚನಂ ಭೃಶಂ ।**
**ವಿವಾಹಸ್ಯ ದಿನಾದರ್ವಾಗಾಪ್ತಂ ಶ್ರುತಸಮನ್ವಿತಂ ॥೧೫॥**

ಆಮೇಲೆ ಆ ವೈದರ್ಭಿಯು ತನ್ನ ಗಂಡನಾದ ಸುಬಾಹುವಿಗೆ ಶಶಿಕಲೆಯು ಹೇಳಿದುದನ್ನೆಲ್ಲವನ್ನೂ ಹೇಳಿದಳು. ಆಮೇಲೆ ವಿವಾಹಕ್ಕಿಂತಲೂ ಒಂದು ದಿವಸ ಮುಂಚಿತವಾಗಿ ಆ ಶಶಿಕಲೆಯು ಒಳ್ಳೆಯ ಪಂಡಿತನಾದ,

**ದ್ವಿಜಂ ಶಶಿಕಲಾ ತತ್ರ ಪ್ರೇಷಯಾಮಾಸ ಸತ್ವರಂ ।**
**ಯಥಾ ನ ವೇದ ಮೇ ತಾತೋ ತಥಾ ಗಚ್ಛ ಸುದರ್ಶನಂ ॥೧೬॥**

ಓರ್ವ ಬ್ರಾಹ್ಮಣನನ್ನು ಆ ಸುದರ್ಶನನಿರುವಲ್ಲಿಗೆ ಜಾಗ್ರತೆಯಾಗಿ ಕಳುಹಿಸಿದಳು. ಮತ್ತು ಅವನು ಹೋಗುವಾಗ ಆ ಬ್ರಾಹ್ಮಣನೊಡನೆ ಹೀಗೆ ಹೇಳಿದಳು. ಓ ಬ್ರಾಹ್ಮಣನೇ, ನನ್ನ ತಂದೆಗೆ ಗೊತ್ತಾಗದಂತೆ ಆ ಸುದರ್ಶನನೆಡೆಗೆ ಹೋಗು.

**ಭಾರದ್ವಾಜಾಶ್ರಮೇ ಬ್ರೂಹಿ ಮದ್ವಾಕ್ಯಾತ್ತರಸಾ ವಿಭೋ ।**
**ಪಿತ್ರಾ ಮೇ ಸಂಭೃತಃ ಕಾಮಂ ಮದರ್ಥೇನ ಸ್ವಯಂವರಃ ॥೧೭॥**

ಓ ಸಮರ್ಥನಾದ ಬ್ರಾಹ್ಮಣನೇ, ಭರದ್ವಾಜರ ಆಶ್ರಮದಲ್ಲಿರುವ ಆ ಸುದರ್ಶನನನ್ನು ಕುರಿತು ನಾನು ಹೀಗೆ ಹೇಳಿದೆನೆಂದು ಹೇಳು. ಓ ಸ್ವಾಮಿಯೇ, ನನ್ನ ತಂದೆಯು ನನಗೋಸ್ಕರವಾಗಿ ಸ್ವಯಂವರವನ್ನು ಸಿದ್ಧಗೊಳಿಸಿದ್ದಾನೆ.

**ಆಗಮಿಷ್ಯಂತಿ ರಾಜಾನೋ ಬಲಯುಕ್ತಾ ಹ್ಯನೇಕಶಃ ।**
**ಮಯಾ ತ್ವಂ ವೈ ವೃತಶ್ಚಿತ್ತೇ ಸರ್ವಥಾ ಪ್ರೀತಿಪೂರ್ವಕಂ ॥೧೮॥**

ನನ್ನನ್ನು ವರಿಸುವುದಕ್ಕಾಗಿ ಅನೇಕಜನ ರಾಜರು ತುಂಬ ಸೈನ್ಯ ಮುಂತಾದ ಬಲದಿಂದ ಕೂಡಿದವರಾಗಿ ಬರುತ್ತಾರೆ. ಆದರೆ ನಾನು ನಿನ್ನನ್ನು ಮನಸ್ಸಿನಲ್ಲಿ ಎಲ್ಲ ರೀತಿಯಿಂದಲೂ ಪ್ರೇಮದಿಂದ ವರಿಸಿರುತ್ತೇನೆ.

**ಭಗವತ್ಯಾ ಸಮಾದಿಷ್ಟಃ ಸ್ವಪ್ನೇ ಮನು ಸುರೋಪಮ ।**
**ವಿಷಮದ್ಮಿ ಹುತಾಶೇ ವಾ ಪ್ರಪತಾಮಿ ಪ್ರದೀಪಿತೇ ॥೧೯॥**

ದೇವತೆಗಳಂತಿರತಕ್ಕ ಓ ಸುದರ್ಶನನೇ, ಆದಿಶಕ್ತಿಯು ಸ್ವಪ್ನದಲ್ಲಿ ಬಂದು ನೀನೇ ನನ್ನ ಪತಿಯೆಂದು ಅಪ್ಪಣೆಮಾಡಿರುತ್ತಾಳೆ. ನೀನು ದೊರೆಯದಿದ್ದರೆ ವಿಷವನ್ನಾದರೂ ತಿನ್ನುವೆನು, ತುಂಬ ಉರಿಯುತ್ತಿರುವ ಬೆಂಕಿಯಲ್ಲಾದರೂ ಬಿದ್ದು ಸಾಯುವೆನು.

**ವರಯೇ ತ್ವದೃತೇ ನಾನ್ಯಂ ಪಿತೃಭ್ಯಾಂ ಪ್ರೇರಿತಾಪಿ ವಾ ।**
**ಮನಸಾ ಕರ್ಮಣಾ ವಾಚಾ ಸಂವೃತಸ್ತ್ವಂ ಮಯಾ ವರಃ ॥೨೦॥**

ಆದರೆ ನಿನ್ನನ್ನು ಬಿಟ್ಟು ನನ್ನ ತಂದೆತಾಯಿಗಳಿಂದ ಪ್ರೇರಿಸಲ್ಪಟ್ಟರೂ ಇನ್ನೊಬ್ಬನನ್ನು ನಾನು ವರಿಸುವುದಿಲ್ಲವು. ಮನಸ್ಸಿನಿಂದಲೂ, ಕರ್ಮದಿಂದಲೂ, ವಾಕ್ಕಿನಿಂದಲೂ ನಿನ್ನನ್ನೇ ನಾನು ವರಿಸಿರುವೆನು.

**ಭಗವತ್ಯಾಃ ಪ್ರಸಾದೇನ ಶರ್ಮಾವಾಭ್ಯಾಂ ಭವಿಷ್ಯತಿ ।**
**ಆಗಂತವ್ಯಂ ತ್ವಯಾತ್ರೈವ ದೈವಂ ಕೃತ್ವಾ ಪರಂ ಬಲಂ ॥೨೧॥**

ಮಹಾಮಹಿಮಶಾಲಿನಿಯಾದ, ಸರ್ವಸಮರ್ಥಳಾದ ಆ ಭಗವತಿಯ ಅನುಗ್ರಹದಿಂದ ನಮ್ಮಿಬ್ಬರಿಗೂ ಸುಖವುಂಟಾಗುವುದು. ನೀನು ಆ ದೇವಿಯ ಬಲವನ್ನೇ ಮುಖ್ಯವಾದ ಬೆಂಬಲವಾಗಿಟ್ಟುಕೊಂಡು ಇಲ್ಲಿಗೆ ಖಂಡಿತವಾಗಿಯೂ ಬರಬೇಕು.

**ಯದಧೀನಂ ಜಗತ್ಸರ್ವಂ ವರ್ತತೇ ಸಚರಾಚರಂ ।**
**ಭಗವತ್ಯಾ ಯದಾದಿಷ್ಟಂ ನ ತನ್ಮಿಥ್ಯಾ ಭವಿಷ್ಯತಿ ॥೨೨॥**

ಯಾವ ದೇವಿಯ ವಶದಲ್ಲಿ ಚರಾಚರರೂಪವಾದ ಸಮಸ್ತಪ್ರಪಂಚವೂ ಇರುವುದೋ ಆ ದೇವಿಯು, ನೀನೇ ನನಗೆ ಪತಿಯೆಂದು ಅಪ್ಪಣೆಮಾಡಿರುವಳು. ಅದು ಎಂದಿಗೂ ಸಟೆಯಾಗುವುದಿಲ್ಲವು.

**ಯದ್ವಶೇ ದೇವತಾಃ ಸರ್ವಾ ವರ್ತಂತೇ ಶಂಕರಾದಯಃ ।**
**ವಕ್ತವ್ಯೋಽಸೌ ತ್ವಯಾ ಬ್ರಹ್ಮನ್ನೇಕಾಂತೇ ವೈ ನೃಪಾತ್ಮಜಃ ॥೨೩॥**

ಯಾವ ದೇವಿಯ ವಶದಲ್ಲಿ ಶಂಕರನೇ ಮೊದಲಾದ ದೇವತೆಗಳೂ ಸಹ ಇರುವರೋ ಅವಳ ಆಜ್ಞೆಯು ಸುಳ್ಳಾಗಲಾರದು. ಮತ್ತು ಓ ಬ್ರಾಹ್ಮಣೋತ್ತ

ಮನೇ, ಈ ಇಷ್ಟುಮಾತುಗಳನ್ನು ರಾಜಕುಮಾರನಾದ ಸುದರ್ಶನನಿಗೆ ನೀನು ಏಕಾಂತದಲ್ಲಿ ಹೇಳಬೇಕು.

**ಯಥಾ ಭವತಿ ಮೇ ಕಾರ್ಯಂ ತತ್ಕರ್ತವ್ಯಂ ತ್ವಯಾಽನಘ ।**
**ಇತ್ಯುಕ್ತ್ವಾ ದಕ್ಷಿಣಾಂ ದತ್ವಾ ಮುನಿರ್ವ್ಯಾಸಾರಿತಸ್ತಯಾ ॥೨೪॥**

ಓ ಪರಿಶುದ್ಧನಾದ ಬ್ರಾಹ್ಮಣನೇ, ಒಟ್ಟಿನಲ್ಲಿ ನನ್ನ ಕೆಲಸವು ಹೇಗೆ ಕೈಗೂಡುವುದೋ ಅದರಂತೆ ಮಾಡಬೇಕು. ಎಂದು ಹೇಳಿ ಶಶಿಕಲೆಯು ಆ ಬ್ರಾಹ್ಮಣನಿಗೆ ಸಂಭಾವನೆಯನ್ನು ಕೊಟ್ಟು ಭಾರದ್ವಾಜಾಶ್ರಮಕ್ಕೆ ಕಳುಹಿಸಿದಳು.

**ಗತ್ವಾ ಸರ್ವಂ ನಿವೇದ್ಯಾಶು ತತ್ರ ಪ್ರತ್ಯಾಗತೋ ದ್ವಿಜಃ ।**
**ಸುದರ್ಶನಸ್ತು ತಜ್ಜ್ಞಾತ್ವಾ ನಿಶ್ಚಯಂ ಗಮನೇ ತದಾ ॥೨೫॥**

**ಚಕಾರ ಮುನಿನಾ ತೇನ ಪ್ರೇರಿತಃ ಪರಮಾದರಾತ್ ।**

ಮುಂದೆ ಆ ಬ್ರಾಹ್ಮಣನು ಜಾಗ್ರತೆಯಾಗಿ ಭಾರದ್ವಾಜಾಶ್ರಮಕ್ಕೆ ತೆರಳಿ ಸುದರ್ಶನನಿಗೆ ಎಲ್ಲವನ್ನೂ ಹೇಳಿ ತಿರುಗಿ ಬಂದನು. ಅತ್ತಲಾಗಿ ಸುದರ್ಶನನು, ಶಶಿಕಲೆಯು ಹೇಳಿ ಕಳುಹಿಸಿದ ಮಾತುಗಳನ್ನು ಕೇಳಿ ಆಗ ಆ ಭಾರದ್ವಾಜಮುನಿಯಿಂದಲೂ ಸಹ ತುಂಬ ಆದರದಿಂದ ಪ್ರೇರಿಸಲ್ಪಟ್ಟವನಾಗಿ ಸ್ವಯಂವರಕ್ಕೆ ಹೊರಡಲು ನಿಶ್ಚಯವನ್ನು ಮಾಡಿದನು.

॥ ವ್ಯಾಸ ಉವಾಚ ॥

**ಗಮನಾಯೋದ್ಯತಂ ಪುತ್ರಂ ತಮುವಾಚ ಮನೋರಮಾ ॥೨೬॥**

ವ್ಯಾಸಮುನಿಯು ಹೇಳಿದನು—ಹೀಗೆ ಸ್ವಯಂವರಕ್ಕೆ ಹೋಗಲು ಸಿದ್ಧನಾಗಿರುವ ಮಗನನ್ನು ನೋಡಿ ಆ ಸುದರ್ಶನನ ತಾಯಿಯಾದ ಮನೋರಮೆಯು ಹೀಗೆ ಹೇಳಿದಳು.

**ವೇಪಮಾನಾತಿದುಃಖಾರ್ತಾ ಜಾತತ್ರಾಸಾಽಶ್ರುಲೋಚನಾ ।**
**ಕುತ್ರ ಗಚ್ಛಸಿ ತತ್ರಾದ್ಯ ಸಮಾಜೇ ಭೂಭೃತಾಂ ಕಿಲ ॥೨೭॥**

ಆ ಮನೋರಮೆಯು ತುಂಬ ದುಃಖಗೊಂಡವಳಾಗಿ, ನಡುಗುತ್ತಾ ಕಣ್ಣಿನಲ್ಲಿ ತುಂಬಿದ ನೀರುಳ್ಳವಳಾಗಿ— ಓ ಮಗನೇ, ಎಲ್ಲಿಗೆ ಹೋಗುತ್ತಲಿರುವೆ? ರಾಜರೆಲ್ಲರೂ ಸೇರಿರುವ ಆ ಸ್ವಯಂವರಕ್ಕೆ ಹೋಗುತ್ತಿರುವಿಯಲ್ಲವೇ? ಎಂದು ಕೇಳಿದಳು.

**ಏಕಾಕೀ ಕೃತವೈರಶ್ಚ ಕಿಂ ವಿಚಿಂತ್ಯ ಸ್ವಯಂವರೇ ।**
**ಯುಧಾಜಿದ್ಧಂತುಕಾಮಸ್ತ್ವಾಂ ಸಮೇಷ್ಯತಿ ಮಹೀಪತಿಃ ॥೨೮॥**

ನೀನು ಯುಧಾಜಿತನ ದ್ವೇಷಕ್ಕೆ ಪಾತ್ರನಾದವನು. ಮತ್ತು ನೀನೊಬ್ಬನೇ ಆಗಿರುವೆ. ನೀನು ಏನನ್ನು ಮಾಡಬೇಕೆಂದು ಯೋಚಿಸಿ ಸ್ವಯಂವರಕ್ಕೆ ಹೊರಟಿರುತ್ತೀಯೆ? ನಿನ್ನನ್ನು ಕೊಲ್ಲಬೇಕೆಂದು ಅಪೇಕ್ಷಿಸುತ್ತಿರುವ ಆ ಯುಧಾಜಿತರಾಜನೂ ಅಲ್ಲಿಗೆ ಬರುವನು.

**ನ ತೇಽನ್ಯೋಽಸ್ತಿ ಸಹಾಯಶ್ಚ ತಸ್ಮಾನ್ಮಾ ವ್ರಜ ಪುತ್ರಕ ।**
**ಏಕಪುತ್ರಾಽತಿದೀನಾಸ್ಮಿ ತವಾಽಽಧಾರಾ ನಿರಾಶ್ರಯಾ ॥೨೯॥**

ಓ ನನ್ನ ಮುದ್ದುಮಗನೇ, ನಿನಗೆ ಇನ್ನಾರೂ ಸಹಾಯಕರಿಲ್ಲವು. ಆದುದರಿಂದ ಅಲ್ಲಿಗೆ ನೀನು ಹೋಗಬೇಡ. ನನಗೆ ನೀನೊಬ್ಬನೇ ಮಗನು. ನೀನೇ ನನಗೆ ಆಧಾರನು. ನಿನ್ನನ್ನು ಬಿಟ್ಟು ನನಗೆ ಇನ್ನಾವ ಆಶ್ರಯವೂ ಇಲ್ಲವು. ಆದುದರಿಂದ ನಾನು ತುಂಬ ದುಃಖಗೊಂಡವಳಾಗಿರುತ್ತೇನೆ.

**ನಾರ್ಹಸಿ ತ್ವಂ ಮಹಾಭಾಗ ನಿರಾಶಾಂ ಕರ್ತುಮದ್ಯ ಮಾಂ ।**
**ಪಿತಾ ಮೇ ನಿಹತೋ ಯೇನ ಸೋಽಪಿ ತತ್ರಾಽಽಗತೋ ನೃಪಃ ॥೩೦॥**

ಆದುದರಿಂದ ಓ ಭಾಗ್ಯಶಾಲಿಯೇ, ಈಗ ನನ್ನನ್ನು ಯಾವುದೊಂದು ಆಶೆಯೂ, ನಿರೀಕ್ಷಣೆ ಭರವಸೆಗಳೂ ಇಲ್ಲದಂತೆ ಮಾಡಿ ಹೋಗುವುದು ನಿನಗೆ ನ್ಯಾಯವಲ್ಲವು. ನನ್ನ ತಂದೆಯನ್ನು ಕೊಂದ ಆ ಯುಧಾಜಿತನೂ ಅಲ್ಲಿಗೆ ಬರುತ್ತಾನೆ.

**ಏಕಾಕಿನಂ ಗತಂ ತತ್ರ ಯುಧಾಜಿತ್ತ್ವಾಂ ಹನಿಷ್ಯತಿ ।**

ಆಮೇಲೆ ಹೀಗೆ ಒಬ್ಬನೇ ಅಸಹಾಯನಾಗಿ ಅಲ್ಲಿಗೆ ಹೋಗಿರುವ ನಿನ್ನನ್ನು ಆ ಯುಧಾಜಿತನು ಕೊಲ್ಲುವನು.

|| ಸುದರ್ಶನ ಉವಾಚ ||

**ಭವಿತವ್ಯಂ ಭವತ್ಯೇವ ನಾತ್ರ ಕಾರ್ಯಾ ವಿಚಾರಣಾ ||೩೦||**

ಸುದರ್ಶನನು ಹೇಳಿದನು—ಓ ಮಾತೆಯೇ, ಯಾವುದಾಗಬೇಕೆಂದಿರು ವುದೋ ಅದು ಆಗಿಯೇ ಆಗುವುದು. ಅದನ್ನು ಯಾರೂ ತಪ್ಪಿಸಲಾರರು. ಆದುದ ರಿಂದ ಇದರಲ್ಲಿ ಚರ್ಚೆಯನ್ನು ಮಾಡಬಾರದು.

**ಆದೇಶಾಚ್ಚ ಜಗನ್ಮಾತುರ್ಗಚ್ಛಾಮ್ಯದ್ಯ ಸ್ವಯಂವರೇ ।**
**ಮಾ ಶೋಕಂ ಕುರು ಕಲ್ಯಾಣಿ ಕ್ಷತ್ರಿಯಾಸಿ ವರಾನನೇ ||೩೧||**

ನಾನು ಜಗತ್ತಿಗೇ ತಾಯಿಯಾದ ಆ ದೇವಿಯ ಅಪ್ಪಣೆಯಂತೆ ಈಗ ಸ್ವಯಂ ವರಕ್ಕೆ ಹೋಗುತ್ತೇನೆ. ಓ ಮಂಗಳಸ್ವರೂಪಳೇ, ದುಃಖವನ್ನು ಮಾಡಬೇಡ. ತುಂಬ ಸುಂದರವಾದ ಮುಖವುಳ್ಳ ಓ ತಾಯಿಯೆ, ನೀನು ಕ್ಷತ್ರಿಯಳಾಗಿರುವೆ. ಆದುದರಿಂದ ಹೆದರುವುದಾಗಲೀ, ದುಃಖಿಸುವುದಾಗಲೀ ನಿನಗೆ ತಕ್ಕುದಲ್ಲವು.

**ನ ಬಿಭೇಮಿ ಪ್ರಸಾದೇನ ಭಗವತ್ಯಾ ನಿರಂತರಂ ।**

ನಾನು ಪೂಜ್ಯಳಾದ ಆ ದೇವಿಯ ಅನುಗ್ರಹದಿಂದ ಯಾವಾಗಲೂ ಹೆದರುವು ದಿಲ್ಲವು.

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ರಥಮಾರುಹ್ಯ ಗಂತುಕಾಮಂ ಸುದರ್ಶನಂ ||೩೩||**

**ದೃಷ್ಟ್ವಾ ಮನೋರಮಾ ಪುತ್ರಮಾಶೀರ್ಭಿಶ್ಚಾತ್ಯಮೋದಯತ್ ।**
**ಅಗ್ರತಸ್ತೇಽಮ್ಬಿಕಾ ಪಾತು ಪಾರ್ವತೀ ಪಾತು ಪೃಷ್ಠತಃ ||೩೪||**

ವ್ಯಾಸಮುನಿಯು ಹೇಳಿದನು. ಹೀಗೆ ಹೇಳಿ ರಥವನ್ನೇರಿ ಹೊರಡಲು ಸಿದ್ಧನಾದ ಆ ತನ್ನ ಪುತ್ರನನ್ನು ನೋಡಿ ಮನೋರಮೆಯು ಅವನನ್ನು ಆಶೀರ್ವಾದ ಗಳಿಂದ ತುಂಬ ಹರ್ಷಗೊಳಿಸಿದಳು. ಓ ಮಗನೇ, ಜಗನ್ಮಾತೆಯಾದ ಆ ದೇವಿಯು ನಿನ್ನನ್ನು ಎದುರುಗಡೆಯಲ್ಲಿ ಕಾಪಾಡಲಿ. ಹಿಂಭಾಗದಲ್ಲಿ ಪಾರ್ವತಿಯು ರಕ್ಷಿಸಲಿ.

**ವಾರಾಹೀ ವಿಷಮೇ ಮಾರ್ಗೇ ದುರ್ಗಾ ದುರ್ಗೇಷು ಕರ್ಹಿಚಿತ್ ।**
**ಕಾಲಿಕಾ ಕಲಹೇ ಘೋರೇ ಪಾತು ತ್ವಾಂ ಪರಮೇಶ್ವರೀ ||೩೫||**

ವಾರಾಹೀ ಎಂದರೆ ವರಾಹಮೂರ್ತಿಯ ಶಕ್ತಿಯು ನಿನ್ನನ್ನು ತುಂಬ ಕಷ್ಟವಾದ ದಾರಿಯಲ್ಲಿ ವಿಪತ್ತುಗಳಿಂದ ರಕ್ಷಿಸಲಿ. ದುರ್ಗೆಯು, ಜಲದುರ್ಗವೇ ಮೊದಲಾದ ಪ್ರವೇಶಿಸಲು ಕಷ್ಟವಾದ ದುರ್ಗಗಳಲ್ಲಿ ರಕ್ಷಿಸಲಿ. ಭಯಂಕರವಾದ ಯುದ್ಧದಲ್ಲಿ ಜಗತ್ತಿಗೇ ಒಡೆಯಳಾದ ಕಾಳಿಯು ನಿನ್ನನ್ನು ಕಾಪಾಡಲಿ.

**ಮಂಡಪೇ ತತ್ರ ಮಾತಂಗೀ ತಥಾ ಸೌಮ್ಯಾ ಸ್ವಯಂವರೇ ।**
**ಭವಾನೀ ಭೂಪಮಧ್ಯೇ ತು ಪಾತು ತ್ವಾಂ ಭವಮೋಚಿನೀ ॥೩೬॥**

ಆ ಸ್ವಯಂವರಮಂಟಪದಲ್ಲಿ ಮಾತಂಗೀ ಎಂದರೆ ಮತಂಗನೆಂಬ ಋಷಿಯ ಪುತ್ರಿಯೂ, ಸ್ವಯಂವರದಲ್ಲಿ ಚಂದ್ರಶಕ್ತಿರೂಪಳಾದ ಅಥವಾ ಶಾಂತಸ್ವಭಾವದಿಂದ ಯುಕ್ತಳಾದ ಸೌಮ್ಯಳೂ, ಆ ರಾಜರುಗಳ ಮಧ್ಯದಲ್ಲಿ ಸಂಸಾರಬಂಧನವನ್ನು ಬಿಡಿಸುವ ಭವಾನಿಯೂ ರಕ್ಷಿಸಲಿ.

**ಗಿರಿಜಾ ಗಿರಿದುರ್ಗೇಷು ಚಾಮುಂಡಾ ಚತ್ವರೇಷು ಚ ।**
**ಕಾಮುಗಾ ಕಾನನೇಷ್ವೇವಂ ರಕ್ಷತು ತ್ವಾಂ ಸನಾತನೀ ॥೩೭॥**

ಬೆಟ್ಟಗಳ ಕಷ್ಟವಾದ ಸ್ಥಳಗಳಲ್ಲಿ ಗಿರಿಜೆಯೂ, ಚೌಕಗಳಲ್ಲಿ ಚಾಮುಂಡಾ ದೇವಿಯೂ, ಕಾಡುಗಳಲ್ಲಿ, ಕಾಮುಗಾ ಎಂದರೆ ಬೇಕಾದಲ್ಲಿ ಸಂಚರಿಸುವ ದೇವಿಯೂ, ಹೀಗೆ ಆದಿಶಕ್ತಿಯಾದ ಆ ದೇವಿಯು ನಿನ್ನನ್ನು ಸಲಹಲಿ.

**ವಿವಾದೇ ವೈಷ್ಣವೀ ಶಕ್ತಿರವತಾತ್ತ್ವಾಂ ರಘೂದ್ವಹ ।**
**ಭೈರವೀ ಚ ರಣೇ ಸೌಮ್ಯ ಶತ್ರೂಣಾಂ ವೈ ಸಮಾಗಮೇ ॥೩೮॥**

ಓ ರಘುಕುಲದ ರಾಜರಲ್ಲಿ ಶ್ರೇಷ್ಠನಾದ ಸುದರ್ಶನನೇ, ಮಾತಿನ ಜಗಳಗಳಲ್ಲಿ ವಿಷ್ಣುವಿನ ಶಕ್ತಿಸ್ವರೂಪಳಾದ ಆ ದೇವಿಯು ನಿನ್ನನ್ನು ಕಾಪಾಡಲಿ. ಮತ್ತು ಎಲೈ ಮಂಗಳಸ್ವರೂಪನೇ, ಶತ್ರುಗಳೊಡನೆ ಯುದ್ಧಕ್ಕಾಗಿ ಸಂಧಿಸಿದಾಗ ಕಾಲಭೈರವನ ಶಕ್ತಿಯಾದ ಭೈರವಿಯು ನಿನ್ನನ್ನು ಸಲಹಲಿ.

**ಸರ್ವದಾ ಸರ್ವದೇಶೇಷು ಪಾತು ತ್ವಾಂ ಭುವನೇಶ್ವರೀ ।**
**ಮಹಾಮಾಯಾ ಜಗದ್ಧಾತ್ರೀ ಸಚ್ಚಿದಾನಂದರೂಪಿಣೀ ॥೩೯॥**

ಎಲ್ಲಾ ದೇಶಗಳಲ್ಲೂ ಎಲ್ಲಾ ಕಾಲಗಳಲ್ಲೂ ಮಹಾಮಾಯಾಸ್ವರೂಪಳಾದ, ಜಗತ್ತನ್ನೆಲ್ಲಾ ಸೃಷ್ಟಿಸುವ, ಸತ್ಯಸ್ವರೂಪಳೂ ಜ್ಞಾನಸ್ವರೂಪಳೂ ಆನಂದಸ್ವರೂಪಳೂ ಆದ ಆ ಭುವನೇಶ್ವರಿಯು ನಿನ್ನನ್ನು ರಕ್ಷಿಸಲಿ.

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ಸಾ ತದಾ ಮಾತಾ ವೇಪಮಾನಾ ಭಯಾಕುಲಾ ।**
**ಉವಾಚಾಹಂ ತ್ವಯಾ ಸಾರ್ಧಮಾಗಮಿಷ್ಯಾಮಿ ಸರ್ವಥಾ ॥೪೦॥**

ವ್ಯಾಸಮುನಿಯು ಹೇಳಿದನು—ಹೀಗೆ ತನ್ನ ಪುತ್ರನನ್ನು ಕುರಿತು ಹೇಳಿ ಆ ಮನೋರಮೆಯು ತುಂಬ ಹೆದರಿಕೆಯಿಂದ ಕೂಡಿದವಳಾಗಿ ನಡುಗುತ್ತಾ ತಿರುಗಿ ಹೇಳಿದಳು. ನಿನ್ನೊಡನೆ ನಾನೂ ಸಹ ಖಂಡಿತವಾಗಿಯೂ ಬರುವೆನು.

**ನಿಮಿಷಾರ್ಧಂ ವಿನಾ ತ್ವಾಂ ವೈ ನಾಹಂ ಸ್ಥಾತುಮಿಹೋತ್ಸಹೇ ।**
**ಸಹೈವ ನಯ ಮಾಂ ವತ್ಸ ಯತ್ರ ತೇ ಗಮನೇ ಮತಿಃ ॥೪೧॥**

ನಿನ್ನನ್ನು ಬಿಟ್ಟು ಒಂದರ್ಧ ನಿಮಿಷವೂ ನಾನು ಇರಲಾರೆನು. ಓ ಮಗನೇ, ನೀನೆಲ್ಲಿಗೆ ಹೋಗಬೇಕೆಂದಿರುವೆಯೋ ಅಲ್ಲಿಗೆ ನಿನ್ನೊಡನೆ ನನ್ನನ್ನೂ ಕರೆದುಕೊಂಡು ಹೋಗು.

**ಇತ್ಯುಕ್ತ್ವಾ ನಿಃಸೃತಾ ಮಾತಾ ಧಾತ್ರೇಯಿಸಂಯುತಾ ತದಾ ।**
**ವಿಪ್ರೈರ್ದತ್ತಾಶಿಷಃ ಸರ್ವೇ ನಿರ್ಯಯುರ್ಹರ್ಷಸಂಯುತಾಃ ॥೪೨॥**

ಹೀಗೆ ಹೇಳಿ ಆ ಮನೋರಮೆಯು ಆಗ ತನ್ನ ಸಖಿಯೊಂದಿಗೆ ಹೊರಟು ನಿಂತಳು. ಆಮೇಲೆ ಅವರು ಮೂವರೂ ಬ್ರಾಹ್ಮಣರ ಆಶೀರ್ವಾದವನ್ನು ಪಡೆದವರಾಗಿ ಮತ್ತು ತುಂಬ ಸಂತೋಷದಿಂದ ಕೂಡಿದವರಾಗಿ ಪ್ರಯಾಣಮಾಡಿದರು.

**ವಾರಾಣಸ್ಯಾಂ ತತಃ ಪ್ರಾಪ್ತೋ ರಥೇನೈಕೇನ ರಾಘವಃ ।**
**ಜ್ಞಾತಃ ಸುಬಾಹುನಾ ತತ್ರ ಪೂಜಿತಶ್ಚಾರ್ಹಣಾದಿಭಿಃ ॥೪೩॥**

ರಘುವಂಶದವನಾದ ಆ ಸುದರ್ಶನನು ತನ್ನ ತಾಯಿ ಮತ್ತು ಅವಳ ಸಖಿಯೊಡನೆ ಆ ತನ್ನ ಒಂದು ರಥದಿಂದಲೇ ಪ್ರಯಾಣಮಾಡುತ್ತಾ ಕಾಶೀಪಟ್ಟಣವನ್ನು

ತಲಪಿದನು. ಅಲ್ಲಿ ಸುಬಾಹುವು ಇವರು ಬಂದಿರುವುದನ್ನು ತಿಳಿದು ಅತಿಥಿಸತ್ಕಾರ ಗಳಿಂದ ಅವರನ್ನು ಪೂಜಿಸಿದನು.

**ನಿವೇಶಾರ್ಥಂ ಗೃಹಂ ದತ್ತಮನ್ನಪಾನಾದಿಕಂ ತಥಾ ।**
**ಸೇವಕಂ ಸಮನುಜ್ಞಾಪ್ಯ ಪರಿಚರ್ಯಾರ್ಥಮೇವ ಚ ॥೪೪॥**

ಮತ್ತು, ಅವರ ವಾಸಕ್ಕಾಗಿ ಒಂದು ಮನೆಯನ್ನು ಬಿಟ್ಟುಕೊಟ್ಟನು. ಭೋಜನಪಾನ ಮುಂತಾದವುಗಳ ವ್ಯವಸ್ಥೆಯೂ ಚನ್ನಾಗಿ ಆಯಿತು. ಅಲ್ಲದೆ ಆ ಸುಬಾಹುವು ಇವರ ಸೇವೆಗಾಗಿ ಸೇವಕನೊಬ್ಬನನ್ನು ನಿಯಮಿಸಿದನು.

**ಮಿಲಿತಾಸ್ತ್ವಥ ರಾಜಾನೋ ನಾನಾದೇಶಾಧಿಪಾಃ ಕಿಲ ।**
**ಯುಧಾಜಿದಪಿ ಸಂಪ್ರಾಪ್ತೋ ದೌಹಿತ್ರೇಣ ಸಮನ್ವಿತಃ ॥೪೫॥**

ಆಮೇಲೆ ಅಲ್ಲಿ ಅನೇಕ ದೇಶಗಳ ಒಡೆಯರಾದ ಅನೇಕ ರಾಜರು ಸ್ವಯಂ ವರಕ್ಕಾಗಿ ಬಂದು ಶೇರಿದರು. ಯುಧಾಜಿತನೂ ಸಹ ತನ್ನ ಮಗಳ ಮಗನಾದ ಶತ್ರುಜಿತನೊಂದಿಗೆ ಅಲ್ಲಿಗೆ ಬಂದು ಸೇರಿದನು.

**ಕರೂಷಾಧಿಪತಿಶ್ಚೈವ ತಥಾ ಮದ್ರೇಶ್ವರೋ ನೃಪಃ ।**
**ಸಿಂಧುರಾಜಸ್ತಥಾ ವೀರೋ ಯೋದ್ಧಾ ಮಾಹಿಷ್ಮತೀಪತಿಃ ॥೪೬॥**

ಕರೂಷದೇಶದ ಒಡೆಯನೂ, ಮದ್ರದೇಶದ ರಾಜನೂ, ವೀರನಾದ ಸಿಂಧು ದೇಶದ ರಾಜನೂ ಮತ್ತು ಒಳ್ಳೆಯ ಯುದ್ಧಮಾಡತಕ್ಕವನಾದ ಮಾಹಿಷ್ಮತೀನಗ ರಿಯ ಒಡೆಯನೂ ಬಂದು ಸೇರಿದರು.

**ಪಾಂಚಾಲಃ ಪರ್ವತೀಯಶ್ಚ ಕಾಮರೂಪೋಽತಿವೀರ್ಯವಾನ್ ।**
**ಕಾರ್ಣಾಟಶ್ಚೋಲದೇಶೀಯೋ ವೈದರ್ಭಶ್ಚ ಮಹಾಬಲಃ ॥೪೭॥**

ಪಾಂಚಾಲದೇಶದ ದೊರೆಯೂ, ಪರ್ವತರಾಜನೂ, ತುಂಬ ಪರಾಕ್ರಮಶಾಲಿ ಯಾದ ಕಾಮರೂಪದೇಶದ ರಾಜನೂ, ಕರ್ಣಾಟದೇಶದ ದೊರೆಯೂ, ಚೋಲ ದೇಶದ ರಾಜನೂ, ತುಂಬ ಬಲಿಷ್ಠನಾದ ವಿದರ್ಭದೇಶದ ರಾಜನೂ ಬಂದು ಸೇರಿದರು.

**ಅಕ್ಷೌಹಿಣೀತ್ರಿಷಷ್ಟಿಶ್ಚ ಮಿಲಿತಾ ಸಂಖ್ಯಯಾ ತದಾ ।**
**ವೇಷ್ಟಿತಾ ನಗರೀ ಸಾ ತು ಸೈನ್ಯೈಃ ಸರ್ವತ್ರ ಸಂಸ್ಥಿತೈಃ ॥೪೮॥**

ಆ ರಾಜರುಗಳು ತಂದಿರತಕ್ಕ ಸೈನ್ಯಸಂಖ್ಯೆಯು ಅರವತ್ತು ಮೂರು ಅಕ್ಷೋಹಿಣಿಯಷ್ಟು ಒಟ್ಟಿನಲ್ಲಿತ್ತು. ಇಷ್ಟು ಸೈನ್ಯಗಳಿಂದ ಆ ಕಾಶೀಪಟ್ಟಣವು ಎಲ್ಲೆಡೆಯಲ್ಲಿಯೂ ತುಂಬಿದ್ದಿತು.

**ಏತೇ ಚಾನ್ಯೇ ಚ ಬಹವಃ ಸ್ವಯಂವರದಿದೃಕ್ಷಯಾ ।**
**ಮಿಲಿತಾಸ್ತತ್ರ ರಾಜಾನೋ ವರವಾರಣಸಂಯುತಾಃ ॥೪೯॥**

ಇವರಲ್ಲದೆ ಇನ್ನೂ ಅನೇಕ ರಾಜರು ಉತ್ತಮವಾದ ಆನೆಗಳಿಂದ ಕೂಡಿಕೊಂಡು ಸ್ವಯಂವರವನ್ನು ನೋಡಲಪೇಕ್ಷೆಯಿಂದ ಅಲ್ಲಿ ಬಂದು ಸೇರಿದರು.

**ಅನ್ಯೋನ್ಯಂ ನೃಪಪುತ್ರಾಸ್ತ ಇತ್ಯೂಚುರ್ಮಿಲಿತಾಸ್ತದಾ ।**
**ಸುದರ್ಶನೋ ನೃಪಸುತೋ ಹ್ಯಾಗತೋಽಸ್ತಿ ನಿರಾಕುಲಃ ॥೫೦॥**

ಆಗ ಆ ರಾಜಕುಮಾರರೆಲ್ಲರೂ ಪರಸ್ಪರ ಸೇರಿಕೊಂಡು ಹೀಗೆ ಮಾತನ್ನಾಡಿಕೊಂಡರು. ರಾಜಕುಮಾರನಾದ ಸುದರ್ಶನನೂ ಬಂದು ನಿಶ್ಚಿಂತತೆಯಿಂದ ಇರುತ್ತಾನೆ.

**ಏಕಾಕೀ ರಥಮಾರುಹ್ಯ ಮಾತ್ರಾ ಸಹ ಮಹಾಮತಿಃ ।**
**ವಿವಾಹಾರ್ಥಮಿಹಾಯಾತಃ ಕಾಕುತ್ಸ್ಥಃ ಕಿಂ ನು ಸಾಂಪ್ರತಂ ॥೫೧॥**

ತುಂಬ ಬುದ್ಧಿಶಾಲಿಯಾದ ಮತ್ತು ಕಕುತ್ಸ್ಥರಾಜನ ವಂಶದವನಾದ ಅವನು ಒಬ್ಬನೇ, ಇನ್ನಾವ ಸಹಾಯವೂ ಇಲ್ಲದೆ, ರಥವನ್ನೇರಿ ತನ್ನ ತಾಯಿಯೊಡನೆ ಸ್ವಯಂವರಕ್ಕಾಗಿ ಇಲ್ಲಿಗೆ ಬಂದಿರುತ್ತಾನೆ. ಹೀಗೆ ಒಬ್ಬನೇ ಬಂದಿರುವುದು ಯೋಗ್ಯವೇ ?

**ಏತಾನ್ ರಾಜಸುತಾಂಸ್ತ್ಯಕ್ತ್ವಾ ಸಸೈನ್ಯಾನ್ಸಾಯುಧಾನಥ ।**
**ಕಿಮೇನಂ ರಾಜಪುತ್ರೀ ಸಾ ವರಿಷ್ಯತಿ ಮಹಾಭುಜಂ ॥೫೨॥**

ಒಳ್ಳೆಯ ಸೈನ್ಯಗಳಿಂದಲೂ, ಆಯುಧಗಳಿಂದಲೂ, ಕೂಡಿದ ಬಲಿಷ್ಠರಾದ ಈ ಎಲ್ಲಾ ರಾಜರ ಕುಮಾರರನ್ನೂ ಬಿಟ್ಟು ಆ ರಾಜಕುಮಾರಿಯು ಮಹಾಭುಜವುಳ್ಳ ಎಂದರೆ ಪರಾಕ್ರಮಶಾಲಿಯಾದ ಈ ಸುದರ್ಶನನನ್ನು ವರಿಸುವಳೇ ?

**ಯುಧಾಜಿದಥ ರಾಜೇಶಸ್ತಾನುವಾಚ ಮಹೀಪತೀನ್ ।**
**ಅಹಮೇನಂ ಹನಿಷ್ಯಾಮಿ ಕನ್ಯಾರ್ಥೇ ನಾತ್ರ ಸಂಶಯಃ ॥೫೩॥**

ಆಗ ರಾಜೋತ್ತಮನಾದ ಯುಧಾಜಿತನು ಆ ರಾಜರೆಲ್ಲರನ್ನೂ ಕುರಿತು ಹೇಳಿದನು—ನಾನು ಆ ರಾಜಪುತ್ರಿಗಾಗಿ ಈ ಸುದರ್ಶನನನ್ನು ಕೊಲ್ಲುವೆನು. ಇದರಲ್ಲಿ ಸಂಶಯವಿಲ್ಲ.

**ಕೇರಲಾಧಿಪತಿಃ ಪ್ರಾಹ ತಂ ತದಾ ನೀತಿಸತ್ತಮಃ ।**
**ನಾತ್ರ ಯುದ್ಧಂ ಪ್ರಕರ್ತವ್ಯಂ ರಾಜನ್ನಿಚ್ಛಾಸ್ವಯಂವರೇ ॥೫೪॥**

ಆಗ ತುಂಬ ನೀತಿವಂತನಾದ ಕೇರಲದೇಶದ ರಾಜನು ಆ ಯುಧಾಜಿತನನ್ನು ಕುರಿತು ಹೇಳಿದನು. ಓ ರಾಜನೇ, ಕನ್ಯೆಯೇ ತನ್ನ ಇಚ್ಛೆಯಿಂದ ವರನನ್ನು ಆರಿಸುವ ಈ ಸ್ವಯಂವರದಲ್ಲಿ ಯುದ್ಧವನ್ನು ಮಾಡಕೂಡದು.

**ಬಲೇನ ಹರಣಂ ನಾಸ್ತಿ ನಾತ್ರ ಶುಲ್ಕಸ್ವಯಂವರಃ ।**
**ಕನ್ಯೇಚ್ಛಯಾಽತ್ರ ವರಣಂ ವಿವಾದಃ ಕೀದೃಶಸ್ತ್ವಿಹ ॥೫೫॥**

ಈ ವಿಧವಾದ ಸ್ವಯಂವರದಲ್ಲಿ ಕನ್ಯೆಯನ್ನು ಅಪಹರಿಸುವುದು ಇಲ್ಲವು. ಮತ್ತು ಈ ಸ್ವಯಂವರವು ಶೌರ್ಯವೇ ಪಣವಾಗಿ ಉಳ್ಳದ್ದೂ ಅಲ್ಲವು. ಇಲ್ಲಿ ವಧುವು ತನ್ನ ಇಚ್ಛೆಯಿಂದಲೇ ತನಗೆ ಬೇಕಾದ ಪುರುಷನನ್ನು ವರಿಸುವುದು ಪದ್ಧತಿಯು, ಎಂದಮೇಲೆ ಇದರಲ್ಲಿ ಜಗಳವೆಲ್ಲಿಂದ ಬಂದೀತು ?

**ಅನ್ಯಾಯೇನ ತ್ವಯಾ ಪೂರ್ವಮಸೌ ರಾಜ್ಯಾತ್ಪ್ರವಾಸಿತಃ ।**
**ದೌಹಿತ್ರಾಯಾರ್ಪಿತಂ ರಾಜ್ಯಂ ಬಲವನ್ನೃಪಸತ್ತಮ ॥೫೬॥**

ರಾಜಶ್ರೇಷ್ಠನಾದ ಓ ಯುಧಾಜಿತನೇ, ನೀನು ಈ ಸುದರ್ಶನನನ್ನು ಅನ್ಯಾಯವಾಗಿ ಹಿಂದೆ ರಾಜ್ಯದಿಂದ ಓಡಿಸಿರುವೆ. ಎಲೈ ಬಲಶಾಲಿಯಾದ ರಾಜಶ್ರೇಷ್ಠನೇ, ನಿನ್ನ ಮಗಳ ಮಗನಿಗೇ ರಾಜ್ಯವನ್ನು ಕೊಡಿಸಿರುತ್ತೀಯೆ.

**ಕಾಕುತ್ಸ್ಥೋಽಯಂ ಮಹಾಭಾಗ ಕೋಸಲಾಧಿಪತೇಃ ಸುತಃ ।**
**ಕಥಮೇನಂ ರಾಜಪುತ್ರಂ ಹನಿಷ್ಯಸಿ ನಿರಾಗಸಂ ॥೫೭॥**

ಓ ತುಂಬ ಭಾಗ್ಯಶಾಲಿಯಾದ ಯುಧಾಜಿತುವೇ, ಈ ಸುದರ್ಶನನೂ ಕಕುತ್ಸ್ಥ ರಾಜನ ವಂಶಕ್ಕೆ ಸೇರಿದವನು. ಕೋಸಲದೇಶದ ರಾಜನಾದ ಧ್ರುವಸಂಧಿಯ ಮಗನು. ನಿರಪರಾಧಿಯಾದ ಈ ರಾಜಕುಮಾರನನ್ನು ಹೇಗೆ ಕೊಲ್ಲುತ್ತೀಯೆ ?

**ಲಪ್ಸ್ಯಸೇ ತತ್ಫಲಂ ನೂನಮನಯಸ್ಯ ನೃಪೋತ್ತಮ ।**
**ಶಾಸ್ತಾಸ್ತಿ ಕಶ್ಚಿದಾಯುಷ್ಮಾನ್ ಜಗತೋಽಸ್ಯ ಜಗತ್ಪತಿಃ ॥೫೮॥**

ಓ ರಾಜಶ್ರೇಷ್ಠನೇ, ಈ ಅನ್ಯಾಯಗಳಿಗೆಲ್ಲಾ ಫಲವನ್ನು ನೀನು ನಿಶ್ಚಯವಾಗಿ ಪಡೆಯುವೆ. ಈ ಜಗತ್ತಿಗೆಲ್ಲ ಒಡೆಯನಾದ ಒಬ್ಬನು ಈ ಜಗತ್ತನ್ನು ಆಳುತ್ತಾ ತುಂಬ ಆಯುಸ್ಸುಳ್ಳವನಾಗಿರುತ್ತಾನೆ.

**ಧರ್ಮೋಽ ಜಯತಿ ನಾಧರ್ಮಃ ಸತ್ಯಂ ಜಯತಿ ನಾನೃತಂ ।**
**ಮಾಽನಯಂ ಕುರು ರಾಜೇಂದ್ರ ತ್ಯಜ ಪಾಪಮತಿಂ ಕಿಲ ॥೫೯॥**

ಕಡೆಗೆ ಧರ್ಮವೇ ಜಯವನ್ನು ಹೊಂದುತ್ತದೆಯೇ ಹೊರತು ಅಧರ್ಮವು ಜಯಿಸಲಾರದು. ಸತ್ಯಕ್ಕೇ ಜಯವು. ಅಸತ್ಯಕ್ಕೆ ಎಂದಿಗೂ ಜಯವಾಗುವುದಿಲ್ಲವು. ಆದುದರಿಂದ ಓ ರಾಜಶ್ರೇಷ್ಠನೇ, ಅನ್ಯಾಯವನ್ನು ಮಾಡಬೇಡ. ಆ ಕೆಟ್ಟ ಬುದ್ಧಿಯನ್ನು ಬಿಡು.

**ದೌಹಿತ್ರಸ್ತವ ಸಂಪ್ರಾಪ್ತಃ ಸೋಽಪಿ ರೂಪಸಮನ್ವಿತಃ ।**
**ರಾಜ್ಯಯುಕ್ತಸ್ತಥಾ ಶ್ರೀಮಾನ್ ಕಥಂ ತಂ ನ ವರಿಷ್ಯತಿ ॥೬೦॥**

ಅಲ್ಲದೆ ನಿನ್ನ ಮೊಮ್ಮಗನಾದ ಶತ್ರುಜಿತನೂ ಬಂದಿರುತ್ತಾನೆ. ಅವನೂ ತುಂಬ ರೂಪವಂತನು, ಮತ್ತು ರಾಜ್ಯವುಳ್ಳವನು, ಐಶ್ವರ್ಯಶಾಲಿಯು. ಅಂತಹವನನ್ನು ರಾಜಕುಮಾರಿಯು ಹೇಗೆತಾನೇ ವರಿಸದೇ ಹೋದಾಳು ?

**ಅನ್ಯೇ ರಾಜಸುತಾಃ ಕಾಮಂ ವರ್ತಂತೇ ಬಲವತ್ತರಾಃ ।**
**ಕನ್ಯಾಸ್ವಯಂವರೇ ಕನ್ಯಾ ಸ್ವೀಕರಿಷ್ಯತಿ ಸಾಂಪ್ರತಂ ॥೬೧॥**

ಇನ್ನೂ ಬೇರೆ ತುಂಬ ಬಲಿಷ್ಠರಾದ ಬಹುಮಂದಿ ರಾಜಕುಮಾರರು ಇರುತ್ತಾರೆ. ಈಗ ಸ್ವಯಂವರದಲ್ಲಿ ಈ ಕನ್ಯೆಯು ಯಾರನ್ನು ತನಗೆ ಅನುರೂಪನೆಂದು ಆರಿಸುವಳೋ ತಿಳಿಯದು. ಆದರೂ ಅದೇ ಒಳ್ಳೆಯದೂ ಯುಕ್ತವೂ ಆಗಿದೆ.

**ವೃತೇ ತಥಾ ವಿವಾದಃ ಕಃ ಪ್ರವದಂತು ಮಹೀಭುಜಃ ।**
**ಪರಸ್ಪರಂ ವಿರೋಧೋऽತ್ರ ನ ಕರ್ತವ್ಯೋ ವಿಜಾನತಾ ॥೬೨॥**

ಹಾಗೆ ರಾಜಕುಮಾರಿಯು ತನಗೆ ಯೋಗ್ಯನಾದ ವರನನ್ನು ವರಿಸಿದರೆ ಇದರಲ್ಲಿ ವ್ಯಾಜ್ಯವೇನು? ರಾಜರೆಲ್ಲರೂ ಹೇಳಲಿ. ತಿಳಿವಳಿಕೆಯಿದ್ದವರು ಇಲ್ಲಿ ಪರಸ್ಪರ ವಿರೋಧವನ್ನು ಮಾಡಬಾರದು.

**ಇತಿ ಶ್ರೀ ದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಏಕೋನವಿಂಶೋऽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದಲ್ಲಿ ಮೂರನೆಯ ಸ್ಕಂಧವಲ್ಲಿ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ತೃತೀಯಸ್ಕಂಧೇ

### ॥ ವಿಂಶೋಽಧ್ಯಾಯಃ ॥

### ಇಪ್ಪತ್ತನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಇತಿ ವಾದಿನಿ ಭೂಪಾಲೇ ಕೇರಲಾಧಿಪತೌ ತದಾ ।**
**ಪ್ರತ್ಯುವಾಚ ಮಹಾಭಾಗ ಯುಧಾಜಿದಪಿ ಪಾರ್ಥಿವಃ ॥೧॥**

ವ್ಯಾಸಮುನಿಯು ಹೇಳಿದನು—ತುಂಬ ಭಾಗ್ಯಶಾಲಿಯಾದ ಓ ಜನಮೇಜಯನೇ, ಹೀಗೆ ಆ ಕೇರಲದೇಶದ ದೊರೆಯು ಹೇಳಲು, ಆಗ, ಯುಧಾಜಿತ ರಾಜನು ಪ್ರತ್ಯುತ್ತರವನ್ನು ಹೇಳಿದನು.

**ನೀತಿರಿಯಂ ಮಹೀಪಾಲ ಯದ್ಬ್ರವೀಷಿ ಭವಾನಿಹ ।**
**ಸಮಾಜೇ ಪಾರ್ಥಿವಾನಾಂ ವೈ ಸತ್ಯವಾಗ್ವಿಜಿತೇಂದ್ರಿಯಃ ॥೨॥**

ಓ ರಾಜನೇ, ಈ ಎಲ್ಲಾ ರಾಜರ ಸಮೂಹದಲ್ಲಿ ನ್ಯಾಯವಾದ ಮಾತನ್ನಾಡುವವನೂ, ಇಂದ್ರಿಯಗಳನ್ನು ಜಯಿಸಿದವನೂ ಆಗಿರುವ ನೀನು ಈಗೇನನ್ನು ಹೇಳಿರುವೆಯೋ ಅದು ಎಲ್ಲರಿಗೂ ಒಪ್ಪಿಗೆಯಾಗುವ ನೀತಿಯೇ !

**ಯೋಗ್ಯೇಷು ವರ್ತಮಾನೇಷು ಕನ್ಯಾರತ್ನಂ ಕುಲೋದ್ವಹ ।**
**ಅಯೋಗ್ಯೋಽರ್ಹತಿ ಭೂಪಾಲೋ ನ್ಯಾಯೋಽಯಂ ತವ ರೋಚತೇ॥೩॥**

ಕುಲಗೌರವಶಾಲಿಯಾದ ಓ ರಾಜನೇ, ಯೋಗ್ಯರಾದ ರಾಜರು ಇರುತ್ತಿರಲು, ಅಯೋಗ್ಯನೊಬ್ಬನು ಈ ಕನ್ಯಾರತ್ನವನ್ನು ಪಡೆಯುವುದು ಎಂಬುದು ನಿನಗೆ ಮಾತ್ರ ನ್ಯಾಯವಾಗಿ ತೋರಬಹುದು !

**ಭಾಗಂ ಸಿಂಹಸ್ಯ ಗೋಮಾಯುರ್ಭೋಕ್ತುಮರ್ಹತಿ ವಾ ಕಥಂ ।**
**ತಥಾ ಸುದರ್ಶನೋಽಯಂ ವೈ ಕನ್ಯಾರತ್ನಂ ಕಿಮರ್ಹತಿ ॥೪॥**

ಮೃಗರಾಜನಾದ ಸಿಂಹಕ್ಕೆ ಯೋಗ್ಯವಾಗಿ ಮಿಾಸಲಾಗಿರುವ ಪಾಲನ್ನು ನರಿಯು ಹೇಗೆ ಅನುಭವಿಸಲು ಯೋಗ್ಯವಾಗುತ್ತದೆ ? ಅದರಂತೆಯೇ ಈ ಸುದರ್ಶನನೂ ಇಂತಹ ಕನ್ಯಾರತ್ನವನ್ನು ಪಡೆಯಲು ಅರ್ಹನೇನು ?

**ಬಲಂ ವೇದೋ ಹಿ ವಿಪ್ರಾಣಾಂ ಭೂಭುಜಾಂ ಚಾಪಜಂ ಬಲಂ ।**
**ಕಿಮನ್ಯಾಯ್ಯಂ ಮಹಾರಾಜ ಬ್ರವೀಮ್ಯಹಮಿಹಾಧುನಾ ॥೫॥**

ಬ್ರಾಹ್ಮಣರಿಗೆ ವೇದದ ಎಂದರೆ ತತ್ತ್ವಜ್ಞಾನದ ಬಲವೇ ಬಲವು. ರಾಜರಿಗೆ ಧನುಸ್ಸಿನ ಬಲವೇ ಬಲವು. ಹೀಗಿರುವಲ್ಲಿ, ಓ ರಾಜನೇ, ನಾನು ಈಗ ಇಲ್ಲಿ ಹೇಳಿದುದು ಅನ್ಯಾಯವೇ ?

**ಬಲಂ ಶುಲ್ಕಂ ಯಥಾ ರಾಜ್ಞಾಂ ವಿವಾಹೇ ಪರಿಕೀರ್ತಿತಂ ।**
**ಬಲವಾನೇವ ಗೃಹ್ಣಾತು ನಾಬಲಸ್ತು ಕದಾಚನ ॥೬॥**

ರಾಜರ ವಿವಾಹದಲ್ಲಿ ಬಲವೇ ಶುಲ್ಕವು. ಶುಲ್ಕವೆಂದರೆ ಕನ್ಯೆಯನ್ನು ಸ್ವೀಕರಿಸುವುದಕ್ಕೆ ಗೊತ್ತಾದ ಯೋಗ್ಯತೆಯು ಅಥವಾ ಕೊಡುವ ದ್ರವ್ಯವು. ಆದುದರಿಂದ ಇಲ್ಲಿ ಬಲಶಾಲಿಯಾದವನೇ ಕನ್ಯೆಯನ್ನು ಪರಿಗ್ರಹಿಸಲಿ. ಬಲವಿಲ್ಲದ ಬಾಲಕನು ಎಂದಿಗೂ ಸ್ವೀಕರಿಸಕೂಡದು.

**ತಸ್ಮಾತ್ಕನ್ಯಾಂ ಪಣಂ ಕೃತ್ವಾ ನೀತಿರತ್ರ ವಿಧೀಯತಾಂ ।**
**ಅನ್ಯಥಾ ಕಲಹಃ ಕಾಮಂ ಭವಿಷ್ಯತಿ ಮಹೀಭುಜಾಂ ॥೭॥**

ಆದುದರಿಂದ ಕನ್ಯೆಯನ್ನೇ ಪಣವಾಗಿಟ್ಟುಕೊಂಡು ಇಲ್ಲಿ ನ್ಯಾಯವನ್ನು ಕಲ್ಪಿಸಿರಿ. ಇಲ್ಲದೇ ಹೋದರೆ ಇದಕ್ಕಾಗಿ ರಾಜರಿಗೆ ಬೇಕಾದ ಹಾಗೆ ವ್ಯಾಜ್ಯವಾಗದೆ ಇರಲಾರದು.

**ಏವಂ ವಿವಾದೇ ಸಂವೃತ್ತೇ ರಾಜ್ಞಾಂ ತತ್ರ ಪರಸ್ಪರಂ ।**
**ಆಹೂತಸ್ತು ಸಭಾಮಧ್ಯೇ ಸುಬಾಹುರ್ನೃಪಸತ್ತಮಃ ॥೮॥**

ಹೀಗೆ ಅಲ್ಲಿ ರಾಜರಲ್ಲಿ ಪರಸ್ಪರ ವಿವಾದವು ನಡೆಯುತ್ತಿರಲು, ಅವರಿಂದ ಆ
ಧ್ಯಕ್ಷೆ ರಾಜೋತ್ತಮನಾದ ಸುಬಾಹುವು ಕರೆಯಿಸಲ್ಪಟ್ಟನು.

**ಸಮಾಹೂಯ ನೃಪಾಃ ಸರ್ವೇ ತಮೂಚುಸ್ತತ್ತ್ವದರ್ಶಿನಃ ।**
**ರಾಜನ್ನೀತಿಸ್ತ್ವಯಾ ಕಾರ್ಯಾ ವಿವಾಹೇಽತ್ರ ಸಮಾಹಿತಾ ॥೯॥**

ಹೀಗೆ ಆ ಸುಬಾಹುವನ್ನು ಕರೆದು ಹೆಚ್ಚಾಗಿ ನ್ಯಾಯವನ್ನು ಬಲ್ಲವರಾದ ಆ
। ಅವನನ್ನು ಕುರಿತು ಹೇಳಿದರು. ಓ ರಾಜನೇ, ಈ ಮದುವೆಯಲ್ಲಿ ನೀನು
ಒದೊಂದು ನ್ಯಾಯವನ್ನು ಮಾಡಬೇಕು.

**ಕಿಂ ತೇ ಚಿಕೀರ್ಷಿತಂ ರಾಜಂಸ್ತದ್ವದಸ್ವ ಸಮಾಹಿತಃ ।**
**ಪುತ್ರ್ಯಾಃ ಪ್ರದಾನಂ ಕಸ್ಮೈ ತೇ ರೋಚತೇ ನೃಪ ಚೇತಸಿ ॥೧೦॥**

ಓ ರಾಜನೇ, ಈ ಸ್ವಯಂವರದಲ್ಲಿ ನೀನು ಏನನ್ನು ಮಾಡಬೇಕೆಂದಿರುವೆ ?
ದನ್ನು ಸಮಾಧಾನವಾಗಿ ಹೇಳು. ಮಗಳನ್ನು ನಿನ್ನ ಮನಸ್ಸಿನಲ್ಲಿ ಯಾರಿಗೆ
ಬು ಅಪೇಕ್ಷಿಸಿರುತ್ತೀಯೆ ? ಅದನ್ನು ತಿಳಿಸು.

॥ ಸುಬಾಹುರುವಾಚ ॥

**ಪುತ್ರ್ಯಾ ಮೇ ಮನಸಾ ಕಾಮಂ ನೃಪಃ ಕಿಲ ಸುದರ್ಶನಃ ।**
**ಮಯಾ ನಿವಾರಿತಾತ್ಯರ್ಥಂ ನ ಸಾ ಪ್ರತ್ಯೇತಿ ಮೇ ವಚಃ ॥೧೧॥**

ಸುಬಾಹುರಾಜನು ಹೇಳಿದನು. ನನ್ನ ಮಗಳು ಮನಸ್ಸಿನಲ್ಲಿಯೇ ಸುದರ್ಶನ
ವರಿಸಿರುತ್ತಾಳೆ. ಅವಳನ್ನು ನಾನು ಎಷ್ಟು ಬೇಡವೆಂದರೂ ನನ್ನ ಮಾತು
ಅವಳು ಕೇಳುವುದೇ ಇಲ್ಲವು.

**ಕಿಂ ಕರೋಮಿ ಸುತಾಯಾ ಮೇ ನ ವಶೇ ವರ್ತತೇ ಮನಃ ।**
**ಸುದರ್ಶನಸ್ತಥೈಕಾಕೀ ಸಂಪ್ರಾಪ್ತೋಽಸ್ತಿ ನಿರಾಕುಲಃ ॥೧೨॥**

ಏನನ್ನು ಮಾಡಲಿ ? ನನ್ನ ಮಗಳ ಮನಸ್ಸು ನನ್ನ ವಶದಲ್ಲಿಲ್ಲವು. ಹಾಗೆಯೇ
ರ್ಶನನಾದರೋ ಯಾವ ಸಹಾಯವೂ ಇಲ್ಲದೆ ಒಬ್ಬನೇ ಬಂದು ಇಲ್ಲಿ ನಿಶ್ಚಿಂತತೆ
ತ ಇರುತ್ತಾನೆ.

|| ವ್ಯಾಸ ಉವಾಚ ||

**ಸಂಪನ್ನಭೂಭುಜಃ ಸರ್ವೇ ಸಮಾಹೂಯ ಸುದರ್ಶನಂ ।**
**ಊಚುಃ ಸಮಾಗತಂ ಶಾಂತಮೇಕಾಕಿನಮತಂದ್ರಿತಾಃ ॥೧೩॥**

ವ್ಯಾಸಮುನಿಯು ಹೇಳಿದನು—ಅಧಿಕಾರ ಐಶ್ವರ್ಯಗಳುಳ್ಳವರಾದ ರಾಜರೆಲ್ಲರೂ ಆ ಸುದರ್ಶನವನ್ನು ಕರೆಯಿಸಿದರು. ಶಾಂತನಾದ ಮತ್ತು ಅಸಹಾಯನಾಗಿ ಬಂದಿರುವ ಅವನನ್ನು ಕುರಿತು ಜಾಗರೂಕರಾದ ಆ ರಾಜರು ಮುಂದೆ ಹೇಳುವ ಮಾತುಗಳನ್ನು ಹೇಳಿದರು.

**ರಾಜಪುತ್ರ ಮಹಾಭಾಗ ಕೇನಾಹೂತೋಽಸಿ ಸುವ್ರತ ।**
**ಏಕಾಕೀ ಯಃ ಸಮಾಯಾತಃ ಸಮಾಜೇ ಭೂಭೃತಾಮಿಹ ॥೧೪॥**

ತುಂಬ ಭಾಗ್ಯಶಾಲಿಯಾದ ಮತ್ತು ಒಳ್ಳೆಯ ನಿಯಮಗಳ ಆಚರಣೆಯುಳ್ಳ ಓ ಸುದರ್ಶನಕುಮಾರನೇ, ಈ ರಾಜರ ಸಮೂಹವು ಬಂದಿರುವ ಈ ಸ್ವಯಂವರಕ್ಕೆ ಯಾರಿಂದ ಕರೆಯಲ್ಪಟ್ಟು ನೀನು ಒಬ್ಬನೇ ಬಂದಿರುವೆ?

**ನ ವೈ ಸೈನ್ಯಂ ನ ಸಚಿವಾ ನ ಕೋಶೋ ನ ಬೃಹದ್ಬಲಂ ।**
**ಕಿಮರ್ಥಂ ಚ ಸಮಾಯಾತಸ್ತತ್ತ್ವಂ ಬ್ರೂಹಿ ಮಹಾಮತೇ ॥೧೫॥**

ನಿನಗೆ ಸೈನ್ಯವಿಲ್ಲವು, ಮಂತ್ರಿಗಳಿಲ್ಲವು, ಬೊಕ್ಕಸವಿಲ್ಲವು, ಇನ್ನಾವ ದೊಡ್ಡ ಬಲವೂ ಇಲ್ಲವು. ಹೀಗಿರುವಾಗ ನೀನು ಇಲ್ಲಿಗೆ ಏತಕ್ಕೆ ಬಂದಿರುತ್ತೀಯೆ? ತುಂಬ ಬುದ್ಧಿಶಾಲಿಯಾದ ಓ ಸುದರ್ಶನನೇ, ನಿಜವನ್ನು ಹೇಳು.

**ಯುದ್ಧಕಾಮಾ ನೃಪತಯೋ ವರ್ತಂತೇಽತ್ರ ಸಮಾಗಮೇ ।**
**ಕನ್ಯಾರ್ಥಂ ಸೈನ್ಯಸಂಪನ್ನಾಃ ಕಿಂ ತ್ವಂ ಕರ್ತುಮಿಹೇಚ್ಛಸಿ ॥೧೬॥**

ಈ ರಾಜರ ಸಮುದಾಯದಲ್ಲಿ ವಧುವಿಗೋಸ್ಕರವಾಗಿ ಯುದ್ಧವನ್ನು ಸಹ ಮಾಡಲು ಇಷ್ಟವುಳ್ಳವರು ಸೈನ್ಯಗಳಿಂದ ಕೂಡಿದವರಾಗಿರುತ್ತಾರೆ. ಇಲ್ಲಿ ನೀನು ಈಗೇನನ್ನು ಮಾಡಬೇಕೆಂದಿರುತ್ತೀಯೆ?

**ಭ್ರಾತಾ ತೇ ಸುಬಲಃ ಶೂರಃ ಸಂಪ್ರಾಪ್ತೋಽಸ್ತಿ ಜಿಘೃಕ್ಷಯಾ ।**
**ಯುಧಾಜಿಚ್ಚ ಮಹಾಬಾಹುಃ ಸಾಹಾಯ್ಯಂ ಕರ್ತುಮಾಗತಃ ॥೧೭॥**

ತುಂಬ ಬಲಿಷ್ಠನಾದ ಮತ್ತು ಶೂರನಾದ, ನಿನ್ನ ಸಹೋದರನಾದ ಶತ್ರು ಜಿತನು ನಿನ್ನನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ಸೈನ್ಯದೊಂದಿಗೆ ಬಂದಿರುತ್ತಾನೆ. ಅವನಿಗೆ ಸಹಾಯಮಾಡಲೋಸುಗ ಅವನ ಮಾತಾಮಹನಾದ, ಪರಾಕ್ರಮಶಾಲಿ ಯಾದ ಯುಧಾಜಿತನೂ ಬಂದಿರುತ್ತಾನೆ.

**ಗಚ್ಛ ವಾ ತಿಷ್ಠ ರಾಜೇಂದ್ರ ಯಾಥಾತಥ್ಯಮುದಾಹೃತಂ ।**
**ತ್ವಯಿ ಸೈನ್ಯವಿಹೀನೇ ಚ ಯಥೇಷ್ಟಂ ಕುರು ಸುವ್ರತ ॥೧೮॥**

ರಾಜಶ್ರೇಷ್ಠನಾದ ಓ ಸುದರ್ಶನನೇ, ಇಂತಹ ಸಂದರ್ಭದಲ್ಲಿ ಈ ಸ್ವಯಂವರ ಕ್ಕಾಗಿ ನೀನು ಇರುವುದಾದರೂ ಇರು. ಹೋಗುವುದಾದರೂ ಹೋಗು. ಇರತಕ್ಕ ವಿಷಯಗಳನ್ನು ನಿಜವಾಗಿ ನಿನಗೆ ಹೇಳಿರುತ್ತೇವೆ. ನೀನು ಸೈನ್ಯವಿಲ್ಲದವನಾಗಿರು ತ್ತೀಯೆ. ಒಳ್ಳೇ ಆಚರಣೆಯುಳ್ಳ, ಓ ಸುದರ್ಶನನೇ, ಈಗ ನಿನಗೆ ಇಚ್ಛೆಬಂದಂತೆ ಮಾಡು.

॥ ಸುದರ್ಶನ ಉವಾಚ ॥

**ನ ಬಲಂ ನ ಸಹಾಯೋ ಮೇ ನ ಕೋಶೋ ದುರ್ಗಸಂಶ್ರಯಃ ।**
**ನ ಮಿತ್ರಾಣಿ ನ ಸೌಹಾರ್ದೀ ನ ನೃಪಾ ರಕ್ಷಕಾ ಮಮ ॥೧೯॥**

ಸುದರ್ಶನನು ಹೇಳಿದನು—ನನಗೆ ಸೈನ್ಯಬಲವೂ ಇಲ್ಲವು. ಸಹಾಯವೂ ಇಲ್ಲವು. ಬೊಕ್ಕಸವಾಗಲೀ, ಆಶ್ರಯವಾಗಲೀ, ದುರ್ಗದ ಬೆಂಬಲವಾಗಲೀ ಇರುವುದಿಲ್ಲವು. ಮತ್ತು ಮಿತ್ರರಾಗಲೀ, ಆಪ್ತರಾಗಲೀ ಕಾಪಾಡಲು ಸಮರ್ಥ ರಾದ ರಾಜರ ಬೆಂಬಲವಾಗಲೀ ನನಗೆ ಇಲ್ಲವು.

**ಅತ್ರ ಸ್ವಯಂವರಂ ಶ್ರುತ್ವಾ ದ್ರಷ್ಟುಕಾಮ ಇಹಾಗತಃ ।**
**ಸ್ವಪ್ನೇ ದೇವ್ಯಾ ಪ್ರೇರಿತೋಽಸ್ಮಿ ಭಗವತ್ಯಾ ನ ಸಂಶಯಃ ॥೨೦॥**

ಇಲ್ಲಿ ಸ್ವಯಂವರವೆಂದು ಕೇಳಿ ನೋಡಬೇಕೆಂಬ ಅಪೇಕ್ಷೆಯಿಂದ ಬಂದಿರು ತ್ತೇನೆ. ಸ್ವಪ್ನದಲ್ಲಿ ಆ ಆದಿಶಕ್ತಿಯೇ ನನ್ನನ್ನು ಇಲ್ಲಿಗೆ ಹೋಗೆಂದು ಪ್ರೇರಿಸಿರು ತ್ತಾಳೆ. ಇದರಲ್ಲಿ ಸಂಶಯವಿಲ್ಲವು.

**ನಾನ್ಯಚ್ಚಿಕೀರ್ಷಿತಂ ಮೇಽದ್ಯ ಮಾಮಾಹ ಜಗದೀಶ್ವರೀ ।**
**ತಯಾ ಯದ್ವಿಹಿತಂ ತಚ್ಚ ಭವಿತಾಽದ್ಯ ನ ಸಂಶಯಃ ॥೨೧॥**

ಜಗತ್ತಿಗೆ ಒಡೆಯಳಾದ ಆ ದೇವಿಯು ನನಗೆ ಇನ್ನೇನನ್ನೂ ಮಾಡಬೇಕಾದುದನ್ನು ಹೇಳಲಿಲ್ಲವು. ಅವಳು ಯಾವುದನ್ನು ಸಂಕಲ್ಪಿಸಿರುವಳೋ ಅದು ಈಗ ಆಗಿಯೇ ಆಗುತ್ತದೆ. ಇದರಲ್ಲೇನೂ ಸಂಶಯವಿಲ್ಲವು.

**ನ ಶತ್ರುರಸ್ತಿ ಸಂಸಾರೇ ಕೋಽಪ್ಯತ್ರ ಜಗತೀಶ್ವರಾಃ ।**
**ಸರ್ವತ್ರ ಪಶ್ಯತೋ ಮೇಽದ್ಯ ಭವಾನೀಂ ಜಗದಂಬಿಕಾಂ ॥೨೨॥**

ಓ ರಾಜೋತ್ತಮರೇ, ಎಲ್ಲೆಡೆಯಲ್ಲಿಯೂ ಜಗತ್ತಿಗೆ ಒಡೆಯಳಾದ ಆ ಭವಾನೀದೇವಿಯನ್ನೇ ನೋಡುತ್ತಿರುವ ನನಗೆ ಈ ಪ್ರಾಪಂಚಿಕವಾದ ಸಂಸಾರದಲ್ಲಿ ಯಾವನೊಬ್ಬನೂ ಶತ್ರುವಾಗಿ ತೋರುವುದೇ ಇಲ್ಲವು.

**ಯಃ ಕರಿಷ್ಯತಿ ಶತ್ರುತ್ವಂ ಮಯಾ ಸಹ ನೃಪಾತ್ಮಜಾಃ ।**
**ಶಾಸ್ತಾ ತಸ್ಯ ಮಹಾವಿದ್ಯಾ ನಾಹಂ ಜಾನಾಮಿ ಶತ್ರುತಾಂ ॥೨೩॥**

ಹೀಗಿರುತ್ತಿದ್ದರೂ, ಓ ರಾಜಪುತ್ರರೇ, ಯಾರು ನನ್ನೊಡನೆ ಶತ್ರುಭಾವವನ್ನು ಮಾಡುತ್ತಾರೆಯೋ ಅವರನ್ನು ಶಿಕ್ಷಿಸತಕ್ಕವಳು ಬ್ರಹ್ಮವಿದ್ಯೆಯ ಸ್ವರೂಪಳಾದ ಆ ದೇವಿಯೇ. ನಾನು ಶತ್ರುಭಾವವನ್ನೇ ತಿಳಿಯದವನು.

**ಯದ್ಭಾವಿ ತದ್ಧ್ಯೈ ಭವಿತಾ ನಾನ್ಯಥಾ ನೃಪಸತ್ತಮಾಃ ।**
**ಕಾ ಚಿಂತಾ ಹ್ಯತ್ರ ಕರ್ತವ್ಯಾ ದೈವಾಧೀನೋಽಸ್ಮಿ ಸರ್ವದಾ ॥೨೪॥**

ಓ ರಾಜೋತ್ತಮರೇ, ಯಾವುದು ಆಗುವುದಿದೆಯೋ ಅದು ಆಗಿಯೇ ಆಗುತ್ತದೆ. ಇದೆಂದಿಗೂ ವ್ಯತ್ಯಾಸವಾಗಲಾರದು. ಹೀಗಿರುವಾಗ ಇಲ್ಲಿ ನಾವು ಯೋಚಿಸುವುದೇನಿದೆ? ಆದುದರಿಂದ ನಾನು ಯಾವಾಗಲೂ ಅದೃಷ್ಟದ ಎಂದರೆ ಆ ದೇವಿಯ ಅಧೀನನಾಗಿಯೇ ಇರುತ್ತೇನೆ.

**ದೇವಭೂತಮನುಷ್ಯೇಷು ಸರ್ವಭೂತೇಷು ಸರ್ವದಾ ।**
**ಸರ್ವೇಷಾಂ ತತ್ಕೃತಾ ಶಕ್ತಿರ್ನಾನ್ಯಥಾ ನೃಪಸತ್ತಮಾಃ ॥೨೫॥**

ಓ ರಾಜಶ್ರೇಷ್ಠರೇ, ದೇವತೆಗಳಲ್ಲಿಯೂ, ಭೂತಗಳಲ್ಲಿಯೂ, ಮನುಷ್ಯರಲ್ಲಿಯೂ ಮತ್ತು ಎಲ್ಲ ಪ್ರಾಣಿಗಳಲ್ಲಿಯೂ ಇರತಕ್ಕ ಎಲ್ಲರ ಶಕ್ತಿಯೂ ಆ ದೇವಿಯಿಂದಲೇ ಬಂದಿರುತ್ತದೆಯೇ ಹೊರತು ಬೇರೆ ಇರುವುದಿಲ್ಲವು.

**ಸಾ ಯಂ ಚಿಕೀರ್ಷತೇ ಭೂಪಂ ತಂ ಕರೋತಿ ನೃಪಾಧಿಪಾಃ ।**
**ನಿರ್ಧನಂ ವಾ ನರಂ ಕಾಮಂ ಕಾ ಚಿಂತಾ ವೈ ತದಾ ಮಮ ॥೨೬॥**

ಓ ರಾಜಾಧಿರಾಜರೇ, ಆ ದೇವಿಯು ಯಾವನನ್ನು ರಾಜನನ್ನಾಗಿ ಮಾಡ ಬೇಕೆಂದು ಅಪೇಕ್ಷಿಸುವಳೋ ಅವನನ್ನೇ ರಾಜನನ್ನಾಗಿ ಮಾಡುತ್ತಾಳೆ. ಹಾಗೆಯೇ ಯಾರನ್ನು ದರಿದ್ರನನ್ನಾಗಿ ಮಾಡಬೇಕೆಂದಿರುವಳೋ ಅವನನ್ನು ದರಿದ್ರನನ್ನಾಗಿಯೇ ಮಾಡುತ್ತಾಳೆ. ಹೀಗಿರಲು, ಎಲೈ ರಾಜಶ್ರೇಷ್ಠರೇ, ಅವಳ ಅಧೀನನಾಗಿರುವ ನನಗೆ ಯಾವ ಯೋಚನೆಯುತಾನೇ ಏಕೆ?

**ತಾಮೃತೇ ಪರಮಾಂ ಶಕ್ತಿಂ ಬ್ರಹ್ಮವಿಷ್ಣುಹರಾದಯಃ ।**
**ನ ಶಕ್ತಾಃ ಸ್ಪಂದಿತುಂ ದೇವಾಃ ಕಾ ಚಿಂತಾ ಮೇ ತದಾ ನೃಪಾಃ ॥೨೭॥**

ಶ್ರೇಷ್ಠಳಾದ ಆ ಶಕ್ತಿಯನ್ನು ಬಿಟ್ಟು ಬ್ರಹ್ಮನಾಗಲೀ, ವಿಷ್ಣುವಾಗಲೀ, ಶಿವ ನಾಗಲೀ, ಇತರ ದೇವತೆಗಳಾಗಲೀ ಯಾರೂ ಅಲುಗಾಡಲೂ ಸಹ ಅಶಕ್ತರು. ಹೀಗಿರುವಲ್ಲಿ ಓ ರಾಜರೇ, ನನಗೆ ಏತರ ಚಿಂತೆಯು?

**ಅಶಕ್ತೋ ವಾ ಸಶಕ್ತೋ ವಾ ಯಾದೃಶಸ್ತಾದೃಶಸ್ತ್ವಹಂ ।**
**ತದಾಜ್ಞಯಾ ನೃಪಾದ್ಯೈವ ಸಂಪ್ರಾಪ್ತೋಽಸ್ಮಿ ಸ್ವಯಂವರೇ ॥೨೮॥**

ಓ ರಾಜರೇ, ಶಕ್ತಿಯಿಲ್ಲದವನಾಗಲೀ ಶಕ್ತಿಯಿರುವವನಾಗಲೀ, ನಾನು ಯಾವ ರೀತಿಯಾಗಿರುವೆನೋ ಅದೇ ರೀತಿಯಿಂದಲೇ ಇರುತ್ತೇನೆ. ಈಗ ನಾನು ಆ ದೇವಿಯ ಅಪ್ಪಣೆಯಂತೆಯೇ ಈ ಸ್ವಯಂವರಕ್ಕೆ ಬಂದಿರುತ್ತೇನೆ.

**ಸಾ ಯದಿಚ್ಛತಿ ತತ್ಕುರ್ಯಾನ್ಮಮ ಕಿಂ ಚಿಂತನೇನ ವೈ ।**
**ನಾತ್ರ ಶಂಕಾ ಪ್ರಕರ್ತವ್ಯಾ ಸತ್ಯಮೇತದ್ಬ್ರವೀಮ್ಯಹಂ ॥೨೯॥**

ಆ ದೇವಿಯು ಏನನ್ನು ಮಾಡಬೇಕೆಂದಿರುವಳೋ ಅದನ್ನೇ ಮಾಡಿಯಾಳು. ನನ್ನ ಸಂದೇಹದ, ದಿಗಿಲಿನ, ಆಲೋಚನೆಯನ್ನು ಮಾಡಲಾಗದು. ನಾನು ಇದನ್ನು ಸತ್ಯವೆಂದೇ ಹೇಳುತ್ತೇನೆ.

**ಜಯೇ ಪರಾಜಯೇ ಲಜ್ಜಾ ನ ಮೇऽತ್ರಾಣ್ವಪಿ ಪಾರ್ಥಿವಾಃ ।**
**ಭಗವತ್ಯಾಸ್ತು ಲಜ್ಜಾಸ್ತಿ ತದಧೀನೋऽಸ್ಮಿ ಸರ್ವದಾ ॥೩೦॥**

ಓ ರಾಜರೇ, ಜಯವಾಗಲಿ, ಜಯವಾಗದಿರಲಿ, ಇದರಲ್ಲಿ ನನಗೆ ಸ್ವಲ್ಪವೂ ಅವಮಾನವಿಲ್ಲವು. ಸರ್ವಸಮರ್ಥಳಾದ ಆ ದೇವಿಗೇ ಮಾನವು ಮತ್ತು ಅವಮಾನವು ಸೇರಿರುತ್ತದೆ. ನಾನು ಯಾವಾಗಲೂ ಅವಳ ಅಧೀನದಲ್ಲಿರುವವನು.

॥ ವ್ಯಾಸ ಉವಾಚ ॥

**ಇತಿ ತಸ್ಯ ತದಾಕರ್ಣ್ಯ ವಚನಂ ರಾಜಸತ್ತಮಾಃ ।**
**ಊಚುಃ ಪರಸ್ಪರಂ ಪ್ರೇಕ್ಷ್ಯ ನಿಶ್ಚಯಜ್ಞಾ ನರಾಧಿಪಾಃ ॥೩೧॥**

ವ್ಯಾಸಮುನಿಯು ಹೇಳಿದನು—ಹೀಗೆಂದು ಆ ಸುದರ್ಶನನ ಮಾತುಗಳನ್ನು ಕೇಳಿ ಅವನ ನಿಶ್ಚಯವನ್ನು ತಿಳಿದ ರಾಜೋತ್ತಮರಾದ ಆ ದೊರೆಗಳು ಪರಸ್ಪರ ನೋಡಿಕೊಂಡು, ಸುದರ್ಶನನನ್ನು ಕುರಿತು ತಿರುಗಿ ಹೇಳಿದರು.

**ಸತ್ಯಮುಕ್ತಂ ತ್ವಯಾ ಸಾಧೋ ನ ಮಿಥ್ಯಾ ಕರ್ಹಿಚಿದ್ಭವೇತ್ ।**
**ತಥಾಪ್ಯುಜ್ಜಯಿನೀನಾಥಸ್ತ್ವಾಂ ಹಂತುಂ ಪರಿಕಾಂಕ್ಷತಿ ॥೩೨॥**

ಓ ಸತ್ಪುರುಷನಾದ ಸುದರ್ಶನನೇ, ನೀನು ಹೇಳಿದುದೆಲ್ಲವೂ ಸತ್ಯವು. ಸಟೆಯೆಂದೂ ಆಗಲಾರದು. ಹಾಗಿದ್ದರೂ ಉಜ್ಜಯಿನೀ ನಗರಕ್ಕೆ ಒಡೆಯನಾದ ಯುಧಾಜಿತನು ನಿನ್ನನ್ನು ಕೊಲ್ಲಲು ಅಪೇಕ್ಷಿಸುತ್ತಾನೆ.

**ತ್ವತ್ಕೃತೇನ ದಯಾದಿಷ್ಟಾ ತ್ವಾಂ ಬ್ರವೀಮೋ ಮಹಾಮತೇ ।**
**ಯದ್ಯುಕ್ತಂ ತತ್ತ್ವಯಾ ಕಾರ್ಯಂ ವಿಚಾರ್ಯ ಮನಸಾऽನಘ ॥೩೩॥**

ನಾವು, ನಿನಗೋಸ್ಕರ ದಯೆಯಿಂದ ಮನಸ್ಸು ಕರಗಿದವರಾಗಿ ಈಗ ನಿನ್ನನ್ನು ಕುರಿತು ಈ ವಿಷಯವನ್ನು ಮುಂಚೆಯೇ ಹೇಳಿರುತ್ತೇವೆ. ಓ ತುಂಬ ಬುದ್ಧಿಶಾಲಿಯಾದ ಸುದರ್ಶನನೇ ನಿನಗೆ ಯಾವುದು ಯೋಗ್ಯವಾಗಿದೆ ಎಂದು ತೋರುವುದೋ ಅದನ್ನು ಮನಸ್ಸಿನಲ್ಲಿ ಚನ್ನಾಗಿ ವಿಮರ್ಶಿಸಿ ಮಾಡುವವನಾಗು.

|| ಸುದರ್ಶನ ಉವಾಚ ||

**ಸತ್ಯಮುಕ್ತಂ ಭವದ್ಭಿಶ್ಚ ಕೃಪಾವದ್ಭಿಃ ಸುಹೃಜ್ಜನೈಃ ।**
**ಕಿಂ ಬ್ರವೀಮಿ ಪುನರ್ವಾಕ್ಯಮುಕ್ತ್ವಾ ನೃಪತಿಸತ್ತಮಾಃ ॥೩೪॥**

ಸುದರ್ಶನನು ಹೇಳಿದನು—ದಯಾವಂತರಾದ ನೀವು ಒಳ್ಳೆಯ ಮನಸ್ಸಿನಿಂದ ಸ್ನೇಹಪೂರ್ವಕವಾಗಿ ನಿಜವಾದುದನ್ನೇ ಹೇಳಿರುವಿರಿ. ಆದರೆ ಓ ರಾಜೋತ್ತಮರೇ, ತಿರುಗಿ ನಾನು ಈ ಹಿಂದೆ ಹೇಳಿದುದನ್ನಲ್ಲದೆ ಇನ್ನೇನನ್ನು ಹೇಳಲಿ ?

**ನ ಮೃತ್ಯುಃ ಕೇನಚಿದ್ಭಾವ್ಯಃ ಕಸ್ಯಚಿದ್ವಾ ಕದಾಚನ ।**
**ದೈವಾಧೀನಮಿದಂ ಸರ್ವಂ ಜಗತ್ಸ್ಥಾವರಜಂಗಮಮ್ ॥೩೫॥**

ಓ ರಾಜರೇ, ಯಾರೂ ಮತ್ತೊಬ್ಬರಿಗೆ ಯಾವಾಗಲೂ ಮರಣವನ್ನು ಕೋರಬಾರದು. ಅಲ್ಲದೆ ಮರಣವು ಯಾವಾಗಲೂ ಯಾರ ಊಹೆಗೂ ಸಿಕ್ಕತಕ್ಕದ್ದಲ್ಲವು. ಮತ್ತು ಚರಾಚರಾತ್ಮಕವಾದ ಈ ಎಲ್ಲಾ ಜಗತ್ತಿನಲ್ಲಿರುವ ಪ್ರಾಣಿಗಳೂ ಅದೃಷ್ಟಕ್ಕೆ ಎಂದರೆ ದೈವನಿಯಮಕ್ಕೆ ಒಳಪಟ್ಟಿರುತ್ತವೆ.

**ಸ್ವವಶೋಽಯಂ ನ ಜೀವೋಽಸ್ತಿ ಸ್ವಕರ್ಮವಶಗಃ ಸದಾ ।**
**ತತ್ಕರ್ಮ ತ್ರಿವಿಧಂ ಪ್ರೋಕ್ತಂ ವಿದ್ವದ್ಭಿಸ್ತತ್ತ್ವದರ್ಶಿಭಿಃ ॥೩೬॥**

ಪ್ರತಿಯೊಂದು ಜೀವವೂ ಸ್ವತಂತ್ರವಾಗಿರುವುದಿಲ್ಲವು. ಎಲ್ಲವೂ ತಮ್ಮ ತಮ್ಮ ಕರ್ಮಗಳಿಗೆ ಅಧೀನವಾಗಿಯೇ ಯಾವಾಗಲೂ ಇರುತ್ತದೆ. ಅಂತಹ ಕರ್ಮಗಳು ಮೂರು ವಿಧವಾಗಿರುವುವೆಂದು, ಆ ಕರ್ಮಗಳ ತತ್ತ್ವಸ್ವರೂಪವನ್ನು ಬಲ್ಲವಿದ್ವಾಂಸರು ಹೇಳುತ್ತಾರೆ.

**ಸಂಚಿತಂ ವರ್ತಮಾನಂ ಚ ಪ್ರಾರಬ್ಧಂ ಚ ತೃತೀಯಕಮ್ ।**
**ಕಾಲಕರ್ಮಸ್ವಭಾವೈಶ್ಚ ತತಂ ಸರ್ವಮಿದಂ ಜಗತ್ ॥೩೭॥**

ಹೇಗೆಂದರೆ, ಆ ಕರ್ಮಗಳಲ್ಲಿ ಮೊದಲನೆಯದು ಸಂಚಿತಕರ್ಮವು ಎಂದರೆ ಹಿಂದೆ ಮಾಡಿದುದು. ವರ್ತಮಾನಕಾಲದಲ್ಲಿ ಎಂದರೆ ಈ ಜನ್ಮದಲ್ಲಿಯೇ ಮಾಡಿದ ಕರ್ಮವೇ ಎರಡನೆಯದು. ಈ ಜನ್ಮಕ್ಕನುಕೂಲವಾಗಿ ಫಲವನ್ನು ಕೊಡುತ್ತಲಿರುವ, ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಗಳ ಪೈಕಿ ಈ ಜನ್ಮಕ್ಕೆ ಕಾರಣವಾಗಿ

ಈಗ ಸುಖದುಃಖರೂಪವಾದ ಫಲವನ್ನು ಕೊಡಲು ಪ್ರಾರಂಭಿಸಿರುವ ಪ್ರಾರಬ್ಧ ಕರ್ಮವು ಮೂರನೆಯದು. ಅಲ್ಲದೆ, ಕಾಲ, ಜಗತ್ತಿಗೆ ಕಾರಣವಾದ, ಮೂಲಭೂತ ವಾದ ಸ್ವಭಾವ ಅಥವಾ ಅವಿದ್ಯೆ ಮತ್ತು ಕರ್ಮ ಈ ಮೂರು ಪದಾರ್ಥಗಳಿಂದಲೂ ಈ ಜಗತ್ತೆಲ್ಲವೂ ವ್ಯಾಪಿಸಲ್ಪಟ್ಟು ಅದರ ಅಧೀನವಾಗಿರುತ್ತದೆ.

**ನ ದೇವೋ ಮಾನುಷಂ ಹಂತುಂ ಶಕ್ತಃ ಕಾಲಾಗಮಂ ವಿನಾ ।**
**ಹತಂ ನಿಮಿತ್ತಮಾತ್ರೇಣ ಹಂತಿ ಕಾಲಃ ಸನಾತನಃ ॥೩೮॥**

ಯಾವನೊಬ್ಬ ದೇವನೂ ಸಹ ಯಾವ ಮನುಷ್ಯನನ್ನೇ ಆಗಲಿ ಅವನ ಮರಣಕಾಲವು ಬರದೇ ನಾಶಮಾಡಲಾರನು. ದೇವತೆಗಳೇ ಮೊದಲಾದವರು ಕೊಲ್ಲುವುದಕ್ಕೆ ಬರಿಯ ನಿಮಿತ್ತಮಾತ್ರರಾಗಿರುತ್ತಾರೆ. ಅನಾದಿಯಾದ ಆ ಕಾಲವೇ ಜಂತುಗಳನ್ನು ಕೊಲ್ಲುತ್ತದೆ.

**ಯಥಾ ಪಿತಾ ಮೇ ನಿಹತಃ ಸಿಂಹೇನಾಮಿತ್ರಕರ್ಷಣಃ ।**
**ತಥಾ ಮಾತಾಮಹೋಽಪ್ಯೇವಂ ಯುದ್ಧೇ ಯುಧಾಜಿತಾ ಹತಃ ॥೩೯॥**

ಉದಾಹರಣೆಯಾಗಿ ನಮ್ಮ ತಂದೆಯೂ ಸಹ ಶತ್ರುಗಳನ್ನು ಶಿಕ್ಷಿಸತಕ್ಕ ಒಳ್ಳೆಯ ಸಾಮರ್ಥ್ಯವುಳ್ಳವನಾದರೂ ಒಂದು ಸಿಂಹದಿಂದ ಕೊಲ್ಲಲ್ಪಟ್ಟನು. ಹಾಗೆಯೇ, ನನ್ನ ತಾಯಿಯ ತಂದೆಯಾದ ವೀರಸೇನನೂ ಸಹ ಯುದ್ಧದಲ್ಲಿ ಯುಧಾಜಿತನಿಂದ ಕೊಲ್ಲಲ್ಪಟ್ಟನು.

**ಯತ್ನಕೋಟಿಂ ಪ್ರಕುರ್ವಾಣೋ ಹನ್ಯತೇ ದೈವಯೋಗತಃ ।**
**ಜೀವೇದ್ವರ್ಷಸಹಸ್ರಾಣಿ ರಕ್ಷಣೇನ ವಿನಾ ನರಃ ॥೪೦॥**

ಸಾಯುವ ಕಾಲವು ಒದಗಿ ಬಂದಿರುವ ಒಬ್ಬ ಮನುಷ್ಯನು ಬದುಕಿರಬೇಕೆಂದು ಕೋಟಿಪ್ರಯತ್ನಗಳನ್ನು ಮಾಡಿದರೂ ಅವನ ಅದೃಷ್ಟದಂತೆ ಅವನು ಕೊಲ್ಲಲ್ಪಟ್ಟೇಪಡುತ್ತಾನೆ. ಬದುಕುವ ಅದೃಷ್ಟವಿರುವ ಮಾನವನು ಎಂತಹ ಸಂಕಟದಲ್ಲಿದ್ದರೂ ಯಾವ ರಕ್ಷಣೆಯೂ ಇಲ್ಲದೆ ಇದ್ದರೂ ಸಾವಿರ ವರ್ಷಗಳು ಬದುಕಿರುತ್ತಾನೆ.

**ನಾಹಂ ಬಿಭೇಮಿ ಧರ್ಮಿಷ್ಠಾಃ ಕದಾಚಿಚ್ಚ ಯುಧಾಜಿತಃ ।**
**ದೈವಮೇವ ಪರಂ ಮತ್ವಾ ಸುಸ್ಥಿತೋಽಸ್ಮಿ ಸದಾ ನೃಪಾಃ ॥೪೧॥**

ಒಳ್ಳೆಯ ಧರ್ಮಪರರಾದ ಓ ರಾಜರೇ, ನಾನು ಎಂದೂ ಯುಧಾಜಿತ ನಿಂದ ಹೆದರುವುದಿಲ್ಲವು. ಅದೃಷ್ಟವೇ ಮಿಗಿಲಾದ ಕಾರಣವೆಂದು ತಿಳಿದು ನಾನು ಯಾವಾಗಲೂ ಮನಸ್ಸಿನಲ್ಲಿ ಶಾಂತಿಯಿಂದ ಕೂಡಿದವನಾಗಿ ಇರುತ್ತೇನೆ.

**ಸ್ಮರಣಂ ಸತತಂ ನಿತ್ಯಂ ಭಗವತ್ಯಾಃ ಕರೋಮ್ಯಹಂ ।**
**ವಿಶ್ವಸ್ಯ ಜನನೀ ದೇವೀ ಕಲ್ಯಾಣಂ ಸಾ ಕರಿಷ್ಯತಿ ॥೪೨॥**

ಸರ್ವಸಮರ್ಥಳಾದ, ಮಹಾಮಹಿಮಳಾದ ಆ ದೇವಿಯ ಸ್ಮರಣೆಯನ್ನು ನಾನು ಯಾವಾಗಲೂ ಮಾಡುತ್ತಿರುತ್ತೇನೆ. ಜಗತ್ತಿಗೆಲ್ಲಾ ಮಾತೆಯಾದ, ಜ್ಞಾನ ಜ್ಯೋತಿಯ ಪ್ರಕಾಶಸ್ವರೂಪಳಾದ ಅವಳು ನನಗೆ ಮಂಗಳವನ್ನುಂಟುಮಾಡುವಳು.

**ಪೂರ್ವಾರ್ಜಿತಂ ಹಿ ಭೋಕ್ತವ್ಯಂ ಶುಭಂ ವಾಽಪ್ಯಶುಭಂ ತಥಾ ।**
**ಸ್ವಕೃತಸ್ಯ ಚ ಭೋಗೇನ ಕೀದೃಕ್ ಶೋಕೋ ವಿಜಾನತಾಂ ॥೪೩॥**

ಕೆಟ್ಟದಾಗಲೀ, ಒಳ್ಳೆಯದಾಗಲೀ, ಹಿಂದಿನ ಜನ್ಮದಲ್ಲಿ ಸಂಪಾದಿಸಿದ ಕರ್ಮದ ಫಲವನ್ನು ಈಗ ಅನುಭವಿಸಲೇಬೇಕು. ಹೀಗೆ ತಾವೇ ಮಾಡಿದುದನ್ನು ಅನುಭವಿಸುವುದರಿಂದ ತಿಳಿದವರಿಗೆ ಅದೆಂತಹ ದುಃಖವಾದೀತು?

**ಸ್ವಕರ್ಮಫಲಯೋಗೇನ ಪ್ರಾಪ್ಯ ದುಃಖಮಚೇತನಃ ।**
**ನಿಮಿತ್ತಕಾರಣೇ ವೈರಂ ಕರೋತ್ಯಲ್ಪಮತಿಃ ಕಿಲ ॥೪೪॥**

ಹೀಗಿದ್ದರೂ ತನ್ನ ಕರ್ಮದ ಫಲದಿಂದಲೇ ದುಃಖವನ್ನು ಹೊಂದುತ್ತಿರುವ ಪರಾಧೀನನಾದ ಯಾವನು ತನ್ನ ದುಃಖಕ್ಕೆ ನಿಮಿತ್ತನಾದವನಲ್ಲಿ ದ್ವೇಷವನ್ನು ಮಾಡು ವನೋ ಅವನು ತಿಳಿವಳಿಕೆಯಲ್ಲಿ ಕಡಿಮೆಯಾದವನಲ್ಲವೇ?

**ನ ತಥಾಽಹಂ ವಿಜಾನಾಮಿ ವೈರಂ ಶೋಕಂ ಭಯಂ ತಥಾ ।**
**ನಿಃಶಂಕಮಿಹ ಸಂಪ್ರಾಪ್ತಃ ಸಮಾಜೇ ಭೂಭೃತಾಮಿಹ ॥೪೫॥**

ಆದರೆ ನಾನು ಆ ರೀತಿಯಲ್ಲಿ ದ್ವೇಷವನ್ನಾಗಲೀ, ದುಃಖವನ್ನಾಗಲೀ, ಹೆದರಿ ಕೆಯನ್ನಾಗಲೀ ಪಡೆದು ತಿಳಿದಿರುವುದಿಲ್ಲವು. ಆದುದರಿಂದಲೇ ಈ ಎಲ್ಲ ರಾಜರ ಸಮೂಹಕ್ಕೆ ಯಾವಮೊಂದು ಆತಂಕವೂ ಹೆದರಿಕೆಯೂ ಇಲ್ಲದೆ ಬಂದಿರುತ್ತೇನೆ.

**ಏಕಾಕೀ ದ್ರಷ್ಟುಕಾಮೋಽಹಂ ಸ್ವಯಂವರಮನುತ್ತಮಂ ।**
**ಭವಿಷ್ಯತಿ ಚ ಯದ್ಭಾವ್ಯಂ ಪ್ರಾಪ್ತೋಽಸ್ಮಿ ಚಂಡಿಕಾಜ್ಞಯಾ ॥೪೬॥**

ನಾನೊಬ್ಬನೇ ಯಾವ ಸಹಾಯವೂ ಇಲ್ಲದೆ ಶ್ರೇಷ್ಠವಾದ ಈ ಸ್ವಯಂವರವನ್ನು ನೋಡಲು ಬಂದಿರುತ್ತೇನೆ. ಇಲ್ಲಿ ಏನು ಆಗುವುದು ದೈವದಿಂದ ಗೊತ್ತಾಗಿ ಇದೆಯೋ ಅದಾಗುವುದು. ನಾನಾದರೋ ಚಂಡಿಕಾದೇವಿಯ ಅಪ್ಪಣೆಯಂತೆ ಬಂದಿರುತ್ತೇನೆ.

**ಭಗವತ್ಯಾಃ ಪ್ರಮಾಣಂ ಮೇ ನಾನ್ಯಂ ಜಾನಾಮಿ ಸಂಯತಃ ।**
**ತತ್ಕೃತಂ ಚ ಸುಖಂ ದುಃಖಂ ಭವಿಷ್ಯತಿ ಚ ನಾನ್ಯಥಾ ॥೪೭॥**

ನನಗೆ ಆ ಭಗವತಿಯ ವಾಕ್ಯವೇ ಪ್ರಮಾಣವು. ಅವಳ ಅಧೀನನಾದ ನಾನು ಇನ್ನಾವುದನ್ನೂ ತಿಳಿಯುವುದಿಲ್ಲವು. ಸುಖವಾಗಲೀ, ದುಃಖವಾಗಲೀ ಅವಳು ಗೊತ್ತು ಮಾಡಿದುದೇ ಆಗುವುದು. ಇದಕ್ಕೆ ವ್ಯತ್ಯಾಸವಾಗಲಾರದು.

**ಯುಧಾಜಿತ್ಸುಖಮಾಪ್ನೋತು ನ ಮೇ ವೈರಂ ನೃಪೋತ್ತಮಾಃ ।**
**ಯಃ ಕರಿಷ್ಯತಿ ಮೇ ವೈರಂ ಸ ಪ್ರಾಪ್ಸ್ಯತಿ ಫಲಂ ತಥಾ ॥೪೮॥**

ಯುಧಾಜಿತ್ತುರಾಜನೇ ಸುಖವನ್ನು ಹೊಂದಲಿ. ನನಗೆ ಅವನಲ್ಲಿ ಸ್ವಲ್ಪವೂ ದ್ವೇಷವಿಲ್ಲವು. ಓ ರಾಜೋತ್ತಮರೇ, ಯಾರು ನನ್ನಲ್ಲಿ ದ್ವೇಷವನ್ನು ಮಾಡುತ್ತಾರೆಯೋ ಅವರು ಅದರ ಫಲವನ್ನು ಹೊಂದುತ್ತಾರೆ.

॥ ವ್ಯಾಸ ಉವಾಚ ॥

**ಇತ್ಯುಕ್ತಾಸ್ತೇ ತಥಾ ತೇನ ಸಂತುಷ್ಟಾ ಭೂಭುಜಃ ಸ್ಥಿತಾಃ ।**
**ಸೋಽಪಿ ಸ್ವಮಾಶ್ರಮಂ ಪ್ರಾಪ್ಯ ಸುಸ್ಥಿತಃ ಸಂಬಭೂವ ಹ ॥೪೯॥**

ವ್ಯಾಸಮುನಿಯು ಹೇಳಿದನು—ಹೀಗೆ ಆ ಸುದರ್ಶನನಿಂದ ಹೇಳಲ್ಪಟ್ಟವರಾಗಿ ಆ ರಾಜರೆಲ್ಲರೂ ತುಂಬ ಸಮಾಧಾನವನ್ನು ಪಡೆದು ಸಂತೋಷಗೊಂಡರು. ಆ ಸುದರ್ಶನನೂ ತನ್ನ ಬಿಡಾರಕ್ಕೆ ತೆರಳಿ ನಿರಾತಂಕವಾಗಿ ಸುಖವಾಗಿದ್ದನು.

**ಅಪರೇಽಹ್ನಿ ಶುಭೇ ಕಾಲೇ ನೃಪಾಃ ಸಂಮಂತ್ರಿತಾಃ ಕಿಲ ।**
**ಸುಬಾಹುನಾ ನೃಪೇಣಾಥ ರುಚಿರೇ ವೈ ಸ್ವಮಂಡಪೇ ॥೫೦॥**

ಮರುದಿವಸ ಶುಭವಾದ ಮುಹೂರ್ತದಲ್ಲಿ ಆ ಸಬಾಹುಮಹಾರಾಜನಿಂದ ಕರೆಯಲ್ಪಟ್ಟವರಾಗಿ ಎಲ್ಲಾ ರಾಜರೂ ಮನೋಹರವಾದ ಸ್ವಯಂವರಮಂಟಪದಲ್ಲಿ

**ದಿವ್ಯಾಸ್ತರಣಯುಕ್ತೇಷು ಮಂಚೇಷು ರಚಿತೇಷು ಚ ।**
**ಉಪವಿಷ್ಟಾಶ್ಚ ರಾಜಾನಃ ಶುಭಾಲಂಕರಣೈರ್ಯುತಾಃ ॥೫೧॥**

ಪ್ರಕಾಶಮಾನವಾದ ರತ್ನಕಂಬಳಿಗಳಿಂದ ಹೊದ್ದಿಸಲ್ಪಟ್ಟ, ಚನ್ನಾಗಿ ಏರ್ಪಡಿಸಿರತಕ್ಕ ಗದ್ದುಗೆಗಳಲ್ಲಿ ಮಂಗಳಕರವಾದ ಅಲಂಕಾರಗಳಿಂದ ಶೋಭಿಸುತ್ತಲಿರುವ ಆ ರಾಜರೆಲ್ಲರೂ ಬಂದು ಮಂಡಿಸಿದರು.

**ದಿವ್ಯವೇಷಧರಾಃ ಕಾಮಂ ವಿಮಾನೇಷ್ವಮರಾ ಇವ ।**
**ದೀಪ್ಯಮಾನಾಃ ಸ್ಥಿತಾಸ್ತತ್ರ ಸ್ವಯಂವರದಿದೃಕ್ಷಯಾ ॥೫೨॥**

ತುಂಬ ಹೊಳೆಯುತ್ತಿರುವ ವೇಷಗಳನ್ನು ಧರಿಸಿ ಆ ಗದ್ದುಗೆಗಳಲ್ಲಿ ಆ ರಾಜರು, ವಿಮಾನಗಳಲ್ಲಿ ಕುಳಿತಿರುವ ದೇವತೆಗಳಂತೆ ಶೋಭಿಸುತ್ತಾ ಆ ಸ್ವಯಂವರವನ್ನು ನೋಡಲಪೇಕ್ಷೆಯಿಂದ ಕುಳಿತಿದ್ದರು.

**ಇತಿ ಚಿಂತಾಪರಾಃ ಸರ್ವೇ ಕದಾ ಸಾಽಪ್ಯಾಗಮಿಷ್ಯತಿ ।**
**ಭಾಗ್ಯವಂತಂ ನೃಪಶ್ರೇಷ್ಠಂ ಶ್ರುತಪುಣ್ಯಂ ವರಿಷ್ಯತಿ ॥೫೩॥**

ಅಲ್ಲಿ ಅವರೆಲ್ಲರೂ ರಾಜಕುವರಿಯು ಯಾವಾಗ ಸ್ವಯಂವರಮಂಟಪಕ್ಕೆ ಬರುವಳು. ಮತ್ತು ಪ್ರಸಿದ್ಧವಾದ ಪುಣ್ಯವುಳ್ಳ, ಭಾಗ್ಯಶಾಲಿಯಾದ ಯಾವ ರಾಜೋತ್ತಮನನ್ನು ಅವಳು ವರಿಸುವಳು ಎಂದು ಆಲೋಚನೆಯನ್ನು ಮಾಡುತ್ತಿದ್ದರು.

**ಯದಾ ಸುದರ್ಶನಂ ದೈವಾತ್ಪ್ರಜಾ ಸಂಭೂಷಯೇದಿಹ ।**
**ವಿವಾದೋ ವೈ ನೃಪಾಣಾಂ ಚ ಭವಿತಾ ನಾತ್ರ ಸಂಶಯಃ ॥೫೪॥**

ಮತ್ತು ಒಂದುವೇಳೆ ಆ ರಾಜಕುವರಿಯು ಕೈಯಲ್ಲಿ ಹಿಡಿದಿರುವ ಹಾರದಿಂದ ಸುದರ್ಶನಕುಮಾರನನ್ನು ಅದೃಷ್ಟವಶದಿಂದ ಗೌರವಿಸಿದರೆ ಆಗ ಇಲ್ಲಿರತಕ್ಕ ರಾಜರಿಗೆಲ್ಲಾ ದೊಡ್ಡದಾಗಿ ಜಗಳವಾಗುವುದು: ಇದರಲ್ಲಿ ಸಂಶಯವಿಲ್ಲವು.

**ಇತ್ಯೇವಂ ಚಿಂತ್ಯಮಾನಾಸ್ತೇ ಭೂಪಾ ಮಂಚೇಷು ಸಂಸ್ಥಿತಾಃ ।**
**ವಾದಿತ್ರಘೋಷಃ ಸುಮಹಾನುತ್ಥಿತೋ ನೃಪಮಂಡಪೇ ॥೫೫॥**

ಹೀಗೆ ಆ ರಾಜರು ಆಲೋಚಿಸುತ್ತಾ ಮಂಚಗಳಲ್ಲಿ ಮಂಡಿಸಿದ್ದರು. ಆಗ ಆ ರಾಜಮಂಡಪದಲ್ಲಿ ದೊಡ್ಡದಾದ ವಾದ್ಯಗಳ ಧ್ವನಿಯು ಎದ್ದಿತು.

**ಅಥ ಕಾಶೀಪತಿಃ ಪ್ರಾಹ ಸುತಾಂ ಸ್ನಾತಾಂ ಸ್ವಲಂಕೃತಾಂ ।**
**ಮಧೂಕಮಾಲಾಸಂಯುಕ್ತಾಂ ಕ್ಷೌಮವಾಸೋವಿಭೂಷಿತಾಂ ॥೫೬॥**

ಅನಂತರದಲ್ಲಿ ಕಾಶೀರಾಜನಾದ ಸುಬಾಹುವು ಮಂಗಳಸ್ನಾನವನ್ನು ಮಾಡಿ, ದಿವ್ಯಾಲಂಕಾರಭೂಷಿತಳಾಗಿರುವ ಮಧೂಕಪುಷ್ಪ ಎಂದರೆ ಪಾದರಿಹೂವಿನ ಮಾಲೆಯಿಂದ ಕೂಡಿರತಕ್ಕ ಮತ್ತು ಬಿಳಿಯ ರೇಷ್ಮೆಯ ಸೀರೆ, ಕುಪ್ಪುಸ, ಮೇಲುಹೊದಿಕೆ, ಕರವಸ್ತ್ರ ಇವುಗಳಿಂದ ಅಲಂಕೃತಳಾದ ತನ್ನ ಮಗಳನ್ನು ಕುರಿತು ಹೀಗೆ ಹೇಳಿದನು.

**ವಿವಾಹೋಪಸ್ಕರೈರ್ಯುಕ್ತಾಂ ದಿವ್ಯಾಂ ಸಿಂಧುಸುತೋಪಮಾಂ ।**
**ಚಿಂತಾಪರಾಂ ಸುವಸನಾಂ ಸ್ಮಿತಪೂರ್ವಮಿದಂ ವಚಃ ॥೫೭॥**

ಮತ್ತು ಮದುವೆಯ ಮಂಗಳದ್ರವ್ಯಗಳಿಂದ ಕೂಡಿರುವ, ತುಂಬ ಪ್ರಕಾಶಿಸುತ್ತಲಿರುವ, ಲಕ್ಷ್ಮಿಯಂತೆ ಶೋಭಿಸುವ, ಒಳ್ಳೆಯ ವಸ್ತ್ರಗಳನ್ನು ಧರಿಸಿರುವ ಆತಂಕವುಳ್ಳ ಮತ್ತು ದೇವಿಯ ಧ್ಯಾನವನ್ನು ಮಾಡುತ್ತಲಿರುವ ಆ ತನ್ನ ಮಗಳನ್ನು ಕುರಿತು ಮಂದಹಾಸಪೂರ್ವಕವಾಗಿ ಈ ಮಾತುಗಳನ್ನು ಹೇಳಿದನು.

**ಉತ್ತಿಷ್ಠ ಪುತ್ರಿ ಸುನಸೇ ಕರೇ ಧೃತ್ವಾ ಶುಭಾಂ ಸ್ರಜಂ ।**
**ವ್ರಜ ಮಂಡಪಮಧ್ಯೇಽದ್ಯ ಸಮಾಜಂ ಪಶ್ಯ ಭೂಭುಜಾಂ ॥೫೮॥**

ಸುಂದರವಾದ ಮೂಗುಳ್ಳ ಓ ಮಗಳೇ, ಏಳು. ಮಂಗಳಕರವಾದ ಸ್ವಯಂವರಹಾರವನ್ನು ಕೈಯಲ್ಲಿ ಹಿಡಿದುಕೊಂಡು ಈಗ ಸ್ವಯಂವರಮಂಟಪದ ಮಧ್ಯಕ್ಕೆ ಪ್ರವೇಶಿಸು. ಅಲ್ಲಿರುವ ರಾಜರ ಸಮೂಹವನ್ನು ನೋಡು.

**ಗುಣವಾನ್ ರೂಪಸಂಪನ್ನಃ ಕುಲೀನಶ್ಚ ನೃಪೋತ್ತಮಃ ।**
**ತವ ಚಿತ್ತೇ ವಸೇದ್ಯಸ್ತು ತಂ ವೃಣುಷ್ವ ಸುಮಧ್ಯಮೇ ॥೫೯॥**

ಸುಂದರವಾದ ನಡುವುಳ್ಳ ಓ ಮಗಳೇ, ಇವರಲ್ಲಿ ಯಾವ ರಾಜನು ಗುಣವಂತನಾಗಿಯೂ, ರೂಪವಂತನಾಗಿಯೂ, ಒಳ್ಳೆಯ ಕುಲದವನಾಗಿಯೂ, ಇರುತ್ತಾ ನಿನ್ನ ಮನಸ್ಸಿನಲ್ಲಿ ವಾಸಿಸುತ್ತಿರುವನೋ ಎಂದರೆ ನಿನ್ನ ಮನಸ್ಸಿಗೆ ಒಪ್ಪಿಗೆಯಾಗುವನೋ ಅವನನ್ನು ವರಿಸು.

**ದೇಶದೇಶಾಧಿಪಾಃ ಸರ್ವೇ ಮಂಚೇಷು ರಚಿತೇಷು ಚ ।**
**ಸಂವಿಷ್ಟಾಃ ಪಶ್ಯ ತನ್ವಂಗಿ ವರಯಸ್ವ ಯಥಾರುಚಿ ॥೬೦॥**

ಎಲ್ಲ ದೇಶಗಳ ದೊರೆಗಳೂ ಬಂದು ಸಿದ್ಧಗೊಳಿಸಲ್ಪಟ್ಟ ಗದ್ದುಗೆಗಳಲ್ಲಿ ಕುಳಿತುಕೊಂಡಿರುವರು. ಕೃಶವಾದ ಎಂದರೆ ಸ್ಥೂಲವಲ್ಲದ ಶರೀರವುಳ್ಳ ಓ ಮಗಳೇ, ಇವರನ್ನು ನೋಡು. ನಿನ್ನ ಇಷ್ಟದಂತೆ ಬೇಕಾದವರನ್ನು ವರಿಸು.

॥ ವ್ಯಾಸ ಉವಾಚ ॥

**ತಂ ತಥಾ ಭಾಷಮಾಣಂ ವೈ ಪಿತರಂ ಮಿತಭಾಷಿಣೀ ।**
**ಉವಾಚ ವಚನಂ ಬಾಲಾ ಲಲಿತಂ ಧರ್ಮಸಂಯುತಂ ॥೬೧॥**

ವ್ಯಾಸಮುನಿಯು ಹೇಳಿದನು—ಆ ರೀತಿಯಲ್ಲಿ ಹೇಳುತ್ತಲಿರುವ ಆ ತನ್ನ ತಂದೆಯನ್ನು ಕುರಿತು ಉಚಿತವಾಗಿ ಸ್ವಲ್ಪವೇ ಮಾತನಾಡುವವಳಾದ ಬಾಲಿಕೆಯಾದ ಆ ಶಶಿಕಲೆಯು ಧರ್ಮದಿಂದ ಕೂಡಿದ ಈ ಮಾತುಗಳನ್ನು ಹೇಳಿದಳು.

॥ ಶಶಿಕಲೋವಾಚ ॥

**ನಾಹಂ ದೃಷ್ಟಿಪಥೇ ರಾಜ್ಞಾಂ ಗಮಿಷ್ಯಾಮಿ ಪಿತಃ ಕಿಲ ।**
**ಕಾಮುಕಾನಾಂ ನರೇಶಾನಾಂ ಗಚ್ಛಂತ್ಯನ್ಯಾಶ್ಚ ಯೋಷಿತಃ ॥೬೨॥**

ಶಶಿಕಲೆಯು ಹೇಳಿದಳು. ಓ ತಂದೆಯೇ, ನಾನು ರಾಜರುಗಳ ದೃಷ್ಟಿಗೆ ವಿಷಯಳಾಗಿ ಹೋಗಲಾರೆನು. ಎಂದರೆ, ಕಾಮಾಭಿಲಾಷೆಯಿಂದ ಸ್ತ್ರೀಯರನ್ನು ನೋಡಬಯಸುತ್ತಿರುವ ರಾಜರುಗಳ ಕಣ್ಣಿಗೆ ಕಾಣಿಸುವಂತೆ ಅವರ ಎದುರಿಗೆ ಹೋಗಲು ಇಚ್ಛಿಸುವುದಿಲ್ಲ. ಅಂಥವರ ಎದುರಿಗೆ ಪತಿವ್ರತೆಯರಲ್ಲದ ಬೇರೆ ಸ್ತ್ರೀಯರು ಹೋಗುತ್ತಾರೆ.

**ಧರ್ಮಶಾಸ್ತ್ರೇ ಶ್ರುತಂ ತಾತ ಮಯೇದಂ ವಚನಂ ಕಿಲ ।**
**ಏಕ ಏವ ವರೋ ನಾರ್ಯಾ ನಿರೀಕ್ಷ್ಯಃ ಸ್ಯಾನ್ನ ಚಾಪರಃ ॥೬೩॥**

ಓ ತಂದೆಯೇ, ನಾನು ಧರ್ಮಶಾಸ್ತ್ರದಲ್ಲಿ ಈ ವಾಕ್ಯವನ್ನು ಕೇಳಿರುತ್ತೇನೆ. ಸ್ತ್ರೀಯು ತನ್ನ ಪತಿಯೆಂದು ಭಾವಿಸಿ ಒಬ್ಬ ವರನನ್ನು ಮಾತ್ರವೇ ನೋಡಬೇಕೇ ಹೊರ ತು ಇನ್ನೊಬ್ಬನನ್ನು ನೋಡಬಾರದು.

**ಸತೀತ್ವಂ ನಿರ್ಗತಂ ತಸ್ಯಾ ಯಾ ಪ್ರಯಾತಿ ಬಹೂನಥ ।**
**ಸಂಕಲ್ಪಯಂತಿ ತೇ ಸರ್ವೇ ದೃಷ್ಟ್ವಾ ಮೇ ಭವತಾತ್ತ್ವಿತಿ ॥೬೪॥**

ಯಾವ ಸ್ತ್ರೀಯು ಅನೇಕ ಪುರುಷರೆದುರಿಗೆ ಹೋಗುವಳೋ ಅವಳ ಸತೀತ್ವವು ಎಂದರೆ ಪಾತಿವ್ರತ್ಯವು ಹೋಗುತ್ತದೆ. ಏಕೆಂದರೆ, ಎದುರಿಗೆ ಬಂದ ಅವಳನ್ನು ನೋಡಿ ಎಲ್ಲ ಪುರುಷರೂ ಅವಳು ತನ್ನವಳಾಗಲಿ ಎಂದು ಅಪೇಕ್ಷಿಸುತ್ತಾರೆ.

**ಸ್ವಯಂವರೇ ಸ್ರಜಂ ಧೃತ್ವಾ ಯದಾ ಗಚ್ಛತಿ ಮಂಡಪೇ ।**
**ಸಾಮಾನ್ಯಾ ಸಾ ತದಾ ಜಾತಾ ಕುಲಟೇವಾಪರಾ ವಧೂಃ ॥೬೫॥**

ಯಾವಾಗ ಕನ್ಯೆಯು ಸ್ವಯಂವರಮಂಟಪದಲ್ಲಿ ಕೈಯಲ್ಲಿ ಹಾರವನ್ನು ಹಿಡಿದು ಎದುರಿಗೆ ಬರುವಳೋ, ಆಗ ಅವಳು ಎಲ್ಲಾ ರಾಜರಿಗೂ ಪಡೆಯಲು ಯೋಗ್ಯಳಾಗಿ ಸರ್ವರಿಗೂ ಸೂಳೆಯಂತೆ ಬೇರೊಬ್ಬ ಸ್ತ್ರೀಯಾಗುತ್ತಾಳೆ.

**ವಾರಸ್ತ್ರೀ ವಿಪಣೇ ಗತ್ವಾ ಯಥಾ ವೀಕ್ಷ್ಯ ನರಾನ್ ಸ್ಥಿತಾನ್ ।**
**ಗುಣಾಗುಣಪರಿಜ್ಞಾನಂ ಕರೋತಿ ನಿಜಮಾನಸೇ ॥೬೬॥**

ಸೂಳೆಯು ಅಂಗಡಿಬೀದಿಗೆ ಹೋಗಿ ಹೇಗೆ ಅಲ್ಲಿರುವ ಮನುಷ್ಯರನ್ನು ನೋಡಿ ಇವನು ಗುಣವಂತನು ಎಂದರೆ ಧನವಂತನು, ಇವನು ಅಲ್ಲವೆಂಬ ವಿಮರ್ಶೆ ಯನ್ನು ತನ್ನ ಮನಸ್ಸಿನಲ್ಲಿ ಮಾಡುವಳೋ,

**ನೈಕಭಾವಾ ಯಥಾ ವೇಶ್ಯಾ ವೃಥಾ ಪಶ್ಯತಿ ಕಾಮುಕಂ ।**
**ತಥಾಽಹಂ ಮಂಡಪೇ ಗತ್ವಾ ಕುರ್ವೇ ವಾರಸ್ತ್ರಿಯಾ ಕೃತಂ ॥೬೭॥**

ಮತ್ತು, ಒಬ್ಬನಲ್ಲಿಯೇ ನೆಲಸಿರುವ ಅನುರಾಗವಿಲ್ಲದವಳಾಗಿ, ಅನೇಕರನ್ನು ಕಾಮಭಾವದಿಂದ ನೋಡುವಳೋ ಅದರಂತೆಯೇ ನಾನೂ ಸ್ವಯಂವರ ಮಂಟಪಕ್ಕೆ ಹೋಗಿ ಆ ಸೂಳೆಯ ಕೆಲಸವನ್ನು ಮಾಡಲೇನು ?

**ವೃದ್ಧೈರೇತೈಃ ಕೃತಂ ಧರ್ಮಂ ನ ಕರಿಷ್ಯಾಮಿ ಸಾಂಪ್ರತಂ ।**
**ಪತ್ನೀವ್ರತಂ ತಥಾ ಕಾಮಂ ಚರಿಷ್ಯೇಽಹಂ ಧೃತವ್ರತಾ ॥೬೮॥**

ಹಿರಿಯರು ಮಾಡಿರತಕ್ಕ ಈ ಸ್ವಯಂವರದ ಧರ್ಮವನ್ನು ಎಂದರೆ ಪದ್ಧತಿಯನ್ನು ನಾನು ಆಚರಿಸಲಾರೆನು. ಆದರೆ ಪತಿವ್ರತೆಯಾದ ಪತ್ನಿಯು ಮಾಡತಕ್ಕ ಪಾತಿವ್ರತ್ಯಧರ್ಮದ ಆಚರಣೆಯನ್ನು ನಾನು ದೃಢವಾದ ನಿಯಮನಿಷ್ಠೆಯಿಂದ ಮಾಡುವೆನು.

**ಸಾಮಾನ್ಯಾ ಪ್ರಥಮಂ ಗತ್ವಾ ಕೃತ್ವಾ ಸಂಕಲ್ಪಿತಂ ಬಹು ।**
**ವೃಣೋತಿ ಚೈಕಂ ತದ್ವದ್ವೈ ವೃಣೋಮಿ ಕಥಮದ್ಯ ವೈ ॥೬೯॥**

ಮೊದಲು ಎಲ್ಲಾ ಪುರುಷರಿಗೂ ಸಾಧಾರಣಳಾಗಿರುವ ಸ್ತ್ರೀಯಂತೆ ಹೋಗಿ ಪತಿವ್ರತೆಯಾದ ನಾನು ಅನೇಕ ಪುರುಷರನ್ನು ಸೂಳೆಯಂತೆ ಮನಸ್ಸಿನಲ್ಲಿ ಕಲ್ಪಿಸಿಕೊಂಡು, ಕೊನೆಗೆ ಒಬ್ಬನನ್ನೇ ಹೇಗೆ ವರಿಸಲಿ ?

**ಸುದರ್ಶನೋ ಮಯಾ ಪೂರ್ವಂ ವೃತಃ ಸರ್ವಾತ್ಮನಾ ಪಿತಃ ।**
**ತಮೃತೇ ನಾನ್ಯಥಾ ಕರ್ತುಮಿಚ್ಛಾಮಿ ನೃಪಸತ್ತಮ ॥೭೦॥**

ನಾನು ಈ ಹಿಂದೆಯೇ ಸರ್ವರೀತಿಯಿಂದಲೂ ಸುದರ್ಶನನನ್ನು ವರಿಸಿರುತ್ತೇನೆ. ಹೀಗಿರಲು, ರಾಜಶ್ರೇಷ್ಠನಾದ ಓ ತಂದೆಯೇ, ಅವನನ್ನು ಬಿಟ್ಟು ಬೇರೆ ರೀತಿಯಾಗಿ ಎಂದರೆ ಮತ್ತೊಬ್ಬ ಪುರುಷನನ್ನು ವರಿಸಲು ನಾನು ಅಪೇಕ್ಷಿಸುವುದಿಲ್ಲವು.

**ವಿವಾಹವಿಧಿನಾ ದೇಹಿ ಕನ್ಯಾದಾನಂ ಶುಭೇ ದಿನೇ ।**
**ಸುದರ್ಶನಾಯ ನೃಪತೇ ಯದೀಚ್ಛಸಿ ಶುಭಂ ಮಮ ॥೭೧॥**

ಆದುದರಿಂದ ಓ ಸುಬಾಹುರಾಜನೇ, ನನಗೆ ಒಳ್ಳೆಯದಾಗಬೇಕೆಂದು ನೀನು ಇಷ್ಟಪಡುತ್ತಿದ್ದರೆ, ನನ್ನನ್ನು ಪಾಣಿಗ್ರಹಣವಿಧಿಯಂತೆ ಸುದರ್ಶನನಿಗೆ ಕೊಟ್ಟು ಕನ್ಯಾದಾನವನ್ನು ಒಳ್ಳೆಯ ದಿವಸದಲ್ಲಿ ಮಾಡು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

॥ ಏಕವಿಂಶೋऽಧ್ಯಾಯಃ ॥

### ಇಪ್ಪತ್ತೊಂದನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಸುಬಾಹುರಪಿ ತಚ್ಛ್ರುತ್ವಾ ಯುಕ್ತಮುಕ್ತಂ ತಯಾ ತದಾ ।**
**ಚಿಂತಾವಿಷ್ಟೋ ಬಭೂವಾಶು ಕಿಂ ಕರ್ತವ್ಯಮಿತಃ ಪರಂ ॥೧॥**

ವ್ಯಾಸಮುನಿಯು ಹೇಳಿದನು---ಸುಬಾಹುರಾಜನು ತನ್ನ ಮಗಳಾದ ಶಶಿಕಲೆಯು ಹೇಳಿದ ಮಾತು ಯೋಗ್ಯವಾದುದೆಂದು ತಿಳಿದನು. ಆದರೆ, ಇನ್ನು ಮುಂದೆ ತಾನು ಏನನ್ನು ಮಾಡಬೇಕು ಎಂಬ ವಿಷಯದಲ್ಲಿ ಬಹಳ ಯೋಚನೆಯುಳ್ಳವನಾದನು.

**ಸಂಗತಾಃ ಪೃಥಿವೀಪಾಲಾಃ ಸಸೈನ್ಯಾಃ ಸಪರಿಗ್ರಹಾಃ ।**
**ಉಪವಿಷ್ಟಾಶ್ಚ ಮಂಚೇಷು ಯೋದ್ಧುಕಾಮಾ ಮಹಾಬಲಾಃ ॥೨॥**

ಅತ್ಯಂತ ಬಲಶಾಲಿಗಳಾದ ಸಮಸ್ತರಾಜರೂ ಕೂಡ ಸೈನ್ಯಸಮೇತರಾಗಿಯೂ, ತಮ್ಮ ಪರಿವಾರದವರಿಂದ ಕೂಡಿದವರಾಗಿಯೂ ಬಂದು ಸೇರಿದವರಾಗಿ ಯುದ್ಧ ಸನ್ನದ್ಧರಾಗಿಯೇ ಮಂಡಪದಲ್ಲಿ ಕುಳಿತಿರುತ್ತಾರೆ.

**ಯದಿ ಬ್ರವೀಮಿ ತಾನ್ಸರ್ವಾನ್ ಸುತಾ ನಾಽಯಾತಿ ಸಾಂಪ್ರತಂ ।**
**ತಥಾಪಿ ಕೋಪಸಂಯುಕ್ತಾ ಹನ್ಯುರ್ಮಾಂ ದುಷ್ಟಬುದ್ಧಯಃ ॥೩॥**

ಒಂದುವೇಳೆ ಈಗ ನಾನು ಆ ಎಲ್ಲ ರಾಜರನ್ನು ಕುರಿತು ನನ್ನ ಮಗಳು ವಿವಾಹಮಂಡಪಕ್ಕೆ ಬರುವುದಿಲ್ಲವೆಂದು ಹೇಳಿದರೂ, ಕೆಟ್ಟಬುದ್ಧಿಯುಳ್ಳ ಆ ರಾಜರು ಅತ್ಯಂತಕೋಪಾವಿಷ್ಟರಾಗಿ ನನ್ನನ್ನು ಕೊಂದಾರು.

**ನ ಮೇ ಸೈನ್ಯಬಲಂ ತಾದೃಙ್ನ ದುರ್ಗಬಲಮದ್ಭುತಂ ।**
**ಯೇನಾಹಂ ನೃಪತೀನ್ ಸರ್ವಾನ್ ಪ್ರತ್ಯಾದೇಷ್ಟುಮಿಹೋತ್ಸಹೇ॥೪॥**

ನನ್ನ ಹತ್ತಿರದಲ್ಲಿ ಆ ರಾಜರಿಗಿರತಕ್ಕಂತೆ, ಶತ್ರುಗಳಿಗೆ ಭಯಂಕರವಾದ ಸೈನ್ಯವಾಗಲಿ, ಕೋಟೆಯಾಗಲಿ ಯಾವುದೂ ಇಲ್ಲವು. ಯಾವ ಬಲದಿಂದ ನಾನು ಆ ಎಲ್ಲ ರಾಜರನ್ನೂ ಪ್ರತಿಭಟಿಸಲು ಉತ್ಸಾಹದಿಂದ ಮುಂದುವರೆಯಲಿ ?

**ಸುದರ್ಶನಸ್ತ್ವಥೈಕಾಕೀ ಹ್ಯಸಹಾಯೋಽಧನಃ ಶಿಶುಃ ।**
**ಕಿಂ ಕರ್ತವ್ಯಂ ನಿಮಗ್ನೋಽಹಂ ಸರ್ವಥಾ ದುಃಖಸಾಗರೇ ॥೫॥**

ಸುದರ್ಶನನಾದರೋ ಒಂಟಿಗನಾಗಿಯೂ, ಸಹಾಯವಿಲ್ಲದವನಾಗಿಯೂ, ಧನರಹಿತನಾಗಿಯೂ ಮತ್ತು ಇನ್ನೂ ಚಿಕ್ಕವಯಸ್ಸಿನವನಾಗಿಯೂ ಇರುವನು. ಆದುದರಿಂದ ನಾನು ಏನನ್ನುಮಾಡಲಿ? ನಿಶ್ಚಯವಾಗಿಯೂ ನಾನು ದೊಡ್ಡ ಇಕ್ಕಟ್ಟಿನ ದುಃಖದ ಸಮುದ್ರದಲ್ಲಿ ಮುಳುಗಿದ್ದೇನೆ.

**ಇತಿ ಚಿಂತಾಪರೋ ರಾಜಾ ಜಗಾಮ ನೃಪಸನ್ನಿಧೌ ।**
**ಪ್ರಣಮ್ಯ ತಾನುವಾಚಾಥ ಪ್ರಶ್ರಯಾವನತೋ ನೃಪಃ ॥೬॥**

ಈರೀತಿಯಾದ ದುಃಖದಿಂದ ಕೂಡಿದ ಸುಬಾಹುರಾಜನು ಇತರ ರಾಜರ ಸಮೀಪಕ್ಕೆ ಹೋದನು. ಅನಂತರದಲ್ಲಿ ಅವನು ಸಭಿಕರಿಗೆ ನಮಸ್ಕಾರಮಾಡಿ, ಅತ್ಯಂತವಿನಯದಿಂದ ಬಗ್ಗಿದವನಾಗಿ ಈರೀತಿಯಲ್ಲಿ ಹೇಳಿದನು.

**ಕಿಂ ಕರ್ತವ್ಯಂ ನೃಪಾಃ ಕಾಮಂ ನೈತಿ ಮೇ ಮಂಡಪೇ ಸುತಾ ।**
**ಬಹುಶಃ ಪ್ರೇರ್ಯಮಾಣಾಪಿ ಸಾ ಮಾತ್ರಾಪಿ ಮಯಾಪಿ ಚ ॥೭॥**

ಓ ರಾಜರುಗಳಿರಾ, ನನ್ನ ಮಗಳಾದ ಶಶಿಕಲೆಯು, ನನ್ನಿಂದಲೂ ಮತ್ತು ಅವಳ ತಾಯಿಂದಲೂ ಬಹಳವಾಗಿ ಪ್ರೇರಿಸಲ್ಪಟ್ಟವಳಾದಾಗ್ಯೂ ಕೂಡ ವಿವಾಹ ಮಂಡಪಕ್ಕೆ ಬರುವುದಿಲ್ಲವು. ಆದುದರಿಂದ ಈಗ ನಾನು ಏನನ್ನು ಮಾಡಲಿ ?

**ಮೂರ್ಧ್ನಾ ಪತಾಮಿ ಪಾದೇಷು ರಾಜ್ಞಾಂ ದಾಸೋಽಸ್ಮಿ ಸಾಂಪ್ರತಂ ।**
**ಪೂಜಾದಿಕಂ ಗೃಹೀತ್ವಾದ್ಯ ವ್ರಜಂತು ಸದನಾನಿ ವಃ ॥೮॥**

ನಾನು, ನನ್ನ ಶಿರಸ್ಸನ್ನು ಬಾಗಿಸಿ ನಿಮ್ಮ ಪಾದಗಳಿಗೆ ನಮಸ್ಕರಿಸುತ್ತೇನೆ. ಮತ್ತು ಈಗ ನಾನು ನಿಮ್ಮ ದಾಸನಾಗಿದ್ದೇನೆ. ನೀವು ನನ್ನ ಪೂಜಾದಿಸತ್ಕಾರಗಳನ್ನು ಸ್ವೀಕರಿಸಿ ಈ ದಿನದಲ್ಲಿ ನಿಮ್ಮ ನಿಮ್ಮ ಬಿಡಾರಗಳಿಗೆ ಮನೆಗೆ ತೆರಳಿರಿ.

**ದದಾಮಿ ಬಹುರತ್ನಾನಿ ವಸ್ತ್ರಾಣಿ ಚ ಗಜಾನ್ರಥಾನ್ ।**
**ಗೃಹೀತ್ವಾದ್ಯ ಕೃಪಾಂ ಕೃತ್ವಾ ವ್ರಜಂತು ಭವನಾನ್ಯುತ ॥೯॥**

ಬಹಳ ರತ್ನಗಳನ್ನೂ, ಅನೇಕ ವಿಧವಾದ ಪೀತಾಂಬರಗಳನ್ನೂ, ಆನೆಗಳನ್ನೂ, ರಥಗಳನ್ನೂ ಕೊಡುತ್ತೇನೆ. ನೀವುಗಳು ಈಗ ಅವುಗಳನ್ನು ಸ್ವೀಕರಿಸಿ ದಯವಿಟ್ಟು ಹಿಂತಿರಗುವವರಾಗಿರಿ.

**ನ ವಶೇ ಮೇ ಸುತಾ ಬಾಲಾ ಯದಿ ಮ್ರಿಯೇತ ಖೇದಿತಾ ।**
**ತದಾ ಮೇ ಸ್ಯಾನ್ಮಹದ್ದುಃಖಂ ತೇನ ಚಿಂತಾತುರೋಽಸ್ಮ್ಯಹಂ ॥೧೦॥**

ನನ್ನ ಮಗಳು ನನ್ನ ಅಧೀನದಲ್ಲಿಲ್ಲವು. ಒಂದುವೇಳೆ ದುಃಖದಿಂದ ಅವಳು ಸಾಯುವುದಾದರೆ, ಆಗ ನನಗೆ ಬಹಳ ಸಂಕಟವಾಗುವುದು. ಆದಕಾರಣ ನಾನು ಬಹಳ ಯೋಚನೆಗೆ ಈಡಾಗಿರುವೆನು.

**ಭವಂತಃ ಕರುಣಾವಂತೋ ಮಹಾಭಾಗ್ಯಾ ಮಹೌಜಸಃ ।**
**ಕಿಮೇತಯಾ ದುಹಿತ್ರಾ ಮೇ ಮಂದಯಾ ದುರ್ವಿನೀತಯಾ ॥೧೧॥**

ತಾವು ಕರುಣಾಶೀಲರೂ ಮಹಾಭಾಗ್ಯಶಾಲಿಗಳೂ ಬಹಳ ಪರಾಕ್ರಮಶಾಲಿಗಳೂ ಆಗಿರುವಿರಿ. ಆದುದರಿಂದ ಈ ರೀತಿಯಾಗಿರುವ ಹೇಳಿದಂತೆ ಕೇಳದಿರುವ ದಡ್ಡಳಾದ ಮತ್ತು ನಿರ್ಭಾಗ್ಯಳಾದ ಈ ನನ್ನ ಮಗಳಿಂದ ನಿಮಗೆ ಏನುತಾನೇ ಪ್ರಯೋಜನವು ?

**ಅನುಗ್ರಾಹ್ಯೋಽಸ್ಮಿ ವಃ ಕಾಮಂ ದಾಸೋಽಹಮಿತಿ ಸರ್ವಥಾ ।**
**ಸುತಾ ಸುತೇವ ಮಂತವ್ಯಾ ಭವದ್ಭಿಃ ಸರ್ವಥಾ ಮಮ ॥೧೨॥**

ಸೇವಕನಂತೆ ನಾನು ನಿಮ್ಮಿಂದ ಅನುಗ್ರಹವನ್ನು ಪಡೆಯಲು ಎಲ್ಲಾ ಪ್ರಕಾರದಿಂದಲೂ ಅರ್ಹನಾಗಿರುವೆನು. ಆದುದರಿಂದ ತಾವು ಈ ನನ್ನ ಮಗಳನ್ನು ಎಲ್ಲಾ ಭಾಗದಲ್ಲೂ ತಮ್ಮ ಮಗಳೆಂದು ಭಾವಿಸಬೇಕಾಗಿ ಪ್ರಾರ್ಥಿಸುತ್ತೇನೆ.

|| ವ್ಯಾಸ ಉವಾಚ ||

**ಶ್ರುತ್ವಾ ಸುಬಾಹುವಚನಂ ನೋಚುಃ ಕೇಚನ ಭೂಮಿಪಾಃ ।**
**ಯುಧಾಜಿತ್ಕ್ರೋಧತಾಮ್ರಾಕ್ಷಸ್ತಮುವಾಚ ರುಷಾನ್ವಿತಃ ॥೧೩॥**

ವ್ಯಾಸಮುನಿಯು ಹೇಳಿದನು—ಈ ರೀತಿಯಾದ ಸುಬಾಹುವಿನ ಮಾತನ್ನು ಕೇಳಿ ಕೆಲವು ರಾಜರು ಯಾವ ಮಾತನ್ನೂ ಆಡದೆ ಸುಮ್ಮನಿದ್ದರು. ಆದರೆ ಯುಧಾಜಿದ್ರಾಜನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಕ್ರೋಧದಿಂದ ಈರೀತಿ ಯಾಗಿ ಹೇಳಿದನು.

**ರಾಜನ್ ಮೂರ್ಖೋಽಸಿ ಕಿಂ ಬ್ರೂಷೇ ಕೃತ್ವಾ ಕಾರ್ಯಂ ಸುನಿಂದಿತಂ ।**
**ಸ್ವಯಂವರಃ ಕಥಂ ಮೋಹಾದ್ರಚಿತಃ ಸಂಶಯೇ ಸತಿ ॥೧೪॥**

ಓ ರಾಜನೇ, ನೀನು ಬಹಳ ಮೂರ್ಖನಾಗಿರುವೆ. ನೀನು ಬಹು ನಿಂದ್ಯ ವಾದ ಕಾರ್ಯವನ್ನು ಮಾಡಿರುವೆ. ನಿನಗೆ ಈ ರೀತಿ ಸಂಶಯವಿರುವಲ್ಲಿ ಭ್ರಮೆ ಯಿಂದ ಏತಕ್ಕಾಗಿ ಸ್ವಯಂವರವನ್ನು ಏರ್ಪಡಿಸಿದೆ ?

**ಮಿಲಿತಾ ಭೂಭುಜಃ ಸರ್ವೇ ತ್ವಯಾಽಽಹೂತಾಃ ಸ್ವಯಂವರೇ ।**
**ಕಥಮದ್ಯ ನೃಪಾ ಗಂತುಂ ಯೋಗ್ಯಾಸ್ತೇ ಸ್ವಗೃಹಾನ್ಪ್ರತಿ ॥೧೫॥**

ನೀನು ಎಲ್ಲಾ ರಾಜರನ್ನೂ ಸ್ವಯಂವರಕ್ಕಾಗಿ ಆಹ್ವಾನಿಸಿರುವೆ. ಹೀಗೆ ಸೇರಿದ ಎಲ್ಲಾ ರಾಜರೂ ಹೇಗೆ ತಮ್ಮ ಅರಮನೆಗಳಿಗೆ ಹಿಂದಿರುಗುವುದಕ್ಕೆ ಒಪ್ಪಲು ಅರ್ಹರಾಗಿರುತ್ತಾರೆ ?

**ಅವಮಾನ್ಯ ನೃಪಾನ್ ಸರ್ವಾಂಸ್ತ್ವಂ ಕಿಂ ಸುದರ್ಶನಾಯ ವೈ ।**
**ದಾತುಮಿಚ್ಛಸಿ ಪುತ್ರೀಂ ಚ ಕಿಮನಾರ್ಯಮತಃಪರಂ ॥೧೬॥**

ನೀನು ಎಲ್ಲಾ ರಾಜರಿಗೂ ಅಪಮಾನವನ್ನು ಮಾಡಿ ನಿನ್ನ ಮಗಳನ್ನು ಸುದರ್ಶನನಿಗೆ ಕೊಡಲು ಇಚ್ಛಿಸಿದ್ದೀಯೇನು ? ಇದಕ್ಕಿಂತಲೂ ಹೆಚ್ಚಿನ ಅಯೋಗ್ಯ ವಾದ ಕೆಲಸವು ಇನ್ನು ಯಾವುದು ಇದೆ ?

**ವಿಚಾರ್ಯ ಪುರುಷೇಣಾದೌ ಕಾರ್ಯಂ ವೈ ಶುಭಮಿಚ್ಛತಾ ।**
**ಆರಬ್ಧವ್ಯಂ ತ್ವಯಾ ತತ್ತು ಕೃತಂ ರಾಜನ್ನಜಾನತಾ ॥೧೭॥**

ಎಲೈ ಸುಬಾಹುರಾಜನೇ, ಮಂಗಳವನ್ನು ಇಚ್ಛಿಸತಕ್ಕ ಪ್ರತಿಯೊಬ್ಬ ಮನುಷ್ಯನೂ ಕೂಡ ಪ್ರಾರಂಭದಲ್ಲಿಯೇ ವಿಚಾರವನ್ನು ಮಾಡಿ ಕೆಲಸವನ್ನು ಮಾಡಬೇಕು. ಆದರೆ ನೀನು ವಿಚಾರವನ್ನು ತಿಳಿಯದೆ ಈ ಕೆಲಸವನ್ನು ಮಾಡಿರುವೆ.

**ಏತಾನ್ವಿಹಾಯ ನೃಪತೀನ್ ಬಲವಾಹನಸಂಯುತಾನ್ ।**
**ವರಂ ಸುದರ್ಶನಂ ಕರ್ತುಂ ಕಥಮಿಚ್ಛಸಿ ಸಾಂಪ್ರತಂ ॥೧೮॥**

ಹೆಚ್ಚಾದ ಸೈನ್ಯಗಳಿಂದಲೂ ರಥ ಕುದುರೆಗಳೇ ಮೊದಲಾದ ವಾಹನಗಳಿಂದಲೂ ಕೂಡಿರತಕ್ಕ ಈ ಎಲ್ಲ ರಾಜರನ್ನೂ ಬಿಟ್ಟು ನಿನ್ನ ಮಗಳನ್ನು ಸುದರ್ಶನನಿಗೆ ಕೊಡಲು ಹೇಗೆ ಇಚ್ಛಿಸುತ್ತೀಯೆ ?

**ಅಹಂ ತ್ವಾಂ ಹನ್ಮಿ ಪಾಪಿಷ್ಠ ತಥಾ ಪಶ್ಚಾತ್ಸುದರ್ಶನಂ ।**
**ದೌಹಿತ್ರಾಯಾದ್ಯ ಮೇ ಕನ್ಯಾಂ ದಾಸ್ಯಾಮೀತಿ ವಿನಿಶ್ಚಯಃ ॥೧೯॥**

ನಾನು ಕೆಟ್ಟಕೆಲಸವನ್ನು ಮಾಡಿದ ನಿನ್ನನ್ನು ಮೊದಲೂ, ಅನಂತರದಲ್ಲಿ ಸುದರ್ಶನನನ್ನೂ ಕೊಲ್ಲುತ್ತೇನೆ. ನನ್ನ ಮೊಮ್ಮಗನಾದ ಶತ್ರುಜಿತನಿಗೆ ನಿನ್ನ ಮಗಳನ್ನು ಕೊಡಿಸುವೆನೆಂದು ನಾನು ನಿಶ್ಚಯಿಸಿರುವೆನು.

**ಮಯಿ ತಿಷ್ಠತಿ ಕೋಽನ್ಯೋಽಸ್ತಿ ಯಃ ಕನ್ಯಾಂ ಹರ್ತುಮಿಚ್ಛತಿ ।**
**ಸುದರ್ಶನಃ ಕಿಯಾನದ್ಯ ನಿರ್ಧನೋ ನಿರ್ಬಲಃ ಶಿಶುಃ ॥೨೦॥**

ನಾನು ಇರುತ್ತಿರುವಾಗ ನನ್ನನ್ನು ಬಿಟ್ಟು ಇನ್ನು ಯಾರುತಾನೇ ಈ ಕನ್ಯೆಯನ್ನು ಅಪಹರಿಸಲು ಅಪೇಕ್ಷಿಸುತ್ತಾರೆ ? ದರಿದ್ರನೂ, ಸಹಾಯವಿಲ್ಲದವನೂ, ಹುಡುಗನೂ ಆದ ಸುದರ್ಶನನು ನನಗೆ ಎಷ್ಟರವನು ?

**ಭಾರದ್ವಾಜಾಶ್ರಮೇ ಪೂರ್ವಂ ಮುಕ್ತೋ ಮುನಿಕೃತೇ ಮಯಾ ।**
**ನಾದ್ಯಾಹಂ ಮೋಚಯಿಷ್ಯಾಮಿ ಸರ್ವಥಾ ಜೀವಿತಂ ಶಿಶೋಃ ॥೨೧॥**

ಪೂರ್ವದಲ್ಲಿ ಭಾರದ್ವಾಜಮಹರ್ಷಿಗಳ ಆಶ್ರಮದಲ್ಲಿರುವಾಗ ಅವರ ಮಾತಿಗೋಸ್ಕರವಾಗಿ ನಾನು ಅವನನ್ನು ಕೊಲ್ಲದೆ ಬಿಟ್ಟಿದ್ದೆನು. ಆದರೆ ಈಗ ನಾನು ಆ ಹುಡುಗನಾದ ಸುದರ್ಶನನ ಪ್ರಾಣವನ್ನು ಯಾವ ಪ್ರಕಾರದಿಂದಲೂ ಬಿಡುವುದಿಲ್ಲವು.

**ತಸ್ಮಾದ್ವಿಚಾರ್ಯ ಸಮ್ಯಕ್ತ್ವಂ ಪುತ್ರ್ಯಾಚ ಭಾರ್ಯಯಾ ಸಹ ।**
**ದೌಹಿತ್ರಾಯ ಪ್ರಿಯಾಂ ಕನ್ಯಾಂ ದೇಹಿ ಮೇ ಸುಭ್ರುವಂ ಕಿಲ ॥೨೨॥**

ಆದುದರಿಂದ ನೀನು ನಿನ್ನ ಮಗಳೊಡನೆಯೂ, ಹೆಂಡತಿಯೊಡನೆಯೂ, ಚನ್ನಾಗಿ ವಿಚಾರಮಾಡಿ, ಸುಂದರವಾದ ಹುಬ್ಬುಗಳುಳ್ಳ ಮತ್ತು ಪ್ರೀತಿಗೆ ಪಾತ್ರಳಾದ ಮಗಳನ್ನು ನನ್ನ ಮೊಮ್ಮಗನಾದ ಶತ್ರುಜಿತನಿಗೆ ಕೊಡುವವನಾಗು.

**ಸಂಬಂಧೀ ಭವ ದತ್ವಾ ತ್ವಂ ಪುತ್ರೀಮೇತಾಂ ಮನೋರಮಾಂ ।**
**ಉಚ್ಚಾಶ್ರಯಃ ಪ್ರಕರ್ತವ್ಯಃ ಸರ್ವದಾ ಶುಭಮಿಚ್ಛತಾ ॥೨೩॥**

ಆದುದರಿಂದ ಅತ್ಯಂತ ಸುಂದರಿಯಾದ ನಿನ್ನ ಮಗಳನ್ನು ನನ್ನ ಮೊಮ್ಮಗನಿಗೆ ಕೊಟ್ಟು ನೀನು ನನ್ನ ಸಂಬಂಧಿಯಾ (ಬೀಗನಾ) ಗು. ಒಳ್ಳೆಯದನ್ನು ಅಪೇಕ್ಷಿಸತಕ್ಕ ಮನುಷ್ಯನು ಯಾವಾಗಲೂ ದೊಡ್ಡವರ ಆಶ್ರಯವನ್ನು ಮಾಡಬೇಕು.

**ಸುದರ್ಶನಾಯ ದತ್ವಾ ತ್ವಂ ಪುತ್ರೀಂ ಪ್ರಾಣಪ್ರಿಯಾಂ ಶುಭಾಂ ।**
**ಏಕಾಕಿನೇಽಪ್ಯರಾಜ್ಯಾಯ ಕಿಂ ಸುಖಂ ಪ್ರಾಪ್ತುಮಿಚ್ಛಸಿ ॥೨೪॥**

ಹಾಗಲ್ಲದೆ ನೀನು, ನಿನ್ನ ಅತ್ಯಂತ ಪ್ರೀತಿಪಾತ್ರಳಾದ ಮತ್ತು ಮಂಗಳಕರಳಾದ ಮಗಳನ್ನು ರಾಜ್ಯಭ್ರಷ್ಟನಾದ ಮತ್ತು ಒಬ್ಬಂಟಿಗನಾದ ಎಂದರೆ ಸಹಾಯರಹಿತನಾದ ಸುದರ್ಶನನಿಗೆ ಕೊಟ್ಟು ಯಾವ ಸುಖವನ್ನು ಹೊಂದಲು ಇಷ್ಟಪಡುತ್ತೀಯೆ ?

**ಕುಲಂ ವಿತ್ತಂ ಬಲಂ ರೂಪಂ ರಾಜ್ಯಂ ದುರ್ಗಂ ಸುಹೃಜ್ಜನಂ ।**
**ದೃಷ್ಟ್ವಾ ಕನ್ಯಾ ಪ್ರದಾತವ್ಯಾ ನಾನ್ಯಥಾ ಸುಖಮೃಚ್ಛತಿ ॥೨೫॥**

ಒಳ್ಳೆಯ ವಂಶದಲ್ಲಿ ಹುಟ್ಟಿದವನಾಗಿಯೂ ಧನಸಂಪತ್ತಿನಿಂದ ಕೂಡಿದವನಾಗಿಯೂ ಅತ್ಯಂತ ಬಲಶಾಲಿಯಾಗಿಯೂ, ಸುಂದರನಾಗಿಯೂ, ದೊಡ್ಡ ರಾಜ್ಯ ಮತ್ತು ರಕ್ಷಣೆಯ ದುರ್ಗವುಳ್ಳವನಾಗಿಯೂ, ಮಿತ್ರರಿಂದ ಕೂಡಿದವನಾಗಿಯೂ ಇರತಕ್ಕವನನ್ನು ನೋಡಿ ಮಗಳನ್ನು ಕೊಡತಕ್ಕದ್ದು. ಹಾಗಲ್ಲದೆಹೋದರೆ ಆ ಕನ್ನಿಕೆಯು ಸುಖವನ್ನು ಹೊಂದುವುದಿಲ್ಲವು.

**ಪರಿಚಿಂತಯ ಧರ್ಮಂ ತ್ವಂ ರಾಜ್ಯನೀತಿಂ ಚ ಶಾಶ್ವತೀಂ ।**
**ಕುರು ಕಾರ್ಯಂ ಯಥಾಯೋಗ್ಯಂ ಮಾ ಕೃಥಾ ಮತಿಮನ್ಯಥಾ ॥೨೬॥**

ಆದುದರಿಂದ ನೀನು ಧರ್ಮವನ್ನೂ, ಪೂರ್ವದಿಂದಲೂ ನಡೆದುಬಂದಿರತಕ್ಕ ರಾಜ್ಯದ ನೀತಿಯನ್ನೂ ವಿಚಾರಿಸಿ ತಿಳಿದು ಅದಕ್ಕೆ ತಕ್ಕಂತೆ ಈ ಮದುವೆಯ ಕೆಲಸ ವನ್ನು ನೆರವೇರಿಸು. ಅಲ್ಲದೆ ಅದಕ್ಕೆ ವಿರುದ್ಧವಾಗಿ ಆಲೋಚನೆಯನ್ನು ಮಾಡಬೇಡ.

**ಸುಹೃದಸಿ ಮಮಾತ್ಯರ್ಥಂ ಹಿತಂ ತೇ ಪ್ರಬ್ರವೀಮ್ಯಹಂ ।**
**ಸಮಾನಯ ಸುತಾಂ ರಾಜನ್ಮಂಡಪೇ ತಾಂ ಸಖೀವೃತಾಂ ॥೨೭॥**

ನೀನು ನನ್ನ ಅತ್ಯಂತ ಸ್ನೇಹಿತನಾಗಿರುವೆ. ಆದುದರಿಂದ ನಿನಗೆ ನಾನು ಹಿತವಾದುದನ್ನು ಹೇಳುತ್ತಿರುವೆನು. ಎಲೈ ಸುಬಾಹುರಾಜನೇ, ಸಖೀಸಮೇತ ಳಾಗಿರುವ ಆ ನಿನ್ನ ಮಗಳನ್ನು ಸ್ವಯಂವರದ ಮಂಟಪಕ್ಕೆ ಕರೆದುಕೊಂಡುಬಾ.

**ಸುದರ್ಶನಮೃತೇ ಚೇಯಂ ವರಿಷ್ಯತಿ ಯದಾಽಪ್ಯಸೌ ।**
**ವಿಗ್ರಹೋ ಮೇ ತದಾ ನ ಸ್ಯಾದ್ವಿವಾಹೋಽಸ್ತು ತವೇಪ್ಸಿತಃ ॥೨೮॥**

ಈ ನಿನ್ನ ಮಗಳು ಸುದರ್ಶನನನ್ನು ಬಿಟ್ಟು ಬೇರೆ ಯಾವ ರಾಜನನ್ನು ವರಿಸುವವಳಾದರೂ ಆಗ ನಾನು ಯುದ್ಧವನ್ನು ಮಾಡುವುದಿಲ್ಲವು. ಮತ್ತು ಆಗ ನಿನ್ನ ಇಷ್ಟದಂತೆ ವಿವಾಹವು ನೆರವೇರಲಿ.

**ಅನ್ಯೇ ನೃಪತಯಃ ಸರ್ವೇ ಕುಲೀನಾಃ ಸಬಲಾಃ ಸಮಾಃ ।**
**ವಿರೋಧಃ ಕೀದೃಶಸ್ತ್ವೇನಂ ವೃಣೋದ್ಯದಿ ನೃಪೋತ್ತಮ ॥೨೯॥**

ಸುದರ್ಶನನನ್ನು ಬಿಟ್ಟು ಇತರ ರಾಜರು ಒಳ್ಳೆಯ ಕುಲದಲ್ಲಿ ಹುಟ್ಟಿದವರಾ ಗಿಯೂ, ಅತ್ಯಂತ ಬಲಶಾಲಿಗಳಾಗಿಯೂ, ನಮಗೆ ಸಮಾನರಾದವರಾಗಿಯೂ ಇರು ತ್ತಾರೆ. ಆದುದರಿಂದ ಎಲೈ ರಾಜಶ್ರೇಷ್ಠನಾದ ಸುಬಾಹುರಾಜನೇ, ನಿನ್ನ ಮಗಳು ಅವರಲ್ಲಿ ಮೇಲಾದ ಗುಣವುಳ್ಳವನನ್ನೇ ವರಿಸುತ್ತೇನೆಂದು ಹೇಳಿದರೆ ಆಗ ಯಾವ ಕಲಹವೂ ಇರುವುದಿಲ್ಲವು.

**ಅನ್ಯಥಾಽಹಂ ಹರಿಷ್ಯೇಽದ್ಯ ಬಲಾತ್ಕನ್ಯಾಮಿಮಾಂ ಶುಭಾಂ ।**
**ಮಾ ವಿರೋಧಂ ಸುದುಸ್ಸಾಧ್ಯಂ ಗಚ್ಛ ಪಾರ್ಥಿವಸತ್ತಮ ॥೩೦॥**

ಹಾಗೆ ಮಾಡದೆ ಸುದರ್ಶನನಿಗೆ ನೀನು ಮಗಳನ್ನು ಕೊಡುವುದಾದರೆ ಈಗ ನಾನು ಬಲಾತ್ಕಾರದಿಂದಲಾದರೂ ಮಂಗಳಕರಳಾದ ಈ ನಿನ್ನ ಮಗಳನ್ನು ಅಪಹರಿಸುವೆನು. ಆದುದರಿಂದ ಓ ರಾಜಶ್ರೇಷ್ಠನೇ, ದುಃಖಸಾಧ್ಯವಾದ ಕೆಡಕನ್ನುಂಟು ಮಾಡುವ ವಿರೋಧವನ್ನು ಸಂಪಾದಿಸಿಕೊಳ್ಳಬೇಡ.

॥ ವ್ಯಾಸ ಉವಾಚ ॥

**ಯುಧಾಜಿತಾ ಸಮಾದಿಷ್ಟಃ ಸುಬಾಹುಃ ಶೋಕಸಂಯುತಃ ।**
**ನಿಃಶ್ವಸನ್ ಭವನಂ ಗತ್ವಾ ಭಾರ್ಯಾಂ ಪ್ರಾಹ ಶುಚಾವೃತಃ ॥೩೦॥**

ವ್ಯಾಸಮುನಿಯು ಹೇಳಿದನು — ಈರೀತಿಯಾಗಿ ಯುಧಾಜಿತನಿಂದ ಹೇಳಲ್ಪಟ್ಟ ಆ ಸುಬಾಹುರಾಜನು, ಶೋಕದಿಂದ ಕೂಡಿದವನಾಗಿ ನಿಟ್ಟುಸಿರನ್ನು ಬಿಡುತ್ತಾ ಮನೆಗೆ ಹೋಗಿ ಹೆಂಡತಿಯನ್ನು ಕುರಿತು ಹೀಗೆ ಹೇಳಿದನು.

**ಪುತ್ರೀಂ ಬ್ರೂಹಿ ಸುಧರ್ಮಜ್ಞೇ ಕಲಹೇ ಸಮುಪಸ್ಥಿತೇ ।**
**ಕಿಂ ಕರ್ತವ್ಯಂ ಮಯಾ ಶಕ್ಯಂ ತ್ವದ್ವಶೋಽಸ್ಮಿ ಸುಲೋಚನೇ ॥೩೧॥**

ಓ ಸುಂದರವಾದ ಕಣ್ಣುಳ್ಳವಳೇ, ನೀನು ಒಳ್ಳೆಯ ಧರ್ಮವನ್ನು ತಿಳಿದವಳಾಗಿರುವೆ. ಈಗ ಒದಗಿರುವ ಈ ಜಗಳದಲ್ಲಿ ನಿನ್ನ ಮಗಳಿಗೆ ಉಪದೇಶವನ್ನು ಮಾಡು. ನಾನು ಈಗ ಏನನ್ನು ತಾನೇ ಮಾಡಲು ಸಾಧ್ಯವು? ನಾನು ನಿನ್ನ ಅಧೀನನಾಗಿದ್ದೇನೆ.

॥ ವ್ಯಾಸ ಉವಾಚ ॥

**ಸಾ ಶ್ರುತ್ವಾ ಪತಿವಾಕ್ಯಂ ತು ಗತ್ವಾ ಪ್ರಾಹ ಸುತಾಂತಿಕಂ ।**
**ವತ್ಸೇ ರಾಜಾಽತಿದುಃಖಾರ್ತಃ ಪಿತಾ ತೇಽದ್ಯಾಪಿ ವರ್ತತೇ ॥೩೨॥**

ವ್ಯಾಸಮುನಿಯು ಹೇಳಿದನು—ಅವಳು ತನ್ನ ಪತಿಯು ಹೇಳಿದ ಈ ಮಾತನ್ನು ಕೇಳಿ, ಮಗಳ ಹತ್ತಿರಕ್ಕೆ ಹೋಗಿ ಹೀಗೆ ಹೇಳಿದಳು. ಎಲೌ ಮಗಳೇ, ನಿನ್ನ ತಂದೆಯಾದ ರಾಜನು ಈಗಲೂ ಬಹಳ ಶೋಕದಿಂದ ಕೂಡಿರುವವನಾಗಿರುತ್ತಾನೆ.

ತ್ವದರ್ಥೇ ವಿಗ್ರಹಃ ಕಾಮಂ ಸಮುತ್ಪನ್ನೋಽದ್ಯ ಭೂಭೃತಾಂ ।
ಅನ್ಯಂ ವರಯ ಸುಶ್ರೋಣಿ ಸುದರ್ಶನಮೃತೇ ನೃಪಂ ॥೩೪॥

ನಿನ್ನ ಸಲುವಾಗಿ ಈಗ ರಾಜರಲ್ಲಿ ಜಗಳವು ಉಂಟಾಗಿದೆ. ಆದುದರಿಂದ ಎಲೌ ಒಳ್ಳೆಯ ಕಟಿನಿತಂಬಗಳುಳ್ಳವಳೇ, ಸುದರ್ಶನನನ್ನು ಬಿಟ್ಟು ಬೇರೆ ಒಬ್ಬ ದೊರೆಯನ್ನು ವರಿಸುವವಳಾಗು.

ಯದಿ ಸುದರ್ಶನಂ ವತ್ಸೇ ಹಠಾತ್ತ್ವಂ ವೈ ವರಿಷ್ಯಸಿ ।
ಯುಧಾಜಿತ್ತ್ವಾಂ ಚ ಮಾಂ ಚೈವ ಹನಿಷ್ಯತಿ ಬಲಾನ್ವಿತಃ ॥೩೫॥

ನೀನು ಹಠದಿಂದ ಸುದರ್ಶನನನ್ನೇ ಮದುವೆಮಾಡಿಕೊಳ್ಳುವುದಾದರೆ ಸೈನ್ಯದಿಂದಲೂ ಶಕ್ತಿಯಿಂದಲೂ ಕೂಡಿದ ಯುಧಾಜಿತನು ನಿನ್ನನ್ನೂ ನನ್ನನ್ನೂ ಕೂಡ ಕೊಂದುಹಾಕಿಬಿಡುತ್ತಾನೆ.

ಸುದರ್ಶನಂ ಚ ರಾಜಾಸೌ ಬಲಮತ್ತಃ ಪ್ರತಾಪವಾನ್ ।
ದ್ವಿತೀಯಸ್ತೇ ಪತಿಃ ಪಶ್ಚಾದ್ಭವಿತಾ ಕಲಹೇ ಸತಿ ॥೩೬॥

ಈರೀತಿಯಾಗಿ ಯುದ್ಧ ಉಂಟಾಗಲು ಬಲದಿಂದ ಮತ್ತನಾದ ಪರಾಕ್ರಮಶಾಲಿಯಾದ ಯುಧಾಜಿತನು ಸುದರ್ಶನನನ್ನೂ ಕೊಂದುಬಿಡುತ್ತಾನೆ. ಆದುದರಿಂದ ಆಗ ನೀನು ಬೇರೆ ರಾಜನನ್ನೇ ವರಿಸಬೇಕಾಗುತ್ತದೆ.

ತಸ್ಮಾತ್ಸುದರ್ಶನಂ ತ್ಯಕ್ತ್ವಾ ವರಯಾನ್ಯಂ ನೃಪೋತ್ತಮಂ ।
ಸುಖಮಿಚ್ಛಸಿ ಚೇನ್ಮಹ್ಯಂ ತುಭ್ಯಂ ವಾ ಮೃಗಲೋಚನೇ ।
ಇತಿ ಮಾತ್ರಾ ಬೋಧಿತಾಂ ತಾಂ ಪಶ್ಚಾದ್ರಾಜಾಪ್ಯಬೋಧಯತ್ ॥೩೭॥

ಜಿಂಕೆಯಂತೆ ಸುಂದರವಾದ ಕಣ್ಣುಳ್ಳವಳೇ, ನನಗೂ ನಿನಗೂ ಸುಖವನ್ನು ನೀನು ಇಚ್ಛಿಸುವೆಯಾದರೆ ಸುದರ್ಶನನನ್ನು ಬಿಟ್ಟು ಬೇರೆ ರಾಜಶ್ರೇಷ್ಠನನ್ನು ಮದುವೆಯಾಗು. ಈರೀತಿಯಾಗಿ ತಾಯಿಯಿಂದ ಬೋಧಿಸಲ್ಪಟ್ಟ ಅವಳಿಗೆ ತಂದೆಯೂ ಹಾಗೆಯೇ ಬುದ್ಧಿವಾದವನ್ನು ಹೇಳಿದನು.

ಉಭಯೋರ್ವಚನಂ ಶ್ರುತ್ವಾ ನಿರ್ಭಯೋವಾಚ ಕನ್ಯಕಾ ।

ತಂದೆತಾಯಿಗಳ ಆ ಮಾತನ್ನು ಕೇಳಿ ಆ ಶಶಿಕಲೆಯು ಸ್ವಲ್ಪವೂ ಭಯ ಪಡದೆ ಉತ್ತರವನ್ನು ಹೀಗೆ ಹೇಳಿದಳು.

|| ಕನ್ಯೋವಾಚ ||

**ಸತ್ಯಮುಕ್ತಂ ನೃಪಶ್ರೇಷ್ಠ ಜಾನಾಸಿ ಚ ವ್ರತಂ ಮಮ ||೩೮||**

ಆ ಕನ್ಯೆಯು ಹೇಳಿದಳು—ಎಲೈ ರಾಜೋತ್ತಮನೇ, ನೀನು ನಿಜವಾದ ಮಾತನ್ನು ಹೇಳಿರುತ್ತೀಯೆ. ಆದರೆ ನನ್ನ ವ್ರತವನ್ನು ನೀನು ತಿಳಿದೇ ಇರುತ್ತೀಯೆ.

**ನಾನ್ಯಂ ವೃಣೋಮಿ ಭೂಪಾಲಂ ಸುದರ್ಶನಮೃತೇ ಕ್ವಚಿತ್ ।**
**ಬಿಭೇಷಿ ಯದಿ ರಾಜೇಂದ್ರ ನೃಪೇಭ್ಯಃ ಕಿಲ ಕಾತರಃ ||೩೯||**

**ಸುದರ್ಶನಾಯ ದತ್ವಾ ಮಾಂ ವಿಸರ್ಜಯ ಪುರಾದ್ಬಹಿಃ ।**
**ಸ ಮಾಂ ರಥೇ ಸಮಾರೋಪ್ಯ ನಿರ್ಗಮಿಷ್ಯತಿ ತೇ ಪುರಾತ್ ||೪೦||**

ನಾನು ಸುದರ್ಶನನನ್ನು ಬಿಟ್ಟು ಇನ್ನು ಯಾರನ್ನೂ ವರಿಸುವುದಿಲ್ಲವು. ಓ ರಾಜಶ್ರೇಷ್ಠನೇ, ನೀನು ಬಹುರಾಜರಿಗೆ ಭಯಪಡುವುದಾದರೆ, ನನ್ನನ್ನು ಸುದರ್ಶನ ನಿಗೆ ಮದುವೆಮಾಡಿಕೊಟ್ಟು ನಿನ್ನ ಪಟ್ಟಣದಿಂದ ಹೊರಕ್ಕೆ ಕಳುಹಿಸಿಕೊಡು. ಆ ಸುದರ್ಶನನು ನನ್ನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ನಿನ್ನ ಪಟ್ಟಣದಿಂದ ಹೊರಗೆ ಹೊರಟುಹೋಗುವನು.

**ಭವಿತವ್ಯಂ ತು ಪಶ್ಚಾದ್ವೈ ಭವಿಷ್ಯತಿ ನ ಚಾನ್ಯಥಾ ।**
**ನಾತ್ರ ಚಿಂತಾ ತ್ವಯಾ ಕಾರ್ಯಾ ಭವಿತವ್ಯೇ ನೃಪೋತ್ತಮ ||೪೧||**

ಮುಂದೆ ಏನು ಆಗಬೇಕಾಗಿದೆಯೋ ಅದು ಆಗಿಯೇ ಆಗುವುದು. ಅಲ್ಲದೆ ಬೇರೆ ವಿಧವಾಗಿ ಆಗುವುದಿಲ್ಲವು. ಓ ರಾಜಶ್ರೇಷ್ಠನೇ, ಅವಶ್ಯವಾಗಿ ಆಗುವ ಈ ವಿಷಯದಲ್ಲಿ ನೀನು ಚಿಂತಿಸಬೇಕಾಗಿಲ್ಲವು.

**ಯದ್ಭಾವಿ ತದ್ಭವತ್ಯೇವ ಸರ್ವಥಾ ನಾತ್ರ ಸಂಶಯಃ ।**

ಯಾವುದು ಖಂಡಿತ ಆಗಬೇಕಾಗಿರುವುದೋ ಅದು ಆಗಿಯೇ ಆಗುತ್ತದೆ. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲವು. ಎಂದು ಶಶಿಕಲೆಯು ಹೇಳಿದಳು.

|| ರಾಜೋವಾಚ ||

**ನ ಪುತ್ರಿ ಸಾಹಸಂ ಕಾರ್ಯಂ ಮತಿಮದ್ಭಿಃ ಕದಾಚನ ||೪೨||**

ರಾಜನು ಹೇಳಿದನು—ಎಲೌ ಮಗಳೇ, ತಿಳಿದವರು ಯಾವಾಗಲೂ ಅಪಾಯವನ್ನು ಒಳಗೊಳ್ಳುವ, ಕಷ್ಟ ಒದಗಬಹುದಾದ ಕೆಲಸವನ್ನು ಮಾಡಬಾರದು.

**ಬಹುಭಿರ್ನ ವಿರೋದ್ಧವ್ಯಮಿತಿ ವೇದವಿದೋ ವಿದುಃ ।**
**ವಿಸ್ರಕ್ಷ್ಯಾಮಿ ಕಥಂ ಕನ್ಯಾಂ ದತ್ವಾ ರಾಜಸುತಾಯ ಚ ||೪೩||**

ವೇದಾರ್ಥವನ್ನು ತಿಳಿದ ಬುದ್ಧಿವಂತರಾದ ಮನುಷ್ಯರು, ಅನೇಕಜನರ ವಿರೋಧವನ್ನು ಬೆಳೆಸಬಾರದು ಎಂದು ಹೇಳುವರು. ಅಲ್ಲದೆ, ನಾನು ರಾಜಪುತ್ರನಾದ ಸುದರ್ಶನನಿಗೆ ನಿನ್ನನ್ನು ಮದುವೆಮಾಡಿಕೊಟ್ಟು, ಕೂಡಲೇ ಪಟ್ಟಣದ ಹೊರಕ್ಕೆ ಹೇಗೆತಾನೇ ಕಳುಹಿಸಿಕೊಡಲಿ?

**ರಾಜಾನೋ ವೈರಸಂಯುಕ್ತಾಃ ಕಿಂ ನ ಕುರ್ಯುರಸಾಂಪ್ರತಂ ।**
**ಯದಿ ತೇ ರೋಚತೇ ವತ್ಸೇ ಪಣಂ ಸಂವಿದಧಾಮ್ಯಹಂ ||೪೪||**

ಏತಕ್ಕೆಂದರೆ, ವೈರವನ್ನು ಹೊಂದಿದ ರಾಜರು ಅಯೋಗ್ಯವಾದ ಯಾವ ಕೆಲಸವನ್ನು ತಾನೇ ಮಾಡದೇ ಹೋದಾರು? ಆದುದರಿಂದ ಎಲೌ ಮಗಳೇ, ನೀನು ಇಷ್ಟಪಡುವುದಾದರೆ ನಿನ್ನ ಮದುವೆಗಾಗಿ ಒಂದು ಪಂಥವನ್ನು ಏರ್ಪಡಿಸುತ್ತೇನೆ.

**ಜನಕೇನ ಯಥಾ ಪೂರ್ವಂ ಕೃತಃ ಸೀತಾಸ್ವಯಂವರೇ ।**
**ಶೈವಂ ಧನುರ್ಯಥಾ ತೇನ ಧೃತಂ ಕೃತ್ವಾ ಪಣಂ ತಥಾ ||೪೫||**

ಹಿಂದೆ ಸೀತಾಸ್ವಯಂವರದಲ್ಲಿ ಜನಕರಾಜನಿಂದ ಶೈವಧನುಸ್ಸನ್ನು ಹೆದೆ ಏರಿಸುವಿಕೆಯು ಹೇಗೆ ಪಂದ್ಯವಾಗಿ ಇಡಲ್ಪಟ್ಟದ್ದಿತೋ

**ತಥಾಹಮಪಿ ತನ್ವಂಗಿ ಕರೋಮ್ಯದ್ಯ ದುರಾಸದಂ ।**
**ವಿವಾದೋ ಯೇನ ರಾಜ್ಞಾಂ ವೈ ಕೃತೇ ಸತಿ ಶಮಂ ವ್ರಜೇತ್ ||೪೬||**

ಹಾಗೆಯೇ ನಾನೂ ಕೂಡ, ಎಲೌ ಕೃಶವಾದ ಶರೀರವುಳ್ಳ ಮಗಳೇ, ಬಹಳ ಕಷ್ಟಕರವಾದ ಮತ್ತು ಯಾವ ಪಂದ್ಯದಿಂದ ಈ ರಾಜರ ಜಗಳವು ಶಾಂತಿಯನ್ನು ಹೊಂದುವುದೋ ಅಂತಹ, ಪಂದ್ಯವನ್ನು ಇಡುತ್ತೇನೆ.

**ಪಾಲಯಿಷ್ಯತಿ ಯಃ ಕಾಮಂ ಸ ತೇ ಭರ್ತಾ ಭವಿಷ್ಯತಿ ।**
**ಸುದರ್ಶನಸ್ತಥಾನ್ಯೋ ವಾ ಯಃಕಶ್ಚಿದ್ಬಲವತ್ತರಃ ॥೪೭॥**

**ಪಾಲಯಿತ್ವಾ ಪಣಂ ತ್ವಾಂ ವೈ ವರಯಿಷ್ಯತಿ ಸರ್ವಥಾ ।**
**ಏವಂ ಕೃತೇ ನೃಪಾಣಾಂ ತು ವಿವಾದಃ ಶಮಿತೋ ಭವೇತ್ ॥೪೮॥**

ಯಾವ ರಾಜನು ಈ ಪಂದ್ಯದ ನಿಯಮವನ್ನು ಚನ್ನಾಗಿ ಪರಿಪೂರ್ಣ ಮಾಡುತ್ತಾನೆಯೋ ಅವನು ನಿನ್ನ ಗಂಡನಾಗುವನು. ಸುದರ್ಶನನಾಗಲಿ, ಅಥವಾ ಇನ್ನು ಯಾವ ಹೆಚ್ಚು ಬಲಶಾಲಿಯಾದವನಾಗಲಿ, ಈ ಪಂದ್ಯವನ್ನು ಗೆದ್ದು ನಿನ್ನನ್ನು ವರಿಸುವನು. ಈರೀತಿ ಮಾಡಿದಲ್ಲಿ ಈ ರಾಜರ ಜಗಳವು ಶಾಂತವಾಗುವುದು.

**ಸುಖೇನಾಹಂ ವಿವಾಹಂ ತೇ ಕರಿಷ್ಯಾಮಿ ತತಃ ಪರಂ ।**

ಅನಂತರದಲ್ಲಿ ನಿನ್ನ ವಿವಾಹವನ್ನು ಸುಖವಾಗಿ ಯಾವ ತೊಂದರೆಯೂ ಇಲ್ಲದೆ ನಾನು ನೆರವೇರಿಸುವೆನು.

|| ಕನ್ಯೋವಾಚ ||

**ಸಂದೇಹೇಸ್ನೈವ ಮಜ್ಜಾಮಿ ಮೂರ್ಖಕೃತ್ಯಮಿದಂ ಯತಃ ॥೪೯॥**

ಕನ್ಯೆಯು ಹೇಳಿದಳು—ಇದು ಮೂರ್ಖತೆಯ ಕೆಲಸವಾದುದರಿಂದ ನಾನು ಸಂಶಯವುಳ್ಳವಳಾಗಿದ್ದೇನೆ.

**ಮಯಾ ಸುದರ್ಶನಃ ಪೂರ್ವಂ ಧೃತಶ್ಚೇತಸಿ ನಾನ್ಯಥಾ ।**
**ಕಾರಣಂ ಪುಣ್ಯಪಾಪಾನಾಂ ಮನ ಏವ ಮಹೀಪತೇ ॥೫೦॥**

ಓ ರಾಜನೇ, ನಾನು ಸುದರ್ಶನನನ್ನು ಮೊದಲೇ ಮನಸ್ಸಿನಲ್ಲಿ ಗಂಡನನ್ನಾಗಿ ತಿಳಿದುಕೊಂಡಿರುತ್ತೇನೆ. ಪುಣ್ಯಕರವಾದ ಮತ್ತು ಪಾಪಕರವಾದ ಕೆಲಸಗಳಿಗೆಲ್ಲಾ ಮನಸ್ಸೇ ಮೂಲಕಾರಣವಾಗಿದೆಯೇ ಹೊರತು ಬೇರೆ ಇಲ್ಲವು.

**ಮನಸಾ ವಿಧೃತಂ ತ್ಯಕ್ತ್ವಾ ಕಥಮನ್ಯಂ ವೃಣೇ ಪಿತಃ ।**
**ಕೃತೇ ಪಣೇ ಮಹಾರಾಜ ಸರ್ವೇಷಾಂ ವಶಗಾ ಹ್ಯಹಂ ॥೫೧॥**

ಆದುದರಿಂದ ಓ ತಂದೆಯೇ, ನಾನು ಮೊದಲಲ್ಲೇ ಮನಸ್ಸಿನಲ್ಲಿ ನಿರ್ಣಯಿಸಿದ ವರನನ್ನು ಬಿಟ್ಟು ಬೇರೆಯವನನ್ನು ಹೇಗೆ ವರಿಸಲಿ? ನೀನು ಪಣವನ್ನಿಟ್ಟು ನನ್ನ ಮದುವೆಯನ್ನು ನಡೆಯಿಸುವುದಾದರೆ, ಓ ಮಹಾರಾಜನೇ, ನಾನು ಎಲ್ಲರ ವಶವರ್ತಿಯಾಗಬೇಕಾಗುತ್ತದೆ.

**ಏಕಃ ಪಾಲಯಿತಾ ದ್ವೌ ವಾ ಬಹವೋ ವಾ ಭವಂತಿ ಚೇತ್ ।**
**ಕಿಂ ಕರ್ತವ್ಯಂ ತದಾ ತಾತ ವಿವಾದೇ ಸಮುಪಸ್ಥಿತೇ ॥೫೨॥**

ಆಗ ಒಬ್ಬನೋ, ಇಬ್ಬರೋ ಅಥವಾ ಬಹಳ ಜನಗಳೋ ಆ ಪಂದ್ಯದಲ್ಲಿ ಗೆಲ್ಲುವುದಾದರೆ, ಓ ತಂದೆಯೇ, ಆಗ ಜಗಳವು ಉಂಟಾದಲ್ಲಿ ನಾನು ಏನನ್ನು ತಾನೇ ಮಾಡುವುದಕ್ಕೆ ಸಾಧ್ಯವಾದೀತು?

**ಸಂಶಯಾಧಿಷ್ಠಿತೇ ಕಾರ್ಯೇ ಮತಿಂ ನಾಹಂ ಕರೋಮ್ಯತಃ ।**
**ಮಾ ಚಿಂತಾಂ ಕುರು ರಾಜೇಂದ್ರ ದೇಹಿ ಸುದರ್ಶನಾಯ ಮಾಂ ॥೫೩॥**

ಫಲಪರಿಣಾಮದ ವಿಷಯದಲ್ಲಿ ಸಂದೇಹದಿಂದ ಕೂಡಿರುವ ಕೆಲಸದಲ್ಲಿ ಪ್ರವೇಶಿಸಲು ನಾನು ಇಷ್ಟಪಡುವುದಿಲ್ಲ. ಓ ತಂದೆಯೇ, ನೀನು ಯೋಚನೆಯನ್ನು ಮಾಡಬೇಡ. ನನ್ನನ್ನು ಸುದರ್ಶನನಿಗೆ ಕೊಡುವವನಾಗು.

**ವಿವಾಹಂ ವಿಧಿನಾ ಕೃತ್ವಾ ಶಂ ವಿಧಾಸ್ಯತಿ ಚಂಡಿಕಾ ।**
**ಯನ್ನಾಮಕೀರ್ತನಾದೇವ ದುಃಖೌಘೋ ವಿಲಯಂ ವ್ರಜೇತ್ ॥೫೪॥**
**ತಾಂ ಸ್ಮೃತ್ವಾ ಪರಮಾಂ ಶಕ್ತಿಂ ಕುರು ಕಾರ್ಯಮತಂದ್ರಿತಃ ।**

ನೀನು ನನ್ನನ್ನು ಸುದರ್ಶನನಿಗೆ ವಿಧಿಪೂರ್ವಕವಾಗಿ ಮದುವೆಯನ್ನು ಮಾಡಿಕೊಟ್ಟುಬಿಡು. ಇದರಿಂದ ಚಂಡಿಕಾದೇವಿಯು ಸುಖವನ್ನುಂಟುಮಾಡುವಳು. ಯಾವ ಚಂಡಿಕೆಯ ನಾಮವನ್ನು ಉಚ್ಚರಿಸುವುದರಿಂದಲೇ ಎಲ್ಲಾ ಪಾಪಸಮೂಹಗಳೂ ನಾಶವಾಗುವುವೋ ಅಂತಹ ಚಂಡಿಕಾದೇವಿಯನ್ನು ಮನಸ್ಸಿನಲ್ಲಿ ನೆನಸಿಕೊಂಡು ಆಲಸ್ಯವಿಲ್ಲದವನಾಗಿ ಕೆಲಸವನ್ನು ನೆರವೇರಿಸು.

**ಗತ್ವಾ ವದ ನೃಪೇಭ್ಯಸ್ತ್ವಂ ಕೃತಾಂಜಲಿಪುಟೋಽದ್ಯ ವೈ ॥೫೫॥**

**ಆಗಂತವ್ಯಂ ಚ ಶ್ವಃ ಸರ್ವೈರಿಹ ಭೂಪೈಃ ಸ್ವಯಂವರೇ ।**
**ಇತ್ಯುಕ್ತ್ವಾ ತ್ವಂ ವಿಸೃಜ್ಯಾಶು ಸರ್ವಂ ನೃಪತಿಮಂಡಲಂ ॥೫೬॥**

ಈಗ ನೀನು ಹೋಗಿ ಕೈಯನ್ನು ಜೋಡಿಸಿಕೊಂಡು ರಾಜರನ್ನೆಲ್ಲಾ ಸಂಬೋಧಿಸಿ,—ನೀವೆಲ್ಲರೂ ನಾಳೆಯದಿವಸ ಸ್ವಯಂವರಕ್ಕೆ ಬರುವವರಾಗಬೇಕು ಎಂಬುದಾಗಿ ಹೇಳಿ ಪ್ರಾರ್ಥಿಸಿ ಅವರೆಲ್ಲರನ್ನೂ ಜಾಗ್ರತೆಯಾಗಿ ಕಳುಹಿಸಿ,

**ವಿವಾಹಂ ಕುರು ರಾತ್ರೌ ಮೇ ವೇದೋಕ್ತವಿಧಿನಾ ನೃಪ ।**
**ಪಾರಿಬರ್ಹಂ ಯಥಾಯೋಗ್ಯಂ ದತ್ವಾ ತಸ್ಮೈ ವಿಸರ್ಜಯ ॥೫೭॥**

ಓ ದೊರೆಯೇ, ಈ ರಾತ್ರಿಯಲ್ಲಿಯೇ ವೇದೋಕ್ತನಿಯಮಾನುಸಾರವಾಗಿ ನನ್ನನ್ನು ಆ ಸುದರ್ಶನನಿಗೆ ಕೊಟ್ಟು ಮದುವೆಮಾಡಿ ಯೋಗ್ಯವಾದ ರೀತಿಯಲ್ಲಿ ಬಳುವಳಿಯನ್ನು ಕೊಟ್ಟು ಅವನೊಡನೆ ನನ್ನನ್ನು ಕಳುಹಿಸಿಬಿಡು.

**ಗಮಿಷ್ಯತಿ ಗೃಹೀತ್ವಾ ಮಾಂ ಧ್ರುವಸಂಧಿಸುತಃ ಕಿಲ ।**
**ಕದಾಚಿತ್ತೇ ನೃಪಾಃ ಕ್ರುದ್ಧಾಃ ಸಂಗ್ರಾಮಂ ಕರ್ತುಮುದ್ಯತಾಃ ॥೫೮॥**

**ಭವಿಷ್ಯಂತಿ ತದಾ ದೇವೀ ಸಾಹಾಯ್ಯಂ ನಃ ಕರಿಷ್ಯತಿ ।**
**ಸೋಽಪಿ ರಾಜಸುತೈಸ್ತೈಸ್ತು ಸಂಗ್ರಾಮಂ ಸಂವಿಧಾಸ್ಯತಿ ॥೫೯॥**

ಓ ತಂದೆಯೇ, ಧ್ರುವಸಂಧಿಯ ಮಗನಾದ ಸುದರ್ಶನನು ನನ್ನನ್ನು ಕರೆದುಕೊಂಡು ಹೋಗುವನು. ಆಗ ಕೋಪಗೊಂಡ ಆ ರಾಜರೇನಾದರೂ ಯುದ್ಧ ಮಾಡುವುದಕ್ಕೆ ಬಂದಲ್ಲಿ, ದೇವಿಯು ನಮಗೆ ಖಂಡಿತವಾಗಿಯೂ ಸಹಾಯವನ್ನು ಮಾಡುವಳು. ಮತ್ತು ಸುದರ್ಶನನೂ ಆ ರಾಜರೊಡನೆ ಯುದ್ಧವನ್ನು ಮಾಡುವನು.

**ದೈವಾನ್ಮೃಧೇ ಮೃತೇ ತಸ್ಮಿನ್ಮರಿಷ್ಯಾಮ್ಯಹಮಪ್ಯುತ ।**
**ಸ್ವಸ್ತಿ ತೇಽಸ್ತು ಗೃಹೇ ತಿಷ್ಠ ದತ್ವಾ ಮಾಂ ಸಹಸೈನ್ಯಕಃ ॥೬೦॥**

**ಏಕೈವಾಹಂ ಗಮಿಷ್ಯಾಮಿ ತೇನ ಸಾರ್ಧಂ ರಿರಂಸಯಾ ।**

ಓ ತಂದೆಯೇ, ಒಂದುಪಕ್ಷದಲ್ಲಿ ಏನಾದರೂ ಯುದ್ಧದಲ್ಲಿ ದುರದೃಷ್ಟವಶದಿಂದ ಅವನು ಸತ್ತರೆ ನಾನೂ ಸಾಯುವೆನು. ನಿನಗೆ ಮಂಗಳವುಂಟಾಗಲಿ. ನೀನು

ಸೈನ್ಯದೊಡನೆ ಮನೆಯಲ್ಲಿಯೇ ಇರು. ನೀನು ನನ್ನನ್ನು ಆ ಸುದರ್ಶನನಿಗೆ ಕೊಟ್ಟು ಬಿಡು. ನಾನೊಬ್ಬಳೇ ಅವನೊಡನೆ ಕೂಡಿಕೊಂಡು ಸುಖಪಡಲೂ, ಯುದ್ಧ ಮಾಡಲೂ ಹೊರಡುತ್ತೇನೆ.

|| ವ್ಯಾಸ ಉವಾಚ ||

**ಇತಿ ತಸ್ಯಾ ವಚಃ ಶ್ರುತ್ವಾ ರಾಜಾಸೌ ಕೃತನಿಶ್ಚಯಃ ||೬೧||**

**ಮತಿಂ ಚಕ್ರೇ ತಥಾ ಕರ್ತುಂ ವಿಶ್ವಾಸಂ ಪ್ರತಿಪದ್ಯ ಚ ||೬೨||**

ಅವಳ ಆ ಮಾತುಗಳನ್ನು ಕೇಳಿ ರಾಜನು ಅದೇ ರೀತಿಯಲ್ಲಿ ಮಾಡಲು ಗೊತ್ತುಮಾಡಿಕೊಂಡವನಾಗಿ ಆ ವಿಷಯದಲ್ಲಿ ನಂಬಿಕೆಯನ್ನು ಪಡೆದು ತನ್ನ ಮನಸ್ಸಿನಲ್ಲಿಯೂ ಹಾಗೆಯೇ ನಿರ್ಣಯಿಸಿಕೊಂಡನು.

**ಇತಿ ಶ್ರೀ ದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಏಕವಿಂಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ತೃತೀಯಸ್ಕಂಧೇ

### || ದ್ವಾವಿಂಶೋಽಧ್ಯಾಯಃ ||

### ಇಪ್ಪತ್ತೆರಡನೆಯ ಅಧ್ಯಾಯವು

|| ವ್ಯಾಸ ಉವಾಚ ||

ಶ್ರುತ್ವಾ ಸುತಾವಾಕ್ಯಮನಿಂದಿತಾತ್ಮಾ
ನೃಪಾಂಶ್ಚ ಗತ್ವಾ ನೃಪತಿರ್ಜಗಾದ ।
ವ್ರಜಂತು ಕಾಮಂ ಶಿಬಿರಾಣಿ ಭೂಪಾಃ
ಶ್ವೋ ವಾ ವಿವಾಹಂ ಕಿಲ ಸಂವಿಧಾಸ್ಯೇ ||೧||

ವ್ಯಾಸಮುನಿಯು ಹೇಳಿದನು—ಒಳ್ಳೆಯ ಮನಸ್ಸುಳ್ಳ ಆ ರಾಜನು ಮಗಳ ಮಾತನ್ನು ಕೇಳಿ ಅದರಂತೆ, ರಾಜರ ಸಮೀಪಕ್ಕೆ ಹೋಗಿ—ಓ ರಾಜರೇ, ಸ್ವೇಚ್ಛೆಯಾಗಿ ನಿಮ್ಮ ನಿಮ್ಮ ಬಿಡಾರಗಳಿಗೆ ಈ ದಿನದಲ್ಲಿ ಹಿಂತಿರುಗಿರಿ. ನಾಳೆಯ ದಿವಸ ಈ ವಿವಾಹವನ್ನು ಖಂಡಿತವಾಗಿಯೂ ಏರ್ಪಡಿಸುತ್ತೇನೆ; ಎಂದು ಹೇಳಿದನು.

ಭಕ್ಷ್ಯಾಣಿ ಪೇಯಾನಿ ಮಯಾರ್ಪಿತಾನಿ
ಗೃಹ್ಣಂತು ಸರ್ವೇ ಮಯಿ ಸುಪ್ರಸನ್ನಾಃ ।
ಶ್ವೋ ಭಾವಿ ಕಾರ್ಯಂ ಕಿಲ ಮಂಡಪೇಽತ್ರ
ಸಮೇತ್ಯ ಸರ್ವೈರಿಹ ಸಂವಿಧೇಯಂ ||೨||

ಓ ರಾಜರೇ, ನೀವುಗಳು ನನ್ನಲ್ಲಿ ದಯಮಾಡಿ ವಿಶ್ವಾಸವನ್ನಿಟ್ಟು ನಾನು ಸಮರ್ಪಿಸಿರುವ ಭಕ್ಷ್ಯಗಳನ್ನೂ, ಪಾನೀಯಗಳನ್ನೂ ಸ್ವೀಕರಿಸಿ ನಾಳೆ ಈ ಮಂಡಪದಲ್ಲಿ ನಡೆಯಲಿರುವ ಕಾರ್ಯದ ನಿರ್ವಾಹಕ್ಕೆ ತಾವೆಲ್ಲರೂ ಒಟ್ಟಿಗೆ ದಯಮಾಡಿ ಸಹಾಯಮಾಡಬೇಕು.

ನಾಽಽಯಾತಿ ಪುತ್ರೀ ಕಿಲ ಮಂಡಪೇಽದ್ಯ
ಕರೋಮಿ ಕಿಂ ಭೂಪತಯೋಽತ್ರ ಕಾಮಂ ।
ಪ್ರಾತಃ ಸಮಾಶ್ವಾಸ್ಯ ಸುತಾಂ ನಯಿಷ್ಯೇ
ಗಚ್ಛಂತು ತಸ್ಮಾಚ್ಛಿಬಿರಾಣಿ ಭೂಪಾಃ ॥೩॥

ಓ ಮಹಾರಾಜರೇ, ಈ ದಿವಸ ನನ್ನ ಮಗಳು ಸ್ವಯಂವರಮಂಡಪಕ್ಕೆ ಬರದೆ ಇರುತ್ತಾಳೆ. ಈ ವಿಷಯದಲ್ಲಿ ಹೆಚ್ಚಾಗಿ ನಾನು ಇನ್ನೇನನ್ನು ಮಾಡಲಿ? ನಾಳೆ ಬೆಳಗ್ಗೆ ಮಗಳನ್ನು ಸಮಾಧಾನಪಡಿಸಿ ಸ್ವಯಂವರಮಂಡಪಕ್ಕೆ ಕರೆತರುವೆನು. ಆದುದರಿಂದ ನೀವೆಲ್ಲರೂ ಈ ದಿವಸ ನಿಮ್ಮ ನಿಮ್ಮ ಬಿಡಾರಗಳಿಗೆ ಹಿಂತಿರುಗುವವರಾಗಿರಿ.

ನ ವಿಗ್ರಹೋ ಬುದ್ಧಿಮತಾಂ ನಿಜಾಶ್ರಿತೇ
ಕೃಪಾ ವಿಧೇಯಾ ಸತತಂ ಹ್ಯಪತ್ಯೇ ।
ವಿಧಾಯ ತಾಂ ಪ್ರಾತರಿಹಾನಯಿಷ್ಯೇ
ಸುತಾಂ ತು ಗಚ್ಛಂತು ನೃಪಾ ಯಥೇಷ್ಟಂ ॥೪॥

ಓ ರಾಜರೇ, ತಿಳಿದವರು ತಮ್ಮನ್ನು ಆಶ್ರಯಿಸಿದವರಲ್ಲಿ ಜಗಳವನ್ನು ಮಾಡುವುದಿಲ್ಲ. ಯಾವಾಗಲೂ ಹಿರಿಯರು ಮಕ್ಕಳಲ್ಲಿ ಕರುಣೆಯನ್ನು ತೋರಿಸಬೇಕಲ್ಲವೇ? ನನ್ನಲ್ಲಿ ಕೃಪೆಯಿಟ್ಟು ತಾವೆಲ್ಲರೂ ತಮ್ಮ ಇಚ್ಛಾನುಸಾರವಾಗಿ ಹಿಂತಿರುಗಿ ಹೋಗಿರಿ. ನಾಳೆ ಬೆಳಗ್ಗೆ ಆ ನನ್ನ ಮಗಳನ್ನು ಸಮಾಧಾನಮಾಡಿ ಸ್ವಯಂವರಮಂಡಪಕ್ಕೆ ಕರೆತರುವೆನು.

ಇಚ್ಛಾಪಣಂ ವಾ ಪರಿಚಿಂತ್ಯ ಚಿತ್ತೇ
ಪ್ರಾತಃ ಕರಿಷ್ಯಾಮ್ಯಥ ಸಂವಿವಾಹಂ ।
ಸರ್ವೈಃ ಸಮೇತ್ಯಾತ್ರ ನೃಪೈಃ ಸಮೇತೈಃ
ಸ್ವಯಂವರಃ ಸರ್ವಮತೇನ ಕಾರ್ಯಃ ॥೫॥

ಇಷ್ಟಬಂದವರನ್ನು ವರಿಸುವ ಅಥವಾ ಶೌರ್ಯಪ್ರದರ್ಶನದಿಂದ ವರಿಸುವ ರೀತಿಯಲ್ಲಿ, ನೀವು ಒಪ್ಪುವ ಪ್ರಕಾರದಲ್ಲಿ ಸ್ವಯಂವರವನ್ನು ನೆರವೇರಿಸಿ ಆಮೇಲೆ ಮದುವೆಗೆ ಏರ್ಪಾಡನ್ನು ಮಾಡುತ್ತೇನೆ. ಆದುದರಿಂದ ಮನಸ್ಸಿನಲ್ಲಿ ಚನ್ನಾಗಿ

ಆಲೋಚಿಸಿ, ನಾಳೆ ಬೆಳಗ್ಗೆ ತಾವೆಲ್ಲರೂ ಒಟ್ಟಿಗೆ ಕೂಡಿ ದಯಮಾಡಿ, ಈ ಸಭೆಯಲ್ಲಿ ಎಲ್ಲರಿಗೂ ಒಪ್ಪಿತವಾಗುವಂತೆ ಸ್ವಯಂವರವನ್ನು ನೆರವೇರಿಸಬೇಕು.

**ಶ್ರುತ್ವಾ ನೃಪಾಸ್ತೇಽವಿತಥಂ ವಿದಿತ್ವಾ**
**ವಚೋ ಯಯುಃ ಸ್ವಾನಿ ನಿಕೇತನಾನಿ ।**
**ವಿಧಾಯ ಪಾರ್ಶ್ವೇ ನಗರಸ್ಯ ರಕ್ಷಾಂ**
**ಚಕ್ರುಃ ಕ್ರಿಯಾ ಮಧ್ಯದಿನೋದಿತಾಶ್ಚ** ॥೬॥

ಆ ರಾಜನ ಮಾತುಗಳನ್ನು ಕೇಳಿ ಅವು ನಿಜವಾದವುಗಳೆಂದು ತಿಳಿದವರಾಗಿ, ಆ ಪಟ್ಟಣದ ಪಾರ್ಶ್ವದಲ್ಲಿ ತಮ್ಮ ಸೈನ್ಯಗಳ ಕಾವಲನ್ನು ಏರ್ಪಡಿಸಿ ತಮ್ಮ ತಮ್ಮ ಬಿಡಾರಗಳನ್ನು ತಲಪಿದರು. ಮತ್ತು ಮಧ್ಯಾಹ್ನದಲ್ಲಿ ನೆರವೇರಿಸಬೇಕಾದ ವಿಹಿತ ವಾದ ಧರ್ಮಗಳನ್ನೂ ಆಚರಿಸಿದರು.

**ಸುಬಾಹುರಪ್ಯಾರ್ಯಜನೈಃ ಸಮೇತ-**
**ಶ್ಚಕಾರ ಕಾರ್ಯಾಣಿ ವಿವಾಹಕಾಲೇ ।**
**ಪುತ್ರೀಂ ಸಮಾಹೂಯ ಗೃಹೇ ಸುಗುಪ್ತೇ**
**ಪುರೋಹಿತೈರ್ವೇದವಿದಾಂ ವರಿಷ್ಠೈಃ** ॥೭॥

ಇತ್ತಲಾಗಿ ಸುಬಾಹುಮಹಾರಾಜನು ಪೂಜ್ಯರಾದ ಆಪ್ತಜನರಿಂದ ಸಮೇತ ನಾಗಿ, ಅರಮನೆಯಲ್ಲಿ ರಹಸ್ಯವಾಗಿರುವ ಸ್ಥಳದಲ್ಲಿ ತನ್ನ ಮಗಳನ್ನು ಕರೆದುಕೊಂಡು ಬಂದು, ವೇದವನ್ನು ತಿಳಿದವರಲ್ಲಿ ಶ್ರೇಷ್ಠರಾದ ಪುರೋಹಿತರಿಂದ ಕೂಡಿ, ಮದುವೆಯ ಕಾಲದಲ್ಲಿ ನೆರವೇರಿಸಬೇಕಾದ ಎಲ್ಲ ಕೆಲಸಗಳನ್ನೂ ಮಾಡಿಸಿದನು.

**ಸ್ನಾನಾದಿಕಂ ಕರ್ಮ ವರಸ್ಯ ಕೃತ್ವಾ**
**ವಿವಾಹಭೂಷಾಕರಣಂ ತಥೈವ ।**
**ಆನಾಯ್ಯ ವೇದೀ ರಚಿತೇ ಗೃಹೇ ವೈ**
**ತಸ್ಯಾರ್ಹಣಾಂ ಭೂಮಿಪತಿಶ್ಚಕಾರ** ॥೮॥

ಸುಬಾಹುರಾಜನು ವರನಿಗೆ ಮಂಗಳಸ್ನಾನಾದಿಕೆಲಸಗಳನ್ನು ಮಾಡಿಸಿ, ಹಾಗೆಯೇ ವಿವಾಹಯೋಗ್ಯವಾದ ವಸ್ತ್ರಾಭರಣಗಳನ್ನು ಕೊಟ್ಟು, ಅವನನ್ನು ವಿವಾಹ

ಕ್ಕಾಗಿ ಏರ್ಪಡಿಸಿದ್ದ ಹಸೆಯ ಜಗುಲಿಗೆ ಕರೆದುಕೊಂಡು ಬಂದು, ಅವನಿಗೆ ವರಪೂಜೆ ಯನ್ನು ಮಾಡಿದನು.

ಸವಿಷ್ಟರಂ ಚಾಚಮನೀಯಮರ್ಘ್ಯಂ
ವಸ್ತ್ರದ್ವಯಂ ಗಾಮಥ ಕುಂಡಲೇ ದ್ವೇ ।
ಸಮರ್ಪ್ಯ ತಸ್ಮೈ ವಿಧಿವನ್ನರೇಂದ್ರ
ಇಚ್ಛತ್ಸುತಾದಾನಮಹೀನಸತ್ತ್ವಃ ॥೯॥

ಯಾರಿಗೂ ಕಡಿಮೆಯಿಲ್ಲದ ಹೆಚ್ಚಾದ ಪರಾಕ್ರಮವುಳ್ಳ ಆ ರಾಜಶ್ರೇಷ್ಠನು ಆ ವರನಿಗೆ ಉಚಿತಾಸನ, ಆಚಮನ, ಅರ್ಘ್ಯ, ವಸ್ತ್ರದ ಜೊತೆ, ಹಸುವು, ಕಿವಿಗೆ ಹಾಕಿಕೊಳ್ಳುವ ಎರಡು ಕುಂಡಲಗಳು, ಪೀತಾಂಬರಗಳು ಇವೇ ಮುಂತಾದುವು ಗಳನ್ನು ಸಮರ್ಪಿಸಿ, ವಿಧಿಪೂರ್ವಕವಾಗಿ ಕನ್ಯಾದಾನವನ್ನು ಮಾಡಲು ಇಚ್ಛಿಸಿದನು.

ಸೋಽಪ್ಯಗ್ರಹೀತ್ಸರ್ವಮದೀನಚೇತಾಃ
ಶಶಾಮ ಚಿಂತ್ಯಾಥ ಮನೋರಮಾಯಾಃ ।
ಕನ್ಯಾಂ ಸುಕೇಶೀಂ ನಿಧಿಕನ್ಯಕಾಸಮಾಂ
ಮೇನೇ ತದಾಽಽತ್ಮಾನಮನುತ್ತಮಂ ಚ ॥೧೦॥

ಆ ಸುದರ್ಶನನು ಆ ಎಲ್ಲಾ ವಸ್ತುಗಳನ್ನೂ ಮರ್ಯಾದೆಯಿಂದ ಕೂಡಿದ ದೊಡ್ಡಮನಸ್ಸುಳ್ಳವನಾಗಿ ಸ್ವೀಕರಿಸಿದನು. ಅನವ ತಾಯಿಯಾದ ಮನೋರಮೆಯ ಚಿಂತೆಯು ಎಂದರೆ, ತನ್ನ ಮಗನಿಗೆ ಹುಡುಗಿಯನ್ನು ಕೊಟ್ಟು ಮದುವೆಮಾಡು ವರೋ ಇಲ್ಲವೋ ಎಂಬ ಆತಂಕದ ಯೋಚನೆಯೂ ಶಾಂತವಾಯಿತು. ಆ ಸುದರ್ಶ ನನು ಮನೋಹರವಾದ ತಲೆಗೂದಲುಳ್ಳ ಆ ಶಶಿಕಲೆಯನ್ನು ಕುಬೇರನ ಮಗಳಂತೆ ತಿಳಿದುಕೊಂಡನು. ತನ್ನನ್ನಾದರೋ, ಅವಳಿಗೆ ತಕ್ಕಂತೆ ವೈಭವಮೇಲ್ಮೆಗಳು ಏನೂ ಇಲ್ಲದವನೆಂಬುದಾಗಿ ಭಾವಿಸಿಕೊಂಡನು. ಎಂದರೆ ತಾನು ನಿರ್ಗತಿಕನಾಗಿದ್ದುದರಿಂದ ಐಶ್ವರ್ಯದಲ್ಲಿ ಅವಳ ಸಮಕ್ಕೆ ಸರಿತೂಗಲಾರೆನಲ್ಲಾ ಎಂದು ವಿಷಾದಪಟ್ಟು ಆ ರೀತಿ ಯಲ್ಲಿ ಭಾವಿಸಿದನು ಎಂದು ತಾತ್ಪರ್ಯವು. ಅಥವಾ ಅಂತಹ ರಾಜಪುತ್ರಿಯನ್ನು ಮದುವೆಮಾಡಿಕೊಳ್ಳುವಷ್ಟು ಪುಣ್ಯಶಾಲಿಯಾದುದರಿಂದ ತಾನೂ ಇತರ ರಾಜ ಕುಮಾರರಿಗಿಂತಲೂ ಮೇಲಾದವನೆಂದೇ ಭಾವಿಸಿದನು.

ಸುಪೂಜಿತಂ ಭೂಷಣವಸ್ತ್ರದಾನ್ಯೈ-
ರ್ವರೋತ್ತಮುಂ ತಂ ಸಚಿವಾಸ್ತದಾನೀಂ
ನಿನ್ಯುಶ್ಚ ತೇ ಕೌತುಕಮಂಡಪಾಂತ-
ರ್ಮುದಾನ್ವಿತಾ ವೀತಭಯಾಶ್ಚ ಸರ್ವೇ ॥೧೧॥

ಆಭರಣಗಳು, ಪೀತಾಂಬರಗಳು ಇವನ್ನು ಕೊಟ್ಟು ಚನ್ನಾಗಿ ಅಲಂಕರಿಸಿದ್ದ ವರಶ್ರೇಷ್ಠನಾದ ಆ ಸುದರ್ಶನನನ್ನು ಭಯವನ್ನು ಬಿಟ್ಟು ಸಂತೋಷದಿಂದ ಕೂಡಿರುವ ಮಂತ್ರಿಗಳು, ಕುತೂಹಲವನ್ನುಂಟುಮಾಡುವ ವಿವಾಹಮಂಟಪಕ್ಕೆ ಆಗ ಕರೆದು ಕೊಂಡು ಹೋದರು.

ಸಮಾಪ್ತಭೂಷಾಂ ವಿಧಿವದ್ವಿಧಿಜ್ಞಾಃ
ಸ್ತ್ರಿಯಶ್ಚ ತಾಂ ರಾಜಸುತಾಂ ಸುಯಾನೇ ।
ಆರೋಪ್ಯ ನಿನ್ಯುರ್ವರಸಂನಿಧಾನಂ
ಚತುಷ್ಕಯುಕ್ತೇ ಕಿಲ ಮಂಡಪೇ ವೈ ॥೧೨॥

ಮದುವೆಯ ಕ್ರಮವನ್ನು ತಿಳಿದ ಸ್ತ್ರೀಯರು, ಶಾಸ್ತ್ರನಿಯಮಗಳಿಗೆ ಅನುಸಾರ ವಾಗಿ, ರಾಜನ ಮಗಳಾದ ಆ ಕನ್ನಿಕೆಯನ್ನು ಒಡವೆಗಳಿಂದ ಅಲಂಕರಿಸಿ, ನಾಲ್ಕು ಕಂಬಗಳುಳ್ಳ, ವೇದಘೋಷಗಳಿಂದ ಕೂಡಿರುವ, ವಿವಾಹಮಂಟಪದ ಹಸೆಯ ಜಗುಲಿ ಯಲ್ಲಿರುವ ವರನ ಸಮೀಪಕ್ಕೆ ಪಲ್ಲಕ್ಕಿಯಲ್ಲಿ ಹತ್ತಿಸಿ ಕರೆದುಕೊಂಡು ಹೋದರು.

ಅಗ್ನಿಂ ಸಮಾಧಾಯ ಪುರೋಹಿತಃ ಸ
ಹುತ್ವಾ ಯಥಾವಚ್ಚ ತದಂತರಾಲೇ ।
ಆಹ್ವಾಯಯತ್ತೌ ಕೃತಕೌತುಕೌ ತು
ವಧೂವರೌ ಪ್ರೇಮಯುತೌ ನಿಕಾಮಂ ॥೧೩॥

ಆಗ ಪುರೋಹಿತನು ಅಗ್ನಿಯನ್ನು ಸ್ಥಾಪಿಸಿ ಅದರ ಮಧ್ಯದಲ್ಲಿ ಯಥಾವಿಧಿ ಯಾಗಿ ವಿವಾಹಾಂಗವಾದ ಹೋಮವನ್ನು ನೆರವೇರಿಸಿ, ಹೆಚ್ಚಾದ ಪ್ರೇಮದಿಂದ ಕೂಡಿರುವ, ವಿವಾಹದ ದೀಕ್ಷೆಯ ಮಂಗಳದ ಕಂಕಣವನ್ನು ಕಟ್ಟಿಕೊಂಡಿರುವ ಮದುವೆಯ ಹೆಣ್ಣನ್ನೂ ಗಂಡನ್ನೂ ತಂದೆತಾಯಿಗಳಿಂದ ಹಸೆಗೆ ಕರೆಯಿಸಿದನು.

**ಲಾಜಾವಿಸರ್ಗಂ ವಿಧಿವದ್ವಿಧಾಯ**
**ಕೃತ್ವಾ ಹುತಾಶಸ್ಯ ಪ್ರದಕ್ಷಿಣಾಂ ಚ ।**
**ತೌ ಚಕ್ರತುಸ್ತತ್ರ ಯಥೋಚಿತಂ ತ-**
**ತ್ಸರ್ವಂ ವಿಧಾನಂ ಕುಲಗೋತ್ರಜಾತಂ ॥೧೪॥**

ಅವರಿಬ್ಬರಿಂದಲೂ ನಿಯಮವಿಧಾನದಿಂದ ಲಾಜಾಹೋಮವನ್ನು ಮಾಡಿಸಿ, ಅಗ್ನಿಗೆ ಪ್ರದಕ್ಷಿಣೆಯನ್ನು ಮಾಡಿಸಿ, ಅವರ ಕುಲಕ್ರಮದಿಂದ ಬಂದಿರುವ ಗೋತ್ರ ಪ್ರವರಗಳನ್ನು ಪಠಿಸುತ್ತಾ ಮಂಗಳಕರವಾದ ಪಾಣಿಗ್ರಹಣಕ್ಕೆ ಅಂಗವಾದ ಕೆಲಸ ಗಳನ್ನು ವಿಧಿಪೂರ್ವಕವಾಗಿ ಮಾಡಿಸಿದರು.

**ಶತದ್ವಯಂ ಚಾಶ್ವಯುಜಾಂ ರಥಾನಾಂ**
**ಸುಭೂಷಿತಂ ಚಾಪಿ ಶರೌಘಸಂಯುತಂ ।**
**ದದೌ ನೃಪೇಂದ್ರಸ್ತು ಸುದರ್ಶನಾಯ**
**ಸುಪೂಜಿತಂ ಪಾರಿಬರ್ಹಂ ವಿವಾಹೇ ॥೧೫॥**

ಆ ಸುಬಾಹುರಾಜನು, ವಿವಾಹಕಾಲದಲ್ಲಿ ಕುದುರೆ ಮುಂತಾದ ಪರಿಕರ ಗಳಿಂದ ಸಜ್ಜಿತವಾದ ಎರಡುನೂರು ರಥಗಳನ್ನೂ, ಬಾಣಗಳ ಸಮೂಹದಿಂದ ಕೂಡಿದ ಬಿಲ್ಲುಗಳನ್ನೂ ಬಳುವಳಿಯಾಗಿ ಸುದರ್ಶನನಿಗೆ ಸತ್ಕರಿಸಿ ಕೊಟ್ಟನು.

**ಮದೋತ್ಕಟಾನ್ ಹೇಮವಿಭೂಷಿತಾಂಶ್ಚ**
**ಗಜಾನ್ ಗಿರೇಃ ಶೃಂಗಸಮಾನದೇಹಾನ್ ।**
**ಶತಂ ಸಪಾದಂ ನೃಪಸೂನವೇಽಸೌ**
**ದದಾವಥ ಪ್ರೇಮಯುತೋ ನೃಪೇಂದ್ರಃ ॥೧೬॥**

ಹೆಚ್ಚಾದ ಮದವುಳ್ಳ, ಚಿನ್ನದ ಆಭರಣಗಳಿಂದ ಅಲಂಕರಿಸಿರುವ ಬೆಟ್ಟದ ಶಿಖರಕ್ಕೆ ಸಮಾನವಾದ ಎತ್ತರವಾದ ದೇಹವುಳ್ಳ ಒಂದುನೂರ ಇಪ್ಪತ್ತೈದು ಆನೆ ಗಳನ್ನು, ಪ್ರೇಮದಿಂದ ಕೂಡಿದ ಆ ಸುಬಾಹುರಾಜನು, ದೊರೆಯ ಮಗನಾದ ತನ್ನ ಅಳಿಯನಿಗೆ ಕೊಟ್ಟನು.

**ದಾಸೀಶತಂ ಕಾಂಚನಭೂಷಿತಂ ಚ**
**ಕರೇಣುಕಾನಾಂ ಚ ಶತಂ ಸುಚಾರು ।**
**ಸಮರ್ಪಯಾಮಾಸ ವರಾಯ ರಾಜಾ**
**ವಿವಾಹಕಾಲೇ ಮುದಿತೋಽನು(ತಿ)ವೇಲಂ ॥೧೭॥**

ಮಿತಿಮೀರಿ ಸಂತೋಷಗೊಂಡ ಆ ಸುಬಾಹುರಾಜನು ಸುವರ್ಣದ ಆಭರಣಗಳಿಂದ ಕೂಡಿದ ನೂರು ಜನ ದಾಸಿಯರನ್ನೂ, ಚಿನ್ನದ ಒಡವೆಗಳಿಂದ ಅಲಂಕರಿಸಿದ ಸುಂದರವಾದ ನೂರು ಹೆಣ್ಣಾನೆಗಳನ್ನೂ ಆ ವರನಿಗೆ ಮದುವೆಯ ಸಮಯದಲ್ಲಿ ರಾಜಮರ್ಯಾದೆಗೋಸ್ಕರ ಕೊಟ್ಟನು.

**ಅದಾತ್ಪುನರ್ದಾಸಸಹಸ್ರಮೇಕಂ**
**ಸರ್ವಾಯುಧೈಃ ಸಂಭೃತಭೂಷಿತಂ ಚ ।**
**ರತ್ನಾನಿ ವಾಸಾಂಸಿ ಯಥೋಚಿತಾನಿ**
**ದಿವ್ಯಾನಿ ಚಿತ್ರಾಣಿ ತಥಾಽಽವಿಕಾನಿ ॥೧೮॥**

ಇಷ್ಟೇ ಅಲ್ಲದೆ ಎಲ್ಲ ಬಗೆಯ ಆಯುಧಗಳಿಂದ ತಕ್ಕಂತೆ ಸಜ್ಜುಗೊಳಿಸಿದ ಸಾವಿರ ಮಂದಿ ಯುದ್ಧಭಟರನ್ನೂ, ಉತ್ತಮವಾದ ಅನೇಕರತ್ನಗಳನ್ನೂ, ಪೀತಾಂಬರಗಳನ್ನೂ ಹಾಗೆಯೇ ನಾನಾಬಗೆಯ ಉಣ್ಣೆಯ ಬಟ್ಟೆಗಳನ್ನೂ ಆ ರಾಜನು ಅಳಿಯನಿಗೆ ಕೊಟ್ಟನು.

**ದದೌ ಪುನರ್ವಾಸಗೃಹಾಣಿ ತಸ್ಮೈ**
**ರಮ್ಯಾಣಿ ದೀರ್ಘಾಣಿ ವಿಚಿತ್ರಿತಾನಿ ।**
**ಸಿಂಧೂದ್ಭವಾನಾಂ ತುರಗೋತ್ತಮಾನಾ**
**ಮದಾತ್ಸಹಸ್ರದ್ವಿತಯಂ ಸುರಮ್ಯಂ ॥೧೯॥**

ಮತ್ತು ನೋಡುವುದಕ್ಕೆ ಅಂದವಾಗಿಯೂ, ವಿಚಿತ್ರವಾಗಿಯೂ, ಉದ್ದವಾಗಿಯೂ ವಿಶಾಲವಾಗಿಯೂ ಇರುವ ವಾಸಮಾಡುವ ಪಟಗೃಹ (ಡೇರೆ) ಗಳನ್ನೂ, ಮನೋಹರವಾದ, ಸಿಂಧುದೇಶದಲ್ಲಿ ಹುಟ್ಟಿದ ಉತ್ತಮವಾದ ಎರಡುಸಾವಿರ ಕುದುರೆಗಳನ್ನೂ ಸುಬಾಹುರಾಜನು ಸುದರ್ಶನನಿಗೆ ಕೊಟ್ಟನು.

ಕ್ರಮೇಲಕಾನಾಂ ಚ ಶತತ್ರಯಂ ವೈ
ಪ್ರತ್ಯಾದಿಶದ್ಭಾರಭೃತಾಂ ಸುಚಾರು ।
ಶತದ್ವಯಂ ವೈ ಶಕಟೋತ್ತಮಾನಾಂ
ತಸ್ಮೈ ದದೌ ಧಾನ್ಯರಸೈಃ ಪ್ರಪೂರಿತಂ ॥೨೦॥

ಅಲ್ಲದೆ ಭಾರವನ್ನು ಹೊರತಕ್ಕ ಮೂರು ನೂರು ಒಂಟೆಗಳನ್ನೂ, ಧಾನ್ಯಾದಿಗಳಿಂದ ತುಂಬಿದ ಎರಡನೂರು ಒಳ್ಳೆಯ ಗಾಡಿಗಳನ್ನೂ ಆ ದೊರೆಯು ಅಳಿಯನಿಗೆ ಕೊಟ್ಟನು.

ಮನೋರಮಾಂ ರಾಜಸುತಾಂ ಪ್ರಣಮ್ಯ
ಜಗಾದ ವಾಕ್ಯಂ ವಿಹಿತಾಂಜಲಿಃ ಪುರಃ ।
ದಾಸೋಽಸ್ಮಿ ತೇ ರಾಜಸುತೇ ವರಿಷ್ಠೇ
ತದ್ಬ್ರೂಹಿ ಯತ್ಸ್ಯಾತ್ತು ಮನೋಗತಂ ತೇ ॥೨೧॥

ಆ ಸುಬಾಹುರಾಜನು ಹೀಗೆ ವರನಿಗೆ ಬಳುವಳಿಯನ್ನು ಕೊಟ್ಟು ಅವನ ತಾಯಿಯಾದ ಬೀಗಿತ್ತಿಗೂ ಉಪಚಾರವನ್ನು ಮಾಡುತ್ತಾನೆ. ರಾಜನ ಮಗಳಾದ ಮನೋರಮೆಯನ್ನು ನಮಸ್ಕರಿಸಿ ಸುಬಾಹುರಾಜನು ಅವಳನ್ನು ಕುರಿತು, ಓ ಶ್ರೇಷ್ಠಳಾದ ರಾಜನ ಮಗಳೇ, ನಾನು ನಿನ್ನ ಸೇವಕನು. ನಿನ್ನ ಮನೋರಥವಿನ್ನೇನಿರುವುದೋ ಅದನ್ನು ದಯವಿಟ್ಟು ಹೇಳು ಎಂದು ಎರಡು ಕೈಗಳನ್ನೂ ಜೋಡಿಸಿಕೊಂಡು ಪ್ರಾರ್ಥಿಸಿದನು.

ತಂ ಚಾರುವಾಕ್ಯಂ ನಿಜಗಾದ ಸಾಪಿ
ಸ್ವಸ್ತ್ಯಸ್ತು ತೇ ಭೂಪ ಕುಲಸ್ಯ ವೃದ್ಧಿಃ ।
ಸಂಮಾನಿತಾಹಂ ಮಮ ಸೂನವೇ ತ್ವಯಾ
ದತ್ತಾ ಯತೋ ರತ್ನವರಾ ಸ್ವಕನ್ಯಾ ॥೨೨॥

ಅವನು ಹೇಳಿದ ಒಳ್ಳೆಯ ಮರ್ಯಾದೆಯ ಮಾತುಗಳನ್ನು ಮನೋರಮೆಯು ಕೇಳಿ, ಅವಳು ಸುಬಾಹುರಾಜನನ್ನು ಕುರಿತು---ಓ ರಾಜನೇ, ನಿನಗೆ ಮಂಗಳವುಂಟಾಗಲಿ ಮತ್ತು ನಿನ್ನ ವಂಶವೂ ಬೆಳೆಯಲಿ. ಕನ್ಯೆಯರಲ್ಲಿ ಶ್ರೇಷ್ಠಳಾದ ನಿನ್ನ ಮಗಳನ್ನು ನನ್ನ ಮಗನಿಗೆ ಕೊಟ್ಟು ವಿವಾಹವನ್ನು ಮಾಡಿ ನನಗೂ

ಸನ್ಮಾನವನ್ನು ಮಾಡಿರುವೆ. ಇದೇ ನನ್ನ ಉತ್ತಮವಾದ ಮನೋರಥವು ಎಂದು ಹೇಳಿದಳು.

**ನ ಬಂದಿಪುತ್ರೀ ನೃಪ ಮಾಗಧೀ ವಾ**
**ಸ್ತೌಮೀಹ ಕಿಂ ತ್ವಾಂ ಸ್ವಜನಂ ಮಹತ್ತರಂ ।**
**ಸುಮೇರುತುಲ್ಯಸ್ತು ಕೃತಃ ಸುತೋಽದ್ಯ ಮೇ**
**ಸಂಬಂಧಿನಾ ಭೂಪತಿನೋತ್ತಮೇನ** ॥೨೩॥

ಅಲ್ಲದೆ, ಓ ದೊರೆಯೇ, ರಾಜರಲ್ಲಿ ಶ್ರೇಷ್ಠನಾದ ನೀನು ನನಗೆ ಬೀಗನಾಗಿ ರುತ್ತಾ ಈಗ ನನ್ನ ಮಗನನ್ನು ಪರ್ವತಗಳಲ್ಲಿ ಮೇರುವಿನಹಾಗೆ, ರಾಜರ ಶ್ರೇಣಿ ಯಲ್ಲಿ ಗೌರವವುಳ್ಳವನಾಗುವಂತೆ ಮಾಡಿರುವೆ. ನಿನ್ನನ್ನು ಸುಮ್ಮನೆ ಹೊಗಳಲು ನಾನು ನಿನಗೆ ಅಧೀನಳಾದ ಹೊಗಳುಭಟ್ಟನ ಮಗಳಲ್ಲವು ಮತ್ತು ನಾನು ರಾಜ ಪುತ್ರಿಯು. ನಾನು ನಿನ್ನ ಸ್ವಜನವರ್ಗದಲ್ಲಿ ಈಗ ಸೇರಿಹೋಗಿದ್ದೇನೆ. ಆದುದ ರಿಂದ ನನ್ನ ನಂಟರಲ್ಲಿ ಮೇಲಾದ ನಿನ್ನನ್ನು ಹೊಗಳಲಾರೆನು. ಆದರೂ ಇಷ್ಟನ್ನು ಮಾತ್ರ ಹೇಳದಿರಲಾರೆನು.

**ಅಹೋಽತಿಚಿತ್ರಂ ನೃಪತೇಶ್ಚರಿತ್ರಂ**
**ಪರಂ ಪವಿತ್ರಂ ತವ ಕಿಂ ವದಾಮಿ ।**
**ಯದ್ಭ್ರಷ್ಟರಾಜ್ಯಾಯ ಸುತಾಯ ಮೇಽದ್ಯ**
**ದತ್ತಾ ತ್ವಯಾ ಪೂಜ್ಯಸುತಾ ವರಿಷ್ಠಾ** ॥೨೪॥

**ವನಾಧಿವಾಸಾಯ ಕಿಲಾಧನಾಯ**
**ಪಿತ್ರಾ ವಿಹೀನಾಯ ವಿಸೈನ್ಯಕಾಯ ।**
**ಸರ್ವಾನಿಮಾನ್ ಭೂಮಿಪತೀನ್ವಿಹಾಯ**
**ಫಲಾಶನಾಯಾರ್ಥವಿವರ್ಜಿತಾಯ** ॥೨೫॥

ಓ ರಾಜಶ್ರೇಷ್ಠನೇ, ನಿನ್ನ ನಡವಳಿಕೆಯು ಬಹಳ ಆಶ್ಚರ್ಯವನ್ನುಂಟು ಮಾಡುತ್ತಿದೆ. ಪರಿಶುದ್ಧವಾದ ಚರಿತ್ರೆಯುಳ್ಳ ನಿನಗೆ ನಾನು ಏನನ್ನು ಹೇಳಲಿ? ಏಕೆಂದರೆ, ರಾಜ್ಯವನ್ನು ಕಳೆದುಕೊಂಡು ಕಾಡಿನಲ್ಲಿ ವಾಸಮಾಡುತ್ತಿರುವ, ಹಣ ವಿಲ್ಲದ, ತಂದೆಯನ್ನೂ ಕಳೆದುಕೊಂಡಿರುವ, ಸೈನ್ಯವಿಲ್ಲದ, ಹಣ್ಣುಹಂಪಲನ್ನು ತಿಂದು

ಜೀವಿಸುತ್ತಿರುವ, ಐಶ್ವರ್ಯವಿಲ್ಲದ ನನ್ನ ಮಗನಿಗೆ, ಪ್ರಸಿದ್ಧರಾದ ಈ ರಾಜರನ್ನೆಲ್ಲಾ ಬಿಟ್ಟು ನಿನ್ನ ಮಗಳನ್ನು ಕೊಟ್ಟು ವಿವಾಹಮಾಡಿರುವೆ. ಇಂತಹ ನಿನ್ನ ನಡತೆಯನ್ನು ಎಷ್ಟು ಹೊಗಳಲಿ.

**ಸಮಾನವಿತ್ತೇಽಥ ಕುಲೇ ಬಲೇ ಚ**
**ದದಾತಿ ಪುತ್ರೀಂ ನೃಪತಿಶ್ಚ ಭೂಯಃ ।**
**ನ ಕೋಽಪಿ ಮೇ ಭೂಪಸುತೇಽರ್ಥಹೀನೇ**
**ಗುಣಾನ್ವಿತಾಂ ರೂಪವತೀಂ ಚ ದದ್ಯಾತ್ ॥೨೬॥**

ರಾಜರು ತಮಗೆ ಸಮಾನವಾದ ಐಶ್ವರ್ಯ, ಕುಲ, ಬಲ, ಸೈನ್ಯ ಇವುಗಳಿಂದ ಕೂಡಿರುವವರಿಗೆಮಾತ್ರ ತಮ್ಮ ಹೆಣ್ಣುಮಕ್ಕಳನ್ನು ಮದುವೆಮಾಡಿ ಕೊಡುವರು. ಈ ರೀತಿಯಲ್ಲಿರುವಲ್ಲಿ, ಐಶ್ವರ್ಯ, ಸೌಂದರ್ಯಾದಿಗಳಿಂದ ಕೂಡಿದ, ದೊರೆಯಾಗಿರುವ ನಿನ್ನ ಮಗಳನ್ನು ಐಶ್ವರ್ಯವಿಲ್ಲದ ನನ್ನ ಮಗನಿಗೆ ಯಾರು ತಾನೇ ಕೊಡುತ್ತಿದ್ದರು ? ಯಾವರಾಜನೂ ಕೊಡುತ್ತಿರಲಿಲ್ಲವು ಎಂದು ನಾನು ನಂಬಿದ್ದೆನು.

**ವೈರಂ ತು ಸರ್ವೈಃ ಸಹ ಸಂವಿಧಾಯ**
**ನೃಪೈರ್ವರಿಷ್ಠೈರ್ಬಲಸಂಯುತೈಶ್ಚ ।**
**ಸುದರ್ಶನಾಯಾಥ ಸುತಾರ್ಪಿತಾ ಮೇ**
**ಕಿಂ ವರ್ಣಯೇ ಧೈರ್ಯಮಿದಂ ತ್ವದೀಯಂ ॥೨೭॥**

ಪ್ರಸಿದ್ಧರಾದ, ಸೈನ್ಯಬಲದಿಂದ ಕೂಡಿದ, ಇಲ್ಲಿ ಒಟ್ಟುಗೂಡಿರುವ ಎಲ್ಲ ರಾಜರೊಡನೆಯೂ ವಿರೋಧವನ್ನು ಮಾಡಿಕೊಂಡು ನನ್ನ ಈ ಸುದರ್ಶನನಿಗೆ ನಿನ್ನ ಮಗಳನ್ನು ಮದುವೆಮಾಡಿಕೊಟ್ಟಿರುವೆ. ಈ ನಿನ್ನ ಧೈಯವನ್ನು ನಾನೆಷ್ಟು ವರ್ಣಿಸಲಿ ?

**ನಿಶಮ್ಯ ವಾಕ್ಯಾನಿ ನೃಪಃ ಪ್ರಹೃಷ್ಟಃ**
**ಕೃತಾಂಜಲಿರ್ವಾಕ್ಯಮುವಾಚ ಭೂಯಃ ।**
**ಗೃಹಾಣ ರಾಜ್ಯಂ ಮಮ ಸುಪ್ರಸಿದ್ಧಂ**
**ಭವಾಮಿ ಸೇನಾಪತಿರದ್ಯ ಚಾಹಂ ॥೨೮॥**

ಮನೋರಮೆಯು ಹೇಳಿದ ಈ ಮಾತನ್ನು ಕೇಳಿ ಸಂತೋಷಗೊಂಡ ರಾಜನು ಕೈಮುಗಿದುಕೊಂಡು ಪುನಃ ಈ ರೀತಿಯಲ್ಲಿ ಹೇಳಿದನು. ನೀನು ವಿಸ್ತಾರವಾದ ಕೀರ್ತಿಯುಳ್ಳ ಈ ನನ್ನ ರಾಜ್ಯವನ್ನು ಈಗಲೇ ಸ್ವೀಕರಿಸುವವಳಾಗು. ನಾನು ನಿನಗೆ ಸೇನಾಪತಿಯಾಗಿರುತ್ತೇನೆ.

**ನೋ ಚೇತ್ತದರ್ಧಂ ಪ್ರತಿಗೃಹ್ಯ ಚಾತ್ರ**
**ಸುತಾನ್ವಿತಾ ರಾಜ್ಯಫಲಾನಿ ಭುಂಕ್ಷ್ವ ।**
**ವಿಹಾಯ ವಾರಾಣಸಿಕಾನಿವಾಸಂ**
**ವನೇ ಪುರೇ ವಾಸಮತೋ ನ ಮೇಽಸ್ತಿ ॥೨೯॥**

ಹಾಗೆ ಮಾಡುವುದು ನಿನಗೆ ಒಪ್ಪಿಗೆಯಾಗದಿದ್ದಲ್ಲಿ ಈ ನನ್ನ ರಾಜ್ಯದಲ್ಲಿ ಅರ್ಧವನ್ನು ತೆಗೆದುಕೊಂಡು, ನೀನು ಮಗನೊಡನೆ ರಾಜಭೋಗಗಳನ್ನು ಅನುಭವಿಸು. ನೀವು ಇನ್ನು ಮುಂದೆ ಈ ಕಾಶೀಕ್ಷೇತ್ರವಾಸವನ್ನು ಬಿಟ್ಟು ಕಾಡಿನಲ್ಲಿ ಅಥವಾ ಬೇರೆ ಪಟ್ಟಣದಲ್ಲಿ ವಾಸಮಾಡುವುದನ್ನು ನಾನು ಒಪ್ಪುವವನಾಗಿಲ್ಲವು.

**ನೃಪಾಸ್ತು ಸಂತ್ಯೇವ ರುಷಾನ್ವಿತಾ ವೈ**
**ಗತ್ವಾ ಕರಿಷ್ಯೇ ಪ್ರಥಮಂ ತು ಸಾಂತ್ವನಂ ।**
**ತತಃ ಪರಂ ದ್ವಾವಪರಾವುಪಾಯೌ**
**ನೋ ಚೇತ್ತತೋ ಯುದ್ಧಮಹಂ ಕರಿಷ್ಯೇ ॥೩೦॥**

ಆ ರಾಜರಾದರೋ ಕೋಪಗೊಂಡವರಾಗಿಯೇ ಇರುತ್ತಾರೆ ಎಂಬುದು ನಿಜ. ಆದರೂ ಈಗ ನಾನು ಅಲ್ಲಿಗೆ ಹೋಗಿ ಅವರನ್ನು ಮೊದಲು ಸಾಮೋಪಾಯದಿಂದ ಸಮಾಧಾನಪಡಿಸಲು ಪ್ರಯತ್ನಿಸುತ್ತೇನೆ. ಆ ಮೇಲೆ ದಾನಭೇದಗಳೆಂಬ ಉಪಾಯಗಳಿಂದಲೂ ಪ್ರಯತ್ನಿಸುವೆನು. ಅದರಿಂದಲೂ ಅವರು ಸಮಾಧಾನವನ್ನು ಹೊಂದದಿದ್ದರೆ, ಆಗ ನಾನು ಯುದ್ಧವನ್ನೇ ಮಾಡುತ್ತೇನೆ.

**ಜಯಾಜಯೌ ದೈವವಶೌ ತಥಾಪಿ**
**ಧರ್ಮೇ ಜಯೋ ನೈವ ಕೃತೇಽಪ್ಯಧರ್ಮೇ ।**
**ತೇಷಾಂ ಕಿಲಾಧರ್ಮವತಾಂ ನೃಪಾಣಾಂ**
**ಕಥಂ ಭವಿಷ್ಯತ್ಯನುಚಿಂತಿತಂ ವೈ ॥೩೧॥**

ಆದರೂ ಯುದ್ಧದಲ್ಲಿ ಸೋಲಬಹುದೆಂಬ ಆತಂಕವಿದೆಯಲ್ಲವೇ, ಎಂದರೆ ಅದು ಸರಿಯಲ್ಲವು. ಏಕೆಂದರೆ, ಜಯವೂ, ಅಪಜಯವೂ ಈ ಎರಡೂ ದೇವರ ಇಚ್ಛೆಗೆ ಅನುಸಾರವಾಗಿ ಸಂಭವಿಸುತ್ತವೆ ಎಂಬುದು ನಿಜವು. ಆದರೂ ಧರ್ಮವಿರುವ ಕಡೆಗೇ ಜಯವು ಲಭಿಸುತ್ತದೆ. ಹಾಗೆಯೇ ಅಧರ್ಮಕ್ಕೆ ಅಪಜಯವೂ ಉಂಟಾಗುತ್ತದೆ ಎಂಬುದೂ "ಯತೋಽಧರ್ಮಸ್ತತೋಽಜಯಃ" ಎಂಬ ನೀತಿಧರ್ಮದಿಂದ ಗೊತ್ತಾಗಿ ತಿಳಿದಿರುತ್ತದೆ. ಈಗ ಅಧರ್ಮದಿಂದ ಕೂಡಿರುವ ಕೆಲಸವನ್ನು ಮಾಡುತ್ತಿರುವ ಆ ರಾಜರಿಗೆ ಜಯವು, ಅವರು ಇಷ್ಟಪಟ್ಟರೂ ಹೇಗೆತಾನೇ ಸಿಕ್ಕೀತು ?

**ಆಕರ್ಣ್ಯ ತದ್ಭಾಷಿತಮರ್ಥವಚ್ಚ**
**ಜಗಾದ ವಾಕ್ಯಂ ಹಿತಕಾರಕಂ ತಂ ।**
**ಮನೋರಮಾ ಮಾನಮವಾಪ್ಯ ತಸ್ಮಾ**
**ತ್ಸರ್ವಾತ್ಮನಾ ಮೋದಯುತಾ ಪ್ರಸನ್ನಾ ॥೩೨॥**

ಹೀಗೆ ಕಾರಣ, ವಿವರಣೆಗಳನ್ನು ಒಳಗೊಂಡಿರುವ ಅರ್ಥದಿಂದ ಕೂಡಿದ ಹಿತವನ್ನುಂಟುಮಾಡುವ ಆ ಸುಬಾಹುರಾಜನ ಮಾತನ್ನು ಕೇಳಿ, ಎಲ್ಲಾ ರೀತಿಯಿಂದಲೂ ಸನ್ಮಾನವನ್ನು ಹೊಂದಿದ ಮನೋರಮೆಯು ಸಂತೋಷಗೊಂಡು ಹೀಗೆ ಹೇಳಿದಳು.

**ರಾಜನ್ ಶಿವಂ ತೇಽಸ್ತು ಕುರುಷ್ವ ರಾಜ್ಯಂ**
**ತ್ಯಕ್ತ್ವಾ ಭಯಂ ತ್ವಂ ಸ್ವಸುತೈಃ ಸಮೇತಃ ।**
**ಸುತೋಽಪಿ ಮೇ ನೂನಮವಾಪ್ಯ ರಾಜ್ಯಂ**
**ಸಾಕೇತಪುರ್ಯಾಂ ಪ್ರಚರಿಷ್ಯತೀಹ ॥೩೩॥**

ಓ ಸುಬಾಹುರಾಜನೇ, ನಿನಗೆ ವಿಜಯರೂಪವಾದ ಮಂಗಳವು ಉಂಟಾಗಲಿ. ಭಯವನ್ನು ಬಿಟ್ಟು ನೀನು ನಿನ್ನ ಮಕ್ಕಳೊಡನೆ ಸುಖದಿಂದ ರಾಜ್ಯವನ್ನಾಳು. ನನ್ನ ಮಗನು ಭುವನೇಶ್ವರಿಯಾದ ಭವಾನೀದೇವಿಯ ಕೃಪೆಯಿಂದ ಶತ್ರುಗಳನ್ನು ಜಯಿಸಿ ನಿಶ್ಚಯವಾಗಿಯೂ ರಾಜ್ಯವನ್ನು ಪಡೆದು ತನ್ನ ರಾಜಧಾನಿಯಾದ ಅಯೋಧ್ಯಾಪಟ್ಟಣದಲ್ಲಿ ಪುನಃ ಮುಂಚಿನಂತೆಯೇ ರಾಜ್ಯಭಾರವನ್ನು ಮಾಡುವನು.

**ವಿಸರ್ಜಯಾಸ್ಮಾನ್ನಿಜಸದ್ಮ ಗಂತುಂ**
**ಶಿವಂ ಭವಾನೀ ತವ ಸಂವಿಧಾಸ್ಯತಿ ।**

ನ ಕಾಪಿ ಚಿಂತಾ ಮಮ ಭೂಪ ವರ್ತತೇ
ಸಂಚಿಂತಯಂತ್ಯಾಃ ಪರಮಾಂಬಿಕಾಂ ವೈ ॥೩೪॥

ಓ ರಾಜನೇ, ಇನ್ನು ನಮ್ಮ ಮನೆಗೆ ಹೋಗಲು ನಮಗೆ ಅನುಜ್ಞೆಯನ್ನು ಕೊಡು. ಭವಾನೀದೇವಿಯು ನಿನಗೆ ಮಂಗಳವನ್ನುಂಟುಮಾಡುವಳು. ಯಾವಾಗಲೂ, ಸರ್ವೋತ್ತಮಳಾದ ಆ ತಾಯಿಯನ್ನೇ ಧ್ಯಾನಿಸುತ್ತಿರುವ ನನಗೆ ಯಾವುದೊಂದು ಆತಂಕದ ಯೋಚನೆಯೂ ಇರುವುದಿಲ್ಲವು.

ದೋಷಾ ಗತಾ ವಿವಿಧವಾಕ್ಯಪದೈ ರಸಾಲೈ
ರನ್ಯೋಽನ್ಯಭಾಷಣಪದೈರಮೃತೋಪಮೈಶ್ಚ ।
ಪ್ರಾತರ್ನೃಪಾಃ ಸಮಧಿಗಮ್ಯ ಕೃತಂ ವಿವಾಹಂ
ರೋಷಾನ್ವಿತಾ ನಗರಬಾಹ್ಯಗತಾಸ್ತಥೋಚುಃ ॥೩೫॥

ಹೀಗೆ ಅನೇಕಬಗೆಯ ವಾಕ್ಯಗಳೂ, ಪದಗಳೂ ಇವುಗಳುಳ್ಳ. ಮಾವಿನಹಣ್ಣಿನಂತೆ ಸವಿಯಾದ, ಪರಸ್ಪರವಾಗಿ ಅವರು ಹೇಳುತ್ತಿದ್ದ ಮಾತುಗಳಿಂದ ಕೂಡಿದ ಸಲ್ಲಾಪಗಳಿಂದ ರಾತ್ರಿಯು ಕಳೆದುಹೋಯಿತು. ಅತ್ತಲಾಗಿ ಬೆಳಗ್ಗೆ ಎದ್ದ ಮಹಾರಾಜರು, ವಿವಾಹವು ನಡೆದ ಸಮಾಚಾರವನ್ನು ಕೇಳಿ, ಕೋಪದಿಂದ ಕೂಡಿ. ನಗರದ ಹೊರಕ್ಕೆ ಬಂದು ಈರೀತಿಯಲ್ಲಿ ಹೇಳಿದರು.

ಅದ್ಯೈವ ತಂ ನೃಪಕಲಂಕಧರಂ ಚ ಹತ್ವಾ
ಬಾಲಂ ತಥೈವ ಕಿಲ ತಂ ನ ವಿವಾಹಯೋಗ್ಯಂ ।
ಗೃಹ್ಣೀಮ ತಾಂ ಶಶಿಕಲಾಂ ನೃಪತೇಶ್ಚ ಲಕ್ಷ್ಮೀಂ
ಲಜ್ಜಾಮವಾಪ್ಯ ನಿಜಸದ್ಮ ಕಥಂ ವ್ರಜೇಮ ॥೩೬॥

ಓ ರಾಜರೇ, ಈ ದಿನವೇ ರಾಜರಿಗೆ ಕಲಂಕದಂತಿರುವ ನಡತೆಯುಳ್ಳ ಈ ಸುಬಾಹುರಾಜನನ್ನೂ ಈ ಮದುವೆಗೆ ಅಯೋಗ್ಯನಾದ ಸುದರ್ಶನನನ್ನೂ ಕೊಂದು ಶಶಿಕಲೆಯನ್ನೂ, ಈ ರಾಜನ ಐಶ್ವರ್ಯವನ್ನೂ ತೆಗೆದುಕೊಳ್ಳೋಣ. ಇಲ್ಲದಿದ್ದಲ್ಲಿ ಅವಮಾನವನ್ನು ಹೊಂದಿ ನಾವು ನಮ್ಮ ಊರುಗಳಿಗೆ ಹಿಂತಿರುಗಿ ಹೋಗುವುದು ಹೇಗೆ ಉಚಿತವಾದೀತು ?

ಶೃಣ್ವಂತು ತೂರ್ಯನಿನದಾನ್ ಕಿಲ ವಾದ್ಯಮಾನಾನ್
ಶಂಖಸ್ವನಾನಭಿಭವಂತಿ ಮೃದಂಗಶಬ್ದಾಃ ।
ಗೀತಧ್ವನಿಂ ಚ ವಿವಿಧಂ ನಿಗಮಸ್ವನಂ ಚ
ಮನ್ಯಾಮಹೇ ನೃಪತಿನಾತ್ರ ಕೃತೋ ವಿವಾಹಃ ॥೩೭॥

ಮೆತ್ತಗಿದ್ದರೂ ಮೃದಂಗಶಬ್ದವು ಸಂಖ್ಯೆಯಿಂದ ಹೆಚ್ಚಾಗಿರುವುದರಿಂದ ಗಟ್ಟಿಯಾದ ಶಂಖಧ್ವನಿಯನ್ನೂ ಮುಚ್ಚುತ್ತಿದೆ. ನಾನಾಬಗೆಯ ಮಂಗಳಗೀತೆಗಳ, ವೇದಮಂತ್ರಗಳ, ಧ್ವನಿಗಳನ್ನೂ ವಾದ್ಯಗಳ ಶಬ್ದಗಳನ್ನೂ ಕೇಳಿರಿ. ಇದರಿಂದ ನಾವು, ರಾಜನಿಂದ ವಿವಾಹವು ನೆರವೇರಿಸಲ್ಪಟ್ಟಿತೆಂದು ತಿಳಿಯುತ್ತೇವೆ.

ಅಸ್ಮಾನ್ಪ್ರತಾರ್ಯ ವಚನೈರ್ವಿಧಿವಚ್ಚಕಾರ
ವೈವಾಹಿಕೇನ ವಿಧಿನಾ ಕರಪೀಡನಂ ವೈ ।
ಕರ್ತವ್ಯಮದ್ಯ ಕಿಮಹೋ ಪ್ರವಿಚಿಂತಯಂತು
ಭೂಪಾಃ ಪರಸ್ಪರಮತಿಂ ಚ ಸಮರ್ಥಯಂತು ॥೩೮॥

ಮತ್ತು ಈ ಸುಬಾಹುವು ನಮ್ಮನ್ನೆಲ್ಲಾ ಮಾತುಗಳಿಂದ ಮೋಸಗೊಳಿಸಿ ಶಾಸ್ತ್ರದಲ್ಲಿ ಹೇಳಿರುವ ನಿಯಮಾನುಸಾರವಾಗಿ ವಿವಾಹವನ್ನು ನೆರವೇರಿಸಿದನು. ಈಗ ರಾಜರೆಲ್ಲರೂ ಸೇರಿ ಪರಸ್ಪರವಾಗಿ ಅಭಿಪ್ರಾಯಗಳನ್ನು ವಿಮರ್ಶಿಸಿರಿ. ಅಲ್ಲದೆ ಈಗ ಮುಂದೆ ಏನು ಮಾಡುವುದೆಂಬುದನ್ನು ತೀರ್ಮಾನಿಸಿರಿ.

ಏವಂ ವದತ್ಸು ನೃಪತಿಷ್ವಥ ಕನ್ಯಕಾಯಾಃ
ಕೃತ್ವಾ ವಿವಾಹವಿಧಿಮಪ್ರತಿಮಪ್ರಭಾವಃ ।
ಭೂಪಾನ್ನಿಮಂತ್ರಯಿತುಮಾಶು ಜಗಾಮ ರಾಜಾ
ಕಾಶೀಪತಿಃ ಸ್ವಸುಹೃದೈಃ ಪ್ರಥಿತಪ್ರಭಾವೈಃ ॥೩೯॥

ಈರೀತಿಯಾಗಿ ರಾಜರು ಮಾತನಾಡಿಕೊಳ್ಳುತ್ತಿರಲು, ಅಸಾಧಾರಣಶಕ್ತಿಯುಳ್ಳ, ಪ್ರಸಿದ್ಧವಾದ ಸಾಮರ್ಥ್ಯವುಳ್ಳ ಆ ಕಾಶೀರಾಜನು ವಿವಾಹದ ಕಾರ್ಯವನ್ನು ಮುಗಿಸಿ ತನ್ನ ಸ್ನೇಹಿತರೊಡನೆ ಆ ರಾಜರನ್ನು ಕರೆಯಲು ಹೊರಟನು.

ಆಗಚ್ಛಂತಂ ಚ ತಂ ದೃಷ್ಟ್ವಾ ನೃಪಾಃ ಕಾಶೀಪತಿಂ ತದಾ ।
ನೋಚುಃ ಕಿಂಚಿದಪಿ ಕ್ರೋಧಾನ್ಮೌನಮಾಧಾಯ ಸಂಸ್ಥಿತಾಃ ॥೪೦॥

ಹೀಗೆ ಬರುತ್ತಿರುವ ಆ ಕಾಶೀರಾಜನನ್ನು ನೋಡಿ, ರಾಜರು ಕೋಪದಿಂದ ಕೂಡಿದವರಾಗಿ ಒಂದು ಮಾತನ್ನೂ ಆಡದೆ ಸುಮ್ಮನೆ ಇದ್ದರು.

**ಸ ಗತ್ವಾ ಪ್ರಣಿಪತ್ಯಾಹ ಕೃತಾಂಜಲಿರಭಾಷತ ।**
**ಆಗಂತವ್ಯಂ ನೃಪೈಃ ಸರ್ವೈರ್ಭೋಜನಾರ್ಥಂ ಗೃಹೇ ಮಮ ॥೪೧॥**

ಸುಬಾಹುರಾಜನು ಆಗ ಅವರಲ್ಲಿಗೆ ಹೋಗಿ ನಮಸ್ಕರಿಸಿ, ಕೈಮುಗಿದು ಕೊಂಡು, ಅವರನ್ನು ಕುರಿತು, ಎಲ್ಲಾ ರಾಜರೂ ಭೋಜನಕ್ಕಾಗಿ ನನ್ನ ಮನೆಗೆ ದಯವಿಟ್ಟು ಬರಬೇಕೆಂದು ಪ್ರಾರ್ಥಿಸಿ ಹೇಳಿದನು.

**ಕನ್ಯಯಾsಸೌ ವೃತೋ ಭೂಪಃ ಕಿಂ ಕರೋಮಿ ಹಿತಾಹಿತಂ ।**
**ಭವದ್ಭಿಸ್ತು ಶಮಃ ಕಾರ್ಯೋ ಮಹಾಂತೋ ಹಿ ದಯಾಲವಃ ॥೪೨॥**

ಓ ರಾಜರೇ, ನನ್ನ ಮಗಳು ಈ ಸುದರ್ಶನರಾಜನನ್ನು ವರಿಸಿ ಮದುವೆ ಯಾದಳು. ಈ ವಿಷಯದಲ್ಲಿ ಒಳ್ಳೆಯದು ಕೆಟ್ಟದ್ದೆಂಬುದನ್ನು ಏನನ್ನು ತಾನೇ ನಾನು ಮಾಡಬಲ್ಲೆನು ? ತಾವುಗಳೆಲ್ಲರೂ ದಯವಿಟ್ಟು ಕೃಪೆಮಾಡಿ ಸಮಾಧಾನ ವನ್ನು ಹೊಂದಬೇಕು. ಮಹಾತ್ಮರಾದವರು ಮನ್ನಿಸುವಷ್ಟು ಕೃಪಾಶಾಲಿಗಳಾಗಿರು ತ್ತಾರಲ್ಲವೇ ?

**ತನ್ನಿಶಮ್ಯ ವಚಸ್ತಸ್ಯ ನೃಪಾಃ ಕ್ರೋಧಪರಿಪ್ಲುತಾಃ ।**
**ಪ್ರತ್ಯೂಚುರ್ಭುಕ್ತಮಸ್ಮಾಭಿಃ ಸ್ವಗೃಹಂ ನೃಪತೇ ವ್ರಜ ॥೪೩॥**

ಉಕ್ಕಿಬರುತ್ತಿರುವ ಕೋಪವುಳ್ಳವರಾದ ಆ ರಾಜರು ಅವನ ಮಾತನ್ನು ಕೇಳಿ—ನಾವೆಲ್ಲರೂ ಊಟಮಾಡಿರುತ್ತೇವೆ. ಓ ದೊರೆಯೇ, ನೀನು ನಿನ್ನ ಮನೆಗೆ ಹೋಗು ಎಂದು ಉತ್ತರವನ್ನು ಕೊಟ್ಟರು.

**ಕುರು ಕಾರ್ಯಾಣ್ಯಶೇಷಾಣಿ ಯಥೇಷ್ಟಂ ಸುಕೃತಂ ಕೃತಂ ।**
**ನೃಪಾಃ ಸರ್ವೇ ಪ್ರಯಾಂತ್ವದ್ಯ ಸ್ವಾನಿ ಸ್ವಾನಿ ಗೃಹಾಣಿ ವೈ ॥೪೪॥**

ರಾಜನೇ, ನಿನ್ನ ಎಲ್ಲಾ ಕೆಲಸಗಳನ್ನೂ ನಿನ್ನ ಇಷ್ಟಬಂದಂತೆ ಮಾಡು. ನೀನು ಒಳ್ಳೆಯ ಕೆಲಸವನ್ನೇ ಮಾಡಿದೆ! ಎಂದು ಹೇಳಿ, ಎಲ್ಲಾ ರಾಜರೂ ತಮ್ಮ ತಮ್ಮ

ವಾಸಸ್ಥಾನಗಳಿಗೆ ಈಗ ಹೋಗುವವರಾಗಿರಿ ಎಂದು ರಾಜರು ಪರಸ್ಪರವಾಗಿ ಹೇಳಿದರು.

**ಸುಬಾಹುರಪಿ ತಚ್ಛ್ರುತ್ವಾ ಜಗಾಮ ಶಂಕಿತೋ ಗೃಹಂ ।**
**ಕಿಂ ಕರಿಷ್ಯಂತಿ ಸಂವಿಗ್ನಾಃ ಕ್ರೋಧಯುಕ್ತಾ ನೃಪೋತ್ತಮಾಃ ॥೪೫॥**

ಈ ಮಾತನ್ನು ಸುಬಾಹುವು ಕೇಳಿ, ಕೋಪಗೊಂಡ ರಾಜರು ಈಗ ಏನನ್ನು ಮಾಡುವರೋ ಕಾಣೆನಲ್ಲಾ ಎಂದು ಸಂದೇಹದಿಂದ ಕೂಡಿದ ಮನಸ್ಸುಳ್ಳವನಾಗಿ ಮನೆಗೆ ಹಿಂತಿರುಗಿದನು.

**ಗತೇ ತಸ್ಮಿನ್ಮಹೀಪಾಲಾಶ್ಚಕ್ರುಶ್ಚ ಸಮಯಂ ಪುನಃ ।**
**ರುದ್ಧ್ವಾ ಮಾರ್ಗಂ ಗ್ರಹೀಷ್ಯಾಮಃ ಕನ್ಯಾಂ ಹತ್ವಾ ಸುದರ್ಶನಂ ॥೪೬॥**

ಅವನು ಹೋದಮೇಲೆ, ಎಲ್ಲಾ ರಾಜರೂ ಸಂಕೇತಮಾಡಿಕೊಂಡು ಪುನಃ ಸೇರಿದರು. ಈಗ ನಾವು ಅವರನ್ನು ದಾರಿಯಲ್ಲಿ ಅಡ್ಡಗಟ್ಟಿ ಸುದರ್ಶನನನ್ನು ಕೊಂದು ಕನ್ಯೆಯನ್ನು ಸೆರೆ ಹಿಡಿಯೋಣ ಎಂದು ಕೆಲವರು ಹೇಳಿದರು.

**ಕೇಚನೋಚುಃ ಕಿಮಸ್ಮಾಕಂ ಹಂತ ತೇನ ನೃಪೇಣ ವೈ ।**
**ದೃಷ್ಟ್ವಾ ತು ಕೌತುಕಂ ಸರ್ವಂ ಗಮಿಷ್ಯಾಮೋ ಯಥಾಗತಂ ॥೪೭॥**

ಆದರೂ ಉದಾಸೀನರಾದ ಮತ್ತೆ ಕೆಲವರು ಹೀಗೆ ಹೇಳಿದರು. ಅಯ್ಯೋ ಪಾಪ! ಅವರನ್ನೆಲ್ಲಾ ಕಟ್ಟಿಕೊಂಡು ನಮಗೇನು? ನಡೆಯುತ್ತಿರುವ ಆಶ್ಚರ್ಯವನ್ನು ನೋಡಿ ಮದುವೆಯ ಮಂಗಳಕಾರ್ಯವನ್ನೂ ನೋಡಿಕೊಂಡು ಬಂದಹಾಗೆಯೇ ಹಿಂತಿರುಗಿ ಹೊರಟುಹೋಗೋಣ.

**ಇತ್ಯುಕ್ತ್ವಾ ತೇ ನೃಪಾಃ ಸರ್ವೇ ಮಾರ್ಗಮಾಕ್ರಮ್ಯ ಸಂಸ್ಥಿತಾಃ ।**
**ಚಕಾರೋತ್ತರಕಾರ್ಯಾಣಿ ಸುಬಾಹುಃ ಸ್ವಗೃಹಂ ಗತಃ ॥೪೮॥**

ಈರೀತಿಯಾಗಿ ಮಾತನಾಡಿಕೊಂಡು ಆ ರಾಜರು ದಾರಿಯನ್ನು ಆಕ್ರಮಿಸಿ ಸುತ್ತುಕಟ್ಟಿಕೊಂಡು ಸಮಯವನ್ನು ಕಾಯುತ್ತಿದ್ದರು. ಮನೆಗೆ ಹೋದ ಸುಬಾ

ಹುವು ಮಗಳ ಮತ್ತು ಅಳಿಯನ ಪ್ರಯಾಣಸಂಬಂಧವಾದ ಮುಂದಿನ ಮಂಗಳ ಕಾರ್ಯಕ್ಕೆ ಬೇಕಾದ ಕೆಲಸಗಳನ್ನು ಮಾಡಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ದ್ವಾವಿಂಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ತೃತೀಯಸ್ಕಂಧೇ

|| ತ್ರಯೋವಿಂಶೋಽಧ್ಯಾಯಃ ||

### ಇಪ್ಪತ್ತಮೂರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತಸ್ಮೈ ಗೌರವಭೋಜ್ಯಾನಿ ವಿಧಾಯ ವಿಧಿವತ್ತದಾ ।**
**ವಾಸರಾಣಿ ಚ ಷಡ್ರಾಜಾ ಭೋಜಯಾಮಾಸ ಭಕ್ತಿತಃ ॥೧॥**

ವ್ಯಾಸಮುನಿಯು ಹೇಳಿದನು—ಆ ಸುಬಾಹುರಾಜನು ಬಹಳ ಮರ್ಯಾದೆಯಿಂದಲೂ, ಭಕ್ತಿಯಿಂದಲೂ ಕೂಡಿ, ಅಳಿಯನಿಗೆ ಸದಾಚಾರವನ್ನು ಅನುಸರಿಸಿ ಆರು ದಿನಗಳು ಭಕ್ಷ್ಯಭೋಜ್ಯಾದಿಗಳಿಂದ ಕೂಡಿದ ಔತನವನ್ನು ಮಾಡಿದನು.

**ಏವಂ ವಿವಾಹಕಾರ್ಯಾಣಿ ಕೃತ್ವಾ ಸರ್ವಾಣಿ ಪಾರ್ಥಿವಃ ।**
**ಪಾರಿಬರ್ಹಂ ಪ್ರದತ್ವಾಥ ಮಂತ್ರಯನ್ಸಚಿವೈಃ ಸಹ ॥೨॥**

**ದೂತೈಸ್ತು ಕಥಿತಂ ಶ್ರುತ್ವಾ ಮಾರ್ಗಸಂರೋಧನಂ ಕೃತಂ ।**
**ಬಭೂವ ವಿಮನಾ ರಾಜಾ ಸುಬಾಹುರಮಿತದ್ಯುತಿಃ ॥೩॥**

ಹೀಗೆ ವಿವಾಹಕಾರ್ಯವನ್ನು ಸಾಂಗವಾಗಿ ನೆರವೇರಿಸಿ, ಬಳುವಳಿಯನ್ನೂ ಕೊಟ್ಟು ಅಪಾರವಾದ ಕೌಶಲದ ಕಾಂತಿಯುಳ್ಳ ಆ ಪ್ರತಿಭಾವಂತನಾದ ಸುಬಾಹು ರಾಜನು, ಅವರ ಪ್ರಯಾಣಕ್ಕೆ ಸಿದ್ಧಪಡಿಸಿ ಮಂತ್ರಿಗಳೊಡನೆ ಆಲೋಚಿಸುತ್ತಿದ್ದಾಗ ದೂತರಿಂದ, ಮಾರ್ಗವನ್ನು ರಾಜರು ಆಕ್ರಮಿಸಿ ಕಾಯುತ್ತಿದ್ದಾರೆಂಬ ವರ್ತಮಾನವನ್ನು ಕೇಳಿ ಬಹಳವಾಗಿ ವ್ಯಾಕುಲಗೊಂಡವನಾದನು.

**ಸುದರ್ಶನಸ್ತದೋವಾಚ ಶ್ವಶುರಂ ಸಂಶಿತವ್ರತಃ ।**
**ಅಸ್ಮಾನ್ವಿಸರ್ಜಯಾಶು ತ್ವಂ ಗಮಿಷ್ಯಾಮೋ ಹ್ಯಶಂಕಿತಾಃ ॥೪॥**

ಆಗ ನಿಯಮಾಚರಣೆಯಲ್ಲಿ ಆದರವುಳ್ಳ ಆ ಸುದರ್ಶನನು ಮಾವನನ್ನು ಕುರಿತು ಹೇಳಿದನು. ಬೇಗನೆ ನಮ್ಮನ್ನು ಕಳುಹಿಸಿಕೊಡು. ನಾವು ಸಂದೇಹಪಡದೆ ನಿರಾತಂಕವಾಗಿ ಹೊರಟು ಪ್ರಯಾಣಮಾಡುವೆವು.

**ಭಾರದ್ವಾಜಾಶ್ರಮಂ ಪುಣ್ಯಂ ಗತ್ವಾ ತತ್ರ ಸಮಾಹಿತಾಃ ।**
**ನಿವಾಸಾಯ ವಿಚಾರೋ ವೈ ಕರ್ತವ್ಯಃ ಸರ್ವಥಾ ನೃಪ ॥೫॥**

ಭರದ್ವಾಜಮುನಿಯ ಆಜ್ಞೆಯಂತೆ ನಾವು ಇಲ್ಲಿಗೆ ಬಂದೆವು. ಈಗಲೂ ಅಲ್ಲಿಗೇ ಹೋಗುತ್ತೇವೆ. ನಮ್ಮನ್ನು ಕಳುಹಿಸಿಕೊಡು. ಅಲ್ಲಿಗೆ ಹೋಗಿ ತಲುಪಿದ ಅನಂತರ ಎಲ್ಲಾ ದೃಷ್ಟಿಯಿಂದಲೂ ಆಲೋಚಿಸಿ ಮುಂದೆ ನಮ್ಮ ವಾಸಸ್ಥಾನವನ್ನು ಕುರಿತು ನಿರ್ಣಯಿಸಬೇಕಾಗಿದೆ.

**ನೃಪೇಭ್ಯಶ್ಚ ನ ಕರ್ತವ್ಯಂ ಭಯಂ ಕಿಂಚಿತ್ತ್ವಯಾಽನಘ ।**
**ಜಗನ್ಮಾತಾ ಭವಾನೀ ಮೇ ಸಾಹಾಯ್ಯಂ ವೈ ಕರಿಷ್ಯತಿ ॥೬॥**

ನಿರ್ದೋಷಿಯಾದ ಓ ಮಾವನೇ, ಹೊರಗೆ ಕಾದಿರುವ ಆ ರಾಜರು ನಮಗೆ ಕೆಡಕನ್ನುಂಟುಮಾಡುವರೆಂದು ನೀನು ಹೆದರದಿರು. ಜಗನ್ಮಾತೆಯಾದ ಆದಿಶಕ್ತಿಯು ನಮಗೆ ಸಹಾಯವನ್ನು ಮಾಡುವಳು.

॥ ವ್ಯಾಸ ಉವಾಚ ॥

**ತಸ್ಯೇತಿ ಮತಮಾಜ್ಞಾಯ ಜಾಮಾತುರ್ನೃಪಸತ್ತಮಃ ।**
**ವಿಸಸರ್ಜ ಧನಂ ದತ್ವಾ ಪ್ರತಸ್ಥೇ ಸೋಽಪಿ ಸತ್ವರಃ ॥೭॥**

ವ್ಯಾಸಮುನಿಯು ಹೇಳಿದನು—ರಾಜನು ತನ್ನ ಅಳಿಯನ ಅಭಿಪ್ರಾಯವನ್ನು ತಿಳಿದವನಾಗಿ ಅವನಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಕಳುಹಿಸಿದನು. ಜೊತೆಯಲ್ಲಿ ಅವನೂ ಜಾಗ್ರತೆಯಾಗಿ ಅಲ್ಲಿಂದ ಹೊರಟನು.

**ಬಲೇನ ಮಹತಾವಿಷ್ಟೋ ಯಯಾವನು ನೃಪೋತ್ತಮಃ ।**
**ಸುದರ್ಶನೋ ವೃತಸ್ತತ್ರ ಚಚಾಲ ಪಥಿ ನಿರ್ಭಯಃ ॥೮॥**

ಬಹಳ ಸೈನ್ಯದಿಂದ ಕೂಡಿದವನಾಗಿ ಸುಬಾಹುವೂ ತನ್ನ ಅಳಿಯನಿಗೆ ಬೆಂಬಲವಾಗಿ ಅನುಸರಿಸಿ ನಡೆದನು. ಮದುವೆ ಮಾಡಿಕೊಂಡ ಆ ಸುದರ್ಶನನು ನಿರ್ಭಯನಾಗಿ ದಾರಿಯಲ್ಲಿ ಹೊರಟನು.

**ರಥೈಃ ಪರಿವೃತಃ ಶೂರಃ ಸದಾರೋ ರಥಸಂಸ್ಥಿತಃ ।**
**ಗಚ್ಛನ್ ದದರ್ಶ ಸೈನ್ಯಾನಿ ನೃಪಾಣಾಂ ರಘುನಂದನಃ ॥೯॥**

ಹೆಂಡತಿಯೊಡನೆ ರಥದಲ್ಲಿ ಕುಳಿತುಕೊಂಡು ರಥಗಳಿಂದಲೂ ಸೈನಿಕರಿಂದಲೂ ಕೂಡಿದವನಾಗಿ ಹೋಗುತ್ತಾ ಇದ್ದ ಪರಾಕ್ರಮಶಾಲಿಯಾದ ರಘುವಿನ ವಂಶದಲ್ಲಿ ಹುಟ್ಟಿದ್ದ ಆ ಸುದರ್ಶನನು ಆ ರಾಜರ ಸೈನ್ಯಗಳನ್ನು ನೋಡಿದನು.

**ಸುಬಾಹುರಪಿ ತಾನ್ವೀಕ್ಷ್ಯ ಚಿಂತಾವಿಷ್ಟೋ ಬಭೂವ ಹ ।**
**ವಿಧಿವತ್ಸ ಶಿವಾಂ ಚಿತ್ತೇ ಜಗಾಮ ಶರಣಂ ಮುದಾ ॥೧೦॥**

ಸುಬಾಹುರಾಜನೂ ಆ ಸೈನ್ಯವನ್ನು ನೋಡಿ ಬಹಳವಾಗಿ ಚಿಂತೆಗೆ ಒಳಗಾದನು. ಆದರೆ ಸುದರ್ಶನನು ಸಂತೋಷದಿಂದ ವಿಧಿಪೂರ್ವಕವಾಗಿ ಭವಾನಿಯ ಮಂತ್ರವನ್ನು ಜಪಿಸುತ್ತಾ ಆ ತಾಯಿಯನ್ನು ಮರೆಹೊಕ್ಕನು.

**ಜಜಾಪೈಕಾಕ್ಷರಂ ಮಂತ್ರಂ ಕಾಮರಾಜಮನುತ್ತಮಂ ।**
**ನಿರ್ಭಯೋ ವೀತಶೋಕಶ್ಚ ಪತ್ನ್ಯಾ ಸಹ ನವೋಢಯಾ ॥೧೧॥**

ಹೊಸದಾಗಿ ಮದುವೆ ಮಾಡಿಕೊಂಡ ಹೆಂಡತಿಯೊಡನೆ ನಿರ್ಭಯನಾಗಿ ಶೋಕವನ್ನು ಬಿಟ್ಟು, ಇಷ್ಟಾರ್ಥವನ್ನು ಕೊಡುವುದರಲ್ಲಿ ಸರ್ವೋತ್ತಮವಾದ ಒಂದೇ ಅಕ್ಷರವುಳ್ಳ ಆ ಭವಾನೀಮಂತ್ರವನ್ನು ಜಪಿಸತೊಡಗಿದನು.

**ತತಃ ಸರ್ವೇ ಮಹೀಪಾಲಾಃ ಕೃತ್ವಾ ಕೋಲಾಹಲಂ ತದಾ ।**
**ಉತ್ಥಿತಾಃ ಸೈನ್ಯಸಂಯುಕ್ತಾ ಹರ್ತುಕಾಮಾಸ್ತು ಕನ್ಯಕಾಂ ॥೧೨॥**

ಆಮೇಲೆ ಎಲ್ಲ ರಾಜರೂ ಜಯಘೋಷದ ಕೋಲಾಹಲವನ್ನು ಮಾಡಿ ಎದ್ದು ಸೈನ್ಯದಿಂದ ಕೂಡಿ ಬಂದು ಆ ಹುಡುಗಿಯನ್ನು ಅಪಹರಿಸಲು ಮುಂದೆ ನುಗ್ಗಿದರು.

**ಕಾಶೀರಾಜಸ್ತು ತಾನ್ ದೃಷ್ಟ್ವಾ ಹಂತುಕಾಮೋ ಬಭೂವ ಹ।**
**ನಿವಾರಿತಸ್ತದಾತ್ಮರ್ಥಂ ರಾಘವೇಣ ಜಿಗೀಷತಾ ॥೧೩॥**

ಅದನ್ನು ನೋಡಿ ಕಾಶೀರಾಜನು ಅವರನ್ನು ಕೊಲ್ಲಲು ಮುಂದೆ ನುಗ್ಗಿದನು. ಆಗ ಗೆಲುವ ಇಚ್ಛೆಯಿಂದಿರುವ, ರಘುವಂಶದಲ್ಲಿ ಹುಟ್ಟಿದ, ಆ ಸುದರ್ಶನನು ಅವನನ್ನು ಬಹಳವಾಗಿ ತಡೆದನು.

**ತತ್ರಾಪಿ ನೇದುಃ ಶಂಖಾಶ್ಚ ಭೇರ್ಯಶ್ಚಾನಕದುಂದುಭಿಃ ।**
**ಸುಬಾಹೋಶ್ಚ ನೃಪಾಣಾಂ ಚ ಪರಸ್ಪರಜಿಘಾಂಸತಾಂ ॥೧೪॥**

ಪರಸ್ಪರರನ್ನು ಕೊಲ್ಲಲು ಇಚ್ಛೆಯಿಂದಿರುವ ಸುಬಾಹುವಿನ ಮತ್ತು ಆ ರಾಜರ ಶಂಖಗಳೂ, ಭೇರಿಗಳೂ, ತಮಟೆ ಮೊದಲಾದ ರಣವಾದ್ಯಗಳೂ ಮೊಳಗಿದುವು.

**ಶತ್ರುಜಿತ್ತು ಸುಸಂವೃತ್ತಃ ಸ್ಥಿತಸ್ತತ್ರ ಜಿಘಾಂಸಯಾ ।**
**ಯುಧಾಜಿತ್ತತ್ಸಹಾಯಾರ್ಥಂ ಸನ್ನದ್ಧಃ ಪ್ರಬಭೂವ ಹ ॥೧೫॥**

ಸುದರ್ಶನನನ್ನು ಕೊಲ್ಲಲು ಇಚ್ಛೆಯಿಂದ ಶತ್ರುಜಿತನು ಸೈನ್ಯದಿಂದ ಕೂಡಿ ಚನ್ನಾಗಿ ಸಿದ್ಧನಾದನು. ಯುಧಾಜಿತನೂ ಅವನ ಸಹಾಯಾರ್ಥವಾಗಿ ಸಿದ್ಧನಾಗಿ ಬೆಂಬಲವಾಗಿ ನಿಂತನು.

**ಕೇಚಿಚ್ಚ ಪ್ರೇಕ್ಷಕಾಸ್ತಸ್ಯ ಸಹಾನೀಕೈಃ ಸ್ಥಿತಾಸ್ತದಾ ।**
**ಯುಧಾಜಿದಗ್ರತೋ ಗತ್ವಾ ಸುದರ್ಶನಮುಪಸ್ಥಿತಃ ॥೧೬॥**

ಆ ರಾಜರಲ್ಲಿಯೇ ಕೆಲವರು ತಮ್ಮ ಸೈನ್ಯದಿಂದ ಕೂಡಿ ಆ ಯುದ್ಧವನ್ನು ಕುತೂಹಲದಿಂದ ನೋಡಲು ಸುಮ್ಮನೆ ನಿಂತರು. ಯುಧಾಜಿತನು ಮುಂದೆ ನುಗ್ಗಿ ಸುದರ್ಶನನಿಗೆ ಎದುರಾಗಿ ನಿಂತನು.

**ಶತ್ರುಜಿತ್ತೇನ ಸಹಿತೋ ಹಂತುಂ ಭ್ರಾತರಮಾನುಜಃ ।**
**ಪರಸ್ಪರಂ ತೇ ಬಾಣೌಘೈಸ್ತತಕ್ಷುಃ ಕ್ರೋಧಮೂರ್ಛಿತಾಃ ॥೧೭॥**

ಸುದರ್ಶನನ ತಮ್ಮನಾದ ಶತ್ರುಜಿತನಿಂದ ಕೂಡಿದವನಾಗಿ ಯುಧಾಜಿತನು ಶತ್ರುಜಿತನ ಅಣ್ಣನಾದ ಸುದರ್ಶನನನ್ನು ಕೊಲ್ಲಲು ಮುನ್ನುಗ್ಗಿದನು. ಅವರೆಲ್ಲರೂ

23

ಪರಸ್ಪರವಾಗಿ ಬಾಣಸಮೂಹಗಳಿಂದ ಹೊಡೆದಾಡಿದರು. ಮತ್ತು ಒಬ್ಬರನ್ನೊಬ್ಬರು ಗಾಯಪಡಿಸಿದರು.

**ಸಂಮರ್ದಃ ಸುಮಹಾಂಸ್ತತ್ರ ಸಂಪ್ರವೃತ್ತಃ ಸುಮಾರ್ಗಣೈಃ ।**
**ಕಾಶೀಪತಿಸ್ತದಾ ತೂರ್ಣಂ ಸೈನ್ಯೇನ ಬಹುನಾ ವೃತಃ ॥೧೮॥**
**ಸಾಹಾಯ್ಯಾರ್ಥಂ ಜಗಾಮಾಶು ಜಾಮಾತರಮನಿಂದಿತಂ ।**

ಬಾಣಗಳಿಂದ ಹೊಡೆದಾಟವು ಆಗ ಅಲ್ಲಿ ಅತಿಘೋರವಾಗಿ ನಡೆಯಿತು. ಆಗ ಕಾಶೀರಾಜನೂ ತನ್ನ ಅಸಂಖ್ಯ ಸೈನ್ಯದಿಂದ ಕೂಡಿ ಭಯಂಕರವಾದ ಬಾಣಗಳ ಹೊಡೆದಾಟವು ನಡೆಯುವ ಸ್ಥಳಕ್ಕೆ, ದೋಷರಹಿತನಾಗಿ ಶ್ಲಾಘಾರ್ಹನಾದ ತನ್ನ ಅಳಿಯನ ಸಹಾಯಕ್ಕಾಗಿ ಬೇಗನೆ ಬಂದು ಸೇರಿದನು.

**ಏವಂ ಪ್ರವೃತ್ತೇ ಸಂಗ್ರಾಮೇ ದಾರುಣೇ ಲೋಮಹರ್ಷಣೇ ॥೧೯॥**

**ಪ್ರಾದುರ್ಬಭೂವ ಸಹಸಾ ದೇವೀ ಸಿಂಹೋಪರಿಸ್ಥಿತಾ ।**
**ನಾನಾಯುಧಧರಾ ರಮ್ಯಾ ವರಭೂಷಣಭೂಷಿತಾ ॥೨೦॥**
**ದಿವ್ಯಾಂಬರಪರೀಧಾನಾ ಮಂದಾರಸ್ರಕ್ಸುಸಂಯುತಾ ।**

ಈ ಪ್ರಕಾರವಾಗಿ ಯುದ್ಧವು ಘೋರವಾದುದರಿಂದ ರೋಮಾಂಚವನ್ನುಂಟು ಮಾಡುತ್ತ ನಡೆಯುತ್ತಿರಲು, ಸಿಂಹವಾಹನವನ್ನು ಏರಿರುವ, ಅನೇಕವಿಧವಾದ ಆಯುಧಗಳನ್ನು ಧರಿಸಿರುವ, ತಕ್ಕ ಉತ್ತಮವಾದ ಆಭರಣಗಳಿಂದ ಅಲಂಕೃತಳಾಗಿ ರುವ, ಮನೋಹರಳಾದ, ಶ್ರೇಷ್ಠವಾದ ಪೀತಾಂಬರಗಳನ್ನು ಧರಿಸಿರುವ, ಮಂದಾರ ಪುಷ್ಪಗಳ ಹಾರವನ್ನು ಧರಿಸಿರುವ ದೇವಿಯು ಅಲ್ಲಿ ಜಾಗ್ರತೆಯಾಗಿ ಮೈದೋರಿದಳು.

**ತಾಂ ದೃಷ್ಟ್ವಾ ತೇಽಥ ಭೂಪಾಲಾ ವಿಸ್ಮಯಂ ಪರಮಂ ಗತಾಃ ॥೨೧॥**
**ಕೇಯಂ ಸಿಂಹಸಮಾರೂಢಾ ಕುತೋ ವೇತಿ ಸಮುತ್ಥಿತಾ ॥**

ಹೀಗೆ ಆವಿರ್ಭವಿಸಿದ ಆ ಭವಾನೀದೇವಿಯನ್ನು ಆ ರಾಜರು ನೋಡಿ, ಇವಳು ಯಾರು ? ಸಿಂಹವನ್ನು ಹತ್ತಿಕೊಂಡು ಎಲ್ಲಿಂದ ಬಂದಳು ? ಎಂದು ತಿಳಿಯಲಾರದೆ ಅತ್ಯಂತ ಆಶ್ಚರ್ಯವನ್ನೂ ದಿಗಿಲನ್ನೂ ಹೊಂದಿದರು.

**ಸುದರ್ಶನಸ್ತು ತಾಂ ವೀಕ್ಷ್ಯ ಸುಬಾಹುಮಿತಿ ಚಾಬ್ರವೀತ್ ॥೨೨॥**
**ಪಶ್ಯ ರಾಜನ್ಮಹಾದೇವೀಮಾಗತಾಂ ದಿವ್ಯದರ್ಶನಾಂ ।**

ಆಗ ಸುದರ್ಶನನು ಆ ದೇವಿಯನ್ನು ನೋಡಿ ಮಾವನಾದ ಸುಬಾಹುವನ್ನು ಕುರಿತು ಹೀಗೆ ಹೇಳಿದನು. ಓ ಮ್ಮಾವನಾದ ಮಹಾರಾಜನೇ, ನೋಡಲು ಮನೋಹರ ಳಾದ, ಇಲ್ಲಿಗೆ ಬಂದಿರುವ ಭವಾನೀದೇವಿಯನ್ನು ನೋಡು.

**ಅನುಗ್ರಹಾಯ ಮೇ ನೂನಂ ಪ್ರಾದುರ್ಭೂತಾ ದಯಾನ್ವಿತಾ ॥೨೩॥**
**ನಿರ್ಭಯೋಽಹಂ ಮಹಾರಾಜ ಜಾತೋಽಸ್ಮಿ ನಿರ್ಭಯಾದಪಿ ।**

ಎಲೈ ಮಹಾರಾಜನೇ, ಈ ದೇವಿಯು ಕೃಪೆಯುಳ್ಳವಳಾಗಿ ಅವತರಿಸಿ ನನಗೆ ಅನುಗ್ರಹವನ್ನು ಮಾಡಲು ಬಂದಿರುವಳು, ಇದು ನಿಶ್ಚಯವು. ಈಗ ನಾನು ನಿರ್ಭಯದ ಸ್ಥಿತಿಗಿಂತಲೂ ನಿರ್ಭಯನಾಗಿದ್ದೇನೆ, ಎಂದರೆ ನನಗೆ ಈಗ ಭಯವು ಸ್ವಲ್ಪವೂ ಇಲ್ಲವೆಂದು ತಾತ್ಪರ್ಯವು.

**ಸುದರ್ಶನಃ ಸುಬಾಹುಶ್ಚ ತಾಮಾಲೋಕ್ಯ ವರಾನನಾಂ ॥೨೪॥**
**ಪ್ರಣಾಮಂ ಚಕ್ರತುಸ್ತಸ್ಯಾ ಮುದಿತೌ ದರ್ಶನೇನ ಚ ।**

ಸುದರ್ಶನನೂ ಮತ್ತು ಸುಬಾಹುರಾಜನೂ, ನೋಡಲು ಮನೋಹರವಾದ ಮುಖವುಳ್ಳ ಆ ದೇವಿಯನ್ನು ಕಂಡು, ಅವಳ ದರ್ಶನದಿಂದ ತುಂಬ ಸಂತೋಷ ಗೊಂಡು ಆ ದೇವಿಗೆ ನಮುಸ್ಕಾರವನ್ನು ಮಾಡಿದರು.

**ನನಾದ ಚ ತಥಾ ಸಿಂಹೋ ಗಜಾಸ್ತ್ರಸ್ತಾಶ್ಚಕಂಪಿರೇ ॥೨೫॥**
**ವವುರ್ವಾತಾ ಮಹಾಘೋರಾ ದಿಶಶ್ಚಾಸನ್ ಸುದಾರುಣಾಃ ।**

ಆಗ ದೇವಿಯು ಏರಿದ್ದ ಸಿಂಹವು ಘೋರವಾಗಿ ಗರ್ಜಿಸಲು ಅಲ್ಲಿದ್ದ ಆನೆ ಗಳೆಲ್ಲವೂ ಭಯದಿಂದ ನಡುಗಿದುವು. ಮತ್ತು ಆಗ ಭಯಂಕರವಾದ ಚಂಡ ಮಾರುತಗಳು ಬೀಸಿದುವು. ದಿಕ್ಕುಗಳೆಲ್ಲವೂ ದಿಗಿಲನ್ನುಂಟುಮಾಡುವಂತೆ ಘೋರ ವಾಗಿ ಕಂಡುಬಂದುವು.

**ಸುದರ್ಶನಸ್ತದಾ ಪ್ರಾಹ ನಿಜಂ ಸೇನಾಪತಿಂ ಪ್ರತಿ ॥೨೬॥**

**ಮಾರ್ಗೇ ವ್ರಜ ತ್ವಂ ತರಸಾ ಭೂಪಾಲಾ ಯತ್ರ ಸಂಸ್ಥಿತಾಃ ।**
**ಕಿಂ ಕರಿಷ್ಯಂತಿ ರಾಜಾನಃ ಕುಪಿತಾ ದುಷ್ಟಚೇತಸಃ ॥೨೭॥**

ಆಗ ಸುದರ್ಶನನು ತನ್ನ ಸೇನಾಪತಿಯನ್ನು ಕುರಿತು ಹೀಗೆ ಹೇಳಿದನು. ರಾಜರೆಲ್ಲ ಎಲ್ಲಿ ಸೇರಿರುವರೋ ಅಲ್ಲಿಗೆ ನೀನು ಬೇಗನೆ ಹೋಗು. ದುರಾತ್ಮರಾದ ಕೋಪಗೊಂಡ ಆ ರಾಜರು ಏನನ್ನು ತಾನೇ ಮಾಡಬಲ್ಲರು ?

**ಶರಣಾರ್ಥಂ ಚ ಸಂಪ್ರಾಪ್ತಾ ದೇವೀ ಭಗವತೀ ಹಿ ನಃ ।**
**ನಿರಾತಂಕೈಶ್ಚ ಗಂತವ್ಯಂ ಮಾರ್ಗೇಽಸ್ಮಿನ್ ಭೂಪಸಂಕುಲೇ ॥೨೮॥**
**ಸ್ಮೃತಾ ಮಯಾ ಮಹಾದೇವೀ ರಕ್ಷಣಾರ್ಥಮುಪಾಗತಾ ।**

ಏಕೆಂದರೆ, ನಮ್ಮನ್ನು ಕಾಪಾಡಲು ಮಹಾಮಹಿಮಳಾದ ದೇವಿಯು ಬಂದಿರುವಳು. ನೀವು ಈ ದಾರಿಯಲ್ಲಿ ರಾಜರು ತುಂಬಿಕೊಂಡಿದ್ದರೂ ಸ್ವಲ್ಪವೂ ಹೆದರದೆ ಮುಂದೆ ನಡೆಯಿರಿ. ನನ್ನಿಂದ ಸ್ಮರಿಸಲ್ಪಟ್ಟ ದೇವತೆಗಳಲ್ಲೆಲ್ಲಾ ದೊಡ್ಡವಳಾದ ಆ ತಾಯಿಯು ನಮ್ಮನ್ನು ಕಾಪಾಡಲು ದಯಮಾಡಿ ಬಂದಿರುವಳು.

**ತಚ್ಛ್ರುತ್ವಾ ವಚನಂ ಸೇನಾಪತಿಸ್ತೇನ ಪಥಾವ್ರಜತ್ ॥೨೯॥**

ಆ ಮಾತನ್ನು ಕೇಳಿ ಸುದರ್ಶನನ ಸೇನಾಪತಿಯು, ಆ ರಾಜರು ಸೇರಿರುವ ಮಾರ್ಗದಲ್ಲಿ ಮುಂದೆ ನುಗ್ಗಿದನು.

**ಯುಧಾಜಿತ್ತು ಸುಸಂಕ್ರುದ್ಧಸ್ತಾನುವಾಚ ಮಹೀಪತೀನ್ ।**
**ಕಿಂ ಸ್ಥಿತಾ ಭಯಸಂತ್ರಸ್ತಾ ನಿಘ್ನಂತು ಕನ್ಯಕಾನ್ವಿತಂ ॥೩೦॥**

ಆಗ ಯುಧಾಜಿತನು ಬಹಳ ಕೋಪಗೊಂಡವನಾಗಿ ಆ ರಾಜರನ್ನು ಕುರಿತು ಹೀಗೆ ಹೇಳಿದನು. ಓ ರಾಜರೇ, ಭಯದಿಂದ ನಡುಗುತ್ತಾ ಸುಮ್ಮನೆ ಏಕೆ ನಿಂತಿರುವಿರಿ? ಹುಡುಗಿಯೊಡನೆ ಕೂಡಿ ಬರುತ್ತಿರುವ ಆ ಸುದರ್ಶನನನ್ನು ಹೊಡೆಯಿರಿ.

**ಅವಮಾನ್ಯ ಚ ನಃ ಸರ್ವಾನ್ಸ್ವಲಹೀನೋ ಬಲಾಧಿಕಾನ್ ।**
**ಕನ್ಯಾಂ ಗೃಹೀತ್ವಾ ಸಂಯಾತಿ ನಿರ್ಭಯಸ್ತರಸಾ ಶಿಶುಃ ॥೩೧॥**

ಬಲಹೀನನಾಗಿಯೂ, ಹುಡುಗನಾಗಿಯೂ ಇರುವ ಈ ಸುದರ್ಶನನು ಮಹಾ ಬಲಶಾಲಿಗಳಾದ ನಮ್ಮೆಲ್ಲರನ್ನೂ ಅವಮಾನಪಡಿಸಿ, ಹುಡುಗಿಯನ್ನು ಏನೊಂದೂ ಭಯವಿಲ್ಲದೆ ಕರೆದುಕೊಂಡು ಜಾಗ್ರತೆಯಾಗಿ ಹೋಗುತ್ತಿರುವನು.

**ಕಿಂ ಭೀತಾಃ ಕಾಮಿನೀಂ ವೀಕ್ಷ್ಯ ಸಿಂಹೋಪರಿ ಸುಸಂಸ್ಥಿತಾಂ ।**
**ನೋಪೇಕ್ಷ್ಯೋ ಹಿ ಮಹಾಭಾಗಾ ಹಂತವ್ಯೋಽತ್ರ ಸಮಾಹಿತೈಃ ॥೩೨॥**

ಸಿಂಹದಮೇಲೆ ಏರಿ ಚನ್ನಾಗಿ ಕುಳಿತಿರುವ ಸ್ತ್ರೀಯನ್ನು ನೋಡಿ ಹೆದರಿ ಕೊಂಡಿರೇನು ? ಓ ಪರಾಕ್ರಮಶಾಲಿಗಳಾದ ರಾಜರೇ, ಇವಳನ್ನು ಉಪೇಕ್ಷೆಮಾಡಿ ಇಲ್ಲಿ ಕೂಡಿರುವವರೆಲ್ಲರೂ ಸಮಾಧಾನದಿಂದ ಒಟ್ಟಾಗಿ ಈ ಸುದರ್ಶನನನ್ನು ಸಂಹಾರ ಮಾಡಬೇಕು.

**ಹತ್ವೈನಂ ಸಂಗ್ರಹೀಷ್ಯಾಮಃ ಕನ್ಯಾಂ ಚಾರುವಿಭೂಷಣಾಂ ।**
**ನಾಯಂ ಕೇಸರಿಣಾಽಽದತ್ತಾಂ ಭೇತ್ತುಮರ್ಹತಿ ಜಂಬುಕಃ ॥೩೩॥**

ಹಾಗೆ ಇವನನ್ನು ಕೊಂದು ಚನ್ನಾಗಿ ಅಲಂಕೃತಳಾದ ಈ ಕನ್ಯೆಯನ್ನು ನಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳುವೆವು. ಈ ನರಿಯಂತಿರುವ ಸುದರ್ಶನನು ಸಿಂಹಗಳಿಂತಿರುವ ನಮ್ಮ ಕೈಗೆ ಸಿಕ್ಕಿದುದನ್ನು ಅಪಹರಿಸಲು ಸಾಮರ್ಥ್ಯವುಳ್ಳವ ನಾಗಲಾರನು.

**ಇತ್ಯುಕ್ತ್ವಾ ಸೈನ್ಯಸಂಯುಕ್ತಃ ಶತ್ರುಜಿತ್ಸಹಿತಸ್ತದಾ ।**
**ಯೋದ್ಧುಕಾಮಃ ಸುಸಂಪ್ರಾಪ್ತೋ ಯುಧಾಜಿತ್ಕ್ರೋಧಸಂವೃತಃ ॥೩೪॥**

ಹೀಗೆ ಹೇಳಿ ಸೈನ್ಯದಿಂದಲೂ, ಶತ್ರುಜಿತನ ಸಹಾಯದಿಂದಲೂ ಕೂಡಿ ದವನಾದ ಯುಧಾಜಿತನು ಕೋಪಗೊಂಡವನಾಗಿ ಯುದ್ಧಮಾಡಲು ಮುಂದೆ ಬಂದನು.

**ಮುಮೋಚ ವಿಶಿಖಾಂಸ್ತೂರ್ಣಂ ಸಮಪುಂಖಾಞ್ಶಿಲಾಶಿತಾನ್ ।**
**ಧನುರಾಕೃಷ್ಯ ಕರ್ಣಾಂತಂ ಕರ್ಮಾರಪರಿಮಾರ್ಜಿತಾನ್ ॥೩೫॥**
**ಹಂತುಕಾಮಃ ಸುದುರ್ಮೇಧಾಃ ಸುದರ್ಶನಮಥೋಪರಿ ।**

ದುಷ್ಟವಾದ ಉದ್ದೇಶದಿಂದ ಕೆಟ್ಟಿರುವ ಮೆದುಳಿನಿಂದ ಕೂಡಿರುವ ಯುಧಾಜಿತನು ಸುದರ್ಶನನನ್ನು ಕೊಲ್ಲಲು ಅವನ ಮೇಲೆ ಜಾಗ್ರತೆಯಾಗಿ ಕಲ್ಲಿನಂತೆ ಘಟ್ಟಿಯೂ, ತೀಕ್ಷ್ಣವೂ ಆದ ಮತ್ತು ಲೋಹದಿಂದ ಮಾಡಿದ ಚೂಪಾದ ಬಾಣಗಳನ್ನು ಧನುಸ್ಸಿನ ಹೆದೆಯಲ್ಲಿ ಏರಿಸಿ ಕಿವಿಯವರಿಗೂ ಎಳೆದು ಬಿಟ್ಟನು.

**ಸುದರ್ಶನಸ್ತು ತಾನ್ಬಾಣೈಶ್ಚಿಚ್ಛೇದಾಪತತಃ ಕ್ಷಣಾತ್ ॥೩೬॥**

ಸುದರ್ಶನನು ಆ ಬಾಣಗಳನ್ನೆಲ್ಲಾ ಬರುತ್ತಿರುವಾಗಲೇ ಒಂದು ಕ್ಷಣದಲ್ಲಿಯೇ ತನ್ನ ಎದುರುಬಾಣಗಳಿಂದ ಕಡಿದುಹಾಕಿದನು.

**ಏವಂ ಯುದ್ಧೇ ಪ್ರವೃತ್ತೇಽಥ ಚುಕೋಪ ಚಂಡಿಕಾ ಭೃಶಂ ।**
**ದುರ್ಗಾದೇವೀ ಮುಮೋಚಾಥ ಬಾಣಾನ್ಯುಧಾಜಿತಂ ಪ್ರತಿ ॥೩೭॥**

ಈರೀತಿಯಾಗಿ ಯುದ್ಧವು ನಡೆಯುತ್ತಿರಲು ಆಮೇಲೆ ಮಹಾಮಹಿಮಳಾದ ದುರ್ಗಾದೇವಿಯು ತುಂಬ ಕೋಪಗೊಂಡವಳಾಗಿ ಯುಧಾಜಿತನನ್ನು ಬಾಣಗಳಿಂದ ಹೊಡೆಯಲು ಆರಂಭಿಸಿದಳು.

**ನಾನಾರೂಪಾ ತದಾ ಜಾತಾ ನಾನಾಶಸ್ತ್ರಧರಾ ಶಿವಾ ।**
**ಸಂಪ್ರಾಪ್ತಾ ತುಮುಲಂ ತತ್ರ ಚಕಾರ ಜಗದಂಬಿಕಾ ॥೩೮॥**

ಅಲ್ಲದೆ ಆಗ ಮಂಗಳಕರಳಾದ ಮತ್ತು ಜಗನ್ಮಾತೆಯಾದ ಆ ದುರ್ಗಾದೇವಿಯು ಹಲವು ಬಗೆಯ ಆಯುಧಗಳನ್ನು ಧರಿಸಿದ ಅನೇಕ ರೂಪಗಳನ್ನು ಹೊಂದಿ ಭಯಂಕರವಾದ ಯುದ್ಧವನ್ನು ಮಾಡಿದಳು.

**ಶತ್ರುಜಿನ್ನಿಹತಸ್ತತ್ರ ಯುಧಾಜಿದಪಿ ಪಾರ್ಥಿವಃ ।**
**ಪತಿತೌ ತೌ ರಥಾಭ್ಯಾಂ ತು ಜಯಶಬ್ದಸ್ತದಾಭವತ್ ॥೩೯॥**

ಕಡೆಗೆ ಅಲ್ಲಿ ಶತ್ರುಜಿತನೂ ಯುಧಾಜಿದ್ರಾಜನೂ ಇಬ್ಬರೂ ಕೂಡ ಅಂಬಿಕೆಯಿಂದ ಕೊಲ್ಲಲ್ಪಟ್ಟು ರಥದಿಂದ ಕೆಳಕ್ಕೆ ಉರುಳಿಬಿದ್ದರು. ಆಗ ಜಯಜಯ ಎಂಬ ಘೋಷವು ಉಂಟಾಯಿತು.

**ವಿಸ್ಮಯಂ ಪರಮಂ ಪ್ರಾಪ್ತಾ ಭೂಪಾಃ ಸರ್ವೇ ವಿಲೋಕ್ಯ ತಾನ್ ।**
**ನಿಧನಂ ಮಾತುಲಸ್ಯಾಪಿ ಭಾಗಿನೇಯಸ್ಯ ಸಂಯುಗೇ ॥೪೦॥**

ಈರೀತಿಯಲ್ಲಿ ನಡೆದ ಅದ್ಭುತಕಾರ್ಯವನ್ನು ಎಲ್ಲಾ ರಾಜರೂ ನೋಡಿ ಬಹಳ ಆಶ್ಚರ್ಯಗೊಂಡರು. ಮತ್ತು ಆ ಯುದ್ಧದಲ್ಲಿ ಸೋದರಮಾವನಾದ ಯುಧಾಜಿತನ ಮತ್ತು ಸೋದರಳಿಯನಾದ ಶತ್ರುಜಿತನ ಮರಣವನ್ನು ಸುಬಾಹುವು ನೋಡಿದನು.

**ಸುಬಾಹುರಪಿ ತದ್ದೃಷ್ಟ್ವಾ ನಿಧನಂ ಸಂಯುಗೇ ತಯೋಃ ।**
**ತುಷ್ಟಾವ ಪರಮಪ್ರೀತೋ ದುರ್ಗಾಂ ದುರ್ಗತಿನಾಶಿನೀಂ ॥೪೦॥**

ಈರೀತಿ ಯುದ್ಧದಲ್ಲಿ ಅವರಿಬ್ಬರ ಮರಣವನ್ನು ನೋಡಿ ಸುಬಾಹುರಾಜನು ಬಹಳ ಸಂತೋಷಗೊಂಡು, ಕೆಟ್ಟಗತಿಯನ್ನು ನಿವಾರಿಸಿ ಕಾಪಾಡುವ ದುರ್ಗಾದೇವಿಯನ್ನು ಹೀಗೆ ಸ್ತೋತ್ರಮಾಡಿದನು.

॥ ಸುಬಾಹುರುವಾಚ ॥

**ನಮೋ ದೇವ್ಯೈ ಜಗದ್ಧಾತ್ರ್ಯೈ ಶಿವಾಯೈ ಸತತಂ ನಮಃ ।**
**ದುರ್ಗಾಯೈ ಭಗವತ್ಯೈ ತೇ ಕಾಮದಾಯೈ ನಮೋ ನಮಃ ॥೪೨॥**

ಸುಬಾಹುರಾಜನು ಹೇಳಿದನು—ಓ ತಾಯಿಯೇ, ಸಮಸ್ತಲೋಕಗಳ ಸೃಷ್ಟಿಸ್ಥಿತಿಲಯಗಳಿಗೆ ಕಾರಣಳಾದ, ಅತ್ಯಂತ ಮಂಗಳಕರಳಾದ, ಪೂಜ್ಯಳಾಗಿರುವ ದೇವಿಗೆ ಯಾವಾಗಲೂ ನನ್ನ ನಮಸ್ಕಾರಗಳು. ಮತ್ತು ಎಲ್ಲ ಭಕ್ತರ ಇಷ್ಟಾರ್ಥಗಳನ್ನು ಕೊಡತಕ್ಕವಳಾಗಿ ಜಗನ್ಮಾತೆಯಾದ ಮತ್ತು ದುಷ್ಟರಿಂದ ಪಡೆಯಲಾಗದುದರಿಂದ ದುರ್ಗಾ ಎಂದೂ, ಸತ್ಪುರುಷರ ಮನಸ್ಸಿನಲ್ಲಿ ಚಿತ್ಪ್ರಕಾಶರೂಪಳಾಗಿ ಸ್ಫುರಿಸುವವಳಾದುದರಿಂದ ದೇವೀ ಎಂದೂ, ಪ್ರಸಿದ್ಧಳಾಗಿರುವ ನಿನಗೆ ನನ್ನ ನಮಸ್ಕಾರಗಳು.

**ನಮಃ ಶಿವಾಯೈ ಶಾಂತ್ಯೈ ತೇ ವಿದ್ಯಾಯೈ ಮೋಕ್ಷದೇ ನಮಃ ।**
**ವಿಶ್ವವ್ಯಾಪ್ತ್ಯೈ ಜಗನ್ಮಾತರ್ಜಗದ್ಧಾತ್ರ್ಯೈ ನಮಃ ಶಿವೇ ॥೪೩॥**

ತಾಪತ್ರಯಗಳ ಶಾಂತಿಯಿಂದ ಕೂಡಿದ ಮನಸ್ಸಿನಲ್ಲಿ ಶಾಂತಿರೂಪಳಾಗಿರುವ ಮಂಗಳಕರಳಾದ, ಚಿಜ್ಜ್ಯೋತಿರೂಪಳಾದುದರಿಂದ ವಿದ್ಯಾರೂಪಿಣಿಯಾದ, ಮೋಕ್ಷವನ್ನು ಕೊಡುವ ದೇವಿಗೆ ನಮಸ್ಕಾರವು. ಅಲ್ಲದೆ, ಪ್ರಪಂಚವನ್ನೆಲ್ಲವನ್ನೂ ವ್ಯಾಪಿ

ಸಿರುವ, ಜಗತ್ತಿಗೆಲ್ಲಕ್ಕೂ ಒಳ್ಳೆಯವಳಾದ ಪ್ರಪಂಚವನ್ನೆಲ್ಲವನ್ನೂ ಕಾಪಾಡುವ, ಮಂಗಳಕರಳಾದ, ತಾಯಿಯಾದ ನಿನಗೆ ನನ್ನ ನಮಸ್ಕಾರಗಳು.

ನಾಹಂ ಗತಿಂ ತವ ಧಿಯಾ ಪರಿಚಿಂತಯನ್ವೈ
ಜಾನಾಮಿ ದೇವಿ ಸಗುಣಃ ಕಿಲ ನಿರ್ಗುಣಾಯಾಃ ।
ಕಿಂ ಸ್ತೌಮಿ ವಿಶ್ವಜನನಿ ಪ್ರಕಟಪ್ರಭಾವಾಂ
ಭಕ್ತಾರ್ತಿನಾಶನಪರಾಂ ಪರಮಾಂ ಚ ಶಕ್ತಿಂ ॥೪೪॥

ಓ ಜಗನ್ಮಾತೆಯೇ, ಸತ್ತ್ವರಜಸ್ತಮೋಗುಣಗಳ ಪ್ರಭಾವದಿಂದ ಕೂಡಿದ ಬುದ್ಧಿಯುಳ್ಳ ನಾನು, ಗುಣಗಳಿಗೂ ಪ್ರಭುವಾಗಿ ಅವುಗಳ ಲೇಪವಿಲ್ಲದಿರುವ, ಸಾಮ್ಯಾವಸ್ಥೆಯೆಂಬ ಮಾಯೆಗೂ ಅಧಿಷ್ಠಾನವಾಗಿರುವ ಬ್ರಹ್ಮರೂಪಿಣಿಯಾದ ನಿನ್ನ ಗತಿಯನ್ನು ಎಂದರೆ, ನಡೆವಳಿಕೆಯ ರೀತಿನೀತಿಗಳನ್ನೂ, ಎಲ್ಲರನ್ನೂ ಮೀರಿಸಿರುವ ಸಾಮರ್ಥ್ಯವನ್ನೂ, ಪರಾಕ್ರಮವನ್ನೂ ನನ್ನ ಬುದ್ಧಿಯಿಂದ ಯೋಜಿಸುತ್ತಾ, ಮಾತು ಗಳಿಗೂ ಮನಸ್ಸಿಗೂ ನಿಲುಕದಿರುವುದರಿಂದ ಅವನ್ನು ಸಮಗ್ರವಾಗಿ ತಿಳಿದುಕೊಳ್ಳ ಲಾರದೆ ಇದ್ದೇನೆ. ಈ ರೀತಿಯಲ್ಲಿ ವ್ಯಕ್ತವಾದ ಮಹಾಮಹಿಮೆಯ ಪ್ರಭಾವದಿಂದ ಕೂಡಿದ ಮತ್ತು ಭಕ್ತರ ದುಃಖಗಳನ್ನು ನಿವಾರಿಸುವುದೇ ಸ್ವಭಾವವಾಗಿ ಉಳ್ಳ ನಿನ್ನನ್ನು ತಿಳಿಯಲು ಅಶಕ್ತನಾದ ನಾನು ಹೇಗೆತಾನೇ ನಿನ್ನನ್ನು ಸರಿಯಾಗಿ ಹೊಗಳಲಿ ?

ವಾಗ್ದೇವತಾ ತ್ವಮಸಿ ಸರ್ವಗತೈವ ಬುದ್ಧಿ
ರ್ವಿದ್ಯಾ ಮತಿಶ್ಚ ಗತಿರಪ್ಯಸಿ ಸರ್ವಜಂತೋಃ ।
ತ್ವಾಂ ಸ್ತೌಮಿ ಕಿಂ ತ್ವಮಸಿ ಸರ್ವಮನೋನಿಯಂತ್ರೀ
ಕಿಂ ಸ್ತೂಯತೇ ಹಿ ಸತತಂ ಖಲು ಚಾತ್ಮರೂಪಂ ॥೪೫॥

ಓ ತಾಯಿಯೇ, ಎಲ್ಲ ವಾಙ್ಮಯಕ್ಕೂ ಒಡೆಯಳಾಗಿರುವ ನೀನು ಎಲ್ಲರ ಲ್ಲಿಯೂ ಕಾಣಬರುವ ಬುದ್ಧಿರೂಪಳಾಗಿರುತ್ತೀಯೆ. ಎಲ್ಲ ಪ್ರಾಣಿಗಳ ನಡೆವಳಿಕೆ, ಚಲನವಲನಗಳು ಇವೂ ನಿನ್ನ ರೂಪಗಳೇ ಆಗಿವೆ. ಎಲ್ಲರ ಮನಸ್ಸಿಗೂ ನಿಯಾಮಕ ಳಾಗಿರುವ ನಿನ್ನನ್ನು ನಾನು ಹೇಗೆ ಸ್ತುತಿಸಲಿ? ಯಾವಾಗಲೂ ಆತ್ಮಸ್ವರೂಪವಾಗಿ ರುವ ನಿನ್ನನ್ನು ಏನೆಂದು ಹೊಗಳಲಾಗುತ್ತದೆ? ಭೇದಬುದ್ಧಿಯುಳ್ಳ ಮನಸ್ಸಿಗೂ

ಮಾರಿ ಗೋಚರವಾಗದೇ ಇರುವ, ವ್ಯಾಪಕವಾದ ನಿನ್ನ ನಿಜಸ್ವರೂಪವನ್ನು ನಾನು ಸ್ತೋತ್ರಮಾಡಲು ಶಕ್ತಿ ಇಲ್ಲದವನಾಗಿದ್ದೇನೆ ಎಂದು ತಾತ್ಪರ್ಯವು.

ಬ್ರಹ್ಮಾ ಹರಶ್ಚ ಹರಿರಪ್ಯನಿಶಂ ಸ್ತುವಂತೋ
ನಾಂತಂ ಗತಾಃ ಸುರವರಾಃ ಕಿಲ ತೇ ಗುಣಾನಾಂ ।
ಕ್ವಾಹಂ ವಿಭೇದಮತಿರಂಬ ಗುಣೈರ್ವೃತೋ ವೈ
ವಕ್ತುಂ ಕ್ಷಮಸ್ತವ ಚರಿತ್ರಮಹೋಽಪ್ರಸಿದ್ಧಃ ॥೪೬॥

ಬ್ರಹ್ಮ, ರುದ್ರ, ವಿಷ್ಣು ಮುಂತಾದ ದೇವತೆಗಳ ಮುಖಂಡರೇ ನಿನ್ನ ಗುಣಗಳನ್ನು ಯಾವಾಗಲೂ ಸ್ತೋತ್ರಮಾಡುತ್ತಿದ್ದರೂ ಅವುಗಳ ಕೊನೆಯನ್ನೇ ತಲಪದೇ ಇದ್ದಾರಲ್ಲವೇ? ಹೀಗಿರುವಲ್ಲಿ ಓ ತಾಯಿಯೇ, ಜೀವ ಬ್ರಹ್ಮ ಎರಡಕ್ಕೂ ಭೇದವನ್ನು ನೋಡುತ್ತಿರುವ, ಅಭೇದವನ್ನು ತಿಳಿಯದೇ ಇರುವ, ಸತ್ತ್ವರಜಸ್ತಮೋಗುಣಗಳಿಂದ ಸುತ್ತುವರಿಯಲ್ಪಟ್ಟಿರುವ, ಪರಿಮಿತವಾದ ಬುದ್ಧಿಶಕ್ತಿಯುಳ್ಳ, ಅಪ್ರಸಿದ್ಧನಾದ ಎಂದರೆ ಸಿದ್ಧಿಯನ್ನು ಪಡೆಯದೇ ಇರುವ, ನಾನು ನಿನ್ನ ಗುಣಗಳನ್ನು ವಿವರಿಸುವ ಚರಿತ್ರೆಯನ್ನು ಸರಿಯಾಗಿ ಹೇಳಲು ಸಮರ್ಥನಾಗುವೆನೇನು? ಇಲ್ಲವೇ ಇಲ್ಲವು!

ಸತ್ಸಂಗತಿಃ ಕಥಮಹೋ ನ ಕರೋತಿ ಕಾಮಂ
ಪ್ರಾಸಂಗಿಕಾಪಿ ವಿಹಿತಾ ಖಲು ಚಿತ್ತಶುದ್ಧಿಃ ।
ಜಾಮಾತುರಸ್ಯ ವಿಹಿತೇನ ಸಮಾಗಮೇನ
ಪ್ರಾಪ್ತಂ ಮಯಾಽದ್ಭುತಮಿದಂ ತವ ದರ್ಶನಂ ವೈ ॥೪೭॥

ನನಗೆ ನಿನ್ನನ್ನು ನೋಡಲೂ, ವರ್ಣಿಸಲೂ ಯೋಗ್ಯತೆ ಇಲ್ಲವಾದರೂ ನಿನ್ನ ಭಕ್ತನಾದ ನನ್ನ ಅಳಿಯನ ಸತ್ಸಂಗದಿಂದ ಈರೀತಿಯ ಇಷ್ಟಾರ್ಥವು ಕೈಗೂಡದೆ ಇದ್ದೀತು? ನಿನ್ನ ಆಶ್ಚರ್ಯಕರವಾದ ಈ ಸ್ವರೂಪದ ದರ್ಶನವನ್ನು ಪಡೆಯಬೇಕೆಂಬ ಉದ್ದೇಶಪ್ರಯತ್ನನಿರೀಕ್ಷಣೆಗಳಿಲ್ಲದವನಾಗಿದ್ದರೂ, ನನ್ನ ಅಳಿಯನೂ, ನಿನ್ನ ಭಕ್ತನೂ ಆದ ಈ ಸತ್ಪುರುಷನ ಸಂಬಂಧದ ಸಹವಾಸದ ಪ್ರಸಂಗದಿಂದ ನನಗೂ ಇಷ್ಟವಾದ ಈ ಒಳ್ಳೆಯ ಫಲವು ದೊರೆಯಿತು. ಅಂತಹ ಫಲಕ್ಕೆ ಸಾಧನವಾದ ಚಿತ್ತಶುದ್ಧಿಯೂ ನನಗೆ ಉಂಟಾಗುವಂತಾಯಿತು. ಇದರಿಂದ ಸಾಕ್ಷಾತ್ತಾಗಿ ನಿನ್ನಲ್ಲಿಯೇ ಇಡುವ ಭಕ್ತಿಗಿಂತಲೂ ನಿನ್ನ ಭಕ್ತರಲ್ಲಿ ಇಡುವ ಭಕ್ತಿಯು ಮೇಲಾದುದೆಂಬುದೂ ವ್ಯಕ್ತವಾಗುತ್ತದೆ ಎಂದು ತಾತ್ಪರ್ಯವು.

ಬ್ರಹ್ಮಾಪಿ ವಾಂಛತಿ ಸದೈವ ಹರೋ ಹರಿಶ್ಚ
ಸೇಂದ್ರಾಃ ಸುರಾಶ್ಚ ಮುನಯೋ ವಿದಿತಾರ್ಥತತ್ತ್ವಾಃ ।
ಯದ್ದರ್ಶನಂ ಜನನಿ ತೇऽದ್ಯ ಮಯಾ ದುರಾಪಂ
ಪ್ರಾಪ್ತಂ ವಿನಾ ದಮಶಮಾದಿಸಮಾಧಿಭಿಶ್ಚ ॥೪೮॥

ಬ್ರಹ್ಮ, ರುದ್ರ, ವಿಷ್ಣು, ಇಂದ್ರಾದಿದೇವತೆಗಳೂ, ತತ್ತ್ವವನ್ನು ತಿಳಿದಿರುವ ಋಷಿಗಳೂ ನಿನ್ನ ದರ್ಶನವನ್ನು ಹೊಂದಬೇಕೆಂದು, ಜಪತಪಶಾಂತಿಸಮಾಧಿಗಳಿಂದ ಯಾವಾಗಲೂ ಪ್ರಯತ್ನವನ್ನು ಮಾಡುತ್ತಿರುತ್ತಾರೆ. ಅಂತಹ ಅವರಿಂದಲೂ ಸಾಧಾರಣವಾಗಿ ಪಡೆಯಲು ಅಸಾಧ್ಯವಾದ ನಿನ್ನ ಈ ಸ್ವರೂಪದ ದರ್ಶನವನ್ನು, ಅವರಲ್ಲಿರುವಂತಹ ಗುಣಗಳಿಲ್ಲದವನಾದರೂ ನಾನು ಹೊಂದಿದೆನು. ಹೀಗೆ ನನ್ನ ಇಷ್ಟಾರ್ಥವು ಸುಲಭವಾಗಿಯೂ ಅನಾಯಾಸದಿಂದಲೂ ದೊರೆಯಿತು.

ಕ್ವಾಹಂ ಸುಮಂದಮತಿರಾಶು ತವಾವಲೋಕಂ
ಕ್ವೇದಂ ಭವಾನಿ ಭವಭೇಷಜಮದ್ವಿತೀಯಂ ।
ಜ್ಞಾತಾऽಸಿ ದೇವಿ ಸತತಂ ಕಿಲ ಭಾವಯುಕ್ತಾ
ಭಕ್ತಾನುಕಂಪನಪರಾऽಮರವರ್ಗಪೂಜ್ಯಾ ॥೪೯॥

ಅಲ್ಪವಾದ ತಿಳಿವಳಿಕೆಯುಳ್ಳ ನಾನೆಲ್ಲಿ? ಜಾಗ್ರತೆಯಾಗಿ ಲಭಿಸಿದ ಈ ನಿನ್ನ ಸ್ವರೂಪದ ದರ್ಶನವೆಲ್ಲಿ? ಈ ನಿನ್ನ ದರ್ಶನವು ಈ ಸಾಂಸಾರಿಕವಾದ ದುಃಖಕ್ಕೆ ಏಕಮಾತ್ರವಾದ, ತಪ್ಪದ, ಸಾಟಿ ಇಲ್ಲದ, ಔಷಧಿಯಾಗಿದೆ. ಆದರೂ ನನಗೆ ನೀನು ದರ್ಶನಕೊಟ್ಟಿರುವೆ. ಆದಕಾರಣ ಓ ಭವಾನೀದೇವಿಯೇ, ನಿಜವಾದ ಭಕ್ತಿಯು ಯಾರಲ್ಲಿದೆ ಎಂಬುದನ್ನು ತಿಳಿಯುವವಳಾಗಿಯೂ ಅಂತಹ ಭಕ್ತರನ್ನು ಕೃಪೆಯಿಂದ ಕಾಪಾಡುವ ಸ್ವಭಾವವುಳ್ಳವಳಾಗಿಯೂ ಇರುವ ನೀನು ದೇವತೆಗಳಿಗೂ ಪೂಜ್ಯಳಾಗಿ ಇದ್ದೀಯೆ ಎಂಬುದು ಗೊತ್ತಾಗುತ್ತದೆ. ಹೀಗೆ ನೀನು ನಿನ್ನ ಭಕ್ತರಲ್ಲೂ, ಭಕ್ತರ ಭಕ್ತರಲ್ಲೂ ದಯಾ ಮುಂತಾದ ಭಾವಗಳುಳ್ಳವಳೆಂಬುದೂ ಗೊತ್ತಾಗುತ್ತದೆ.

ಕಿಂ ವರ್ಣಯಾಮಿ ತವ ದೇವಿ ಚರಿತ್ರಮೇತ-
ದ್ಯದ್ರಕ್ಷಿತೋऽಸ್ಮಿ ವಿಷಮೇऽತ್ರ ಸುದರ್ಶನೋऽಯಂ ।
ಶತ್ರೂ ಹತೌ ಸುಬಲಿನೌ ತರಸಾ ತ್ವಯಾ ಯ-
ದ್ಭಕ್ತಾನುಕಂಪಿ ಚರಿತಂ ಪರಮಂ ಪವಿತ್ರಂ ॥೫೦॥

ಓ ಮಾತೆಯೇ, ಭಕ್ತರಲ್ಲಿ ದಯೆಯನ್ನು ತೋರಿಸುವ ಸ್ವಭಾವವುಳ್ಳ ಈ ನಿನ್ನ ನಡೆವಳಿಕೆಯು ತುಂಬ ಪವಿತ್ರವಾದುದು. ಆದುದರಿಂದಲೇ ಅತ್ಯಂತವಿಪತ್ತಿನ ಸಂಕಟದ ಸ್ಥಿತಿಯಲ್ಲಿ ಈ ಸುದರ್ಶನನು ಇದ್ದಾಗ ನೀನು ಜಾಗ್ರತೆಯಾಗಿ ನಿನ್ನ ಅದ್ಭುತವಾದ ಸಾಮರ್ಥ್ಯದಿಂದ ಇವನ ಬಲಶಾಲಿಗಳಾದ ಶತ್ರುಗಳನ್ನು ಕೊಂದು ಅವನನ್ನು ಸಂರಕ್ಷಿಸಿರುವೆ. ಓ ದೇವಿಯೇ, ಇಂತಹ ನಿನ್ನ ಚರಿತ್ರೆಯನ್ನು ನಾನು ಹೇಗೆ ಎಷ್ಟು ವರ್ಣಿಸಲಿ?

**ನಾಶ್ಚರ್ಯಮೇತದಿತಿ ದೇವಿ ವಿಚಾರಿತೇಽರ್ಥೇ**
**ತ್ವಂ ಪಾಸಿ ಸರ್ವಮಖಿಲಂ ಸ್ಥಿರಜಂಗಮಂ ವೈ ।**
**ತ್ರಾತಸ್ತ್ವಯಾ ಚ ವಿನಿಹತ್ಯ ರಿಪುರ್ದಯಾತಃ**
**ಸಂರಕ್ಷಿತೋಽಯಮಧುನಾ ಧ್ರುವಸಂಧಿಸೂನುಃ   ॥೩೦॥**

ಆದರೂ ಓ ದೇವಿಯೇ, ನಿನ್ನ ಆಚರಣೆಯ ತತ್ತ್ವವನ್ನು ಚನ್ನಾಗಿ ವಿಮರ್ಶಿಸಿದರೆ ನೀನು ಈ ಸುದರ್ಶನನನ್ನು ಕಾಪಾಡಿದುದು ಏನೂ ಆಶ್ಚರ್ಯಕರವಾದ ಕಾರ್ಯವಲ್ಲವು. ಏಕೆಂದರೆ ನೀನು ಈ ಸಮಸ್ತ ಪ್ರಪಂಚವನ್ನೂ ಕಾಪಾಡುವವಳಾಗಿದ್ದೀಯೆ. ಆದುದರಿಂದ ಈ ವಿಪತ್ತಿನಿಂದ ಧ್ರುವಸಂಧಿಯ ಮಗನಾದ ಸುದರ್ಶನನನ್ನು, ದಯೆಯಿಂದ, ಅವನ ಶತ್ರುಗಳನ್ನು ಕೊಂದು, ಕಾಪಾಡಿರುವುದು ಆ ನಿನ್ನ ಮಹಾಕಾರ್ಯದಲ್ಲಿ ಅತ್ಯಲ್ಪವಾದ ಒಂದುಭಾಗ ಮಾತ್ರವಾಗಿರುತ್ತದೆ. ಇದರಲ್ಲಿ ಆಶ್ಚರ್ಯವೇನು?

**ಭಕ್ತಸ್ಯ ಸೇವನಪರಸ್ಯ ಯಶೋಽತಿದೀಪ್ತಂ**
**ಕರ್ತುಂ ಭವಾನಿ ರಚಿತಂ ಚರಿತಂ ತ್ವಯೈತತ್ ।**
**ನೋ ಚೇತ್ಕಥಂ ಸುಪರಿಗೃಹ್ಯ ಸುತಾಂ ಮದೀಯಾಂ**
**ಯುದ್ಧೇ ಭವೇತ್ಕುಶಲವಾನನವದ್ಯಶೀಲಃ   ॥೩೨॥**

ಅಲ್ಲದೆ, ಓ ತಾಯಿಯಾದ ಭವಾನಿಯೇ, ನಿನ್ನನ್ನು ಸೇವಿಸುವುದರಲ್ಲಿ ಆಸಕ್ತಿಯುಳ್ಳ ಭಕ್ತನ ಕೀರ್ತಿಯನ್ನು ತುಂಬ ಉಜ್ಜ್ವಲವನ್ನಾಗಿ ಮಾಡುವುದಕ್ಕೋಸ್ಕರವೇ ನೀನು ಇಂತಹ ನಡೆವಳಿಕೆಯನ್ನು ಆಚರಿಸುತ್ತಿರುವೆ ಎಂದು ಹೇಳಬೇಕು. ಹಾಗಿಲ್ಲದಿದ್ದರೆ, ದೋಷವಿಲ್ಲದ ಸ್ವಭಾವವುಳ್ಳ ಈ ಸುದರ್ಶನನು ನನ್ನ ಮಗಳನ್ನು ಹೆಂಡತಿಯನ್ನಾಗಿ ಸ್ವೀಕರಿಸಿ ತನ್ನ ವಾಸಸ್ಥಾನಕ್ಕೆ ಹಿಂತಿರುಗಿ ಹೋಗುತ್ತಿದ್ದಾಗ ತಕ್ಕ

ಸಹಾಯಸಂಪತ್ತಿಯೂ ಇಲ್ಲದಿದ್ದಾಗಲೂ ಮತ್ತು ಅನಿರೀಕ್ಷಿತವಾಗಿ ಘೋರವಾದ ಯುದ್ಧವು ಒದಗಿದ್ದಾಗಲೂ, ಆ ಯುದ್ಧದಲ್ಲಿ ಯಾವ ಅಪಾಯವೂ ಇಲ್ಲದೆ ಕ್ಷೇಮವುಳ್ಳವನಾದನೆಂಬುದು ಹೇಗೆ? ಇದರಿಂದ ಅವನು ದುರ್ಗಾದೇವಿಯಲ್ಲಿ ಇಟ್ಟಿದ್ದ ಭಕ್ತಿಯ ಮಹಿಮೆಯನ್ನು ಪ್ರಸಿದ್ಧಿಗೆ ಬರುವಂತೆ ಮಾಡಿದುದಾಯಿತು.

> **ಶಕ್ತಾಽಸಿ ಜನ್ಮಮರಣಾದಿಭಯಾನ್ನಿಹಂತುಂ**
> **ಕಿಂ ಚಿತ್ರಮತ್ರ ಕಿಲ ಭಕ್ತಜನಸ್ಯ ಕಾಮಂ ।**
> **ತ್ವಂ ಗೀಯಸೇ ಜನನಿ ಭಕ್ತಜನೈರಪಾರಾ**
> **ತ್ವಂ ಪಾಪಪುಣ್ಯರಹಿತಾ ಸಗುಣಾಽಗುಣಾ ಚ ॥೫೩॥**

ಓ ತಾಯಿಯೇ ನೀನು ನಿನ್ನಲ್ಲಿ ಭಕ್ತಿಯುಳ್ಳ ಜನರಿಗೆ, ಹುಟ್ಟುಸಾವುಗಳಿಂದ ಉಂಟಾಗುವ ಭಯಗಳನ್ನು ನಿವಾರಿಸಿ, ಅವರ ಮನೋರಥಗಳನ್ನು ನೆರವೇರಿಸಿ, ಕಾಪಾಡಲು ಶಕ್ತಳಾಗಿರುತ್ತೀಯೆ ಎಂಬ ವಿಷಯದಲ್ಲಿ ಆಶ್ಚರ್ಯ ಪಡಬೇಕಾದುದೇನು? ಏನೂ ಇಲ್ಲವು. ಆದುದರಿಂದಲೇ, ನಿನ್ನ ಭಕ್ತರಾದ ಜನರು ನಿನ್ನನ್ನು ಅಪರಿಮಿತವಾದ ದಯಾ, ಉಪಕಾರಮಾಡುವಿಕೆಮುಂತಾದ ಗುಣಗಳುಳ್ಳವಳೆಂದೂ, ದುಷ್ಟನಿಗ್ರಹ ಶಿಷ್ಟಾನುಗ್ರಹದ ಧರ್ಮಕಾರ್ಯಗಳನ್ನು ನೆರವೇರಿಸಿದರೂ, ಪಾಪದ ಮತ್ತು ಪುಣ್ಯದ ಲೇಪವಿಲ್ಲದವಳಾಗಿರುತ್ತೀಯೆ ಎಂದೂ, ನಿನ್ನ ಭಕ್ತರಾದವರು ಅಪಾರವಾಗಿ ಭಕ್ತಿಯಿಂದ ಸ್ತೋತ್ರಮಾಡುತ್ತಾರೆ. ಆದುದರಿಂದಲೇ ನೀನು ಈ ಪ್ರಾಪಂಚಿಕ ವ್ಯವಹಾರಗಳಲ್ಲಿ ಗುಣವುಳ್ಳವಳೆಂದೂ, ನಿನ್ನ ವಾಸ್ತವಸ್ವರೂಪದಲ್ಲಿ ಯಾವ ಗುಣದೋಷಗಳ ಸಂಬಂಧವೂ ಇಲ್ಲದವಳೆಂದೂ ನಿನ್ನ ಭಕ್ತರು ನಿನ್ನನ್ನು ಸ್ತೋತ್ರಮಾಡುತ್ತಾರೆ. ಇದೇ ತತ್ತ್ವವು.

> **ತ್ವದ್ದರ್ಶನಾದಹಮಹೋ ಸುಕೃತೀ ಕೃತಾರ್ಥೋ-**
> **ಜಾತೋಽಸ್ಮಿ ದೇವಿ ಭುವನೇಶ್ವರಿ ಧನ್ಯಜನ್ಮಾ ।**
> **ಬೀಜಂ ನ ತೇ ನ ಭಜನಂ ಕಿಲ ವೇದ್ಮಿ ಮಾತಃ**
> **ಜ್ಞಾತಸ್ತ್ವಾದ್ಯ ಮಹಿಮಾ ಪ್ರಕಟಪ್ರಭಾವಃ ॥೫೪॥**

ಪ್ರಪಂಚಕ್ಕೆಲ್ಲಾ ಒಡೆಯಳಾದ ಓ ದೇವಿಯೇ, ನಿನ್ನ ದರ್ಶನಲಾಭದಿಂದ ನಾನು ಪುಣ್ಯಶಾಲಿಯೂ ಧನ್ಯನೂ ಆದೆನು. ಓ ಮಾತೆಯೇ ನನ್ನ ಜನ್ಮವು ಈಗ ಸಾರ್ಥಕವಾಯಿತು. ನಿನ್ನನ್ನು ಧ್ಯಾನಿಸಲು, ನಿನ್ನ ಮಂತ್ರದ ಬೀಜಾಕ್ಷರವನ್ನೂ,

ನಿನ್ನ ಜಪಧ್ಯಾನಪ್ರಕಾರವನ್ನೂ ನಾನು ತಿಳಿಯೆನು. ಆದರೂ ನಿನ್ನ ಮಹಿಮೆಯು ಎಂದರೆ ದೊಡ್ಡತನವು ನಿನ್ನ ಭಕ್ತನಾದ ಅಸಹಾಯನಾಗಿದ್ದ ಈ ಸುದರ್ಶನನ ರಕ್ಷಣೆಯ ರೀತಿಯನ್ನು ನೋಡಿದುದರಿಂದ ನನಗೂ ಈಗ ತಿಳಿಯಿತು.

॥ ವ್ಯಾಸ ಉವಾಚ ॥

**ಏವಂ ಸ್ತುತಾ ತದಾ ದೇವೀ ಪ್ರಸನ್ನವದನಾ ಶಿವಾ ।**
**ಉವಾಚ ತಂ ನೃಪಂ ದೇವೀ ವರಂ ವರಯ ಸುವ್ರತ ॥೫೫॥**

ವ್ಯಾಸನು ಹೇಳಿದನು—ಈರೀತಿಯಾಗಿ ಪ್ರಾರ್ಥಿಸಿದ ಸುಬಾಹುವನ್ನು ನೋಡಿ ಪ್ರಸನ್ನವಾದ ಮುಖವುಳ್ಳ, ಮಂಗಳಕರಳಾದ ಆ ದೇವಿಯು ಅವನನ್ನು ಕುರಿತು ಹೀಗೆ ಹೇಳಿದಳು—ಒಳ್ಳೆಯ ನಿಯಮಗಳನ್ನು ಪಾಲಿಸುವ ಸುಬಾಹುವೇ, ನಿನಗೆ ನಾನು ಪ್ರಸನ್ನಳಾಗಿದ್ದೇನೆ. ನಿನಗೆ ಇಷ್ಟವಾದ ವರವನ್ನು ಯಾಚಿಸು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ತ್ರಯೋವಿಂಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವಿಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### ॥ ಚತುರ್ವಿಂಶೋಽಧ್ಯಾಯಃ ॥

### ಇಪ್ಪತ್ತನಾಲ್ಕನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ತಸ್ಯಾಸ್ತದ್ವಚನಂ ಶ್ರುತ್ವಾ ಭವಾನ್ಯಾಃ ಸ ನೃಪೋತ್ತಮಃ ।**
**ಪ್ರೋವಾಚ ವಚನಂ ತತ್ರ ಸುಬಾಹುರ್ಭಕ್ತಿಸಂಯುತಃ ॥೧॥**

ವ್ಯಾಸಮುನಿಯು ಹೇಳಿದನು—ಅಲ್ಲಿ ಆ ಭವಾನೀದೇವಿಯ ಆ ಮಾತನ್ನು ಕೇಳಿ ರಾಜರಲ್ಲಿ ಉತ್ತಮನಾದ ಸುಬಾಹುವು ಭಕ್ತಿಯಿಂದ ಕೂಡಿದವನಾಗಿ ಈರೀತಿಯಾಗಿ ಉತ್ತರವಾಕ್ಯವನ್ನು ಹೇಳಿದನು.

॥ ಸುಬಾಹುರುವಾಚ ॥

**ಏಕತೋ ದೇವಲೋಕಸ್ಯ ರಾಜ್ಯಂ ಭೂಮಂಡಲಸ್ಯ ಚ ।**
**ಏಕತೋ ದರ್ಶನಂ ತೇ ವೈ ನ ಚ ತುಲ್ಯಂ ಕದಾಚನ ॥೨॥**

ಸುಬಾಹುವು ಹೇಳಿದನು—ಓ ತಾಯಿಯೇ, ತಕ್ಕಡಿಯ ಒಂದುಕಡೆಯಲ್ಲಿ ನಿನ್ನ ದರ್ಶನದ ಸುಖವನ್ನೂ ಪ್ರತಿಯಾಗಿ ಇನ್ನೊಂದು ಕಡೆಯಲ್ಲಿ ದೇವಲೋಕದ ಮತ್ತು ಭೂಲೋಕದ ಸಾಮ್ರಾಜ್ಯಭೋಗದ ಸುಖವನ್ನೂ ಇಟ್ಟು ತೂಕಮಾಡಿ ನೋಡಿದರೆ ಎರಡೂ ಯಾವಾಗಲೂ ಸಮವಾಗಲಾರವು.

**ದರ್ಶನಾತ್ತಸದೃಶಂ ಕಿಂಚಿತ್ತ್ರಿಷು ಲೋಕೇಷು ನಾಸ್ತಿ ಮೇ ।**
**ಕಂ ವರಂ ದೇವಿ ಯಾಚೇಽಹಂ ಕೃತಾರ್ಥೋಽಸ್ಮಿ ಧರಾತಲೇ ॥೩॥**

ನನ್ನ ದೃಷ್ಟಿಯಲ್ಲಿ ನಿನ್ನ ದರ್ಶನಕ್ಕೆ ಸಮವಾದ ವಸ್ತುವು ಯಾವುದೂ ಈ ಮೂರುಲೋಕಗಳಲ್ಲಿಯೂ ಇರುವುದಿಲ್ಲ. ಯಾವ ವರವನ್ನು ನಿನ್ನಲ್ಲಿ ಬೇಡಲಿ? ಓ ದೇವಿಯೇ, ಈ ಭೂಲೋಕದಲ್ಲಿ ನಿನ್ನ ದರ್ಶನಲಾಭದಿಂದಲೇ ಧನ್ಯನಾಗಿರುವೆನು.

**ಏತದಿಚ್ಛಾಮ್ಯಹಂ ಮಾತರ್ಯಾಚಿತುಂ ವಾಂಛಿತಂ ವರಂ ।**
**ತವ ಭಕ್ತಿಃ ಸದಾ ಮೇಽಸ್ತು ನಿಶ್ಚಲಾ ಹ್ಯನಪಾಯಿನೀ ॥೪॥**

ಆದರೂ ಓ ತಾಯಿಯೇ, ನಿನ್ನಲ್ಲಿ ಅಚಂಚಲವಾದ ಮತ್ತು ನಾಶವನ್ನು ಪಡೆಯದ ಭಕ್ತಿಯು ಯಾವಾಗಲೂ ನನ್ನಲ್ಲಿ ನೆಲಸಿರಲಿ ಎಂಬುದಾಗಿ ನನ್ನ ಇಷ್ಟವಾದ ವರವನ್ನು ಬೇಡಲು ಅಪೇಕ್ಷಿಸುತ್ತೇನೆ.

**ನಗರೇಽತ್ರ ತ್ವಯಾ ಮಾತಃ ಸ್ಥಾತವ್ಯಂ ಮಮ ಸರ್ವದಾ ।**
**ದುರ್ಗಾದೇವೀತಿ ನಾಮ್ನಾ ವೈ ತ್ವಂ ಶಕ್ತಿರಿಹ ಸಂಸ್ಥಿತಾ ॥೫॥**

ಓ ತಾಯಿಯೇ, ಈ ನನ್ನ ಪಟ್ಟಣದಲ್ಲಿ ಯಾವಾಗಲೂ ಶಕ್ತಿರೂಪಳಾದ ನೀನು ದುರ್ಗಾದೇವಿ ಎಂಬ ಹೆಸರಿನಿಂದ ನೆಲಸಿ ಇರಬೇಕೆಂದು ಬೇಡುತ್ತೇನೆ.

**ರಕ್ಷಾ ತ್ವಯಾ ಚ ಕರ್ತವ್ಯಾ ಸರ್ವದಾ ನಗರಸ್ಯ ಹ ।**
**ಯಥಾ ಸುದರ್ಶನಸ್ತ್ರಾತೋ ರಿಪುಸಂಘಾದನಾಮಯಃ ॥೬॥**

ಹೇಗೆ ಶತ್ರುಗಳ ಗುಂಪಿನಿಂದ ಸ್ವಲ್ಪವೂ ಅಪಾಯವಿಲ್ಲದಂತೆ ಈ ಸುದರ್ಶನನನ್ನು ಕಾಪಾಡಿದೆಯೋ ಹಾಗೆಯೇ ನೀನು ಈ ಪಟ್ಟಣದ ರಕ್ಷಣೆಯನ್ನು ಯಾವಾಗಲೂ ಮಾಡುತ್ತಿರಬೇಕು.

**ತಥಾಽತ್ರ ರಕ್ಷಾ ಕರ್ತವ್ಯಾ ವಾರಾಣಸ್ಯಾಸ್ತ್ವಯಾಂಬಿಕೇ ।**
**ಯಾವತ್ಪುರೀ ಭವೇದ್ಭೂಮೌ ಸುಪ್ರತಿಷ್ಠಾ ಸುಸಂಸ್ಥಿತಾ ॥೭॥**

**ತಾವತ್ತ್ವಯಾಽತ್ರ ಸ್ಥಾತವ್ಯಂ ದುರ್ಗೇ ದೇವಿ ಕೃಪಾನಿಧೇ ।**
**ವರೋಽಯಂ ಮಮ ತೇ ದೇಯಃ ಕಿಮನ್ಯತ್ಪ್ರಾರ್ಥಯಾಮ್ಯಹಂ ॥೮॥**

ಓ ತಾಯಿಯೇ, ನೀನು ಈ ಕಾಶೀಪಟ್ಟಣದ ರಕ್ಷಣೆಯನ್ನು ಹೇಗೆ ಏರ್ಪಡಿಸಬೇಕೆಂದರೆ—ಎಲ್ಲಿಯವರೆಗೆ ಈ ಪ್ರಪಂಚದಲ್ಲಿ ಈ ನಗರವು ಇರುವುದೋ ಅಲ್ಲಿಯ

ವರೆಗೆ ಈ ಪಟ್ಟಣವು ಪ್ರಸಿದ್ಧವಾಗಿಯೂ, ಚನ್ನಾಗಿಯೂ ಇರುವಂತೆ ನೀನು ಇಲ್ಲಿ ನೆಲಸಬೇಕು ಮತ್ತು ಈ ಪಟ್ಟಣವನ್ನು ಕಾಪಾಡಬೇಕು ಎಂಬ ಈ ನನ್ನ ವರವನ್ನು ನೀನು ದಯವಿಟ್ಟು ಅನುಗ್ರಹಿಸಿ ನಡೆಯಿಸಿಕೊಡಬೇಕು. ಎಲೌ ದಯಾನಿಧಿ ಯಾದ ದುರ್ಗಾದೇವಿಯೇ, ನಾನು ಇನ್ನು ಯಾವುದನ್ನು ಬೇಡಲಿ ?

**ವಿವಿಧಾನ್ಸಕಲಾನ್ಕಾಮಾನ್ ದೇಹಿ ಮೇ ವಿದ್ವಿಷೋ ಜಹಿ।**
**ಅಭದ್ರಾಣಾಂ ವಿನಾಶಂ ಚ ಕುರು ಲೋಕಸ್ಯ ಸರ್ವದಾ ॥೯॥**

ಅಲ್ಲದೆ, ನಾನಾಬಗೆಯ ಸುಖಭೋಗಗಳನ್ನೂ ನನಗೆ ಕೊಟ್ಟು, ಶತ್ರುಗಳನ್ನು ನಾಶಮಾಡು. ಮತ್ತು ಈ ಪ್ರಪಂಚಕ್ಕೆ ದುಷ್ಟರಿಂದ ಸಂಭವಿಸಬಹುದಾದ ಅಮಂ ಗಳ ಅನಿಷ್ಟಗಳನ್ನೂ ನಾಶಮಾಡಿ ಲೋಕದ ಕಲ್ಯಾಣವನ್ನು ಯಾವಾಗಲೂ ಅನು ಗ್ರಹಿಸುತ್ತಿರು, ಎಂಬುದಾಗಿ ಪ್ರಾರ್ಥಿಸುತ್ತೇನೆ.

॥ ವ್ಯಾಸ ಉವಾಚ ॥

**ಇತಿ ಸಂಪ್ರಾರ್ಥಿತಾ ದೇವೀ ದುರ್ಗಾ ದುರ್ಗಾರ್ತಿನಾಶಿನೀ ।**
**ತಮುವಾಚ ನೃಪಂ ತತ್ರ ಸ್ತುತ್ವಾ ವೈ ಸಂಸ್ಥಿತಂ ಪುರಃ ॥೧೫॥**

ವ್ಯಾಸಮುನಿಯು ಹೇಳಿದನು--ಈರೀತಿಯಾಗಿ ಪ್ರಾರ್ಥಿಸಲ್ಪಟ್ಟ, ಹೀನಸ್ಥಿತಿ ಯಲ್ಲಿರುವ ಭಕ್ತರ ದುಃಖಗಳನ್ನು ನಾಶಮಾಡತಕ್ಕ, ಆ ದುರ್ಗಾದೇವಿಯು ಈರೀತಿ ಯಾಗಿ ಪ್ರಾರ್ಥಿಸಿ ಮುಂದೆ ನಿಂತಿರುವ ರಾಜನನ್ನು ಕುರಿತು ಹೀಗೆ ಹೇಳಿದಳು.

॥ ದುರ್ಗೋವಾಚ ॥

**ರಾಜನ್ಸದಾ ನಿವಾಸೋ ಮೇ ಮುಕ್ತಿಪುರ್ಯಾಂ ಭವಿಷ್ಯತಿ ।**
**ರಕ್ಷಾರ್ಥಂ ಸರ್ವಲೋಕಾನಾಂ ಯಾವತ್ತಿಷ್ಠತಿ ಮೇದಿನೀ ॥೧೧॥**

ದುರ್ಗಾದೇವಿಯು ಹೇಳಿದಳು—ಓ ರಾಜನೇ, ಮುಕ್ತಿಯನ್ನು ಕೊಡತಕ್ಕ ದ್ದಾದ ಈ ಕಾಶೀಪಟ್ಟಣದಲ್ಲಿ ಎಲ್ಲ ಪ್ರಾಣಿಗಳ ಮತ್ತು ಲೋಕಗಳ ಪಾಲನೆಗಾಗಿ ನಾನು ಈ ಭೂಮಿಯು ಇರುವವರೆಗೂ ಇಲ್ಲಿ ನೆಲಸಿರುತ್ತೇನೆ.

**ಅಥೋ ಸುದರ್ಶನಸ್ತತ್ರ ಸಮಾಗಮ್ಯ ಮುದಾನ್ವಿತಃ ।**
**ಪ್ರಣಮ್ಯ ಪರಯಾ ಭಕ್ತ್ಯಾ ತುಷ್ಟಾವ ಜಗದಂಬಿಕಾಂ ॥೧೨॥**

ಆಮೇಲೆ ಸುದರ್ಶನನು ಅಲ್ಲಿಗೆ ಬಂದು ಸಂತೋಷಗೊಂಡವನಾಗಿ ಬಹಳ ಭಕ್ತಿಯಿಂದ ಜಗದಂಬಿಕೆಯನ್ನು ನಮಸ್ಕರಿಸಿ ಹೀಗೆ ಸ್ತೋತ್ರವನ್ನು ಮಾಡಿದನು.

**ಅಹೋ ಕೃಪಾ ತೇ ಕಥಯಾಮ್ಯಹಂ ಕಿಂ**
**ತ್ರಾತಸ್ತ್ವಯಾ ಯತ್ಕಿಲ ಭಕ್ತಿಹೀನಃ ।**
**ಭಕ್ತಾನುಕಂಪೀ ಸಕಲೋ ಜನೋಽಸ್ತಿ**
**ವಿಮುಕ್ತಭಕ್ತೇರವನಂ ವ್ರತಂ ತೇ ॥೧೩॥**

ಓ ತಾಯಿಯೇ, ಎಂತಹ ಆಶ್ಚರ್ಯ! ಈ ನಿನ್ನ ಕೃಪೆಯನ್ನು ಹೇಗೆ ತಾನೇ ಹೊಗಳಲಿ ? ನೀನು ಭಕ್ತಿಯಿಲ್ಲದ ನನ್ನನ್ನೂ ಕೂಡ ಕಾಪಾಡಿರುವೆ. ಎಲ್ಲ ದೇವತೆಗಳೂ ಜನರೂ ಭಕ್ತಿಯಿದ್ದರೆ ಮಾತ್ರ ಕರುಣೆಯನ್ನು ತೋರಿಸುವರು. ಆದರೆ, ಉತ್ತಮವೂ ಪೂರ್ಣವೂ ಆದ ಭಕ್ತಿಯಿಲ್ಲದವನನ್ನೂ ಕೂಡ ರಕ್ಷಿಸಬೇಕೆಂಬುದು ನಿನ್ನ ಆಚರಣೆಯಲ್ಲಿರುವ ಒಳ್ಳೆಯ ನಿಯಮವಾಗಿರುವಂತಿದೆ.

**ತ್ವಂ ದೇವಿ ಸರ್ವಂ ಸೃಜಸಿ ಪ್ರಪಂಚಂ**
**ಶ್ರುತಂ ಮಯಾ ಪಾಲಯಸಿ ಸ್ವಸೃಷ್ಟಂ ।**
**ತ್ವಮತ್ಸಿ ಸಂಹಾರಪರೇ ಚ ಕಾಲೇ**
**ನ ತೇಽತ್ರ ಚಿತ್ರಂ ಮಮ ರಕ್ಷಣಂ ವೈ ॥೧೪॥**

ಓ ತಾಯಿಯೇ, ನೀನು ಈ ಎಲ್ಲ ಪ್ರಪಂಚವನ್ನೂ ಹುಟ್ಟಿಸುವೆ. ನೀನು ಸೃಷ್ಟಿಸಿದ ಈ ಪ್ರಪಂಚವನ್ನು ಕಾಪಾಡುವೆ, ಎಂಬುದನ್ನು ಕೇಳಿರುತ್ತೇನೆ. ಹಾಗೆಯೇ, ನೀನು ಪ್ರಪಂಚದ ನಾಶವಾಗಬೇಕಾಗುವ ಕಾಲದಲ್ಲಿ ನೀನು ಇದನ್ನು ನಿನ್ನಲ್ಲಿಯೇ ಅಡಗಿಸಿಕೊಂಡಿರುವೆ. ಈ ರೀತಿಯಿರುವಲ್ಲಿ ನನ್ನನ್ನು ಕಾಪಾಡುವುದರಲ್ಲಿ ಆಶ್ಚರ್ಯವೇನು ?

**ಕರೋಮಿ ಕಿಂ ತೇ ವದ ದೇವಿ ಕಾರ್ಯಂ**
**ಕ್ವ ವಾ ವ್ರಜಾಮ್ಯತ್ಯನುಮೋದಯಾಶು ।**
**ಕಾರ್ಯೇ ವಿಮೂಢೋಽಸ್ಮಿ ತವಾಜ್ಞಯಾಽಹಂ**
**ಗಚ್ಛಾಮಿ ತಿಷ್ಠೇ ವಿಹರಾಮಿ ಮಾತಃ ॥೧೫॥**

ಓ ತಾಯಿಯಾದ ದೇವಿಯೇ, ದಯವಿಟ್ಟು ಹೇಳು. ನಿನಗಾಗಿ ನಾನು ಯಾವ ಸೇವೆಯನ್ನು ಮಾಡಲಿ ? ನಾನು ಎಲ್ಲಿಗೆ ಹೋಗಬೇಕು? ಎಂಬುದರ ವಿಷಯದಲ್ಲಿ ನಿನ್ನ ಅನುಮತಿಯನ್ನು ಬೇಗನೆ ತಿಳಿಸು. ನಾನು ಏನನ್ನು ಮಾಡಬೇಕೆಂಬುದನ್ನು ತಿಳಿಯಲಾರದೆ ಇದ್ದೇನೆ. ಆದರೆ ನಿನ್ನ ಅಪ್ಪಣೆಯನ್ನು ಅನುಸರಿಸಿ ಎಲ್ಲಿಗೆ ಬೇಕಾದರೂ ಹೋಗುತ್ತೇನೆ, ಇಲ್ಲಿಯೇ ಇರುತ್ತೇನೆ ಮತ್ತು ಇತರ ವ್ಯಾಪಾರಗಳನ್ನು ಸಂತೋಷದಿಂದ ನೆರವೇರಿಸುತ್ತೇನೆ.

|| ವ್ಯಾಸ ಉವಾಚ ||

**ತಂ ತಥಾ ಭಾಷಮಾಣಂ ತು ದೇವೀ ಪ್ರಾಹ ದಯಾನ್ವಿತಾ ।**
**ಗಚ್ಛಾಯೋಧ್ಯಾಂ ಮಹಾಭಾಗ ಕುರು ರಾಜ್ಯಂ ಕುಲೋಚಿತಂ ॥೧೬॥**

ವ್ಯಾಸನು ಹೇಳಿದನು—ಆ ರೀತಿ ಮಾತನಾಡುತ್ತಿರುವ ಆ ಸುದರ್ಶನನನ್ನು ನೋಡಿ, ದೇವಿಯು ಅತ್ಯಂತ ಕರುಣೆಯಿಂದ ಕೂಡಿದವಳಾಗಿ ಹೀಗೆ ಹೇಳಿದಳು. ಓ ಪುಣ್ಯಶಾಲಿಯೇ, ನೀನು ಅಯೋಧ್ಯೆಗೆ ಹೋಗಿ ನಿಮ್ಮ ವಂಶಕ್ಕೆ ಉಚಿತವಾದ ರಾಜ್ಯಭಾರವನ್ನು ಮಾಡು.

**ಸ್ಮರಣೀಯಾ ಸದಾऽಹಂ ತೇ ಪೂಜನೀಯಾ ಪ್ರಯತ್ನತಃ ।**
**ಶಂ ವಿಧಾಸ್ಯಾಮ್ಯಹಂ ನಿತ್ಯಂ ರಾಜ್ಯೇ ತೇ ನೃಪಸತ್ತಮ ॥೧೭॥**

ಓ ಶ್ರೇಷ್ಠನಾದ ದೊರೆಯೇ, ಯಾವಾಗಲೂ ನೀನು ನನ್ನನ್ನು ಮರೆಯದೆ ಧ್ಯಾನಿಸುತ್ತಿರುವವನಾಗು. ಮತ್ತು ಭಕ್ತಿಯಿಂದ ಪ್ರಯತ್ನಪೂರ್ವಕವಾಗಿ ನನ್ನನ್ನು ಪೂಜಿಸುತ್ತಿರುವವನಾಗು. ನಾನು ನಿನ್ನ ರಾಜ್ಯದಲ್ಲಿ ಯಾವಾಗಲೂ ಒಳ್ಳೆಯ ಸುಖವನ್ನುಂಟುಮಾಡುತ್ತಿರುವೆನು.

**ಅಷ್ಟಮ್ಯಾಂ ಚ ಚತುರ್ದಶ್ಯಾಂ ನವಮ್ಯಾಂ ಚ ವಿಶೇಷತಃ ।**
**ಮಮ ಪೂಜಾ ಪ್ರಕರ್ತವ್ಯಾ ಬಲಿದಾನವಿಧಾನತಃ ॥೧೮॥**

ಅಷ್ಟಮಿ, ನವಮಿ, ಚತುರ್ದಶೀ ತಿಥಿಗಳಲ್ಲಿ ನಿತ್ಯಕ್ಕಿಂತ ಹೆಚ್ಚಾಗಿ ನನ್ನ ಪೂಜೆಯನ್ನು ಬಲಿದಾನವಿಧಾನದಿಂದ(ದೇವೀಮಾಹಾತ್ಮ್ಯ ಪುಟ ೧೫೩)ಮಾಡಬೇಕು.

**ಅರ್ಚಾ ಮದೀಯಾ ನಗರೇ ಸ್ಥಾಪನೀಯಾ ತ್ವಯಾಽನಘ।**
**ಪೂಜನೀಯಾ ಪ್ರಯತ್ನೇನ ತ್ರಿಕಾಲಂ ಭಕ್ತಿಪೂರ್ವಕಂ ॥೧೯॥**

ದೋಷವಿಲ್ಲದವನಾದ ಓ ಸುದರ್ಶನನೇ, ನನ್ನ ಪ್ರತಿಮೆಯನ್ನು ನಿನ್ನ ಪಟ್ಟಣದಲ್ಲಿ ಸ್ಥಾಪಿಸಬೇಕು ಮತ್ತು ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ ಈ ಮೂರು ಹೊತ್ತೂ ಪ್ರಯತ್ನಪೂರ್ವಕವಾಗಿ ಭಕ್ತಿಯಿಂದ ಪೂಜೆಯನ್ನು ಮಾಡಬೇಕು.

**ಶರತ್ಕಾಲೇ ಮಹಾಪೂಜಾ ಕರ್ತವ್ಯಾ ಮಮ ಸರ್ವದಾ ।**
**ನವರಾತ್ರವಿಧಾನೇನ ಭಕ್ತಿಭಾವಯುತೇನ ಚ ॥೨೦॥**

ಶರದೃತುವು ಬರಲು, ನವರಾತ್ರಪೂಜಾವ್ರತದ ಕ್ರಮದಿಂದ ಭಕ್ತಿಯಿಂದ ಕೂಡಿ ನನ್ನ ಮಹಾಪೂಜೆಯನ್ನು ಯಾವಾಗಲೂ ಮಾಡತಕ್ಕದ್ದು.

**ಚೈತ್ರೇಽಶ್ವಿನೇ ತಥಾಷಾಢೇ ಮಾಘೇ ಕಾರ್ಯೋ ಮಹೋತ್ಸವಃ ।**
**ನವರಾತ್ರೇ ಮಹಾರಾಜ ಪೂಜಾ ಕಾರ್ಯಾ ವಿಶೇಷತಃ ॥೨೧॥**

ಎಲೈ ಮಹಾರಾಜನೇ, ಚೈತ್ರ, ಆಷಾಢ, ಆಶ್ವಯುಜ, ಮಾಘ ಈ ನಾಲ್ಕು ಮಾಸಗಳಲ್ಲಿ ನವರಾತ್ರಿಗಳಲ್ಲಿ ವಿಶೇಷವಾಗಿ ಪೂಜೆಯನ್ನೂ ದೊಡ್ಡ ಉತ್ಸವವನ್ನೂ ಮಾಡಬೇಕು.

**ಕೃಷ್ಣಪಕ್ಷೇ ಚತುರ್ದಶ್ಯಾಂ ಮಮ ಭಕ್ತಿಸಮನ್ವಿತೈಃ ।**
**ಕರ್ತವ್ಯಾ ನೃಪಶಾರ್ದೂಲ ತಥಾಷ್ಟಮ್ಯಾಂ ಸದಾ ಬುಧೈಃ ॥೨೨॥**

ಓ ರಾಜಶ್ರೇಷ್ಠನೇ, ಕೃಷ್ಣಪಕ್ಷದ ಚತುರ್ದಶಿಯಲ್ಲಿ ಮತ್ತು ಅಷ್ಟಮಿಯಲ್ಲಿ ತಿಳಿವಳಿಕೆಯುಳ್ಳವರು ಬಹಳ ಭಕ್ತಿಯಿಂದ ಕೂಡಿ ನನ್ನ ಪೂಜೆಯನ್ನು ಮಾಡಬೇಕು.

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾಂತರ್ಹಿತಾ ದೇವೀ ದುರ್ಗಾ ದುರ್ಗಾರ್ತಿನಾಶಿನೀ ।**
**ನ(ತ್ವಾ)ತಾ ಸುದರ್ಶನೇನಾಥ ಸ್ತುತಾ ಚ ಬಹುವಿಸ್ತರಂ ॥೨೩॥**

ವ್ಯಾಸಮುನಿಯು ಹೇಳಿದನು—ಈ ರೀತಿಯಾಗಿ ಹೇಳಿ ಜನರ ದುರ್ಗತಿ ದುಃಖಗಳನ್ನು ನಾಶಮಾಡುವ ದುರ್ಗಾದೇವಿಯು ಕಣ್ಣಿಗೆ ಕಾಣಿಸದೆ ಮರೆಯಾಗಲು, ಆಗ ಸುದರ್ಶನನು ದೇವಿಯನ್ನು ಬಹಳವಾಗಿ ಸ್ತೋತ್ರಮಾಡಿ ನಮಸ್ಕರಿಸಿದನು.

**ಅಂತರ್ಹಿತಾಂ ತು ತಾಂ ದೃಷ್ಟ್ವಾ ರಾಜಾನಃ ಸರ್ವ ಏವ ತೇ ।**
**ಪ್ರಣೇಮುಸ್ತಂ ಸಮಾಗಮ್ಯ ಯಥಾ ಶಕ್ರಂ ಸುರಾಸ್ತಥಾ ॥೨೪॥**

ಭವಾನೀದೇವಿಯು ಅದೃಶ್ಯಳಾದುದನ್ನು ನೋಡಿ, ಉಳಿದ ಎಲ್ಲ ರಾಜರೂ, ಇಂದ್ರನನ್ನು ದೇವತೆಗಳು ನಮಸ್ಕರಿಸುವಂತೆ, ಆ ಸುದರ್ಶನರಾಜನನ್ನು ಪಡೆದು ನಮಸ್ಕರಿಸಿದರು.

**ಸುಬಾಹುರಪಿ ತಂ ನತ್ವಾ ಸ್ಥಿತಶ್ಚಾಗ್ರೇ ಮುದಾನ್ವಿತಃ ।**
**ಊಚುಃ ಸರ್ವೇ ಮಹೀಪಾಲಾ ಅಯೋಧ್ಯಾಧಿಪತಿಂ ತದಾ ॥೨೫॥**

ಸುಬಾಹುರಾಜನೂ ಆ ಸುದರ್ಶನರಾಜನನ್ನು ನಮಸ್ಕರಿಸಿ ಸಂತೋಷದಿಂದ ಕೂಡಿ ಅವನ ಮುಂದೆ ನಿಂತಿದ್ದನು. ಆಗ ಅಯೋಧ್ಯಾಧಿಪತಿಯಾದ ಸುದರ್ಶನ ನನ್ನು ಕುರಿತು ಎಲ್ಲಾ ರಾಜರೂ ವಿಜ್ಞಾಪಿಸಿಕೊಂಡರು.

**ತ್ವಮಸ್ಮಾಕಂ ಪ್ರಭುಃ ಶಾಸ್ತಾ ಸೇವಕಾಸ್ತೇ ವಯಂ ಸದಾ ।**
**ಕುರು ರಾಜ್ಯಮಯೋಧ್ಯಾಯಾಂ ಪಾಲಯಾಸ್ಮಾನ್ನೃಪೋತ್ತಮ ॥೨೬॥**

ಓ ಶ್ರೇಷ್ಠನಾದ ದೊರೆಯೇ, ನೀನೇ ನಮಗೆಲ್ಲರಿಗೂ ಪ್ರಭುವು. ನಾವೆಲ್ಲರೂ ನಿನ್ನ ಸೇವಕರು. ನೀನು ಅಯೋಧ್ಯೆಯಲ್ಲಿ ರಾಜ್ಯಭಾರಮಾಡುತ್ತಾ ನಮ್ಮನ್ನು ಆಳುತ್ತಾ ಕಾಪಾಡು.

**ತ್ವತ್ಪ್ರಸಾದಾನ್ಮಹಾರಾಜ ದೃಷ್ಟಾ ವಿಶ್ವೇಶ್ವರೀ ಶಿವಾ ।**
**ಆದಿಶಕ್ತಿರ್ಭವಾನೀ ಸಾ ಚತುರ್ವರ್ಗಫಲಪ್ರದಾ ॥೨೭॥**

ಓ ಮಹಾರಾಜನೇ, ನಿನ್ನ ಅನುಗ್ರಹದಿಂದ ಮಂಗಳಕರಳಾದ, ಆದಿಶಕ್ತಿ ಯಾದ, ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಬಗೆಯ ಪುರುಷಾರ್ಥಗಳನ್ನೂ ಕೊಡುವ ಈ ಪ್ರಪಂಚಕ್ಕೆಲ್ಲಾ ಒಡೆಯಳಾದ ಭವಾನೀದೇವಿಯ ದರ್ಶನವು ನಮಗೂ ದೊರೆಯಿತು.

**ಧನ್ಯಸ್ತ್ವಂ ಕೃತಕೃತ್ಯೋಽಸಿ ಬಹುಪುಣ್ಯೋ ಧರಾತಲೇ ।**
**ಯಸ್ಮಾಚ್ಚ ತ್ವತ್ಕೃತೇ ದೇವೀ ಪ್ರಾದುರ್ಭೂತಾ ಸನಾತನೀ ॥೨೮॥**

ಈ ಭೂತಲದಲ್ಲಿ ನೀನೇ ಧನ್ಯನು, ಪುಣ್ಯವಂತನು, ಮತ್ತು ಕೃತಕೃತ್ಯನು. ಏಕೆಂದರೆ, ತ್ರಿಕಾಲಗಳಲ್ಲಿಯೂ ನಿತ್ಯಳಾಗಿರುವ ದೇವಿಯು ನಿನಗಾಗಿ ಈ ಭೂಲೋಕಕ್ಕೆ ದಯಮಾಡಿ ಬಂದು ದರ್ಶನವನ್ನು ದಯಪಾಲಿಸಿದಳು.

**ನ ಜಾನೀಮೋ ವಯಂ ಸರ್ವೇ ಪ್ರಭಾವಂ ನೃಪಸತ್ತಮ ।**
**ಚಂಡಿಕಾಯಾಸ್ತಮೋಯುಕ್ತಾ ಮಾಯಯಾ ಮೋಹಿತಾಃ ಸದಾ ॥೨೯॥**

ಓ ರಾಜಶ್ರೇಷ್ಠನೇ, ಚಂಡಿಕಾದೇವಿಯ ಮಹಿಮೆಯನ್ನು, ಮಾಯೆಯಿಂದ ಯಾವಾಗಲೂ ಮೋಹಿತರಾದ ನಾವೆಲ್ಲರೂ ತಿಳಿದಿರಲಿಲ್ಲವು.

**ಧನದಾರಸುತಾನಾಂ ಚ ಚಿಂತನೇಽಭಿರತಾಃ ಸದಾ ।**
**ಮಗ್ನಾ ಮಹಾರ್ಣವೇ ಘೋರೇ ಕಾಮಕ್ರೋಧಝುಷಾಕುಲೇ ॥೩೦॥**

ಐಶ್ವರ್ಯ, ಹೆಂಡತಿ, ಮಕ್ಕಳು ಇವರ ಚಿಂತೆಯಲ್ಲೇ ಯಾವಾಗಲೂ ಆಸಕ್ತರಾಗಿರುತ್ತಾ ನಾವು ಕಾಮಕ್ರೋಧ ಮುಂತಾದುವುಗಳೆಂಬ ಭಯಂಕರವಾದ ಮೀನು ಮೊಸಳೆಗಳುಳ್ಳ ದೊಡ್ಡ ಸಮುದ್ರದಲ್ಲಿ ಮುಳುಗಿರುವೆವು.

**ಪೃಚ್ಛಾಮಸ್ತ್ವಾಂ ಮಹಾಭಾಗ ಸರ್ವಜ್ಞೋಽಸಿ ಮಹಾಮತೇ ।**
**ಕೇಯಂ ಶಕ್ತಿಃ ಕುತೋ ಜಾತಾ ಕಿಂ ಪ್ರಭಾವಾ ವದಸ್ವ ತತ್ ॥೩೧॥**

ಅತ್ಯಂತ ಬುದ್ಧಿಶಾಲಿಯೂ, ಪುಣ್ಯಶಾಲಿಯೂ ಆದ ಓ ಸುದರ್ಶನನೇ, ನೀನು ಎಲ್ಲವನ್ನೂ ತಿಳಿದವನಾಗಿರುತ್ತೀಯೆ. ಆದುದರಿಂದ ನಿನ್ನನ್ನು ಪ್ರಾರ್ಥಿಸುತ್ತೇವೆ, ದಯವಿಟ್ಟು ತಿಳಿಸಬೇಕು. ಈ ಶಕ್ತಿಯು ಯಾರು ? ಇವಳ ಸ್ವರೂಪವು ಯಾವುದು ? ಎಲ್ಲಿಂದ ಹುಟ್ಟಿಬಂದಳು ? ಮತ್ತು ಎಂತಹ ಮಹಿಮೆಯುಳ್ಳವಳು ? ಅದೆಲ್ಲವನ್ನೂ ನೀನು ನಮಗೆ ತಿಳಿಯಹೇಳು.

**ಭವ ತ್ವಂ ನೌಶ್ಚ ಸಂಸಾರೇ ಸಾಧವೋಽತಿದಯಾಪರಾಃ ।**
**ತಸ್ಮಾನ್ನೋ ವದ ಕಾಕುತ್ಸ್ಥ ದೇವೀಮಾಹಾತ್ಮ್ಯಮುತ್ತಮಂ ॥೩೨॥**

ಕಕುತ್ಸ್ಥರಾಜನ ವಂಶದಲ್ಲಿ ಹುಟ್ಟಿದ ಓ ದೊರೆಯೇ, ನಮ್ಮನ್ನು ಈ ಸಂಸಾರವೆಂಬ ಸಮುದ್ರವನ್ನು ದಾಟಿಸಲು ನೀನು ಹಡಗಿನಂತೆ ಆಗು. ಸಾಧುಗಳು

ಬಹಳ ದಯಾಪರರು. ನೀನೂ ಸತ್ಪುರುಷನಾದುದರಿಂದ ನೀನು ನಮ್ಮ ಮೇಲೆ ಕೃಪೆಯಿಟ್ಟು ಈ ಸಂಸಾರಸಮುದ್ರದಿಂದ ನಮ್ಮನ್ನು ದಾಟಿಸು. ಓ ಮಹಾರಾಜನೇ, ದಯವಿಟ್ಟು ನಮಗೆ ಶ್ರೇಷ್ಠವಾದ ದೇವೀಮಾಹಾತ್ಮ್ಯವನ್ನು ತಿಳಿಯಿಸುವವನಾಗು.

**ಯತ್ಪ್ರಭಾವಾ ಚ ಸಾ ದೇವೀ ಯತ್ಸ್ವರೂಪಾ ಯದುದ್ಭವಾ ।**
**ತತ್ಸರ್ವಂ ಶ್ರೋತುಮಿಚ್ಛಾಮಸ್ತ್ವಂ ಬ್ರೂಹಿ ನೃಪರೋತ್ತಮ ॥೩೩॥**

ಶ್ರೇಷ್ಠರಾದ ಮಾನವರಲ್ಲಿ ಉತ್ತಮನಾದ ಓ ರಾಜಶ್ರೇಷ್ಠನೇ, ಈ ದೇವಿಯು ಎಂಥಾ ಪ್ರಭಾವವುಳ್ಳವಳು? ಯಾವ ಸ್ವರೂಪವುಳ್ಳವಳು? ಎಲ್ಲಿಂದ ಉದ್ಭವ ವಾದವಳು? ಇವೆಲ್ಲವನ್ನೂ ಕೇಳಬೇಕೆಂಬ ಇಚ್ಛೆಯುಳ್ಳವರಾಗಿದ್ದೇವೆ. ಆದುದ ರಿಂದ ಇದೆಲ್ಲವನ್ನೂ ನಮಗೆ ನೀನು ಹೇಳಬೇಕು.

॥ ವ್ಯಾಸ ಉವಾಚ ॥

**ಇತಿ ಪೃಷ್ಟಸ್ತದಾ ತೈಸ್ತು ಧ್ರುವಸಂಧಿಸುತೋ ನೃಪಃ ।**
**ವಿಚಿಂತ್ಯ ಮನಸಾ ದೇವೀಂ ತಾನುವಾಚ ಮುದಾನ್ವಿತಃ ॥೩೪॥**

ವ್ಯಾಸಮುನಿಯು ಹೇಳಿದನು—ಆಗ ಆ ರಾಜರಿಂದ ಪ್ರಶ್ನಿಸಲ್ಪಟ್ಟು, ಧ್ರುವ ಸಂಧಿರಾಜನ ಮಗನಾದ ಸುದರ್ಶನಮಹಾರಾಜನು ಸಂತೋಷಗೊಂಡವನಾಗಿ ಮನ ಸ್ಸಿನಲ್ಲಿ ದೇವಿಯನ್ನು ಧ್ಯಾನಿಸಿ, ಅವರನ್ನು ಕುರಿತು ಹೀಗೆ ಹೇಳಿದನು.

॥ ಸುದರ್ಶನ ಉವಾಚ ॥

**ಕಿಂ ಬ್ರವೀಮಿ ಮಹೀಪಾಲಾಸ್ತಸ್ಯಾಶ್ಚರಿತಮುತ್ತಮಂ ।**
**ಬ್ರಹ್ಮಾದಯೋ ನ ಜಾನಂತಿ ಸೇಶಾಃ ಸುರಗಣಾಸ್ತಥಾ ॥೩೫॥**

ಸುದರ್ಶನನು ಹೇಳಿದನು—ಓ ರಾಜರೇ, ಆ ದೇವಿಯ ಉತ್ತಮವಾದ ಚರಿತ್ರೆ ಯನ್ನು ನಾನು ಏನೆಂದು ಹೇಗೆ ವರ್ಣಿಸಲಿ? ಏಕೆಂದರೆ, ಬ್ರಹ್ಮ, ರುದ್ರ, ವಿಷ್ಣು ಮತ್ತು ಇಂದ್ರಾದಿದೇವತೆಗಳೂ ಕೂಡ ಅವಳ ಚರಿತ್ರೆಯನ್ನು ಸಮಗ್ರವಾಗಿ ತಿಳಿದಿಲ್ಲವು.

ಪರಾಶಕ್ತಿಸ್ವರೂಪಳಾದ ಮಹಾಮಾಯೆಯ ಚತುರ್ವ್ಯೂಹಾತ್ಮಕವಾದ ಸ್ವರೂ ಪವನ್ನು ಇಲ್ಲಿ ತಿಳಿಸಿದೆ. ಅದರಲ್ಲಿ ಮೊದಲನೆಯದು ಜಗತ್ತಿನ ಪಾಲನಕಾರ್ಯವನ್ನು

ನೆರವೇರಿಸುವ ಸಾತ್ತ್ವಿಕವಾದ ವಿಷ್ಣುಶಕ್ತಿಯು. ಎಲ್ಲಾ ವಸ್ತುಗಳಿಗೂ ಮೊದಲಿನಲ್ಲಿ ಉಂಟಾದುದು. ಇದೇ ಮಹಾಲಕ್ಷ್ಮೀ ಎನಿಸಿಕೊಂಡಿದೆ. ಎರಡನೆಯದು ಪ್ರಪಂಚದ ಸೃಷ್ಟಿಕಾರ್ಯವನ್ನು ನೆರವೇರಿಸುವ ರಾಜಸೀಶಕ್ತಿಯು. ಇದೇ ಬ್ರಹ್ಮಶಕ್ತಿಯು. ಮೂರನೆಯದು ಈ ಪ್ರಪಂಚದ ಸಂಹಾರಕಾರ್ಯವನ್ನು ನೆರವೇರಿಸುವ ತಾಮಸೀಶಕ್ತಿಯು. ಇದೇ ಈಶ್ವರಶಕ್ತಿಯು. ರಾಜಸೀಶಕ್ತಿಗೆ ಸರಸ್ವತೀ ಎಂದೂ, ಈಶ್ವರಶಕ್ತಿಗೆ ಮಹಾಕಾಳೀ ಎಂದೂ ವ್ಯವಹಾರವಿದೆ. ಪ್ರಾಧಾನಿಕರಹಸ್ಯದಲ್ಲಿ ಮಹಾಸರಸ್ವತಿಯು ಸಾತ್ತ್ವಿಕೀಶಕ್ತಿ ಎಂದುಹೇಳಿದೆ. ಅದನ್ನು ಕಲ್ಪಭೇದದಿಂದ ಹೇಳಿದ್ದೆಂದು ತಿಳಿಯಬೇಕು. ಈ ಮೂರು ಶಕ್ತಿಗಳೂ ಶಕ್ತಸ್ವರೂಪಕ್ಕಿಂತ ಬೇರೆಯಲ್ಲವಾದುದರಿಂದ, ಶಕ್ತಿಯಿಂದ ಕೂಡಿ ಶಕ್ತಎನ್ನಿಸುವ ಬ್ರಹ್ಮತತ್ತ್ವದ ಆಶ್ರಯವನ್ನು ಬಿಟ್ಟು ಇರುವುದು ಅಸಂಭವವಾದುದರಿಂದ, ಈ ಮೂರು ಗುಣಗಳಿಂದ ಕೂಡಿದ ಬ್ರಹ್ಮತತ್ತ್ವವೇ ಮಹಾಲಕ್ಷ್ಮೀ, ಮಹಾಸರಸ್ವತೀ, ಮಹಾಕಾಳೀ ಎಂಬ ಹೆಸರುಗಳನ್ನೂ ಪಡೆದಿರುತ್ತದೆ. ಇನ್ನು ನಾಲ್ಕನೆಯದು ಈ ಮೂರು ಗುಣಗಳಿಗೂ ಕಾರಣವಾದ, ಸೂಕ್ಷ್ಮವಾದ, ಈ ಮೂರು ಗುಣಗಳ ಪರಿಣಾಮವಿಶೇಷಗಳಿಲ್ಲದೆ ಸಾಮ್ಯಾವಸ್ಥಾರೂಪವಾದುದರಿಂದ ನಿರ್ಗುಣಾ ಎಂದು ವ್ಯವಹಾರವನ್ನು ಪಡೆದಿದೆ. ಅದೇ ಪರಾಶಕ್ತಿಯೂ, ಮಹಾಮಾಯೆಯೂ ಆಗಿದೆ. ಇಂಥಾ ಮಾಯೆಯೇ ಉಪಾಧಿಯಾಗಿ ಉಳ್ಳ ಬ್ರಹ್ಮತತ್ತ್ವವೇ ಶಕ್ತಿಯೂ, ಶಕ್ತಿವಿಶಿಷ್ಟವೂ ಬೇರೆಯಾಗಿಲ್ಲವಾದುದರಿಂದ, ಪರಾಶಕ್ತಿ ಮೂಲಾವಿದ್ಯಾ ಮಹಾಮಾಯಾ ಎನ್ನಿಸಿಕೊಂಡಿದೆ. ಈ ಪರಾಶಕ್ತಿ ಎಲ್ಲಕ್ಕೂ ಕಾರಣವಾದ ತತ್ತ್ವವು. ಆದುದರಿಂದ ಅದಕ್ಕೆ ಇನ್ನೊಂದು ಕಾರಣವಿಲ್ಲದೆ ನಿತ್ಯವಾದುದು. ಇದರಿಂದ ಅನವಸ್ಥಾದೋಷವು ನಿವಾರಿತವಾಗುತ್ತದೆ. ಈ ನಾಲ್ಕು ರೂಪಗಳಲ್ಲಿ ನಾಲ್ಕನೆಯ ನಿರ್ಗುಣರೂಪವು ಯೋಗಿಗಳಿಗೆ ಎಂದರೆ ನಿರ್ವಿಕಲ್ಪಸಮಾಧಿಯಲ್ಲಿ ಮುಂದುವರಿದಿರುವ ಉತ್ತಮಾಧಿಕಾರಿಗಳಿಗೆ ಮಾತ್ರ ತಿಳಿಯಲು ಸಾಧ್ಯವು. "ತೇ ಧ್ಯಾನಯೋಗಾನುಗತಾ ಅಪಶ್ಯನ್" ಎಂದು ಶ್ವೇತಾಶ್ವತರೋಪನಿಷತ್ತಿನಲ್ಲೂ ಈ ಅಂಶವನ್ನು ಸೂಚಿಸಿದೆ. ಆದುದರಿಂದ ಮಂದಾಧಿಕಾರಿಗಳಾದ ನಮ್ಮಂತಹವರಿಗೆ ಮಹಾಲಕ್ಷ್ಮೀ ಮುಂತಾದ ಮೂರು ರೂಪಗಳಲ್ಲಿ ಇಷ್ಟವಾದುದನ್ನು ಧ್ಯಾನ ಉಪಾಸನೆ ಅರ್ಚನೆಗಳಿಗೆ ಇಟ್ಟುಕೊಳ್ಳಬೇಕಾದುದು ಉಚಿತವಾದುದು. ಈ ಎಲ್ಲದರಲ್ಲೂ ಮೂಲಪ್ರಕೃತಿಯೇ, ಅದೇ ಉಪಾಧಿಯಾಗಿ ಉಳ್ಳ ಬ್ರಹ್ಮತತ್ತ್ವವೇ, ಉಪಾಸ್ಯವಾಗಿರುತ್ತಾ ಕ್ರಮವಾಗಿ ಕಡೆಯಲ್ಲಿ ಒಂದೇ ತತ್ತ್ವದ ಸಾಕ್ಷಾತ್ಕಾರಾನುಭವದಲ್ಲಿ ಪರ್ಯವಸಾನವಾಗುತ್ತದೆ ಎಂಬುದು ಪರಮ ಸಿದ್ಧಾಂತವಾಗಿದೆ. ಶಕ್ತಿತ್ರಯದ ಉಪಾಸನೆಯೂ ಮೂರ್ತಿತ್ರಯದ ಉಪಾಸನೆಯೂ ಕಡೆಗೆ ಒಂದೇ ಫಲವನ್ನು ಉಂಟುಮಾಡುತ್ತದೆಂಬುದನ್ನು ಮರೆಯಬಾರದು.

**ಸರ್ವಸ್ಯಾದ್ಯಾ ಮಹಾಲಕ್ಷ್ಮೀರ್ವರೇಣ್ಯಾ ಶಕ್ತಿರುತ್ತಮಾ ।**
**ಸಾತ್ತ್ವಿಕೀಯಂ ಮಹೀಪಾಲ ಜಗತ್ಪಾಲನತತ್ಪರಾ ॥೩೬॥**

ಎಲ್ಲಕ್ಕೂ ಮೊದಲಾದ, ಪೂಜ್ಯವಾದ ಉತ್ತಮವಾದ ಶಕ್ತಿಯು ಈ ಪ್ರಪಂಚ ವನ್ನೆಲ್ಲಾ ಕಾಪಾಡುವುದರಲ್ಲಿ ಆಸಕ್ತಳಾದ, ಸತ್ತ್ವಗುಣದಿಂದ ಕೂಡಿದ ಮಹಾ ಲಕ್ಷ್ಮೀ ಎನಿಸಿಕೊಳ್ಳುತ್ತದೆ. 'ಸರ್ವಸ್ಯಾದ್ಯಾಮಹಾಲಕ್ಷ್ಮೀಃ ತ್ರಿಗುಣಾಪರಮೇಶ್ವರೀ।' ಎಂದು ದುರ್ಗಾಸಪ್ತಶತಿಯ ಪ್ರಾಧಾನಿಕ ರಹಸ್ಯದಲ್ಲಿಯೂ ಹೇಳಿದೆ.

**ಸೃಜತೇ ಯಾ ರಜೋರೂಪಾ ಸತ್ತ್ವರೂಪಾ ಚ ಪಾಲನೇ ।**
**ಸಂಹಾರೇ ಚ ತಮೋರೂಪಾ ತ್ರಿಗುಣಾ ಸಾ ಸದಾ ಮತಾ ॥೩೭॥**

ಯಾವ ಪರಾಶಕ್ತಿಯು ರಜೋಗುಣದ ಪ್ರಾಧಾನ್ಯದಿಂದ ಕೂಡಿದ ರೂಪ ವುಳ್ಳವಳಾಗಿ ಪ್ರಪಂಚದ ಸೃಜಿಸುವಿಕೆಯನ್ನು ಮಾಡುವಳೋ ಅವಳು ರಾಜಸೀ ಶಕ್ತಿಯು. ಅವಳೇ ಪ್ರಪಂಚವನ್ನು ಕಾಪಾಡುವುದರಲ್ಲಿ ಸತ್ತ್ವಗುಣ ಪ್ರಧಾನವಾದ ರೂಪವನ್ನೂ ಹೊಂದುವಳು. ಆ ಶಕ್ತಿಯೇ ಈ ಪ್ರಪಂಚವನ್ನು ನಾಶಮಾಡುವಾಗ ತಮೋಗುಣದ ರೂಪವನ್ನೂ ಹೊಂದುವಳು. ಹೀಗೆ ಈ ದೇವಿಯು ಸತ್ತ್ವರಜ ಸ್ತಮೋಗುಣಗಳಿಂದ ಕೂಡಿದವಳಾಗಿ ಆಯಾ ಕಾರ್ಯಗಳನ್ನು ನೆರವೇರಿಸುತ್ತಾಳೆ.

**ನಿರ್ಗುಣಾ ಪರಮಾ ಶಕ್ತಿಃ ಸರ್ವಕಾಮಫಲಪ್ರದಾ ।**
**ಸರ್ವೇಷಾಂ ಕಾರಣಂ ಸಾ ಹಿ ಬ್ರಹ್ಮಾದೀನಾಂ ನೃಪೋತ್ತಮಾಃ ॥೩೮॥**

ಎಲೈ ರಾಜೋತ್ತಮರೇ, ನಿರ್ಗುಣಳಾದ, ಪರಮಶಕ್ತಿಯಾದ, ಎಲ್ಲಾ ಮನೋರಥ ಫಲಗಳನ್ನೂ ಕೊಡುವ ಇವಳು ಬ್ರಹ್ಮನೇ ಮೊದಲಾದ ಎಲ್ಲರ ಉತ್ಪ ತ್ತಿಗೂ ಕಾರಣಳು. ಎಂದರೆ ಇವಳಿಂದ ಎಲ್ಲರೂ ಹುಟ್ಟುವರು. ಇವಳು ಮಾತ್ರ ಯಾರಿಂದಲೂ ಹುಟ್ಟುವುದಿಲ್ಲ.

**ನಿರ್ಗುಣಾ ಸರ್ವಥಾ ಜ್ಞಾತುಮಶಕ್ಯಾ ಯೋಗಿಭಿರ್ನೃಪಾಃ ।**
**ಸಗುಣಾ ಸುಖಸೇವ್ಯಾ ಸಾ ಚಿಂತನೀಯಾ ಸದಾ ಬುಧೈಃ ॥೩೯॥**

ನಿರ್ವಿಕಲ್ಪಸಮಾಧಿಯಲ್ಲಿ ಸಿದ್ಧಿಯ ಅವಸ್ಥೆಯನ್ನು ತಲಪದಿರುವ ಮಂದಾಧಿ ಕಾರಿಗಳಾದವರು ನಿರ್ಗುಣಳಾದ ಈ ಶಕ್ತಿಯನ್ನು ತಿಳಿಯಲು ಸಾಧ್ಯವಿಲ್ಲ. ಈ ಅಂಶ

ನನ್ನು ' ಅವ್ಯಕ್ತಾಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ । 12.6., ಎಂದು ಸೂಚಿಸಿದೆ. ಎಂದರೆ ಅಂತಹ ಸಮಾಧಿಸ್ಥಿತಿಯಲ್ಲಿರುವವರು ಮಾತ್ರ ನಿರ್ಗುಣಳಾದ ಅವಳನ್ನು ತಿಳಿದುಕೊಳ್ಳುವರು. ಆದರೂ ಸಗುಣಳಾದ ಅವಳನ್ನು ಸುಖವಾಗಿ ಸೇವಿಸಲೂ ಧ್ಯಾನಿಸಲೂ ಎಲ್ಲರಿಗೂ ಸಾಧ್ಯವಾಗುವುದರಿಂದ ವಿವೇಕಿಗಳು ಹಾಗೆ ಮಾಡಬೇಕು.

॥ ರಾಜಾನ ಊಚುಃ ॥

**ಬಾಲ ಏವ ವನಂ ಪ್ರಾಪ್ತಸ್ತ್ವಂ ತು ನೂನಂ ಭಯಾತುರಃ ।**
**ಕಥಂ ಜ್ಞಾತಾ ತ್ವಯಾ ದೇವೀ ಪರಮಾ ಶಕ್ತಿರುತ್ತಮಾ ॥೪೦॥**

ರಾಜರು ಸುದರ್ಶನನನ್ನು ಕೇಳಿದರು—ನೀನು ಬಹಳ ಚಿಕ್ಕ ಹುಡುಗನಾಗಿರುವಾಗಲೇ ಭಯದಿಂದ ಕೂಡಿದವನಾಗಿ ಅವಸರವಾಗಿ ಕಾಡಿಗೆ ಹೋದೆಯಲ್ಲವೇ ? ಆ ರೀತಿಯ ಬಾಲಕನಾದ ನೀನು ಅದ್ಭುತವೂ ಶ್ರೇಷ್ಠವೂ ಆದ, ಪರಾಶಕ್ತಿಯ ಸ್ವರೂಪಳಾದ ದೇವಿಯ ತತ್ತ್ವವನ್ನು ಹೇಗೆ ತಿಳಿದುಕೊಂಡೆ ? ಅದನ್ನು ನಮಗೆ ಹೇಳು.

**ಉಪಾಸಿತಾ ಕಥಂ ಚೈವ ಪೂಜಿತಾ ಚ ಕಥಂ ನೃಪ ।**
**ಯಾ ಪ್ರಸನ್ನಾ ತು ಸಾಹಾಯ್ಯಂ ಚಕಾರ ತ್ವರಯಾನ್ವಿತಾ ॥೪೧॥**

ಯಾವ ರೀತಿಯಲ್ಲಿ ನೀನು ಆ ದೇವಿಯನ್ನು ಉಪಾಸಿಸಿದೆ ? ಮತ್ತು ಹೇಗೆ ಪೂಜಿಸಿದೆ ? ಅದನ್ನು ತಿಳಿಸು. ಏಕೆಂದರೆ ಬಹಳ ಜಾಗ್ರತೆಯಾಗಿ ಯಾವ ಆ ದೇವಿಯು ಪ್ರಸನ್ನಳಾಗಿ ನಿನಗೆ ಸಹಾಯವನ್ನು ಮಾಡಿದಳು.

॥ ಸುದರ್ಶನ ಉವಾಚ ॥

**ಬಾಲಭಾವಾನ್ಮಯಾ ಪ್ರಾಪ್ತಂ ಬೀಜಂ ತಸ್ಯಾಃ ಸುಸಂಮುತಂ ।**
**ಸ್ಮರಾಮಿ ಪ್ರಜಪನ್ನಿತ್ಯಂ ಕಾಮಬೀಜಾಭಿಧಂ ನೃಪಾಃ ॥೪೨॥**

ಸುದರ್ಶನನು ಹೇಳಿದನು—ಓ ರಾಜರೇ, ಕೇಳಿರಿ. ನಾನು ಬಹಳ ಚಿಕ್ಕವನಾಗಿರುವಾಗಲೇ ಋಷಿಗಳಿಂದ ಹೇಳಲ್ಪಡುತ್ತಿದ್ದ, ಉತ್ತಮವಾದುದೆಂದು ಒಪ್ಪಲ್ಪಡುವ, ಈ ದೇವೀಮಂತ್ರದ ಬೀಜಾಕ್ಷರವು ನನ್ನ ಕಿವಿಗೆ ಬಿದ್ದಿತು. ಅದೃಷ್ಟವಿಶೇಷದಿಂದಲೂ, ಸಂಸ್ಕಾರವಿಶೇಷದಿಂದಲೂ ನನಗೆ ಅದರಲ್ಲಿ ಆದರ ಉಂಟಾಯಿತು,

ಆಮೇಲೆ ಕಾಮಬೀಜವೆಂಬ ಹೆಸರುಳ್ಳ ಆ ದೇವೀಬೀಜಾಕ್ಷರವನ್ನು ನಾನು ಪ್ರತಿ ನಿತ್ಯವೂ ಜಪಿಸುತ್ತಾ ಅದನ್ನು ಸ್ಮರಿಸುತ್ತಲೇ ಇರುತ್ತೇನೆ.

**ಋಷಿಭಿಃ ಕಥ್ಯಮಾನಾ ಸಾ ಮಯಾ ಜ್ಞಾತಾಽಂಬಿಕಾ ಶಿವಾ ।**
**ಸ್ಮರಾಮಿ ತಾಂ ದಿವಾರಾತ್ರಂ ಭಕ್ತ್ಯಾ ಪರಮಯಾ ಪರಾಂ ॥೪೩॥**

ಆ ಮಂಗಳಕರಳಾದ ಅಂಬಿಕಾದೇವಿಯ ಸ್ವರೂಪವು ನನಗೆ ಋಷಿಗಳಿಂದ ಹೇಳಲ್ಪಟ್ಟು ನನ್ನ ಮನಸ್ಸಿಗೆ ಚನ್ನಾಗಿ ತಿಳಿಯಿತು. ಆ ಸರ್ವೋತ್ತಮ ದೇವಿಯನ್ನು ಅತ್ಯಂತ ಭಕ್ತಿಯಿಂದ ಹಗಲೂ ರಾತ್ರಿಯೂ ಮನಸ್ಸಿನಲ್ಲಿ ಸ್ಮರಿಸುತ್ತಲೇ ಇರುತ್ತೇನೆ.

॥ ವ್ಯಾಸ ಉವಾಚ ॥

**ತನ್ನಿಶಮ್ಯ ವಚಸ್ತಸ್ಯ ರಾಜಾನೋ ಭಕ್ತಿತತ್ಪರಾಃ ।**
**ತಾಂ ಮತ್ವಾ ಪರಮಾಂ ಶಕ್ತಿಂ ನಿರ್ಯಯುಃ ಸ್ವಗೃಹಾನ್ಪ್ರತಿ ॥೪೪॥**

ವ್ಯಾಸಋಷಿಯು ಹೇಳಿದನು—ಆ ರಾಜರೆಲ್ಲರೂ ಅವನ ಮಾತನ್ನು ಕೇಳಿ ಭಕ್ತಿಯಿಂದ ಕೂಡಿದ ಮನಸ್ಸುಳ್ಳವರಾಗಿ ಆ ದೇವಿಯ ಅಪಾರಶಕ್ತಿಯನ್ನು ತಿಳಿದವರಾಗಿ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು.

**ಸುಬಾಹುರಗಮತ್ಕಾಶ್ಯಾಂ ತಮಾಪೃಚ್ಛ್ಯ ಸುದರ್ಶನಂ ।**
**ಸುದರ್ಶನೋಽಪಿ ಧರ್ಮಾತ್ಮಾ ನಿರ್ಜಗಾಮ ಸುಕೋಸಲಾನ್ ॥೪೫॥**

ಸುದರ್ಶನನನ್ನು ಕೇಳಿ ಅವನಿಂದ ಸಮ್ಮತಿಯನ್ನು ಪಡೆದು, ಬೀಳ್ಕೊಳ್ಳಲ್ಪಟ್ಟವನಾಗಿ ಸುಬಾಹುರಾಜನು ಕಾಶೀನಗರಕ್ಕೆ ಹಿಂತಿರುಗಿದನು. ಧರ್ಮಾತ್ಮನಾದ ಸುದರ್ಶನನೂ ಕೋಸಲದೇಶಕ್ಕೆ ಪ್ರಯಾಣ ಬೆಳಸಿದನು.

**ಮಂತ್ರಿಣಸ್ತು ನೃಪಂ ಶ್ರುತ್ವಾ ಹತಂ ಶತ್ರುಜಿತಂ ಮೃಧೇ ।**
**ಜಿತಂ ಸುದರ್ಶನಂ ಚೈವ ಬಭೂವುಃ ಪ್ರೇಮಸಂಯುತಾಃ ॥೪೬॥**

ಮಂತ್ರಿಗಳು, ಯುದ್ಧದಲ್ಲಿ ಶತ್ರುಜಿತನು ಮರಣವನ್ನು ಹೊಂದಿದನೆಂದೂ, ಸುದರ್ಶನನು ಜಯಶಾಲಿಯಾದನೆಂದೂ ಕೇಳಿ, ಗೆದ್ದ ಸುದರ್ಶನನಲ್ಲಿ ಬಹಳ ಪ್ರೇಮವುಳ್ಳವರಾದರು.

ಆಗಚ್ಛಂತಂ ನೃಪಂ ಶ್ರುತ್ವಾ ತಂ ಸಾಕೇತನಿವಾಸಿನಃ ।
ಉಪಾಯನಾನ್ಯುಪಾದಾಯ ಪ್ರಯಯುಃ ಸಂಮುಖೇ ಜನಾಃ ॥೪೭॥

ತಥಾ ಪ್ರಕೃತಯಃ ಸರ್ವೇ ನಾನೋಪಾಯನಪಾಣಯಃ ।
ಧ್ರುವಸಂಧಿಸುತಂ ಮತ್ವಾ ಮುದಿತಾಃ ಪ್ರಯಯುಃ ಪ್ರಜಾಃ ॥೪೮॥

ಅಯೋಧ್ಯಾನಗರ ನಿವಾಸಿಗಳೂ, ಇತರ ಪ್ರಜೆಗಳೂ ಎಲ್ಲರೂ ಧ್ರುವಸಂಧಿಯ ಮಗನಾದ ಸುದರ್ಶನರಾಜನು ಬರುತ್ತಿರುವುದನ್ನು ಕೇಳಿ ತಮ್ಮ ಕೈಯಲ್ಲಿ ರಾಜನಿಗೆ ಸಮರ್ಪಿಸುವುದಕ್ಕೋಸ್ಕರ ಅನೇಕ ಬಗೆಯ ಕಾಣಿಕೆಗಳನ್ನೂ ಬಹುಮಾನವಸ್ತು ಗಳನ್ನೂ ತೆಗೆದುಕೊಂಡು ಅವನನ್ನು ಎದುರುಗೊಳ್ಳಲು ಹೊರಟರು.

ಸ್ತ್ರಿಯೋಪಸಂಯುತಃ ಸೋಽಥ ಪ್ರಾಪ್ಯಾಯೋಧ್ಯಾಂ ಸುದರ್ಶನಃ ।
ಸಂಮಾನ್ಯ ಸರ್ವಲೋಕಾಂಶ್ಚ ಯಯೌ ರಾಜಾ ನಿವೇಶನಂ ॥೪೯॥

ಆಮೇಲೆ ಸುದರ್ಶನರಾಜನು ಮದುವೆಯಾದ ಹೆಂಡತಿಯೊಡನೆ ಕೂಡಿದವ ನಾಗಿ ಅಯೋಧ್ಯೆಯನ್ನು ಸೇರಿ, ಎಲ್ಲಾ ಜನಗಳನ್ನೂ ಬಹುಮಾನಿಸಿ ಅರಮನೆ ಯನ್ನು ಕುರಿತು ತೆರಳಿದನು.

ವಂದಿಭಿಃ ಸ್ತೂಯಮಾನಸ್ತು ವಂದ್ಯಮಾನಶ್ಚ ಮಂತ್ರಿಭಿಃ ।
ಕನ್ಯಾಭಿಃ ಕೀರ್ಯಮಾಣಶ್ಚ ಲಾಜೈಃ ಸುಮನಸೈಸ್ತಥಾ ॥೫೦॥

ಹೊಗಳುಭಟ್ಟರು ಹೊಗಳುತ್ತಿರಲು, ಮಂತ್ರಿಗಳು ನಮಸ್ಕರಿಸಿ, ನಜರುಮು ಜರೆಗಳನ್ನು ಒಪ್ಪಿಸುತ್ತಿರಲು, ಕನ್ಯೆಯರು ಅರಳು ಮತ್ತು ಹೂಗಳನ್ನು ಪ್ರೀತಿಗೌರವ ಗಳಿಂದ ಎರಚುತ್ತಿರಲು, ಹೀಗೆ ಸ್ವಾಗತ ಮರ್ಯಾದೆಗಳನ್ನು ಸ್ವೀಕರಿಸುತ್ತಾ ಸುದ ರ್ಶನರಾಜನು ಅರಮನೆಯನ್ನು ಪ್ರವೇಶಿಸಿದನು.

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ
ಚತುರ್ವಿಂಶೋಽಧ್ಯಾಯಃ.

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ತೃತೀಯಸ್ಕಂಧೇ

### ॥ ಪಂಚವಿಂಶೋಽಧ್ಯಾಯಃ ॥

### ಇಪ್ಪತ್ತೈದನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಗತ್ವಾಽಯೋಧ್ಯಾಂ ನೃಪಶ್ರೇಷ್ಠೋ ಗೃಹಂ ರಾಜ್ಞಃ ಸುಹೃದ್ವೃತಃ ।**
**ಶತ್ರುಜಿನ್ಮಾತರಂ ಪ್ರಾಹ ಪ್ರಣಮ್ಯ ಶೋಕಸಂಕುಲಾಂ ॥೧॥**

ವ್ಯಾಸಮುನಿಯು ಹೇಳಿದನು—ಅನಂತರದಲ್ಲಿ ಸುದರ್ಶನನು ಒಳ್ಳೆಯ ಸ್ನೇಹಿತರಿಂದ ಕೂಡಿದವನಾಗಿ, ಅಯೋಧ್ಯೆಯ ಅರಮನೆಯನ್ನು ಪ್ರವೇಶಿಸಿ ಅಲ್ಲಿ ಪುತ್ರಶೋಕದಿಂದ ದುಃಖಿಸುತ್ತಿರುವ ಶತ್ರುಜಿತನ ತಾಯಿಗೆ ನಮಸ್ಕರಿಸಿ ಧರ್ಮ ಔಚಿತ್ಯಗಳನ್ನು ತಿಳಿದವನಾದುದರಿಂದ ಹೀಗೆ ಹೇಳಿದನು.

**ಮಾತರ್ನ ತೇ ಮಯಾ ಪುತ್ರಃ ಸಂಗ್ರಾಮೇ ನಿಹತಃ ಕಿಲ ।**
**ನ ಪಿತಾ ತೇ ಯುಧಾಜಿಚ್ಚ ಶಪೇ ತೇ ಚರಣೌ ತಥಾ ॥೨॥**

ಓ ತಾಯಿಯೇ, ನಿನ್ನ ಮಗನಾದ ಶತ್ರುಜಿತನು ಮತ್ತು ನಿನ್ನ ತಂದೆಯಾದ ಯುಧಾಜಿತನೂ ಕೂಡ ಯುದ್ಧದಲ್ಲಿ, ನಿನ್ನ ಪಾದಸಾಕ್ಷಿಯಾಗಿಯೂ ನನ್ನಿಂದ ಕೊಲ್ಲಲ್ಪಡಲಿಲ್ಲವು.

**ದುರ್ಗಯಾ ತೌ ಹತೌ ಸಂಖ್ಯೇ ನಾಪರಾಧೋ ಮಮಾತ್ರ ವೈ ।**
**ಅವಶ್ಯಂಭಾವಿಭಾವೇಷು ಪ್ರತೀಕಾರೋ ನ ವಿದ್ಯತೇ ॥೩॥**

ಜಗನ್ಮಾತೆಯಾದ ದುರ್ಗಾದೇವಿಯೇ ಅವರಿಬ್ಬರನ್ನೂ ಯುದ್ಧದಲ್ಲಿ ಸಂಹರಿಸಿದಳು. ಈ ವಿಚಾರದಲ್ಲಿ ನನ್ನ ಅಪರಾಧವೇನೂ ಇರುವುದಿಲ್ಲವು. ಅವಶ್ಯಕವಾಗಿ ನಡೆಯಬೇಕಾದ ವಿಷಯದಲ್ಲಿ ಅದನ್ನು ತಪ್ಪಿಸುವ ಉಪಾಯವು ಇರುವುದಿಲ್ಲವು.

**ನ ಶೋಕೋಽತ್ರ ತ್ವಯಾ ಕಾರ್ಯೋ ಮೃತಪುತ್ರಸ್ಯ ಮಾನಿನಿ ।**
**ಸ್ವಕರ್ಮವಶಗೋ ಜೀವೋ ಭುಂಕ್ತೇ ಭೋಗಾನ್ಸುಖಾಸುಖಾನ್ ॥೪॥**

ಆದುದರಿಂದ, ಎಲೈ ಮರ್ಯಾದೆಯುಳ್ಳ ತಾಯಿಯೇ, ನಿನ್ನ ಮಗನ ಮರಣಕ್ಕಾಗಿ ನೀನು ಶೋಕಿಸಬಾರದು. ಏಕೆಂದರೆ, ತಾನು ಮಾಡಿದ ಪಾಪಪುಣ್ಯಗಳ ಫಲವಾದ ಸುಖದುಃಖಗಳನ್ನು ಪ್ರತಿಯೊಬ್ಬ ಜೀವನೂ ಅವನವನ ಕರ್ಮಕ್ಕೆ ಅಧೀನನಾಗಿ ಅನುಭವಿಸುತ್ತಾನೆ.

**ದಾಸೋಽಸ್ಮಿ ತವ ಭೋ ಮಾತರ್ಯಥಾ ಮಮ ಮನೋರಮಾ ।**
**ತಥಾ ತ್ವಮಪಿ ಧರ್ಮಜ್ಞೇ ನ ಭೇದೋಽಸ್ತಿ ಮನಾಗಪಿ ॥೫॥**

ಓ ತಾಯಿಯೇ, ನಾನು ನಿನ್ನ ಸೇವಕನಾಗಿರುವೆನು. ನನ್ನ ತಾಯಿಯಾದ ಮನೋರಮೆಯು ಹೇಗೋ ಹಾಗೆ ನೀನೂ ನನ್ನ ತಾಯಿಯು. ಧರ್ಮವನ್ನು ತಿಳಿದ ಮಾತೆಯೇ, ನಿಮ್ಮಿಬ್ಬರಲ್ಲಿ ನನಗೆ ಸ್ವಲ್ಪವೂ ಭೇದವಿರುವುದಿಲ್ಲ.

**ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ।**
**ತಸ್ಮಾನ್ನ ಶೋಚಿತವ್ಯಂ ತೇ ಸುಖೇ ದುಃಖೇ ಕದಾಚನ ॥೬॥**

ತಾನು ಮಾಡಿದ ಕರ್ಮದ ಫಲವು, ಅದು ಒಳ್ಳೆಯದೇ ಆಗಲಿ, ಕೆಟ್ಟದ್ದಾಗಲಿ, ಅದನ್ನು ಕಡ್ಡಾಯವಾಗಿ ಅನುಭವಿಸಲೇಬೇಕು. ಆದುದರಿಂದ ಸುಖದುಃಖಗಳಲ್ಲಿ ಯಾವಾಗಲೂ ದುಃಖಿಸುತ್ತಿರಬಾರದು.

**ದುಃಖೇ ದುಃಖಾಧಿಕಾನ್ ಪಶ್ಯೇತ್ಸುಖೇ ಪಶ್ಯೇತ್ಸುಖಾಧಿಕಾನ್ ।**
**ಆತ್ಮಾನಂ ಶೋಕಹರ್ಷಾಭ್ಯಾಂ ಶತ್ರುಭ್ಯಾಮಿವ ನಾರ್ಪಯೇತ್ ॥೭॥**

ತನಗೆ ದುಃಖವು ಬಂದಿರುವಾಗ, ಇದಕ್ಕಿಂತಲೂ ಕಷ್ಟವಾದ ದುಃಖವನ್ನು ಅನುಭವಿಸುತ್ತಿರುವ ಜನರನ್ನು ನೋಡಿ ಸಮಾಧಾನವನ್ನು ತಂದುಕೊಳ್ಳಬೇಕು.

ಇದರಂತೆಯೇ ಸುಖವು ಬಂದಾಗಲೂ ಕೂಡ ಇದಕ್ಕಿಂತ ಹೆಚ್ಚಾದ ಸುಖವನ್ನು ಅನುಭವಿಸುತ್ತಿರುವವರನ್ನು ನೋಡಿ ಇದಕ್ಕಾಗಿ ನಾವು ಹೆಮ್ಮೆಪಡಬಾರದು ಎಂದು ತಿಳಿದುಕೊಳ್ಳಬೇಕು. ಆದುದರಿಂದ ನಾವು ನಮ್ಮನ್ನು ಶೋಕಸಂತೋಷಗಳಿಗೆ, ಶತ್ರುಗಳಿಗೆ ಹೇಗೋ ಹಾಗೆ ಅರ್ಪಿಸಬಾರದು. ಎಂದರೆ ಅವುಗಳಿಗೆ ನಾವು ಅಧೀನರಾಗಬಾರದೆಂದು ತಾತ್ಪರ್ಯವು.

**ದೈವಾಧೀನಮಿದಂ ಸರ್ವಂ ನಾತ್ಮಾಧೀನಂ ಕದಾಚನ ।**
**ನ ಶೋಕೇನ ತದಾತ್ಮಾನಂ ಶೋಷಯೇನ್ಮತಿಮಾನ್ನರಃ ॥೮॥**

ಈ ಪ್ರಪಂಚವೆಲ್ಲವೂ ದೈವಕ್ಕೆ ಅಧೀನವು ಎಂದರೆ " ಜನ್ಮಾಂತರಕೃತಂ ಕರ್ಮ ದೈವಮಿತ್ಯಭಿಧೀಯತೇ " ಎಂಬಂತೆ ಕರ್ಮಕ್ಕೆ ಅಧೀನವಾಗಿದೆ. ಯಾವಾಗಲೂ ಅದು ನಮ್ಮ ಅಂತಃಕರಣಕ್ಕೆ ಅಧೀನವಲ್ಲವು. ಆದಕಾರಣ ಬುದ್ಧಿವಂತನಾದ ಮಾನವನು ಶೋಕದಿಂದ ಮತ್ತು ಕೊರಗಿನಿಂದ ತನ್ನ ಅಂತಃಕರಣವನ್ನು ಕುಗ್ಗಿಸಿಕೊಳ್ಳಬಾರದು.

**ಯಥಾ ದಾರುಮಯೀ ಯೋಷಾ ನಟಾದೀನಾಂ ಪ್ರಚೇಷ್ಟತೇ ।**
**ತಥಾ ಸ್ವಕರ್ಮವಶಗೋ ದೇಹೀ ಸರ್ವತ್ರ ವರ್ತತೇ ॥೯॥**

ನಟರ ಅಧೀನದಲ್ಲಿ, ಮರದಿಂದ ಮಾಡಿದ ಹೆಣ್ಣುಗೊಂಬೆಯು ಹೇಗೆ ಚೇಷ್ಟಾದಿಗಳನ್ನು ಮಾಡುತ್ತದೆಯೋ, ಹಾಗೆಯೇ ಮನುಷ್ಯನು ಯಾವಾಗಲೂ ತನ್ನ ಕರ್ಮಕ್ಕೆ ವಶನಾಗಿ ವ್ಯವಹರಿಸುತ್ತಿರುವನು.

**ಅಹಂ ವನಗತೋ ಮಾತರ್ನಾಭವಂ ದುಃಖಮಾನಸಃ ।**
**ಚಿಂತಯನ್ ಸ್ವಕೃತಂ ಕರ್ಮ ಭೋಕ್ತವ್ಯಮಿತಿ ವೇದ್ಮಿ ಚ ॥೧೦॥**

ಓ ತಾಯಿಯೇ, ಕಾಡಿಗೆ ಹೋಗಿದ್ದ ಈ ನಾನು ಅಲ್ಲಿದ್ದ ಕಾಲದಲ್ಲಿ ದುಃಖವನ್ನು ಹೊಂದಿರಲಿಲ್ಲವು. ನಾನು ಮಾಡಿದ ಕರ್ಮದ ಫಲವನ್ನು ಅನುಭವಿಸಲೇಬೇಕೆಂದು ತಿಳಿದಿದ್ದೇನೇ ಹೊರತು ಶೋಕಿಸಲಿಲ್ಲ. ಈಗಲೂ ಹಾಗೆಯೇ ತಿಳಿದಿದ್ದೇನೆ.

**ಮೃತೋ ಮಾತಾಮಹೋಽತ್ರೈವ ವಿಧುರಾ ಜನನೀ ಮಮ ।**
**ಭಯಾತುರಾ ಗೃಹೀತ್ವಾ ಮಾಂ ನಿರ್ಯಯೌ ಗಹನಂ ವನಂ ॥೧೧॥**

ನನ್ನ ತಾಯಿಯ ತಂದೆಯು ಇಲ್ಲಿ ಸಾಯಲು, ಗಂಡನಿಲ್ಲದ ನನ್ನ ತಾಯಿಯು ಭಯದಿಂದ ನನ್ನನ್ನು ಕರೆದುಕೊಂಡು ದಟ್ಟವಾದ ಕಾಡನ್ನು ಪ್ರವೇಶಿಸಿದಳು.

**ಲುಂಠಿತಾ ತಸ್ಕರೈರ್ಮಾರ್ಗೇ ವಸ್ತ್ರಹೀನಾ ತಥಾ ಕೃತಾ ।**
**ಪಾಥೇಯಂ ಚ ಹೃತಂ ಸರ್ವಂ ಬಾಲಪುತ್ರಾ ನಿರಾಶ್ರಯಾ ॥೧೨॥**

**ಮಾತಾ ಗೃಹೀತ್ವಾ ಮಾಂ ಪ್ರಾಪ್ತಾ ಭಾರದ್ವಾಜಾಶ್ರಮಂ ಪ್ರತಿ ।**
**ವಿದಲ್ಲೋಽಯಂ ಸಮಾಯಾತಸ್ತಥಾ ಧಾತ್ರೇಯಿಕಾಽಬಲಾ ॥೧೩॥**

ದಾರಿಯಲ್ಲಿ ಕಳ್ಳರು ಆಕ್ರಮಣಮಾಡಿ ಇದ್ದ ಬಟ್ಟೆಬರೆ, ದಾರಿಗಾಗಿ ಇಟ್ಟು ಕೊಂಡಿದ್ದ ಆಹಾರದ ಗಂಟು ಇವನ್ನೂ ಅಪಹರಿಸಿದರು. ಆಶ್ರಯವಿಲ್ಲದೆ ನನ್ನ ತಾಯಿಯು ಅಲೆಯುತ್ತಾ ನನ್ನನ್ನು ಕರೆದುಕೊಂಡು ಭರದ್ವಾಜಋಷಿಯ ಆಶ್ರಮ ವನ್ನು ಸೇರಿದಳು. ಅಲ್ಲಿಗೆ ಈ ವಿದಲ್ಲನೆಂಬ ಮಂತ್ರಿಯೂ, ದಾಸಿಯಾದ ಈ ಧಾತ್ರೇ ಯಿಯೂ ಬಂದು ಸೇರಿದರು.

**ಮುನಿಭಿರ್ಮುನಿಪತ್ನೀಭಿರ್ದಯಾಯುಕ್ತೈಃ ಸಮಂತತಃ ।**
**ಪೋಷಿತಾಃ ಫಲನೀವಾರೈರ್ವಯಂ ತತ್ರ ಸ್ಥಿತಾಸ್ತ್ರಯಃ ॥೧೪॥**

ದಯಾಳುಗಳಾದ ಋಷಿಗಳೂ, ಅವರ ಹೆಂಡತಿಯರೂ, ಕರುಣೆಯಿಂದ ನಮಗೆ ಹಣ್ಣು, ನೀವಾರಧಾನ್ಯ ಮುಂತಾದ ಆಹಾರಗಳನ್ನು ಕೊಟ್ಟು ನಮ್ಮನ್ನು ಪೋಷಿಸಿ ಕಾಪಾಡಿದರು. ನಾನು ಮತ್ತು ಈ ಮೂವರೂ ಅಲ್ಲಿಯೇ ನಿಂತೆವು.

**ದುಃಖಂ ನ ಮೇ ತದಾ ಹ್ಯಾಸೀತ್ಸುಖಂ ನಾದ್ಯ ಧನಾಗಮೇ ।**
**ನ ವೈರಂ ನ ಚ ಮಾತ್ಸರ್ಯಂ ಮಮ ಚಿತ್ತೇ ತು ಕರ್ಹಿಚಿತ್ ॥೧೫॥**

ಆಗ ನನಗೆ ಸ್ವಲ್ಪವೂ ದುಃಖವುಂಟಾಗಲಿಲ್ಲ. ಈಗ ಐಶ್ವರ್ಯ ಬಂದಿದೆಯೆಂದು ಸಂತೋಷದ ಅಹಂಕಾರವೂ ಇಲ್ಲ. ನನ್ನ ಮನಸ್ಸಿನಲ್ಲಿ ಯಾವಾಗಲೂ ದ್ವೇಷವಾ ಗಲೀ, ಹೊಟ್ಟೆಕಿಚ್ಚಾಗಲೀ ಇರುವುದಿಲ್ಲವು.

**ನೀವಾರಭಕ್ಷಣಂ ಶ್ರೇಷ್ಠಂ ರಾಜಭೋಗಾತ್ಪರಂತಪೇ ।**
**ತದಾಶೀ ನರಕಂ ಯಾತಿ ನ ನೀವಾರಾಶನಃ ಕ್ವಚಿತ್ ॥೧೬॥**

ದುಷ್ಟನಾದ ಶತ್ರುವನ್ನು ನಿಗ್ರಹಿಸುವ ಎಲೌ ಪೂಜ್ಯಳೇ, ರಾಜಭೋಗಗಳನ್ನು ಅನುಭವಿಸುವುದಕ್ಕಿಂತಲೂ, ಕಾಡಿನಲ್ಲಿದ್ದುಕೊಂಡು ನೀವಾರಧಾನ್ಯವನ್ನು ತಿನ್ನುವುದು ಬಹಳ ಮೇಲಾಗಿರುವುದು. ಏಕೆಂದರೆ, ರಾಜಭೋಗವನ್ನು ಅನುಭವಿಸುವವನು ಪಾಪಸಂಬಂಧದಿಂದ ನರಕಕ್ಕೆ ಹೋಗುತ್ತಾನೆ. ಆದರೆ ಸಾತ್ವಿಕಾಹಾರವಾದ ನೀವಾರ ಧಾನ್ಯವನ್ನು ತಿನ್ನುವವನು ಪಾಪಸಂಬಂಧವಿಲ್ಲದೆ ಧರ್ಮ ನಿಯಮಗಳನ್ನು ಪಾಲಿಸು ತ್ತಿರುವುದರಿಂದ ಯಾವಾಗಲೂ ನರಕಕ್ಕೆ ಹೋಗುವುದಿಲ್ಲ. ಎಂದರೆ ಸತ್ಕರ್ಮಾಚರಣೆ ಯಿಂದ ಮುಕ್ತಿಯನ್ನು ಪಡೆಯುತ್ತಾನೆಯೇ ಹೊರತು ನರಕಕ್ಕೆ ಹೋಗುವುದಿಲ್ಲವು ಎಂದು ತಾತ್ಪರ್ಯವು.

**ಧರ್ಮಸ್ಯಾಚರಣಂ ಕಾರ್ಯಂ ಪುರುಷೇಣ ವಿಜಾನತಾ ।**
**ಸಂಜಿತ್ಯೇಂದ್ರಿಯವರ್ಗಂ ವೈ ಯಥಾ ನ ನರಕಂ ವ್ರಜೇತ್ ॥೧೭॥**

ತಿಳಿವಳಿಕೆಯುಳ್ಳ ಮನುಷ್ಯನು ಇಂದ್ರಿಯಗಳನ್ನೆಲ್ಲಾ ಜಯಿಸಿ, ಸ್ವಾಧೀನ ದಲ್ಲಿರಿಸಿಕೊಂಡು, ನರಕಕ್ಕೆ ಹೋಗದ ರೀತಿಯಲ್ಲಿ ಧರ್ಮದ ಆಚರಣೆಯನ್ನು ಮಾಡುತ್ತಿರಬೇಕು.

**ಮಾನುಷ್ಯಂ ದುರ್ಲಭಂ ಮಾತಃ ಖಂಡೇಽಸ್ಮಿನ್ ಭಾರತೇ ಶುಭೇ ।**
**ಆಹಾರಾದಿಸುಖಂ ನೂನಂ ಭವೇತ್ಸರ್ವಾಸು ಯೋನಿಷು ॥೧೮॥**

ಈ ಪುಣ್ಯಭೂಮಿಯಾದ ಭರತಖಂಡದಲ್ಲಿ ಮನುಷ್ಯಶರೀರವನ್ನು ಹೊಂದು ವುದು ಬಹಳ ಶ್ರೇಷ್ಠವಾದುದು. ಎಲ್ಲರಿಗೂ ಲಭಿಸತಕ್ಕುದುದಲ್ಲವು. ಊಟ ತಿಂಡಿ ಮೊದಲಾದವುಗಳಿಂದ ಉಂಟಾಗುವ ಸುಖಗಳು ಎಲ್ಲ ಪ್ರಾಣಿವರ್ಗದಲ್ಲಿಯೂ ಉಂಟು.

**ಪ್ರಾಪ್ಯ ತಂ ಮಾನುಷಂ ದೇಹಂ ಕರ್ತವ್ಯಂ ಧರ್ಮಸಾಧನಂ ।**
**ಸ್ವರ್ಗಮೋಕ್ಷಪ್ರದಂ ನೃಣಾಂ ದುರ್ಲಭಂ ಚಾನ್ಯಯೋನಿಷು ॥೧೯॥**

ಬೇರೆ ಕೀಳುಜಾತಿಯ ಪ್ರಾಣಿಗಳ ದೇಹವನ್ನು ಹೊಂದುವುದರಿಂದ ಎಂದರೆ ಮೃಗಪಕ್ಷಿ ಇತ್ಯಾದಿ ದೇಹಗಳನ್ನು ಹೊಂದುವುದರಿಂದ ಮೋಕ್ಷವನ್ನು ಹೊಂದಲು ಸಾಧ್ಯವಿಲ್ಲ. ಆದರೆ ಮೋಕ್ಷಪ್ರಾಪ್ತಿಗೆ ಬೇಕಾದ ಸಾಧನಸಂಪಾದನೆಯು ಮನುಷ್ಯದೇಹ ದಲ್ಲಿ ಮಾತ್ರ ಸಾಧ್ಯವಾಗಿರುತ್ತದೆ. ಆದುದರಿಂದ ಮನುಷ್ಯದೇಹವನ್ನು ಹೊಂದಿದರೆ

ಧರ್ಮಕಾರ್ಯವನ್ನು ಮಾಡಿ, ಬೇರೆ ದೇಹಗಳಲ್ಲಿ ಹೊಂದಲು ಸಾಧ್ಯವಿಲ್ಲದಿರತಕ್ಕ ಮೋಕ್ಷವನ್ನು ಪಡೆಯಬೇಕಾದುದು ಮನುಷ್ಯನ ಕರ್ತವ್ಯವು. ಆದುದರಿಂದ ಅಂತಹ ಮಾನವಶರೀರವನ್ನು ಪಡೆದಿರುವಾಗ ಮನುಷ್ಯರಿಗೆ ಸ್ವರ್ಗ ಮುಂತಾದ ಅಭ್ಯುದಯಗಳನ್ನೂ, ಮೋಕ್ಷವೆಂಬ ನಿಃಶ್ರೇಯಸಫಲವನ್ನೂ ಉಂಟುಮಾಡುವ ಧರ್ಮಾಚರಣೆಯೆಂಬ ಸಾಧನವನ್ನು ಸಂಪಾದಿಸಬೇಕು. ಈ ಸಾಧನಸಂಪಾದನೆಯು ಮಾನವೇತರ ಪ್ರಾಣಿಜನ್ಮಗಳಲ್ಲಿ ಸಾಧ್ಯವಿಲ್ಲವು.

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾ ಸಾ ತದಾ ತೇನ ಲೀಲಾವತ್ಯತಿಲಜ್ಜಿತಾ ।**
**ಪುತ್ರಶೋಕಂ ಪರಿತ್ಯಜ್ಯ ತಮೂಹಾಶ್ರುವಿಲೋಚನಾ ॥೨೦॥**

ವ್ಯಾಸಮುನಿಯು ಹೇಳಿದನು—ಈ ರೀತಿಯಾಗಿ ಆ ಸುದರ್ಶನನು ಹೇಳಲು ಇದನ್ನು ಕೇಳಿ ಲೀಲಾವತಿಯು ಬಹಳ ನಾಚಿಕೆಗೊಂಡವಳಾಗಿ ಮಗನಾದ ಶತ್ರುಜಿತನ ಮರಣದ ದುಃಖವನ್ನು ಬಿಟ್ಟು, ಕಂಬನಿತುಂಬಿದ ಕಣ್ಣಿನಿಂದ ಕೂಡಿ ಸುದರ್ಶನನನ್ನು ಕುರಿತು ಹೀಗೆ ಹೇಳಿದಳು.

**ಸಾಪರಾಧಾಽಸ್ಮಿ ಪುತ್ರಾಹಂ ಕೃತಾ ಪಿತ್ರಾ ಯುಧಾಜಿತಾ ।**
**ಹತ್ವಾ ಮಾತಾಮಹಂ ತೇಽತ್ರ ಹೃತಂ ರಾಜ್ಯಂ ತು ಯೇನ ವೈ ॥೨೧॥**

ಓ ಮಗನಾದ ಸುದರ್ಶನನೇ, ನನ್ನ ತಂದೆಯಾದ ಯುಧಾಜಿತನೊಡನೆ ಕೂಡಿದ್ದ ನಾನೇ ಅಪರಾಧಿಯಾಗಿದ್ದೇನೆ. ಏಕೆಂದರೆ, ಆ ಯುಧಾಜಿತನು ನಿನ್ನ ತಾಯಿಯ ತಂದೆಯನ್ನು ಕೊಂದು ಈ ರಾಜ್ಯವನ್ನು ಅನ್ಯಾಯವಾಗಿ ನಿನ್ನಿಂದ ಅಪಹರಿಸಿದ್ದನು. ಮತ್ತು ಅದನ್ನು ನಮಗೆ ಕೊಡಲು ನಾವು ಅದನ್ನು ಸ್ವೀಕರಿಸಿದ್ದೆವು. ಹೀಗೆ ನಾನೂ ನನ್ನ ಮಗನೂ ಈ ಅನ್ಯಾಯವಾದ ರಾಜ್ಯಾಪಹಾರದ ಪಾಪದಲ್ಲಿ ಭಾಗಿಗಳೂ ಆಗಿದ್ದೆವು.

**ನ ತಂ ವಾರಯಿತುಂ ಶಕ್ತಾ ತದಾಽಹಂ ನ ಸುತಂ ಮಮ।**
**ಯತ್ಕೃತಂ ಕರ್ಮ ತೇನೈವ ನಾಪರಾಧೋಽಸ್ತಿ ಮೇ ಸುತ ॥೨೨॥**

ಆದರೆ, ಓ ಮಗನೇ, ಆಗ ನನ್ನ ತಂದೆಯನ್ನೂ ಮಗನನ್ನೂ ಈ ಅಕಾರ್ಯದಿಂದ ತಡೆಯಲು, ನಾನು ಅವರ ಅಧೀನದಲ್ಲಿದ್ದುದರಿಂದ ಶಕ್ತಳಾಗಲಿಲ್ಲ. ಆದುದ

ರಿಂದ ಈ ಪಾಪಕಾರ್ಯವು ಎಲ್ಲವೂ ನನ್ನ ತಂದೆಯಿಂದಲೇ ಮಾಡಲ್ಪಟ್ಟಿತು. ಅಲ್ಲದೆ ನಾನು ಇದರಲ್ಲಿ ಭಾಗಿಯಲ್ಲವೆಂದೂ ಈ ತಪ್ಪು ನನ್ನದಲ್ಲವೆಂದೂ ಹೇಳಬಹುದು.

**ತೌ ಮೃತೌ ಸ್ವಕೃತೇನೈವ ಕಾರಣಂ ತ್ವಂ ತಯೋರ್ನ ಚ ।**
**ನಾಹಂ ಶೋಚಾಮಿ ತಂ ಪುತ್ರಂ ಸದಾ ಶೋಚಾಮಿ ತತ್ಕೃತಂ ॥೨೩॥**

ಆದುದರಿಂದ ಅವರಿಬ್ಬರ ಮರಣಕ್ಕೆ ನೀನು ಕಾರಣನೂ ಜವಾಬುದಾರನೂ ಅಲ್ಲವು. ಅವರು ಅವರೇ ಸ್ವಂತವಾಗಿ ಮಾಡಿದ ಪಾಪದ ಕೆಲಸದಿಂದಲೇ ಮರಣ ವನ್ನು ಹೊಂದಿದರು. ಆ ಮಗನಿಗಾಗಿ ನಾನು ದುಃಖಪಡುವುದಿಲ್ಲ. ಆದರೆ ಅವನು ಮಾಡಿದ ಪಾಪಕೆಲಸಕ್ಕಾಗಿ ಯಾವಾಗಲೂ ಶೋಕಿಸುತ್ತೇನೆ.

**ಪುತ್ರ ತ್ವಮಸಿ ಕಲ್ಯಾಣ ಭಗಿನೀ ಮೇ ಮನೋರಮಾ ।**
**ನ ಕ್ರೋಧೋ ನ ಚ ಶೋಕೋ ಮೇ ತ್ವಯಿ ಪುತ್ರ ಮನಾಗಪಿ ॥೨೪॥**

ಓ ಧರ್ಮಾತ್ಮನಾದ ವತ್ಸನೇ, ನೀನೇ ಮಂಗಳಕರನಾದ ಮಗನಾಗಿದ್ದೀಯೆ. ಮನೋರಮೆಯು ನನ್ನ ತಂಗಿಯು. ನಿನ್ನ ಮೇಲೆ ನನಗೆ ಕೋಪವಾಗಲಿ, ಸಂಕಟ ವಾಗಲಿ ಸ್ವಲ್ಪವೂ ಇರುವುದಿಲ್ಲವು.

**ಕುರು ರಾಜ್ಯಂ ಮಹಾಭಾಗ ಪ್ರಜಾಃ ಪಾಲಯ ಸುವ್ರತ ।**
**ಭಗವತ್ಯಾಃ ಪ್ರಸಾದೇನ ಪ್ರಾಪ್ತಮೇತದಕಂಟಕಂ ॥೨೫॥**

ಓ ಪುಣ್ಯಶಾಲಿಯೇ, ಒಳ್ಳೆಯ ನೀತಿನಿಯಮಗಳನ್ನು ಪಾಲಿಸುವ ಸ್ವಭಾವ ವುಳ್ಳವನೇ, ಭಗವತೀದುರ್ಗಾದೇವಿಯ ಅನುಗ್ರಹದಿಂದ ಶತ್ರುಗಳ ಆತಂಕವಿಲ್ಲದ ಈ ರಾಜ್ಯವು ನಿನಗೆ ಲಭಿಸಿದೆ. ನೀನು ರಾಜ್ಯಭಾರವನ್ನು ವಹಿಸಿ ಪ್ರಜೆಗಳ ಪಾಲನೆ ಯನ್ನು ಮಾಡುವವನಾಗು.

**ತದಾಕರ್ಣ್ಯ ವಚೋ ಮಾತುರ್ನತ್ವಾ ತಾಂ ನೃಪನಂದನಃ ।**
**ಜಗಾಮ ಭವನಂ ರಮ್ಯಂ ಯತ್ರ ಪೂರ್ವಂ ಮನೋರಮಾ ॥೨೬॥**

ದೊರೆಯ ಮಗನಾದ ಆ ಸುದರ್ಶನನು ಆ ತಾಯಿಯ ಮಾತನ್ನು ಲಾಲಿಸಿ ಅವಳಿಗೆ ನಮಸ್ಕರಿಸಿ, ಹಿಂದೆ ಮನೋರಮೆಯು ವಾಸಮಾಡುತ್ತಿದ್ದ ಅಂದವಾದ ಅರ ಮನೆಗೆ ಹೊರಟನು.

**ನ್ಯವಸತ್ತತ್ರ ಗತ್ವಾ ತು ಸರ್ವಾನಾಹೂಯ ಮಂತ್ರಿಣಃ ।**
**ದೈವಜ್ಞಾನಥ ಪಪ್ರಚ್ಛ ಮುಹೂರ್ತಂ ದಿವಸಂ ಶುಭಂ ॥೨೭॥**

ಆ ಅರಮನೆಗೆ ಹೋಗಿ ಅಲ್ಲಿ ವಾಸಮಾಡಿದನು. ಮತ್ತು ಆಮೇಲೆ ಎಲ್ಲ ಮಂತ್ರಿಗಳನ್ನೂ ಕರೆಯಿಸಿ ಜ್ಯೋತಿಷ್ಕರನ್ನೂ ಬರಮಾಡಿಕೊಂಡು ಒಳ್ಳೆಯ ದಿವಸ ದಲ್ಲಿ ಒಳ್ಳೆಯ ಮುಹೂರ್ತವು ಯಾವುದೆಂದು ಅವರನ್ನು ಪ್ರಶ್ನಿಸಿದನು.

**ಸಿಂಹಾಸನಂ ತಥಾ ಹೈಮಂ ಕಾರಯಿತ್ವಾ ಮನೋಹರಂ ।**
**ಸಿಂಹಾಸನೇ ಸ್ಥಿತಾಂ ದೇವೀಂ ಪೂಜಯಿಷ್ಯೇ ಸದಾಪ್ಯಹಂ ॥೨೮॥**

ಮನೋಹರವಾದ ಚಿನ್ನದ ಸಿಂಹಾಸನವನ್ನು ಮಾಡಿಸಿ ಅದರಲ್ಲಿ ಮಂಡಿ ಸಿರುವ ದೇವಿಯ ಮೂರ್ತಿಯನ್ನು ಯಾವಾಗಲೂ ನಾನು ಪೂಜೆಮಾಡುವೆನು.

**ಸ್ಥಾಪಯಿತ್ವಾಽಽಸನೇ ದೇವೀಂ ಧರ್ಮಾರ್ಥಕಾಮಮೋಕ್ಷದಾಂ ।**
**ರಾಜ್ಯಂ ಪಶ್ಚಾತ್ಕರಿಷ್ಯಾಮಿ ಯಥಾ ರಾಮಾದಿಭಿಃ ಕೃತಂ ॥೨೯॥**

ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಈ ನಾಲ್ಕು ಪುರುಷಾರ್ಥಗಳನ್ನೂ ಕೊಡುವ ದೇವಿಯನ್ನು ಆ ಚಿನ್ನದ ಆಸನದಲ್ಲಿ ಸ್ಥಾಪಿಸಿ ಪೂಜಿಸುತ್ತಾ ಆಮೇಲೆ ಶ್ರೀರಾಮನೇ ಮುಂತಾದ ಧರ್ಮಾತ್ಮರಾದ ರಾಜರು ಹೇಗೆ ರಾಜ್ಯಭಾರವನ್ನು ಧರ್ಮ ದಿಂದ ಮಾಡಿದರೋ ಹಾಗೆಯೇ ನಾನೂ ಮಾಡುವೆನು.

**ಪೂಜನೀಯಾ ಸದಾ ದೇವೀ ಸರ್ವೈರ್ನಾಗರಕೈರ್ಜನೈಃ ।**
**ಮಾನನೀಯಾ ಶಿವಾ ಶಕ್ತಿಃ ಸರ್ವಕಾಮಾರ್ಥಸಿದ್ಧಿದಾ ॥೩೦॥**

ಈ ಪಟ್ಟಣದಲ್ಲಿರುವ ಪ್ರಜೆಗಳೆಲ್ಲರೂ ಆ ದೇವಿಯನ್ನು ಯಾವಾಗಲೂ ಪೂಜಿಸಬೇಕು. ಎಲ್ಲ ಇಷ್ಟಾರ್ಥಗಳನ್ನೂ ಕೊಡುವ ಮಂಗಳಕರಳಾದ ಪರಾಶಕ್ತಿ ಸ್ವರೂಪಳಾದ ದೇವಿಯನ್ನು ಗೌರವಿಸಬೇಕು.

**ಇತ್ಯುಕ್ತ್ವಾ ಮಂತ್ರಿಣಸ್ತೇ ತು ಚಕ್ರುರ್ನೃ ರಾಜಶಾಸನಂ ।**
**ಪ್ರಾಸಾದಂ ಕಾರಯಾಮಾಸುಃ ಶಿಲ್ಪಿಭಿಃ ಸುಮನೋರಮಂ ॥೩೧॥**

ಇದಕ್ಕಾಗಿ ಒಂದು ದೇವಾಲಯವನ್ನು ಮಾಡಿಸಬೇಕು ಎಂದು ಮಂತ್ರಿ ಗಳಿಗೆ ಹೇಳಿದನು. ಅದನ್ನು ಕೇಳಿ ಮಂತ್ರಿಗಳು ಅದೇ ರೀತಿಯಾಗಿ ರಾಜನ ಅಪ್ಪಣೆ

ಯನ್ನು ನೆರವೇರಿಸಿದರು. ಶಿಲ್ಪಿಗಳಿಂದ ಮನೋಹರವಾದ ದೇವಾಲಯವನ್ನೂ ಕಟ್ಟಿಸಿದರು.

**ಪ್ರತಿಮಾಂ ಕಾರಯಿತ್ವಾಥ ಮುಹೂರ್ತೇಽಥ ಶುಭೇ ದಿನೇ ।**
**ದ್ವಿಜಾನಾಹೂಯ ವೇದಜ್ಞಾನ್ ಸ್ಥಾಪಯಾಮಾಸ ಭೂಪತಿಃ ॥೩೨॥**

ಆಮೇಲೆ ದೊರೆಯು ದೇವಿಯ ವಿಗ್ರಹವನ್ನು ಮಾಡಿಸಿ ಒಳ್ಳೆಯದಿನ ಮತ್ತು ಮುಹೂರ್ತದಲ್ಲಿ ವೇದಾರ್ಥವನ್ನು ತಿಳಿದಿರುವ ಬ್ರಾಹ್ಮಣರನ್ನು ಕರೆಯಿಸಿ ಆ ದೇವಿಯ ವಿಗ್ರಹವನ್ನು ಅಲ್ಲಿ ಪ್ರತಿಷ್ಠೆ ಮಾಡಿಸಿದನು.

**ಹವನಂ ವಿಧಿವತ್ಕೃತ್ವಾ ಪೂಜಯಿತ್ವಾಥ ದೈವತಾನ್ ।**
**ಪ್ರಾಸಾದೇ ಮತಿಮಾನ್ ದೇವ್ಯಾಃ ಸ್ಥಾಪಯಾಮಾಸ ಭೂಮಿಪಃ ॥೩೩॥**

ಅಲ್ಲದೆ ಬುದ್ಧಿವಂತನಾದ ಆ ರಾಜನು ವೇದೋಕ್ತವಿಧಾನದಿಂದ ಹೋಮಗಳನ್ನೂ ದೇವಿಯ ಮತ್ತು ನವಗ್ರಹಗಳೇ ಮುಂತಾದ ದೇವತೆಗಳ ಪೂಜೆಗಳನ್ನೂ ನೆರವೇರಿಸಿ ಅನಂತರದಲ್ಲಿ ಆ ದೇವತಾಗೃಹದಲ್ಲಿ ದೇವಿಯ ವಿಗ್ರಹವನ್ನು ಸ್ಥಾಪಿಸಿದನು.

**ಉತ್ಸವಸ್ತತ್ರ ಸಂವೃತ್ತೋ ವಾದಿತ್ರಾಣಾಂ ಚ ನಿಃಸ್ವನೈಃ ।**
**ಬ್ರಾಹ್ಮಣಾನಾಂ ವೇದಘೋಷೈರ್ಗಾನೈಸ್ತು ವಿವಿಧೈರ್ನೃಪ ॥೩೪॥**

ಓ ರಾಜನೇ, ಆಗ ಭೇರಿ, ಮೃದಂಗ, ಬ್ರಾಹ್ಮಣರ ವೇದಘೋಷ, ಅನೇಕವಾದ ಗಾನಗಳು ಇವೇ ಮುಂತಾದ ಮಂಗಳಕಾರ್ಯಗಳಿಂದ ಕೂಡಿದುದಾಗಿ ಆ ದೇವತಾ ಪ್ರತಿಷ್ಠೆಯ ಮಹೋತ್ಸವವು ಬಹಳ ವಿಜೃಂಭಣೆಯಿಂದ ನೆರವೇರಿತು.

॥ ವ್ಯಾಸ ಉವಾಚ ॥

**ಪ್ರತಿಷ್ಠಾಪ್ಯ ಶಿವಾಂ ದೇವೀಂ ವಿಧಿವದ್ವೇದವಾದಿಭಿಃ ।**
**ಪೂಜಾಂ ನಾನಾವಿಧಾಂ ರಾಜಾ ಚಕಾರಾತಿವಿಧಾನತಃ ॥೩೫॥**

ವೇದಾರ್ಥವನ್ನು ತಿಳಿದ ವಿದ್ಯಾವಂತರಿಂದ ಮಂಗಳಕರಳಾದ ದೇವಿಯ ವಿಗ್ರಹವನ್ನು ವೇದಶಾಸ್ತ್ರಗಳಲ್ಲಿ ವಿಧಿಸಿರುವ ನಿಯಮಗಳನ್ನನುಸರಿಸಿ ಪ್ರತಿಷ್ಠಾಪಿಸಿ,

ಆ ರಾಜನು ವಿಧವಿಧವಾದ ಪೂಜೆಗಳನ್ನು ಹೆಚ್ಚಾಗಿ ಭಕ್ತಿ ವಿನಯಪೂರ್ವಕವಾಗಿ ನೆರವೇರಿಸಲು ಏರ್ಪಡಿಸಿದನು.

**ಕೃತ್ವಾ ಪೂಜಾವಿಧಿಂ ರಾಜಾ ರಾಜ್ಯಂ ಪ್ರಾಪ್ಯ ಸ್ವಪೈತೃಕಂ ।**
**ವಿಖ್ಯಾತಾಚಾಂಬಿಕಾದೇವೀ ಕೋಸಲೇಷು ಬಭೂವ ಹ ॥೩೬॥**

ಹೀಗೆ ಆ ದೊರೆಯು ದೇವಿಯ ಪೂಜೆಯನ್ನು ಕ್ರಮವಾಗಿ ಸಾಂಗವಾಗಿ ನೆರವೇರಿಸಿ, ಆಮೇಲೆ ತನ್ನ ಪಿತೃಪರಂಪರೆಯಿಂದ ಬಂದ ರಾಜ್ಯವನ್ನು ಸ್ವೀಕರಿಸಿದನು. ಕೋಸಲದೇಶವಲ್ಲಿ ಆ ಜಗನ್ಮಾತೆಯೂ, ಪರಾಶಕ್ತಿಯ ರೂಪಳೂ ಆದ ಅಂಬಿಕಾದೇವಿಯು ಪ್ರಸಿದ್ಧಿಯನ್ನು ಪಡೆದಳು.

**ರಾಜ್ಯಂ ಪ್ರಾಪ್ಯ ನೃಪಃ ಸರ್ವಸಾಮಂತಕನೃಪಾನಥ ।**
**ವಶೇ ಚಕ್ರೇಽತಿಧರ್ಮಿಷ್ಠಾನ್ ಸದ್ಧರ್ಮವಿಜಯೀ ನೃಪಃ ॥೩೭॥**

ಹೀಗೆ ಒಳ್ಳೆಯ ಧರ್ಮಾಚರಣೆಯಿಂದ ಜಯಶಾಲಿಯಾದ ಆ ಸುದರ್ಶನ ರಾಜನು ರಾಜ್ಯವನ್ನು ಹೊಂದಿ ಎಲ್ಲ ಸಾಮಂತರಾಜರನ್ನೂ ತನ್ನ ವಶಪಡಿಸಿಕೊಂಡು ಅವರೆಲ್ಲರನ್ನೂ ಧರ್ಮದಿಂದಲೇ ನಡೆಯುವಂತೆ ಮಾಡಿದನು.

**ಯಥಾ ರಾಮಃ ಸ್ವರಾಜ್ಯೇಽಭೂದ್ದಿಲೀಪಸ್ಯ ರಘುರ್ಯಥಾ ।**
**ಪ್ರಜಾನಾಂ ವೈ ಸುಖಂ ತದ್ವನ್ಮರ್ಯಾದಾಽಪಿ ತಥಾಽಭವತ್ ॥೩೮॥**

ಶ್ರೀರಾಮನೂ, ದಿಲೀಪನೂ, ರಘುಮಹಾರಾಜನೂ ಇವರುಗಳು ಹೇಗೆ ರಾಜ್ಯಭಾರವನ್ನು ಮಾಡಿದರೋ, ಈ ಸುದರ್ಶನರಾಜನೂ ಕೂಡ ಪ್ರಜೆಗಳ ಸುಖ, ಮರ್ಯಾದೆ, ಸ್ಥಾನಮಾನಗಳನ್ನುಂಟುಮಾಡಿ ಕಾಪಾಡುವುದು ಇವೇ ಮುಂತಾದವುಗಳಲ್ಲಿ ಹಾಗೆಯೇ ನಡೆಯಿಸುತ್ತಿದ್ದನು. ಎಂದರೆ ಸದ್ಧರ್ಮದಿಂದ ರಾಜ್ಯಪಾಲನೆಯನ್ನು ಮಾಡುತ್ತಿದ್ದನೆಂದೂ ಅಂತಹ ಸ್ವರಾಜ್ಯದಲ್ಲಿ ಪ್ರಜೆಗಳೂ ಸುಖಶಾಂತಿಗಳುಳ್ಳವರಾಗಿದ್ದರೆಂದೂ ತಾತ್ಪರ್ಯವು.

**ಧರ್ಮೋಽ ವರ್ಣಾಶ್ರಮಾಣಾಂ ಚ ಚತುಷ್ಪಾದಭವತ್ತದಾ ।**
**ನಾಧರ್ಮೇ ರಮತೇ ಚಿತ್ತಂ ಕೇಷಾಮಪಿ ಮಹೀತಲೇ ॥೩೯॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದ ಜನಗಳೂ ತಮ್ಮ ತಮ್ಮ ವರ್ಣಾಶ್ರಮಕರ್ಮಗಳನ್ನು ಬಿಡದೆ ಆಚರಿಸುತ್ತಿದ್ದರು. ಹೀಗೆ ಧರ್ಮಾ ಚರಣೆಯ ಕಾಮಧೇನುವು ತನ್ನ ನಾಲ್ಕು ಕಾಲುಗಳ ಮೇಲೂ ದೃಢವಾಗಿ ನಿಲ್ಲು ವಂತಾಯಿತು. ಅಲ್ಲದೆ ಅನ್ಯಾಯವಾದ ಅಧರ್ಮದಲ್ಲಿ ಎಂದೂ ಯಾರೂ ಆದರ ದಿಂದ ಪ್ರವರ್ತಿಸುತ್ತಿರಲಿಲ್ಲವು. ಇದರಿಂದ ಅವನ ರಾಜ್ಯದಲ್ಲೂ ಮತ್ತು ಎಲ್ಲ ಭೂಮಂಡಲದಲ್ಲೂ ಪಾಪಕ್ಕೆ ನೆಲೆ ಇಲ್ಲದೆ ಧರ್ಮವು ಸ್ಥಿರವಾಗಿ ನಿಲ್ಲುವಂತಾಯಿತು.

**ಗ್ರಾಮೇ ಗ್ರಾಮೇ ಚ ಪ್ರಾಸಾದಾಂಶ್ಚಕ್ರುಃ ಸರ್ವೇ ಜನಾಧಿಪಾಃ ।**
**ದೇವ್ಯಾಃ ಪೂಜಾ ತದಾ ಪ್ರೀತ್ಯಾ ಕೋಸಲೇಷು ಪ್ರವರ್ತಿತಾ ॥೪೦॥**

ಇದರ ಫಲವಾಗಿ ಎಲ್ಲ ರಾಜರೂ ಪ್ರತಿ ಗ್ರಾಮದಲ್ಲಿಯೂ ದುರ್ಗಾದೇವಿಯ ಆರಾಧನೆಗೆ ಮಂದಿರಗಳನ್ನು ಕಟ್ಟಿಸಿ, ದೇವಿಯನ್ನು ಸ್ಥಾಪಿಸಿ ಆದರದಿಂದ ಪೂಜಿಸು ತ್ತಿದ್ದರು. ಕೋಸಲದೇಶದಲ್ಲೆಲ್ಲಾ ಹೀಗೆ ಸಂಪೂರ್ಣವಾಗಿ ದೇವಿಯ ಆರಾಧನೆಯ ಪ್ರಚಾರವು ವಿಸ್ತರಿಸಿತು.

**ಸುಬಾಹುರಪಿ ಕಾಶ್ಯಾಂ ತು ದುರ್ಗಾಯಾಃ ಪ್ರತಿಮಾಂ ಶುಭಾಂ ।**
**ಕಾರಯಿತ್ವಾ ಚ ಪ್ರಾಸಾದಂ ಸ್ಥಾಪಯಾಮಾಸ ಭಕ್ತಿತಃ ॥೪೧॥**

ಸುಬಾಹುರಾಜನೂ ಕೂಡ ಕಾಶಿಯಲ್ಲಿ ಮನೋಹರವಾದ ಅರಮನೆಯನ್ನು ಕಟ್ಟಿಸಿ ಮಂಗಳಕರವಾದ ದುರ್ಗಾದೇವಿಯ ಪ್ರತಿಮೆಯನ್ನು ಮಾಡಿಸಿ ಭಕ್ತಿಯಿಂದ ಅಲ್ಲಿ ಪ್ರತಿಷ್ಠೆಮಾಡಿಸಿದನು.

**ತತ್ರ ತಸ್ಯಾ ಜನಾಃ ಸರ್ವೇ ಪ್ರೇಮಭಕ್ತಿಪರಾಯಣಾಃ ।**
**ಪೂಜಾಂ ಚಕ್ರುರ್ವಿಧಾನೇನ ಯಥಾ ವಿಶ್ವೇಶ್ವರಸ್ಯ ಹ ॥೪೨॥**

ಅಲ್ಲಿ ಆದರದಿಂದ ಭಕ್ತಿಪುರಸ್ಸರವಾಗಿ ಜನರೆಲ್ಲರೂ ಕಾಶೀವಿಶ್ವೇಶ್ವರನನ್ನು ಎಷ್ಟು ಭಕ್ತಿಯಿಂದ ಪೂಜಿಸುವರೋ ಅಷ್ಟು ಭಕ್ತಿಯಿಂದ ವಿಧಿಪೂರ್ವಕವಾಗಿ ಆ ದುರ್ಗಾದೇವಿಯ ಪೂಜೆಯನ್ನೂ ನಡೆಯಿಸುತ್ತಿದ್ದರು.

**ವಿಖ್ಯಾತಾ ಸಾ ಬಭೂವಾಥ ದುರ್ಗಾದೇವೀ ಧರಾತಲೇ ।**
**ದೇಶೇ ದೇಶೇ ಮಹಾರಾಜ ತಸ್ಯಾ ಭಕ್ತಿರ್ವ್ಯವರ್ಧತ ॥೪೩॥**

ಓ ಜನಮೇಜಯರಾಜನೇ, ಹೀಗೆ ಆ ದುರ್ಗಾದೇವಿಯು ಭೂಲೋಕದಲ್ಲಿ ಬಹಳ ಪ್ರಸಿದ್ಧಳಾದಳು. ದೇಶದೇಶದಲ್ಲಿಯೂ ಆ ದೇವಿಯಲ್ಲಿ ಭಕ್ತಿಯು ಬೆಳೆಯಿತು.

**ಸರ್ವತ್ರ ಭಾರತೇ ಲೋಕೇ ಸರ್ವವರ್ಣೇಷು ಸರ್ವಥಾ ।**
**ಭಜನೀಯಾ ಭವಾನೀ ತು ಸರ್ವೇಷಾಮಭವತ್ತದಾ ॥೪೪॥**

ಆಗ ಈ ಇಡಿಯ ಭಾರತದೇಶದಲ್ಲಿ ಎಲ್ಲ ಜಾತಿಗಳಲ್ಲಿಯೂ ಎಲ್ಲರಿಗೂ ಕೂಡ ಎಲ್ಲ ರೀತಿಯಿಂದಲೂ ಭವಾನೀದೇವಿಯು ಪೂಜ್ಯಳೆಂಬ ಭಾವನೆಯುಂಟಾಗಿ ಆ ತಾಯಿಯು ಎಲ್ಲರಿಂದಲೂ ಪೂಜಿಸಲ್ಪಡುವವಳಾದಳು. ಈ ಅಂಶವನ್ನು ಯದ್ಯ ದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ । ಎಂದು ಗೀತೆಯೂ ಸಾರಿ ಹೇಳುತ್ತಿದೆ.

**ಶಕ್ತಿಭಕ್ತಿರತಾಃ ಸರ್ವೇ ಮಾನಿನಶ್ಚಾಭವನ್ನೃಪ ।**
**ಆಗಮೋಕ್ತೈರಥ ಸ್ತೋತ್ರೈರ್ಜಪಧ್ಯಾನಪರಾಯಣಾಃ ॥೪೫॥**

ಓ ಜನಮೇಜಯರಾಜನೇ, ಈ ಆದಿಶಕ್ತಿದೇವಿಯ ಭಕ್ತಿಯಲ್ಲಿ ಆಸಕ್ತರಾದ ಎಲ್ಲರೂ ವೇದೋಕ್ತವಾದ ಸ್ತೋತ್ರ ಜಪ ಧ್ಯಾನ ಪಾರಾಯಣಗಳನ್ನು ಆದರದಿಂದ ಮಾಡುವವರಾದರು.

**ನವರಾತ್ರೇಷು ಸರ್ವೇಷು ಚಕ್ರುಃ ಸರ್ವೇ ವಿಧಾನತಃ ।**
**ಅರ್ಚನಂ ಹವನಂ ಯಾಗಂ ದೇವ್ಯಾ ಭಕ್ತಿಪರಾ ಜನಾಃ ॥೪೬॥**

ವಿಶೇಷವಾಗಿ ಎಲ್ಲರೂ ಪ್ರತಿಯೊಂದು ವರ್ಷದ ನವರಾತ್ರಿಯಲ್ಲಿಯೂ ಕೂಡ ಎಲ್ಲ ಪ್ರಕಾರದಿಂದಲೂ ಪೂಜೆ ಹೋಮ ಯಾಗ ಮುಂತಾದವುಗಳನ್ನು ದೇವಿಯಲ್ಲಿ ಅತ್ಯಂತ ಭಕ್ತಿಯುಳ್ಳವರಾಗಿ ನೆರವೇರಿಸುತ್ತಿದ್ದರು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಪಂಚವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### ॥ ಷಡ್ವಿಂಶೋಽಧ್ಯಾಯಃ ॥

### ಇಪ್ಪತ್ತಾರನೆಯ ಅಧ್ಯಾಯವು

॥ ಜನಮೇಜಯ ಉವಾಚ ॥

**ನವರಾತ್ರೇ ತು ಸಂಪ್ರಾಪ್ತೇ ಕಿಂ ಕರ್ತವ್ಯಂ ದ್ವಿಜೋತ್ತಮ ।**
**ವಿಧಾನಂ ವಿಧಿವದ್ಬ್ರೂಹಿ ಶರತ್ಕಾಲೇ ವಿಶೇಷತಃ ॥೧॥**

ಜನಮೇಜಯರಾಜನು ವ್ಯಾಸಮುನಿಯನ್ನು ಕೇಳಿದನು—ಓ ಬ್ರಾಹ್ಮಣ ಶ್ರೇಷ್ಠನೇ, ಶರದೃತುವಿನ ನವರಾತ್ರಿಯು ಬರಲು ವಿಶೇಷ ರೀತಿಯಿಂದ ವಿಧಿಪೂರ್ವಕ ವಾಗಿ ಹೇಗೆ ಪೂಜೆಯನ್ನು ಮಾಡಬೇಕೆಂಬುದನ್ನು ವಿವರವಾಗಿ ಹೇಳುವವನಾಗು.

**ಕಿಂ ಫಲಂ ಖಲು ಕಸ್ತತ್ರ ವಿಧಿಃ ಕಾರ್ಯೋ ಮಹಾಮತೇ ।**
**ಏತದ್ವಿಸ್ತರತೋ ಬ್ರೂಹಿ ಕೃಪಯಾ ದ್ವಿಜಸತ್ತಮ ॥೨॥**

ವಿಶೇಷ ಬುದ್ಧಿಯಿಂದ ಕೂಡಿದ ಎಲೈ ದ್ವಿಜೋತ್ತಮನೇ, ಈ ವ್ರತವನ್ನು ಮಾಡುವುದರಿಂದ ಯಾವ ಫಲವು ದೊರಕುತ್ತದೆ ? ಆ ಪೂಜಾಕಾರ್ಯದ ಕ್ರಮವು ಹೇಗೆ ? ಯಾರು ಯಾರು ಈ ವ್ರತವನ್ನು ಮಾಡಬೇಕು ? ಈ ವಿಷಯಗಳನ್ನು ವಿಸ್ತಾರವಾಗಿ ತಿಳಿಸುವವನಾಗು.

॥ ವ್ಯಾಸ ಉವಾಚ ॥

**ಶೃಣು ರಾಜನ್ ಪ್ರವಕ್ಷ್ಯಾಮಿ ನವರಾತ್ರವ್ರತಂ ಶುಭಂ ।**
**ಶರತ್ಕಾಲೇ ವಿಶೇಷೇಣ ಕರ್ತವ್ಯಂ ವಿಧಿಪೂರ್ವಕಂ ॥೩॥**

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ ಕೇಳು, ಶುಭ ಕರವಾದ, ಶರದೃತುವಿನಲ್ಲಿ ವಿಶೇಷವಾಗಿ ಶಾಸ್ತ್ರನಿಯಮಾನುಸಾರವಾಗಿ ಮಾಡ ಬೇಕಾದ, ಈ ನವರಾತ್ರ ವ್ರತದ ಕ್ರಮವನ್ನು ಹೇಳುತ್ತೇನೆ, ಕೇಳು

**ವಸಂತೇ ಚ ಪ್ರಕರ್ತವ್ಯಂ ತಥೈವ ಪ್ರೇಮಪೂರ್ವಕಂ ।**
**ದ್ವಾವೃತೂ ಯಮದಂಷ್ಟ್ರಾಖ್ಯೌ ನೂನಂ ಸರ್ವಜನೇಷು ವೈ ॥೪॥**

ವಸಂತಋತುವಿನಲ್ಲಿಯೂ ಕೂಡ ಹಾಗೆಯೇ ಭಕ್ತಿಪುರಸ್ಸರವಾಗಿ ದೇವಿಯ ಪೂಜೆಯನ್ನು ನಡೆಯಿಸಬೇಕು. ಏಕೆಂದರೆ, ಈ ಎರಡು ಋತುಗಳೂ ಎಲ್ಲ ಜನ ರಲ್ಲಿಯೂ ಯಮದಂಷ್ಟ್ರ ಎಂಬ ಹಸರಿನಿಂದ ಪ್ರಸಿದ್ಧವಾಗಿವೆ.

**ಶರದ್ವಸಂತನಾಮಾನೌ ದುರ್ಗಮೌ ಪ್ರಾಣಿನಾಮಿಹ ।**
**ತಸ್ಮಾದ್ಯತ್ನಾದಿಕಂ ಕಾರ್ಯಂ ಸರ್ವತ್ರ ಶುಭಮಿಚ್ಛತಾ ॥೫॥**

ಈ ಶರದ್ವಸಂತಋತುಗಳನ್ನು ಕಳೆಯುವುದು ಪ್ರಾಣಿಗಳಿಗೆ ಬಹಳ ಕಷ್ಟದಾ ಯಕವಾದುದರಿಂದ ಆಗಲೂ ಒಳ್ಳೆಯದಾಗಲೆಂದು ಅಪೇಕ್ಷಿಸುವವನು ಈ ವ್ರತವನ್ನು ಮಾಡುವುದರಿಂದ ಆ ದೋಷವು ಪರಿಹಾರವಾಗಿ ಮಂಗಳ ಉಂಟಾಗುವುದು.

**ದ್ವಾವೇವ ಸುಮಹಾಘೋರಾವೃತೂ ರೋಗಕರೌ ನೃಣಾಂ ।**
**ವಸಂತಶರದಾವೇವ ಜನನಾಶಕರಾವುಭೌ ॥೬॥**

ಮಿಕ್ಕ ಋತುಗಳನ್ನು ಬಿಟ್ಟು ಈ ಎರಡು ಋತುಗಳೇ ಪ್ರಾಣಿಗಳಿಗೆ ರೋಗ ಮುಂತಾದ ಬಾಧೆಗಳನ್ನು ಉಂಟುಮಾಡತಕ್ಕವುಗಳಾಗಿರುವುದರಿಂದ ತುಂಬ ಭಯಂಕರವಾದವು ಮತ್ತು ಜನರ ನಾಶವನ್ನುಂಟುಮಾಡತಕ್ಕವುಗಳಾಗಿಯೂ ಇರು ವುದರಿಂದ ಇವುಗಳಲ್ಲಿ ಆ ಮಂಗಳಕರವಾದ ವ್ರತವನ್ನು ಆಚರಿಸುವುದರಿಂದ ರೋಗಾ ದಿಗಳ ನಿವಾರಣೆಯಾಗಿ ಸುಖವುಂಟಾಗುವುದೆಂದು ತಾತ್ಪರ್ಯವು.

**ತಸ್ಮಾತ್ತತ್ರ ಪ್ರಕರ್ತವ್ಯಂ ಚಂಡಿಕಾಪೂಜನಂ ಬುಧೈಃ ।**
**ಚೈತ್ರೇಽಶ್ವಿನೇ ಶುಭೇ ಮಾಸೇ ಭಕ್ತಿಪೂರ್ವಂ ನರಾಧಿಪ ॥೭॥**

ಓ ದೊರೆಯೇ, ಆದುದರಿಂದ ತಿಳಿದವರು, ಶುಭಕರವಾದ ಚೈತ್ರ, ಆಶ್ವಯುಜ ತಿಂಗಳುಗಳಲ್ಲಿ ಚಂಡಿಕಾದೇವಿಯ ಪೂಜೆಯನ್ನು ಭಕ್ತಿವಿಶ್ವಾಸಗಳೊಡನೆ ಮಾಡಬೇಕು.

**ಅಮಾವಾಸ್ಯಾಂ ಚ ಸಂಪ್ರಾಪ್ಯ ಸಂಭಾರಂ ಕಲ್ಪಯೇಚ್ಛುಭಂ ।**
**ಹವಿಷ್ಯಂ ಚಾಶನಂ ಕಾರ್ಯಮೇಕಭುಕ್ತಂ ತು ತದ್ದಿನೇ ॥೮॥**

ಫಾಲ್ಗುನ ಮತ್ತು ಭಾದ್ರಪದಮಾಸಗಳ ಅಮಾವಾಸ್ಯೆಯ ದಿವಸದಲ್ಲಿ ಮುಂದಿನ ವ್ರತಕ್ಕೆ ಬೇಕಾಗುವ ಸಲಕರಣೆ, ಮಂಗಳದ್ರವ್ಯ ಮುಂತಾದವುಗಳನ್ನು ಹವಣಿಸಿಕೊಳ್ಳಬೇಕು. ಹೋಮಪೂಜೆಗಳಲ್ಲಿ ಉಪಯೋಗಿಸಿ ಉಳಿದ ಅನ್ನವನ್ನು ಮಾತ್ರ ಊಟಮಾಡಬೇಕು. ಅಲ್ಲದೆ, ಆ ದಿವಸದಲ್ಲಿ ಒಂದೇ ಹೊತ್ತು ಊಟವನ್ನು ಮಾಡಬೇಕು.

**ಮಂಡಪಸ್ತು ಪ್ರಕರ್ತವ್ಯಃ ಸಮೇ ದೇಶೇ ಶುಭೇ ಸ್ಥಲೇ ।**
**ಹಸ್ತಷೋಡಶಮಾನೇನ ಸ್ತಂಭಧ್ವಜಸಮನ್ವಿತಃ ॥೯॥**

ಅಲ್ಲದೆ ಹದಿನಾರು ಹಸ್ತಪ್ರಮಾಣವುಳ್ಳ, ಸಮವಾದ ಪ್ರದೇಶದಲ್ಲಿ ಶುಭಕರವಾದ ಸ್ಥಳದಲ್ಲಿ ಸ್ತಂಭಗಳು, ಧ್ವಜಗಳು ಇವುಗಳಿಂದ ಕೂಡಿದ ಮಂಟಪವನ್ನು ರಚಿಸಬೇಕು.

**ಚತುರ್ಹಸ್ತಾ ಚ ಹಸ್ತೋಚ್ಛ್ರಾ ಪೀಠಾರ್ಥಂ ಸ್ಥಾನಮುತ್ತಮಂ ।**
**ತೋರಣಾನಿ ವಿಚಿತ್ರಾಣಿ ವಿತಾನಂ ಚ ಪ್ರಕಲ್ಪಯೇತ್ ॥೧೦॥**

ಆಮೇಲೆ ಬೆಳ್ಳಗಿರುವ ಮಣ್ಣು ಸಗಣಿ ಇವುಗಳಿಂದ ಲೇಪನವನ್ನು ಆ ಪ್ರದೇಶಕ್ಕೆ ಮಾಡಬೇಕು. ಆದರ ಮಧ್ಯದಲ್ಲಿ ನಾಲ್ಕು ಕೈ ಅಳತೆಯ ವಿಸ್ತಾರವುಳ್ಳ, ಒಂದು ಕೈ ಎತ್ತರವುಳ್ಳ, ಗಟ್ಟಿಯಾಗಿಯೂ ಸ್ಥಿರವಾಗಿಯೂ ಇರತಕ್ಕ ಜಗುಲಿಯನ್ನು ಮಾಡಬೇಕು. ಅದರ ಮಧ್ಯದಲ್ಲಿ ಒಂದು ಕೈ ಅಳತೆಯುಳ್ಳ ಆಸನವನ್ನು ರಚಿಸಬೇಕು. ಅಲ್ಲದೆ ಆ ಮಂಟಪಕ್ಕೆ ವಿಧವಿಧವಾದ ತೋರಣಗಳು ಮತ್ತು ಮೇಲುಕಟ್ಟುಗಳು ಇವುಗಳನ್ನು ಕಟ್ಟಬೇಕು.

**ರಾತ್ರೌ ದ್ವಿಜಾನಥಾಮಂತ್ರ್ಯ ದೇವೀ ತತ್ತ್ವವಿಶಾರದಾನ್ ।**
**ಆಚಾರನಿರತಾನ್ದಾನ್ತಾನ್ವೇದವೇದಾಂಗಪಾರಗಾನ್ ॥೧೧॥**

ಆ ಅಮಾವಾಸ್ಯೆಯ ರಾತ್ರಿಯಲ್ಲಿಯೇ, ದೇವೀತತ್ತ್ವವನ್ನು ಚನ್ನಾಗಿ ತಿಳಿದಿರುವ, ಸದಾಚಾರದಲ್ಲಿ ನಿರತರಾಗಿರುವ ಇಂದ್ರಿಯನಿಗ್ರಹವುಳ್ಳ, ವೇದವೇದಾರ್ಥ ವೇದಾಂಗಗಳಲ್ಲಿ ಪಾಂಡಿತ್ಯವನ್ನು ಹೊಂದಿರುವ ಬ್ರಾಹ್ಮಣರನ್ನು ಆಹ್ವಾನಿಸಬೇಕು.

**ಪ್ರತಿಪದ್ದಿವಸೇ ಕಾರ್ಯಂ ಪ್ರಾತಃ ಸ್ನಾನಂ ವಿಧಾನತಃ ।**
**ನದ್ಯಾಂ ನದೇ ತಡಾಗೇ ವಾ ವಾಪ್ಯಾಂ ಕೂಪೇ ಗೃಹೇಽಥವಾ ॥೧೨॥**

ಮಾರನೆಯ ದಿನ ಎಂದರೆ ಶುಕ್ಲಪಾಡ್ಯಮಿಯ ದಿವಸ ಬೆಳಗ್ಗೆ, ನದಿ, ನದ, ಕೆರೆ, ಕೊಳ, ಬಾವಿ ಅಥವಾ ಮನೆಯಲ್ಲಾಗಲೀ ಸ್ನಾನವನ್ನು ವಿಧಿಪೂರ್ವಕವಾಗಿ ಮಾಡಬೇಕು. ಪಶ್ಚಿಮದಿಕ್ಕಿಗೆ ಹರಿಯುತ್ತಾ ಸಮುದ್ರಕ್ಕೆ ಸೇರುವ ನದಿಗೆ ನದ ಎಂದು ಹೆಸರು.

**ಪ್ರಾತರ್ನಿತ್ಯಂ ಪುರಃ ಕೃತ್ವಾ ದ್ವಿಜಾನಾಂ ವರಣಂ ತತಃ ।**
**ಅರ್ಘ್ಯಪಾದ್ಯಾದಿಕಂ ಸರ್ವಂ ಕರ್ತವ್ಯಂ ಮಧುಪೂರ್ವಕಂ ॥೧೩॥**

ಪ್ರತಿನಿತ್ಯವೂ ಬೆಳಗ್ಗೆ ಮೊದಲು ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳನ್ನು ನೆರವೇರಿಸಿ, ಈ ವ್ರತದ ಕಾರ್ಯಗಳನ್ನು ನೆರವೇರಿಸುವುದಕ್ಕೆ ಬ್ರಾಹ್ಮಣಶ್ರೇಷ್ಠರ ವರಣವನ್ನು ಮಾಡಿ ಅವರನ್ನು ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ ಮೊದಲಾದುವುಗಳಿಂದ ಸತ್ಕರಿಸಿ ಪೂಜಿಸಬೇಕು.

**ವಸ್ತ್ರಾಲಂಕರಣಾದೀನಿ ದೇಯಾನಿ ಚ ಸ್ವಶಕ್ತಿತಃ ।**
**ವಿತ್ತಶಾಠ್ಯಂ ನ ಕರ್ತವ್ಯಂ ವಿಭವೇ ಸತಿ ಕರ್ಹಿಚಿತ್ ॥೧೪॥**

ಉತ್ತಮವಾದ ವಸ್ತ್ರಾಭರಣಾದಿಗಳನ್ನು ತನ್ನ ಶಕ್ತಿ ಇದ್ದಷ್ಟು ಅವರಿಗೆ ಕೊಡಬೇಕು. ಐಶ್ವರ್ಯವಿದ್ದರೂ ಕೊಡದೆ ಜಿಪುಣತನವನ್ನು ಮಾತ್ರ ತೋರಿಸಬಾರದು. ಉದಾರಿಯಾಗಿ ಒಳ್ಳೆಯ ಮನಸ್ಸಿನಿಂದ ದಾನ ಮಾಡಬೇಕೆಂದು ತಾತ್ಪರ್ಯವು.

**ವಿಪ್ರೈಃ ಸಂತೋಷಿತೈಃ ಕಾರ್ಯಂ ಸಂಪೂರ್ಣಂ ಸರ್ವಥಾ ಭವೇತ್ ।**
**ನವ ಪಂಚತ್ರಯಶ್ಚೈಕೋ ದೇವ್ಯಾಃ ಪಾಠೇ ದ್ವಿಜಾಃ ಸ್ಮೃತಾಃ ॥೧೫॥**

ಈ ರೀತಿಯಾಗಿ ಸಂತೋಷಪಡಿಸಲ್ಪಟ್ಟ ಬ್ರಾಹ್ಮಣರಿಂದ ಕೂಡಿ ಮಾಡುವುದಾದರೆ ಈ ವ್ರತವು ಪೂರ್ಣವಾಗಿ, ಅದರಿಂದ ಖಂಡಿತವಾಗಿಯೂ ದೇವಿಯು ಸಂತೃಪ್ತಿಯನ್ನು ಹೊಂದುವಳು. ದೇವಿಯ ಪರವಾದ ಗ್ರಂಥಗಳ ಪಾರಾಯಣವನ್ನು ಮಾಡಲು ಅವರವರ ಶಕ್ತ್ಯನುಸಾರವಾಗಿ ಒಂಬತ್ತು, ಐದು, ಮೂರು ಅಥವಾ ಒಬ್ಬರು ಈರೀತಿಯಾಗಿ ಅವಶ್ಯಕವಾಗುವಷ್ಟು ಅಥವಾ ಶಕ್ತಿಯಿದ್ದಷ್ಟು ಜನ ಬ್ರಾಹ್ಮ

ಣರನ್ನು ಆಹ್ವಾನಿಸಿ ದೇವೀಭಾಗವತ ಅಥವಾ ದುರ್ಗಾಸಪ್ತಶತೀ ಮುಂತಾದ ಗ್ರಂಥದ ಪಾರಾಯಣವನ್ನು ಮಾಡಿಸಬೇಕು ಎಂದು ಶಾಸ್ತ್ರದಲ್ಲಿ ಹೇಳಿದೆ. ಇದರಲ್ಲಿ ಮೊದಲನೆಯದು ಗುರ್ವನುಷ್ಠಾನಕ್ರಮಕ್ಕೆ ಸೇರಿದುದು. ಎರಡನೆಯದು ಲಘ್ವನುಷ್ಠಾನಕ್ರಮಕ್ಕೆ ಸೇರಿದ್ದಾಗಿದೆ.

**ವರಯೇದ್ಬ್ರಾಹ್ಮಣಂ ಶಾಂತಂ ಪಾರಾಯಣಕೃತೇ ತದಾ ।**
**ಸ್ವಸ್ತಿವಾಚನಕಂ ಕಾರ್ಯಂ ವೇದಮಂತ್ರವಿಧಾನತಃ ॥೧೬॥**

ಶಾಂತಸ್ವಭಾವವುಳ್ಳ ಒಬ್ಬ ಬ್ರಾಹ್ಮಣನನ್ನು ಈ ಪಾರಾಯಣಕಾರ್ಯವನ್ನು ನೆರವೇರಿಸುವುದಕ್ಕೋಸ್ಕರ ವರಣಮಾಡಿ ಆಮೇಲೆ ವೇದಮಂತ್ರಪುರಸ್ಸರವಾಗಿ ಸ್ವಸ್ತಿ ಪುಣ್ಯಾಹವಾಚನವನ್ನು ವಿಧಿಪೂರ್ವಕವಾಗಿ ಮಾಡಬೇಕು.

**ವೇದ್ಯಾಂ ಸಿಂಹಾಸನಂ ಸ್ಥಾಪ್ಯ ಕ್ಷೌಮವಸ್ತ್ರಸಮನ್ವಿತಂ ।**
**ತತ್ರ ಸ್ಥಾಪ್ಯಾಂಬಿಕಾ ದೇವೀ ಚತುರ್ಹಸ್ತಾಯುಧಾನ್ವಿತಾ ॥೧೭॥**

**ರತ್ನಭೂಷಣಸಂಯುಕ್ತಾ ಮುಕ್ತಾಹಾರವಿರಾಜಿತಾ ।**
**ದಿವ್ಯಾಂಬರಧರಾ ಸೌಮ್ಯಾ ಸರ್ವಲಕ್ಷಣಸಂಯುತಾ ॥೧೮॥**

ಹಿಂದೆ ಹೇಳಿದ ಜಗಲಿಯಲ್ಲಿರುವ ಪೀಠಸ್ಥಾನದಲ್ಲಿ ಪೀತಾಂಬರವನ್ನು ಹಾಸಿ ಅದರಮೇಲೆ ಸಿಂಹಾಸನವನ್ನು ಸ್ಥಾಪಿಸಿ ಅದರಲ್ಲಿ ನಾಲ್ಕು ಭುಜಗಳಿಂದಲೂ ಶಂಖ, ಚಕ್ರ, ಗದೆ ಎಂಬ ಆಯುಧಗಳನ್ನೂ ಕಮಲವನ್ನೂ ಹಿಡಿದುಕೊಂಡಿರುವ, ರತ್ನಾಭರಣಗಳ ಅಲಂಕಾರದಿಂದ ಕೂಡಿರುವ, ಮುತ್ತುಗಳ ಸರಗಳಿಂದ ಪ್ರಕಾಶಮಾನಳಾದ, ದಿವ್ಯದುಕೂಲಗಳನ್ನು ಧರಿಸಿರುವ, ಸೌಮ್ಯಮುಖಭಾವದಿಂದ ಕೂಡಿರುವ ಸಿಂಹ ವಾಹನದ ಮೇಲೆ ಮಂಡಿಸಿರುವ ಮತ್ತು ಎಲ್ಲ ಶುಭಲಕ್ಷಣಗಳಿಂದಲೂ ಕೂಡಿರುವ ಅಂಬಿಕಾದೇವಿಯ ವಿಗ್ರಹವನ್ನು ಇಡಬೇಕು.

**ಶಂಖಚಕ್ರಗದಾಪದ್ಮಧರಾ ಸಿಂಹೇ ಸ್ಥಿತಾ ಶಿವಾ ।**
**ಅಷ್ಟಾದಶಭುಜಾ ವಾಪಿ ಪ್ರತಿಷ್ಠಾಪ್ಯಾ ಸನಾತನೀ ॥೧೯॥**

ಅಥವಾ, ಶಂಖ, ಚಕ್ರ, ಗದಾ, ಪದ್ಮ ಇವುಗಳಿಂದಲೂ, ಇತರ ಆಯುಧಗಳಿಂದಲೂ ಭೂಷಿತಳಾದ ಸಿಂಹದ ಮೇಲೆ ಮಂಡಿಸಿರುವ, ಮಂಗಳಕರಳಾದ, ಹದಿ

ನೆಂಟು ಭುಜಗಳಿಂದ ಕೂಡಿದವಳಾದ, ಸನಾತನಳಾದ ಎಂದರೆ ಅನಾದ್ಯಂತಳೂ ನಿತ್ಯಳೂ ಆದ, ದುರ್ಗಾದೇವಿಯನ್ನಾದರೂ ಪ್ರತಿಷ್ಠೆಮಾಡಬೇಕು.

**ಅರ್ಚಾಭಾವೇ ತಥಾ ಯಂತ್ರಂ ನವಾರ್ಣಮಂತ್ರಸಂಯುತಂ ।**
**ಸ್ಥಾಪಯೇತ್ಪೀಠಪೂಜಾರ್ಥಂ ಕಲಶಂ ತತ್ರ ಪಾರ್ಶ್ವತಃ ॥೨೦॥**

ಪ್ರತಿಮೆಯನ್ನು ಮಾಡಿಸಲು ಸಾಧ್ಯವಿಲ್ಲದ ಪಕ್ಷದಲ್ಲಿ, ದೇವಿಯ ನವಾರ್ಣ ಮಂತ್ರದಿಂದ ಕೂಡಿದ ಯಂತ್ರವನ್ನು ಸಿಂಹಾಸನದಲ್ಲಿಟ್ಟು, ಪೀಠಪೂಜೆಗೋಸ್ಕರವಾಗಿ ಅದರ ಪಕ್ಕದಲ್ಲಿ ಕಲಶಸ್ಥಾಪನವಿಧಿಯಿಂದ ಒಂದು ಕಲಶವನ್ನು ಇಡಬೇಕು.

**ಪಂಚಪಲ್ಲವಸಂಯುಕ್ತಂ ವೇದಮಂತ್ರೈಃ ಸುಸಂಸ್ಕೃತಂ ।**
**ಸುತೀರ್ಥಜಲಸಂಪೂರ್ಣಂ ಹೇಮರತ್ನೈಃ ಸಮನ್ವಿತಂ ॥೨೧॥**

ಆ ಕಲಶದಲ್ಲಿ ಪಂಚಪಲ್ಲವಗಳೆಂದು ಕರೆಯಲ್ಪಡುವ ಐದು ಬಗೆಯ ಅರಳಿ, ಆಲ, ಮಾವು, ಗೋಣಿ, ಅತ್ತಿ ಮುಂತಾದ ವೃಕ್ಷಗಳ ಚಿಗುರುಗಳನ್ನೂ, ಮಂತ್ರ ಪೂತವಾದ ಗಂಗಾದಿತೀರ್ಥದ ನೀರನ್ನೂ ಚಿನ್ನ, ರತ್ನ ಇವುಗಳನ್ನೂ ಹಾಕಿ ಇಡಬೇಕು.

**ಪಾರ್ಶ್ವೇ ಪೂಜಾರ್ಥಸಂಭಾರಾನ್ ಪರಿಕಲ್ಪ್ಯ ಸಮಂತತಃ ।**
**ಗೀತವಾದಿತ್ರನಿರ್ಘೋಷಾನ್ಕಾರಯೇನ್ಮಂಗಲಾಯ ವೈ ॥೨೨॥**

ತನ್ನ ಬಲಗಡೆಯ ಪಕ್ಕದಲ್ಲಿ ಪೂಜೆಗೆ ಬೇಕುಬೇಕಾದ, ವಸ್ತ್ರ, ಉಪವೀತ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ ಮುಂತಾದ ಸಕಲ ಸಾಮಗ್ರಿ ಗಳನ್ನೂ ಸುತ್ತಲೂ ಅಣಿಮಾಡಿ ಇಟ್ಟುಕೊಳ್ಳಬೇಕು. ಪೂಜೆಯ ಸಮಯದಲ್ಲಿ ಹಾಡು, ಸಂಗೀತ, ಮೃದಂಗ, ನಗಾರಿ, ಜಾಗಟೆ, ಗಂಟೆ ಮುಂತಾದವುಗಳ ಧ್ವನಿಗ ಳನ್ನು ಮಂಗಳಾರ್ಥವಾಗಿ ಮಾಡಬೇಕು.

**ತಿಥೌ ಹಸ್ತಾನ್ವಿತಾಯಾಂ ಚ ನಂದಾಯಾಂ ಪೂಜನಂ ವರಂ ।**
**ಪ್ರಥಮೇ ದಿವಸೇ ರಾಜನ್ ವಿಧಿವತ್ಕಾಮದಂ ನೃಣಾಂ ॥೨೩॥**

ಹಸ್ತಾನಕ್ಷತ್ರದಿಂದ ಕೂಡಿರುವ ನಂದಾ ಎಂಬ ಪಾಡ್ಯಮಿಯ ದಿವಸ ಪೂಜೆ ಯನ್ನು ವಿಧಿವತ್ತಾಗಿ ಮಾಡುವುದು ಬಹಳ ಶ್ರೇಷ್ಠವಾದುದು ಮತ್ತು ಎಲ್ಲ ಇಷ್ಟಾರ್ಥ ಗಳನ್ನೂ ಕೊಡುತ್ತದೆ.

**ನಿಯಮಂ ಪ್ರಥಮಂ ಕೃತ್ವಾ ಪಶ್ಚಾತ್ಪೂಜಾಂ ಸಮಾಚರೇತ್ ।**
**ಉಪವಾಸೇನ ನಕ್ತೇನ ಚೈಕಭುಕ್ತೇನ ವಾ ಪುನಃ ॥೨೪॥**

ಮೊದಲಿನಲ್ಲಿ ಮನಸ್ಸಂಕಲ್ಪವನ್ನು ಮಾಡಿ ಅನಂತರ ಪೂಜೆಯನ್ನು ಮಾಡಬೇಕು. ಹಗಲುರಾತ್ರಿ ಎರಡು ಹೊತ್ತುಗಳಲ್ಲೂ ಊಟಮಾಡದಿರುವುದಕ್ಕೆ ಉಪವಾಸವೆಂದೂ, ಮಧ್ಯಾಹ್ನದಲ್ಲಿ ಊಟಮಾಡಿ ರಾತ್ರಿಯಲ್ಲಿ ಉಪವಾಸವನ್ನಾಚರಿಸುವುದಕ್ಕೆ ಏಕಭುಕ್ತವೆಂದೂ, ಹಗಲು ಉಪವಾಸವನ್ನು ಮಾಡಿ ರಾತ್ರಿಯಲ್ಲಿ ಮಿತಾಹಾರ ಮಾಡುವುದಕ್ಕೆ ನಕ್ತವೆಂದೂ ವ್ಯವಹಾರವಿದೆ. ಇವುಗಳಲ್ಲಿ ಸಾಧ್ಯವಾದುದನ್ನು ಆಚರಿಸಬೇಕು. ಮೇಲಾಗಿ ಮನಸ್ಸನ್ನು ಧ್ಯಾನದಿಂದ ದೇವಿಯ ಸಮೀಪದಲ್ಲಿರುವಂತೆ ಮಾಡಿರುವುದು ಮುಖ್ಯವಾದ ಉಪವಾಸವು.

**ಕರಿಷ್ಯಾಮಿ ವ್ರತಂ ಮಾತರ್ನವರಾತ್ರಮನುತ್ತಮಂ ।**
**ಸಾಹಾಯ್ಯಂ ಕುರು ಮೇ ದೇವಿ ಜಗದಂಬ ಮಮಾಖಿಲಂ ॥೨೫॥**

ಓ ಜಗತ್ತನ್ನು ಪಾಲಿಸುವ ತಾಯಿಯೇ, ನಾನು ಈ ನವರಾತ್ರವ್ರತವನ್ನು ಮಾಡುತ್ತೇನೆ. ಇದಕ್ಕೆ ನನಗೆ ಬೇಕಾದ ಎಲ್ಲ ಸಹಾಯಗಳನ್ನೂ ಒದಗಿಸಿಕೊಡಬೇಕೆಂದು ಅಂಬಿಕೆಯನ್ನು ಪ್ರಾರ್ಥಿಸಬೇಕು.

**ಯಥಾಶಕ್ತಿ ಪ್ರಕರ್ತವ್ಯೋ ನಿಯಮೋ ವ್ರತಹೇತವೇ ।**
**ಪಶ್ಚಾತ್ಪೂಜಾ ಪ್ರಕರ್ತವ್ಯಾ ವಿಧಿವನ್ಮಂತ್ರಪೂರ್ವಕಂ ॥೨೬॥**

ವ್ರತವನ್ನಾಚರಿಸಲು ತನಗೆ ಸಾಧ್ಯವಾದಷ್ಟುಮಟ್ಟಿಗೆ ನಿಯಮವನ್ನು ಆಚರಿಸಬೇಕು. ಆಮೇಲೆ ವಿಧಿಪೂರ್ವಕವಾಗಿಯೂ ಮಂತ್ರಪೂರ್ವಕವಾಗಿಯೂ ಪೂಜೆಯನ್ನು ನಡೆಯಿಸಬೇಕು.

**ಚಂದನಾಗರುಕರ್ಪೂರೈಃ ಕುಸುಮೈಶ್ಚ ಸುಗಂಧಿಭಿಃ ।**
**ಮಂದಾರಕರಜಾಶೋಕಚಂಪಕೈಃ ಕರವೀರಕೈಃ ॥೨೭॥**

**ಮಾಲತೀಬ್ರಹ್ಮಕಾಪುಷ್ಪೈಸ್ತಥಾ ಬಿಲ್ವದಲೈಃ ಶುಭೈಃ ।**
**ಪೂಜಯೇಜ್ಜಗತಾಂ ಧಾತ್ರೀಂ ಧೂಪೈರ್ದೀಪೈರ್ವಿಧಾನತಃ ॥೨೮॥**

ಶ್ರೀಗಂಧ, ಪಾಲುಮಡ್ಡಿ, ಕರ್ಪೂರ ಮುಂತಾದ ಸುವಾಸನೆಗಳಿಂದ ಕೂಡಿದ ಧೂಪಗಳಿಂದಲೂ, ಸುವಾಸನೆಯಿಂದ ಕೂಡಿದ ಮಂದಾರಪುಷ್ಪ, ಕರಜಪುಷ್ಪ,

ಅಶೋಕಪುಷ್ಪ, ಸಂಪಿಗೆ, ಗನ್ನೇರಲೆ, ಜಾಜಿ, ಬ್ರಹ್ಮಕಾ, ಈ ಹೂವುಗಳಿಂದಲೂ ಉತ್ತಮವಾದ ಬಿಲ್ವದಳಗಳಿಂದಲೂ ಧೂಪದೀಪನೈವೇದ್ಯಾದಿಗಳಿಂದಲೂ ವಿಧಿಪೂರ್ವಕ ವಾಗಿ ಜಗತ್ತನ್ನು ಪಾಲಿಸುವ ಅಂಬಿಕಾದೇವಿಯನ್ನು ಪೂಜೆಮಾಡಬೇಕು.

**ಫಲೈರ್ನಾನಾವಿಧೈರರ್ಘ್ಯಂ ಪ್ರದಾತವ್ಯಂ ಚ ತತ್ರ ವೈ ।**
**ನಾರಿಕೇಲೈರ್ಮಾತುಲಿಂಗೈರ್ದಾಡಿಮೀಕದಲೀಫಲೈಃ ॥೨೯॥**
**ನಾರಂಗೈಃ ಪನಸೈಶ್ಚೈವ ತಥಾ ಪೂರ್ಣಫಲೈಃ ಶುಭೈಃ ।**

ಹೀಗೆ ಪೂಜೆಮಾಡಿದಮೇಲೆ ಅನೇಕ ಬಗೆಯ ಫಲಗಳಿಂದ ಅಂಬಿಕಾದೇವಿಗೆ ಅರ್ಘ್ಯವನ್ನು ಕೊಡಬೇಕು. ಅವು ಯಾವುವೆಂದರೆ, ತೆಂಗಿನಕಾಯಿ, ಮಾದಳ, ದಾಳಿಂಬ, ಬಾಳೇಹಣ್ಣು, ಕಿತ್ತಲೇಹಣ್ಣು, ಹಲಸಿನಹಣ್ಣು, ಬಿಲ್ವಪತ್ರೆಹಣ್ಣು ಈ ಫಲಗಳಿಂದ ಕೂಡಿದ ಅರ್ಘ್ಯವನ್ನು ಅರ್ಪಿಸಬೇಕು.

**ಅನ್ನದಾನಂ ಪ್ರಕರ್ತವ್ಯಂ ಭಕ್ತಿಪೂರ್ವಂ ನರಾಧಿಪ ॥೩೦॥**

ಓ ದೊರೆಯೇ, ಆಮೇಲೆ ಭಕ್ತಿಪೂರ್ವಕವಾಗಿ ದೇವಿಯ ಪ್ರೀತ್ಯರ್ಥವಾಗಿ ಅನ್ನದಾನವನ್ನು ಮಾಡಬೇಕು.

**ಮಾಂಸಾಶನಂ ಯೇ ಕುರ್ವಂತಿ ತೈಃ ಕಾರ್ಯಂ ಪಶುಹಿಂಸನಂ ।**
**ಮಹಿಷಾಜವರಾಹಾಣಾಂ ಬಲಿದಾನಂ ವಿಶಿಷ್ಯತೇ ॥೩೧॥**

ಮಾಂಸವನ್ನು ಯಾರು ತಿನ್ನುತ್ತಾರೋ ಅವರು ಎಮ್ಮೆ, ಮೇಕೆ, ಹಂದಿ ಈ ಪ್ರಾಣಿಗಳನ್ನು ಕೊಂದು ಬಲಿದಾನವನ್ನು ಮಾಡಬೇಕು. ಇದು ವಿಶೇಷವಾ ದುದಾಗಿದೆ. ಇದರಂತೆಯೇ ದುರ್ಗಾಸಪ್ತಶತಿಯ ಪ್ರಾಕೃತಿಕ ರಹಸ್ಯದಲ್ಲೂ " ಬಲಿ ಮಾಂಸಾದಿಪೂಜೇಯಂ ವಿಪ್ರವರ್ಜ್ಯಾ ಮಯೇರಿತಾ " ॥೨೯॥ ಎಂದು ನಿಷೇಧಿಸಿದೆ.

**ದೇವ್ಯಗ್ರೇ ನಿಹತಾ ಯಾಂತಿ ಪಶವಃ ಸ್ವರ್ಗಮವ್ಯಯಂ ।**
**ನ ಹಿಂಸಾ ಪಶುಜಾ ತತ್ರ ನಿಘ್ನತಾಂ ತತ್ಕೃತೇಽನಘ ॥೩೨॥**

ದೇವಿಯ ಮುಂದೆ ದೇವಿಗೋಸ್ಕರವಾದ ಬಲಿಯಾಗಿ ಕೊಲ್ಲಲ್ಪಟ್ಟ ಪಶುಗಳು ಶಾಶ್ವತವಾದ ಸ್ವರ್ಗಪದವಿಯನ್ನು ಹೊಂದುತ್ತವೆ. ಆದುದರಿಂದ ಪಶುವನ್ನು ದೇವಿಯ ಪೂಜೆಗಾಗಿ ಕೊಂದವನಿಗೆ ಪಶುಹಿಂಸಾದೋಷವು ಬರುವುದಿಲ್ಲವು. ಇದು

ಸರ್ವಸಮ್ಮತವಾದ ಅಭಿಪ್ರಾಯವಲ್ಲವು, ಎಂಬುದು ಧರ್ಮಶಾಸ್ತ್ರಗಳಿಂದ ತಿಳಿಯ ಬರುತ್ತದೆ.

**ಅಹಿಂಸಾ ಯಾಜ್ಞಿಕೀ ಪ್ರೋಕ್ತಾ ಸರ್ವಶಾಸ್ತ್ರವಿನಿರ್ಣಯೇ ।**
**ದೇವತಾರ್ಥೇ ವಿಸೃಷ್ಟಾನಾಂ ಪಶೂನಾಂ ಸ್ವರ್ಗತಿರ್ಧ್ರುವಾ ॥೩೩॥**

ಹಿಂಸೆಯನ್ನು ಮಾಡದ ಪೂಜೆಯನ್ನು ಮಾಡುವುದೇ ಶಾಸ್ತ್ರೀಯವಾದ ಯಜ್ಞವೆಂದು ಶಾಸ್ತ್ರದಲ್ಲಿ ನಿರ್ಣಯವಿದೆ. ಆದರೂ ಮಾಂಸಾಹಾರಿಗಳು ಮಾತ್ರ ಪಶುಹಿಂಸೆಯನ್ನು ದೇವತಾತೃಪ್ತಿಗಾಗಿ ಮಾಡುವುದರಿಂದ ದೋಷವಿಲ್ಲವು. ಅಲ್ಲದೆ ಅಂತಹ ಪಶುಗಳಿಗೆ ಸ್ವರ್ಗಪ್ರಾಪ್ತಿಯು ನಿಶ್ಚಯವಾಗಿಯೂ ಆಗುವುದು.

**ಹೋಮಾರ್ಥಂ ಚೈವ ಕರ್ತವ್ಯಂ ಕುಂಡಂ ಚೈವ ತ್ರಿಕೋಣಕಂ ।**
**ಸ್ಥಂಡಿಲಂ ವಾ ಪ್ರಕರ್ತವ್ಯಂ ತ್ರಿಕೋಣಂ ಮಾನತಃ ಶುಭಂ ॥೩೪॥**

ತ್ರಿಕೋಣಾಕಾರವಾಗಿರುವಂಥ ಹೋಮಕುಂಡವನ್ನು ಹೋಮ ಮಾಡು ಮಾಡುವುದಕ್ಕಾಗಿ ರಚಿಸಬೇಕು. ಅಥವಾ ಸ್ಥಂಡಿಲವನ್ನು ಎಂದರೆ ವೇದಿಕೆಯನ್ನು ತ್ರಿಕೋಣಾಕಾರವಾಗಿ ಕಾಮ್ಯವಿಧಿಗಳಿಗೆ ಹಿಂದೆ ಹೇಳಿದ ಪ್ರಮಾಣದಂತೆ ಇದಕ್ಕೂ ರಚಿಸಬೇಕು.

**ತ್ರಿಕಾಲಂ ಪೂಜನಂ ನಿತ್ಯಂ ನಾನಾದ್ರವ್ಯೈರ್ಮನೋಹರೈಃ ।**
**ಗೀತವಾದಿತ್ರನೃತ್ಯೈಶ್ಚ ಕರ್ತವ್ಯಶ್ಚ ಮಹೋತ್ಸವಃ ॥೩೫॥**

ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ ಈ ಮೂರುಕಾಲಗಳಲ್ಲಿಯೂ ಅನೇಕ ಬಗೆಯ ಮನಸ್ಸನ್ನು ಒಲಿಸಿಕೊಳ್ಳುವಂತಹ ಸಾಮಗ್ರಿಗಳಿಂದ ಪೂಜೆಯನ್ನು ನಡೆಯಿಸಬೇಕು. ಹಾಡು, ಸಂಗೀತ, ವಾದ್ಯಗಳ ಘೋಷಣ, ನರ್ತನ ಇವುಗಳಿಂದ ಈ ಮಹೋತ್ಸವವನ್ನು ವಿಜೃಂಭಣೆಯಾಗಿ ನೆರವೇರಿಸಬೇಕು.

**ನಿತ್ಯಂ ಭೂಮೌ ಚ ಶಯನಂ ಕುಮಾರೀಣಾಂ ಚ ಪೂಜನಂ ।**
**ವಸ್ತ್ರಾಲಂಕರಣೈರ್ದಿವ್ಯೈರ್ಭೋಜನೈಶ್ಚ ಸುಧಾಮಯೈಃ ॥೩೬॥**

ಪ್ರತಿದಿನವೂ ಭೂಮಿಯ ಮೇಲೆಯೇ ಮಲಗಬೇಕು. ಉತ್ತಮವಾದ ವಸ್ತ್ರಾದಿಭೂಷಣಗಳಿಂದಲೂ ಅಮೃತಕ್ಕೆ ಸಮಾನವಾದ ಷಡ್ರಸೋಪೇತವಾದ

ಮೃಷ್ಟಾನ್ನ ಭೋಜನಗಳಿಂದಲೂ ಹೆಣ್ಣುಹುಡುಗಿಯರ ಪೂಜೆಯನ್ನು ದೇವಿಯ ಪ್ರೀತ್ಯರ್ಥವಾಗಿ ಮಾಡಬೇಕು.

**ಏಕೈಕಾಂ ಪೂಜಯೇನ್ನಿತ್ಯಮೇಕವೃದ್ಧ್ಯಾ ತಥಾ ಪುನಃ ।**
**ದ್ವಿಗುಣಂ ತ್ರಿಗುಣಂ ವಾಪಿ ಪ್ರತ್ಯೇಕಂ ನವಕಂ ಚ ವಾ ॥೩೭॥**

ಕುಮಾರಿಕಾಪೂಜಾಕ್ರಮದಲ್ಲಿ ಪ್ರತಿದಿನವೂ ಒಬ್ಬ ಕುಮಾರಿಯನ್ನು ಪೂಜಿಸುವುದು ಎಂಬುದು ಒಂದು ಪಕ್ಷವು. ಪ್ರತಿದಿನವು ಒಬ್ಬೊಬ್ಬರನ್ನು ಹೆಚ್ಚಿಸಿಕೊಂಡು ಎಂದರೆ ಪ್ರಥಮದಿವಸದಲ್ಲಿ ಒಬ್ಬಕುಮಾರಿ, ಎರಡನೆಯ ದಿವಸದಲ್ಲಿ ಇಬ್ಬರು, ಮೂರನೆಯ ದಿವಸದಲ್ಲಿ ಮೂವರು ಈರೀತಿಯಾಗಿ ಹೆಚ್ಚಿಸಿಕೊಂಡು ಪೂಜೆ ಮಾಡುವುದು ಎರಡನೆಯ ಪಕ್ಷವು. ಎರಡರಷ್ಟು, ಮೂರರಷ್ಟು, ಕುಮಾರಿಯರ ಸಂಖ್ಯೆಯನ್ನು ಹೆಚ್ಚಿಸಿ ಪೂಜಿಸುವುದು ಎಂಬುದು ಮೂರು ಮತ್ತು ನಾಲ್ಕನೆಯ ಪಕ್ಷವು. ಪ್ರತ್ಯೇಕ ಪ್ರತ್ಯೇಕವಾಗಿ ಪ್ರತಿದಿನವೂ ಒಂಭತ್ತು ಕನ್ಯೆಯರನ್ನು ಪೂಜೆ ಮಾಡುವುದು ಈ ಎಲ್ಲಕ್ಕಿಂತ ಶ್ರೇಷ್ಠವಾದ ಪಕ್ಷವು.

**ವಿಭವಸ್ಯಾನುಸಾರೇಣ ಕರ್ತವ್ಯಂ ಪೂಜನಂ ಕಿಲ ।**
**ವಿತ್ತಶಾಠ್ಯಂ ನ ಕರ್ತವ್ಯಂ ರಾಜಂಶ್ಶಕ್ತಿಮಖೇ ಸದಾ ॥೩೮॥**

ಓ ದೊರೆಯೇ, ಎಲ್ಲರೂ ತಮ್ಮ ತಮ್ಮ ಐಶ್ವರ್ಯಾನುಸಾರವಾಗಿ ಪೂಜೆಯನ್ನು ಮಾಡಬೇಕು. ಯಾವಾಗಲೂ ಶಕ್ತಿಯನ್ನು ಪೂಜಿಸುವುದರಲ್ಲಿ ಜಿಪುಣತನವನ್ನು ಮಾಡಬಾರದು.

**ಏಕವರ್ಷಾ ನ ಕರ್ತವ್ಯಾ ಕನ್ಯಾಪೂಜಾವಿಧೌ ನೃಪ ।**
**ಪರಮಜ್ಞಾ ತು ಭೋಗಾನಾಂ ಗಂಧಾದೀನಾಂ ಚ ಬಾಲಿಕಾ ॥೩೯॥**

ಹುಡುಗಿಯರನ್ನು ಪೂಜಿಸುವುದರಲ್ಲಿ ಒಂದು ವರ್ಷದ ಹುಡುಗಿಯನ್ನು ಪೂಜೆಗೆ ನಿಯಮಿಸಬಾರದು. ಏಕೆಂದರೆ, ಅಂಥವಳು ಪೂಜೆಯಲ್ಲಿ ಸಮರ್ಪಿಸಿದ ಗಂಧಾದಿಗಳಲ್ಲಿರುವ ಗುಣಗಳನ್ನು ತಿಳಿದು ಅಭಿನಂದಿಸಲಾರಳು. ಆದುದರಿಂದ ಅಂಥ ಚಿಕ್ಕವಳನ್ನು ಪೂಜೆಯಲ್ಲಿ ನಿಮಂತ್ರಿಸಬಾರದು.

**ಕುಮಾರಿಕಾ ತು ಸಾ ಪ್ರೋಕ್ತಾ ದ್ವಿವರ್ಷಾ ಯಾ ಭವೇದಿಹ ।**
**ತ್ರಿಮೂರ್ತಿಶ್ಚ ತ್ರಿವರ್ಷಾ ಚ ಕಲ್ಯಾಣೀ ಚತುರಬ್ದಿಕಾ ॥೪೦॥**

ರೋಹಿಣೀ ಪಂಚವರ್ಷಾ ಚ ಷಡ್ವರ್ಷಾ ಕಾಲಿಕಾ ಸ್ಮೃತಾ ।
ಚಂಡಿಕಾ ಸಪ್ತವರ್ಷಾ ಸ್ಯಾದಷ್ಟವರ್ಷಾ ಚ ಶಾಂಭವೀ ॥೪೧॥

ನವವರ್ಷಾ ಭವೇದ್ದುರ್ಗಾ ಸುಭದ್ರಾ ದಶವಾರ್ಷಿಕೀ ।
ಅತ ಊರ್ಧ್ವಂ ನ ಕರ್ತವ್ಯಾ ಸರ್ವಕಾರ್ಯವಿಗರ್ಹಿತಾ ॥೪೨॥

ಏಭಿಶ್ಚ ನಾಮಭಿಃ ಪೂಜಾ ಕರ್ತವ್ಯಾ ವಿಧಿಸಂಯುತಾ ।
ತಾಸಾಂ ಫಲಾನಿ ವಕ್ಷ್ಯಾಮಿ ನವಾನಾಂ ಪೂಜನೇ ಸದಾ ॥೪೩॥

ಈಗ ಪೂಜಾರ್ಹರಾದ ಕನ್ಯೆಯರ ವಿಷಯವು ಹೇಳಲ್ಪಡುತ್ತದೆ. ಎರಡು ವರ್ಷದಿಂದ ಹತ್ತುವರ್ಷ ವಯಸ್ಸು ಇರುವ ಕನ್ಯೆಯರನ್ನು ಪೂಜೆಮಾಡಬೇಕು. ಅದಕ್ಕಿಂತ ಹೆಚ್ಚುವರ್ಷವಾದವರನ್ನು ಪೂಜಿಸಬಾರದು. ಹಾಗೆ ಪೂಜಿಸಿದಲ್ಲಿ ಅದು ನಿಷಿದ್ಧಕಾರ್ಯವಾಗುವುದು. ಆ ಕನ್ಯೆಯರನ್ನು ಯಾವ ಯಾವ ಹೆಸರಿನಿಂದ ಪೂಜೆಮಾಡಬೇಕೆಂದರೆ, ಎರಡು ವರ್ಷದ ಕನ್ಯೆಯನ್ನು ಕುಮಾರಿಕಾ ಎಂದೂ, ಮೂರು ವರ್ಷದವಳನ್ನು ತ್ರಿಮೂರ್ತಿ ಎಂದೂ, ನಾಲ್ಕು ವರ್ಷದವಳನ್ನು ಕಲ್ಯಾಣೀ ಎಂದೂ, ಐದು ವರ್ಷದವಳನ್ನು ರೋಹಿಣೀ ಎಂದೂ, ಆರು ವರ್ಷದವಳನ್ನು ಕಾಲಿಕಾ ಎಂಬುದಾಗಿಯೂ, ಏಳು ವರ್ಷದವಳನ್ನು ಚಂಡಿಕೆ ಎಂಬುದಾಗಿಯೂ, ಎಂಟು ವರ್ಷದವಳನ್ನು ಶಾಂಭವೀ ಎಂಬುದಾಗಿಯೂ, ಒಂಬತ್ತು ವರ್ಷದವಳನ್ನು ದುರ್ಗಾ ಎಂಬುದಾಗಿಯೂ, ಹತ್ತು ವರ್ಷದವಳನ್ನು ಸುಭದ್ರಾ ಎಂಬುದಾಗಿಯೂ ಸಂಬೋಧಿಸುತ್ತಾ ವಿಧಿಪೂರ್ವಕವಾಗಿ ಪೂಜೆಯನ್ನು ಮಾಡಬೇಕು. ಹೀಗೆ ಮಾಡುವುದರಿಂದ ಉಂಟಾಗುವ ಅದರದರ ಫಲವನ್ನು ಹೇಳುತ್ತೇನೆ, ಕೇಳುವವನಾಗು.

ಕುಮಾರೀ ಪೂಜಿತಾ ಕುರ್ಯಾದ್ದುಃಖದಾರಿದ್ರ್ಯನಾಶನಂ ।
ಶತ್ರುಕ್ಷಯಂ ಧನಾಯುಷ್ಯಂ ಬಲವೃದ್ಧಿಂ ಕರೋತಿ ವೈ ॥೪೪॥

ಕುಮಾರಿಯನ್ನು ಪೂಜಿಸುವುದರಿಂದ, ದುಃಖ, ದಾರಿದ್ರ್ಯ ಎಂದರೆ ಬಡತನ, ಶತ್ರುಗಳು ಇವುಗಳ ನಾಶನವಾಗುತ್ತದೆ. ಮತ್ತು ದ್ರವ್ಯಲಾಭ ಆಯುರ್ವೃದ್ಧಿ ಮತ್ತು ಬಲವೃದ್ಧಿ ಇವೂ ಉಂಟಾಗುತ್ತವೆ.

ತ್ರಿಮೂರ್ತಿಪೂಜನಾದಾಯುಸ್ತ್ರಿವರ್ಗಸ್ಯ ಫಲಂ ಭವೇತ್ ।
ಧನಧಾನ್ಯಾಗಮಶ್ಚೈವ ಪುತ್ರಪೌತ್ರಾದಿವೃದ್ಧಯಃ ॥೪೫॥

ತ್ರಿಮೂರ್ತಿಯೆಂಬ ಕನ್ಯೆಯನ್ನು ಪೂಜಿಸಿದರೆ, ಆಯುಸ್ಸೂ, ಧರ್ಮ, ಅರ್ಥ, ಕಾಮ ಈ ಫಲಗಳೂ ದೊರೆಯುತ್ತವೆ. ಧನ, ಧಾನ್ಯ ಇವುಗಳ ಅಭಿವೃದ್ಧಿಯೂ, ಮಕ್ಕಳು, ಮೊಮ್ಮಕ್ಕಳು ಮುಂತಾದ ಸಂತಾನಾಭಿವೃದ್ಧಿಯೂ ಆಗುವುದು.

**ವಿದ್ಯಾರ್ಥೀ ವಿಜಯಾರ್ಥೀ ಚ ರಾಜ್ಯಾರ್ಥೀ ಯಶ್ಚ ಪಾರ್ಥಿವಃ ।**
**ಸುಖಾರ್ಥೀ ಪೂಜಯೇನ್ನಿತ್ಯಂ ಕಲ್ಯಾಣೀಂ ಸರ್ವಕಾಮದಾಂ ॥೪೬॥**

ಯಾವ ರಾಜನು, ವಿದ್ಯೆಯನ್ನು ಕಲಿಯಬೇಕೆಂದೂ, ಯುದ್ಧದಲ್ಲಿ ಜಯವನ್ನು ಪಡೆಯಬೇಕೆಂದೂ, ರಾಜ್ಯವನ್ನು ಸಂಪಾದಿಸಬೇಕೆಂದೂ, ಸುಖವನ್ನು ಹೊಂದಬೇಕೆಂದೂ ಬಯಸುವನೋ ಆ ರಾಜನು ಕಲ್ಯಾಣಿಯೆಂಬ ಕನ್ಯೆಯನ್ನು ಪೂಜಿಸುವುದರಿಂದ ಅವನ ಇಷ್ಟಾರ್ಥವು ನೆರವೇರುವುದು ನಿಶ್ಚಯವು.

**ಕಾಲಿಕಾಂ ಶತ್ರುನಾಶಾರ್ಥಂ ಪೂಜಯೇದ್ಭಕ್ತಿಪೂರ್ವಕಂ ।**
**ಐಶ್ವರ್ಯಧನಕಾಮಶ್ಚ ಚಂಡಿಕಾಂ ಪರಿಪೂಜಯೇತ್ ॥೪೭॥**

ಭಕ್ತಿಪೂರ್ವಕವಾಗಿ ಕಾಲಿಕೆಯನ್ನು ಪೂಜಿಸಿದರೆ ಶತ್ರುವಿನ ನಾಶವು ಉಂಟಾಗುವುದು. ಐಶ್ವರ್ಯವನ್ನೂ ಸಂಪತ್ತನ್ನೂ ಅಪೇಕ್ಷಿಸುವವನು ಚಂಡಿಕೆಯನ್ನು ಪೂಜಿಸಬೇಕು.

**ಪೂಜಯೇಚ್ಛಾಂಭವೀಂ ನಿತ್ಯಂ ನೃಪಸಂಮೋಹನಾಯ ಚ ।**
**ದುಃಖದಾರಿದ್ರ್ಯನಾಶಾಯ ಸಂಗ್ರಾಮೇ ವಿಜಯಾಯ ಚ ॥೪೮॥**

ದುಃಖ, ಬಡತನ ಇವುಗಳ ನಾಶಕ್ಕೂ, ಯುದ್ಧದಲ್ಲಿ ಜಯವನ್ನು ಹೊಂದುವುದಕ್ಕೂ, ರಾಜರನ್ನು ತಮ್ಮ ವಶಮಾಡಿಕೊಳ್ಳುವುದಕ್ಕೂ ಅಪೇಕ್ಷಿಸುವ ಭಕ್ತನು ಶಾಂಭವಿಯನ್ನು ಪೂಜೆಮಾಡುವುದರಿಂದ ಸಿದ್ಧಿಯನ್ನು ಪಡೆಯುತ್ತಾನೆ.

**ಕ್ರೂರಶತ್ರುವಿನಾಶಾರ್ಥಂ ತಥೋಗ್ರಕರ್ಮಸಾಧನೇ ।**
**ದುರ್ಗಾಂ ಚ ಪೂಜಯೇದ್ಭಕ್ತ್ಯಾ ಪರಲೋಕಸುಖಾಯ ಚ ॥೪೯॥**

ಭಯಂಕರವಾದ ಶತ್ರುವಿನ ನಾಶಕ್ಕಾಗಿಯೂ, ಭಯಂಕರವಾದ ಮತ್ತು ಕಷ್ಟಸಾಧ್ಯವಾದ ಮಹಾಕಾರ್ಯಸಾಧನೆಗಾಗಿಯೂ, ಪರಲೋಕದಲ್ಲಿ ಸುಖವನ್ನು

ಹೊಂದಲೂ ಆಶೆಯುಳ್ಳವನು ದುರ್ಗಾನಾಮಕಳಾದ ಕನ್ಯೆಯನ್ನು ಪೂಜಿಸುವುದರಿಂದ ಆಯಾ ಇಷ್ಟಾರ್ಥವನ್ನು ಪಡೆಯುತ್ತಾನೆ.

**ವಾಂಛಿತಾರ್ಥಸ್ಯ ಸಿದ್ಧ್ಯರ್ಥಂ ಸುಭದ್ರಾಂ ಪೂಜಯೇತ್ಸದಾ ।**
**ರೋಹಿಣೀಂ ರೋಗನಾಶಾಯ ಪೂಜಯೇದ್ವಿಧಿವನ್ನರಃ ॥೫೦॥**

ಇಷ್ಟವಾದ ಕಾರ್ಯದ ಸಿದ್ಧಿಗಾಗಿ ಸುಭದ್ರಾನಾಮಕಳಾದ ಕುಮಾರಿಯನ್ನು ಪೂಜಿಸಬೇಕು. ರೋಗದ ನಾಶಕ್ಕಾಗಿ ರೋಹಿಣಿಯನ್ನು ವಿಧಿಪೂರ್ವಕವಾಗಿ ಪೂಜಿಸಬೇಕು.

**ಶ್ರೀರಸ್ತ್ವಿತಿ ಚ ಮಂತ್ರೇಣ ಪೂಜಯೇದ್ಭಕ್ತಿತತ್ಪರಃ ।**
**ಶ್ರೀಯುಕ್ತಮಂತ್ರೈರಥವಾ ಬೀಜಮಂತ್ರೈರಥಾಪಿ ವಾ ॥೫೧॥**

ಶ್ರೀರಸ್ತು ಎಂಬ ಮಂತ್ರದಿಂದ ದೇವಿಯನ್ನು ಪೂಜಿಸಬೇಕು. ಅಥವಾ ಶ್ರೀ ಎಂಬ ವರ್ಣದಿಂದ ಕೂಡಿದ ದೇವೀಪರವಾದ ಇತರ ಮಂತ್ರಗಳಿಂದಾಗಲೀ, ಅಂತಹ ಬೀಜಮಂತ್ರಗಳಿಂದಲಾಗಲೀ ದೇವಿಯನ್ನು ಪೂಜಿಸಬೇಕು.

**ಕುಮಾರಸ್ಯ ಚ ತತ್ತ್ವಾನಿ ಯಾ ಸೃಜತ್ಯಪಿ ಲೀಲಯಾ ।**
**ಕಾದೀನಪಿ ಚ ದೇವಾಂಸ್ತಾನ್ಕುಮಾರೀಂ ಪೂಜಯಾಮ್ಯಹಂ ॥೫೨॥**

ಆ ಮಂತ್ರಗಳಲ್ಲಿ ಕೆಲವನ್ನು ಒಂಬತ್ತನ್ನು ಹೇಳುತ್ತಾರೆ. ಕುಮಾರನ ಎಂದರೆ ಬಾಲಕನ ಅಥವಾ ಷಣ್ಮುಖನ ರಹಸ್ಯವಾದ ತತ್ತ್ವಗಳನ್ನೂ, ಬ್ರಹ್ಮಾದಿದೇವತೆಗಳನ್ನೂ ಯಾವಳು ಆಯಾಸವಿಲ್ಲದೆ ಸೃಷ್ಟಿಮಾಡುವಳೋ ಅಂತಹ ಕುಮಾರಿಯನ್ನು ಪೂಜಿಸುತ್ತೇನೆ.

**ಸತ್ತ್ವಾದಿಭಿಸ್ತ್ರಿಮೂರ್ತಿರ್ಯಾ ತೈರ್ಹಿ ನಾನಾಸ್ವರೂಪಿಣೀ ।**
**ತ್ರಿಕಾಲವ್ಯಾಪಿನೀ ಶಕ್ತಿಸ್ತ್ರಿಮೂರ್ತಿಂ ಪೂಜಯಾಮ್ಯಹಂ ॥೫೩॥**

ಸತ್ತ್ವರಜಸ್ತಮೋಗುಣಗಳಿಂದ ಕೂಡಿದ ಮಹಾಲಕ್ಷ್ಮೀ ಮಹಾಕಾಳೀ ಮಹಾಸರಸ್ವತೀ ಎಂಬ ನಾನಾ ಸ್ವರೂಪವನ್ನು ತಾಳುವ ಭೂತಭವಿಷ್ಯದ್ವರ್ತಮಾನ

ವೆಂಬ ತ್ರಿಕಾಲದಲ್ಲಿಯೂ ಬಾಧಿತಗಳಾಗದೆ ನಿತ್ಯಳೂ ಚಿದ್ರೂಪಿಣಿಯೂ ಆಗಿ ವ್ಯಾಪಿಸಿ ಕೊಂಡಿರುವ ತ್ರಿಮೂರ್ತಿಯನ್ನು ಪೂಜಿಸುತ್ತೇನೆ.

**ಕಲ್ಯಾಣಕಾರಿಣೀ ನಿತ್ಯಂ ಭಕ್ತಾನಾಂ ಪೂಜಿತಾಽನಿಶಂ ।**
**ಪೂಜಯಾಮಿ ಚ ತಾಂ ಭಕ್ತ್ಯಾ ಕಲ್ಯಾಣೀಂ ಸರ್ವಕಾಮದಾಂ ॥೫೪॥**

ನಿತ್ಯವೂ ಭಕ್ತಿಯಿಂದ ಪೂಜಿಸುವ ಭಕ್ತರಿಗೆ ಮಂಗಳವನ್ನುಂಟುಮಾಡುವ ಸಕಲ ಇಷ್ಟಾರ್ಥಗಳನ್ನೂ ಕೊಡುವ ಕಲ್ಯಾಣಿಯನ್ನು ಭಕ್ತಿಯಿಂದ ಅರ್ಚಿಸುತ್ತೇನೆ.

**ರೋಹಯಂತೀ ಚ ಬೀಜಾನಿ ಪ್ರಾಗ್ಜನ್ಮಸಂಚಿತಾನಿ ವೈ ।**
**ಯಾ ದೇವೀ ಸರ್ವಭೂತಾನಾಂ ರೋಹಿಣೀಂ ಪೂಜಯಾಮ್ಯಹಂ ॥೫೫॥**

ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳು ಎಂಬ ಬೀಜವನ್ನು, ಮೊಳಕೆ ಬಂದು ಬೆಳೆದು ಫಲವನ್ನು ಕೊಡುವಂತೆ ಮಾಡುವ ಎಲ್ಲ ಪ್ರಾಣಿಗಳಲ್ಲಿಯೂ ವಾಸ ಮಾಡುವ ರೋಹಿಣಿಯನ್ನು ಭಕ್ತಿಯಿಂದ ಅರ್ಚಿಸುತ್ತೇನೆ.

**ಕಾಲೀ ಕಾಲಯತೇ ಸರ್ವಂ ಬ್ರಹ್ಮಾಂಡಂ ಸಚರಾಚರಂ ।**
**ಕಲ್ಪಾಂತಸಮಯೇ ಯಾ ತಾಂ ಕಾಲಿಕಾಂ ಪೂಜಯಾಮ್ಯಹಂ ॥೫೬॥**

ಚಲಿಸುವ ಮತ್ತು ಚಲಿಸಲಾರದ ಪದಾರ್ಥಗಳನ್ನು ಒಳಗೊಂಡಿರುವ ಈ ಬ್ರಹ್ಮಾಂಡವನ್ನು ಕಲ್ಪಾಂತದ ಪ್ರಳಯಕಾಲದಲ್ಲಿ ಯಾವ ದೇವಿಯು ನಾಶಮಾಡುವಳೋ ಅಂತಹ ಕಾಲಿಕೆಯನ್ನು ಅರ್ಚಿಸುತ್ತೇನೆ.

**ಚಂಡಿಕಾಂ ಚಂಡರೂಪಾಂ ಚ ಚಂಡಮುಂಡವಿನಾಶಿನೀಂ ।**
**ತಾಂ ಚಂಡಪಾಪಹರಿಣೀಂ ಚಂಡಿಕಾಂ ಪೂಜಯಾಮ್ಯಹಂ ॥೫೭॥**

ಪಾಪಿಗಳಿಗೆ ಭಯಂಕರವಾದ ರೂಪವುಳ್ಳವಳಾದ, ಚಂಡ ಮತ್ತು ಮುಂಡ ಎಂಬ ರಾಕ್ಷಸರನ್ನು ನಾಶಮಾಡಿದ, ಉಗ್ರವಾದ ಪಾಪವನ್ನೂ ನಾಶಮಾಡುವ ಚಂಡಿಕಾದೇವಿಯನ್ನು ಅರ್ಚಿಸುತ್ತೇನೆ.

**ಅಕಾರಣಾತ್ಸಮುತ್ಪತ್ತಿರ್ಯನ್ಮಯೈಃ ಪರಿಕೀರ್ತಿತಾ ।**
**ಯಸ್ಯಾಸ್ತಾಂ ಸುಖದಾಂ ದೇವೀಂ ಶಾಂಭವೀಂ ಪೂಜಯಾಮ್ಯಹಂ ॥೫೮॥**

ಯಾರಿಂದಲೂ ಜನ್ಮವನ್ನು ಪಡೆಯದೆ ತನ್ನಿಂದ ತಾನೇ ಆವಿರ್ಭಾವ ವಾಗುವ, ವಾಗರ್ಥಗಳಿಗೆ ಅಭೇದವೆಂಬ ದೃಷ್ಟಿಯಿಂದ ವಾಗ್ರೂಪಳಾದ, ದೇವೀ ಸ್ವರೂಪಳಾದ ವೇದಗಳಿಂದ ತಿಳಿಸಲ್ಪಡುತ್ತಿರುವ ಪ್ರಸಿದ್ಧಿಯನ್ನು ಹೊಂದಿದ ಸುಖ ವನ್ನುಂಟುಮಾಡುವ ಶಾಂಭವಿಯನ್ನು ಅರ್ಚಿಸುತ್ತೇನೆ.

**ದುರ್ಗಾತ್ತ್ರಾಯತಿ ಭಕ್ತಂ ಯಾ ಸದಾ ದುರ್ಗಾರ್ತಿನಾಶಿನೀ ।**
**ದುರ್ಜ್ಞೇಯಾ ಸರ್ವದೇವಾನಾಂ ತಾಂ ದುರ್ಗಾಂ ಪೂಜಯಾಮ್ಯಹಂ॥೫೯॥**

ಭಕ್ತರ ದುರ್ಗತಿಯನ್ನು ನಾಶಮಾಡಿ ಭಕ್ತರನ್ನು ಯಾವಾಗಲೂ ಕಾಪಾಡುವ ದೇವತೆಗಳಿಗೂ ತಿಳಿಯಲು ಸಾಧ್ಯವಾಗದಿರುವ ದುರ್ಗಾದೇವಿಯನ್ನು ಪೂಜಿಸುತ್ತೇನೆ.

**ಸುಭದ್ರಾಣಿ ಚ ಭಕ್ತಾನಾಂ ಕುರುತೇ ಪೂಜಿತಾ ಸದಾ ।**
**ಅಭದ್ರನಾಶಿನೀಂ ದೇವೀಂ ಸುಭದ್ರಾಂ ಪೂಜಯಾಮ್ಯಹಂ ॥೬೦॥**

ಯಾರು ಯಾವಾಗಲೂ ತನ್ನನ್ನು ಪುಜಿಸುವರೋ ಅಂತಹವರಿಗೆ ಕಲ್ಯಾಣ ಗಳನ್ನೂ ಕ್ಷೇಮವನ್ನೂ ಉಂಟುಮಾಡುತ್ತಾ ಅನುಗ್ರಹಿಸುತ್ತಿರುವ ಅಶುಭವನ್ನು ನಾಶಮಾಡುವ ಸುಭದ್ರಾದೇವಿಯನ್ನು ಭಕ್ತಿಯಿಂದ ಪೂಜಿಸುತ್ತೇನೆ.

**ಏಭಿರ್ಮಂತ್ರೈಃ ಪೂಜನೀಯಾಃ ಕನ್ಯಕಾಃ ಸರ್ವದಾ ಬುಧೈಃ ।**
**ವಸ್ತ್ರಾಲಂಕರಣೈರ್ಮಾಲ್ಯೈರ್ಗಂಧೈರುಚ್ಚಾವಚೈರಪಿ ॥೬೧॥**

ಈ ಮೇಲೆ ಹೇಳಿದ ಮಂತ್ರಗಳಿಂದ ಕುಮಾರಿಯರನ್ನು ಉದ್ದೇಶಿಸಿ ಯಾವಾ ಗಲೂ ಭಕ್ತರು, ಪೀತಾಂಬರ, ಆಭರಣ, ಗಂಧ, ಪುಷ್ಪ ಮುಂತಾದ ಪೂಜಾದ್ರವ್ಯ ಗಳಿಂದಲೂ ನೈವೇದ್ಯಾದಿ ಉಪಚಾರಗಳಿಂದಲೂ ಅವರ ಪೂಜೆಯನ್ನು ಭಕ್ತಿಯಿಂದ ನೆರವೇರಿಸಬೇಕು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಷಡ್ವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ತೃತೀಯಸ್ಕಂಧೇ

### ॥ ಸಪ್ತವಿಂಶೋಽಧ್ಯಾಯಃ ॥

### ಇಪ್ಪತ್ತೇಳನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಹೀನಾಂಗೀಂ ವರ್ಜಯೇತ್ಕನ್ಯಾಂ ಕುಷ್ಠಯುಕ್ತಾಂ ವ್ರಣಾಂಕಿತಾಂ ।**
**ಗಂಧಸ್ಫುರಿತಹೀನಾಂಗೀಂ ವಿಶಾಲಕುಲಸಂಭವಾಂ ॥೧॥**

ವ್ಯಾಸಮಹರ್ಷಿಯು ಹೇಳಿದನು—ಪೂಜೆಗಾಗಿ ಆರಿಸಿಕೊಳ್ಳುವ ಕನ್ಯೆಯರ ಲಕ್ಷಣವು ಹೇಳಲ್ಪಡುತ್ತದೆ. ಯಾವುದಾದರೂ ಅವಯವದಿಂದ ವಿಕಲವಾಗಿರುವ ಕನ್ನಿಕೆಯನ್ನೂ ಕುಷ್ಠರೋಗದಿಂದಲೂ, ಹುಣ್ಣುಗಳಿಂದಲೂ ಕೂಡಿರುವ ಬಾಲೆಯನ್ನೂ ದುರ್ಗಂಧದಿಂದ ಯುಕ್ತವಾದುದರಿಂದ ಹೀನವಾದ ಶರೀರವುಳ್ಳ ಕನ್ಯೆಯನ್ನೂ ಮತ್ತು ಅಪರಿಶುದ್ಧವಾದ ಕುಲದಲ್ಲಿ ಜನಿಸಿದ ಹುಡುಗಿಯನ್ನೂ ಆರಿಸಿಕೊಳ್ಳದೆ ತ್ಯಜಿಸಬೇಕು.

**ಜಾತ್ಯಂಧಾಂ ಕೇಕರಾಂ ಕಾಣೀಂ ಕುರೂಪಾಂ ಬಹುರೋಮಶಾಂ ।**
**ಸಂತ್ಯಜೇದ್ರೋಗಿಣೀಂ ಕನ್ಯಾಂ ರಕ್ತಪುಷ್ಪಾದಿನಾಂಕಿತಾಂ ॥೨॥**

ಹುಟ್ಟುಕುರುಡಾಗಿರುವವಳನ್ನೂ, ಮಾಲಗಣ್ಣುಳ್ಳವಳನ್ನೂ, ಕುರೂಪಿಯಾದವಳನ್ನೂ, ಮೈಯೆಲ್ಲಾ ರೋಮಗಳಿಂದ ಕೂಡಿದವಳನ್ನೂ, ರೋಗದಿಂದ ನರಳುವವಳನ್ನೂ ಮತ್ತು ಪುಷ್ಪವತಿಯಾಗುವ ಚಿಹ್ನೆಯುಳ್ಳವಳನ್ನೂ ವರ್ಜಿಸಬೇಕು.

**ಕ್ಷಾಮಾಂ ಗರ್ಭಸಮುದ್ಭೂತಾಂ ಗೋಲಕಾಂ ಕನ್ಯಕೋದ್ಭವಾಂ ।**
**ವರ್ಜನೀಯಾಃ ಸದಾ ಚೈತಾಃ ಸರ್ವಪೂಜಾದಿಕರ್ಮಸು ॥೩॥**

ಅತಿಕ್ಷೀಣವಾದ ಶರೀರವುಳ್ಳವಳನ್ನೂ, ಅತ್ಯಂತ ಬಾಲಿಕೆಯಾದವಳನ್ನೂ, ಗಂಡನು ಸತ್ತಮೇಲೆ ಹುಟ್ಟಿದವಳನ್ನೂ, ಅವಿವಾಹಿತಸ್ತ್ರೀಯಿಂದ ಉತ್ಪನ್ನವಾದವಳನ್ನೂ ಎಲ್ಲ ವಿಧವಾದ ಶುಭಕಾರ್ಯಗಳಲ್ಲಿಯೂ ಯಾವಾಗಲೂ ಬಿಡಬೇಕು.

**ಅರೋಗಿಣೀಂ ಸುರೂಪಾಂಗೀಂ ಸುಂದರೀಂ ವ್ರಣವರ್ಜಿತಾಂ ।**
**ಏಕವಂಶಸಮುದ್ಭೂತಾಂ ಕನ್ಯಾಂ ಸಮ್ಯಕ್ಪ್ರಪೂಜಯೇತ್ ॥೪॥**

ರೋಗವಿಲ್ಲದೆಯೂ, ಮನೋಹರವಾದ ರೂಪಿನಿಂದ ಕೂಡಿ ಸುಂದರಿಯಾಗಿರುವವಳನ್ನೂ, ವ್ರಣಾದಿಗಳಿಲ್ಲದೆ ಇರುವವಳನ್ನೂ ಸತ್ಕುಲಪ್ರಸೂತಳಾದ ಕನ್ಯೆಯನ್ನು ಆರಿಸಿ ವರಣಮಾಡಿ ಅರ್ಚಿಸಬೇಕು.

**ಬ್ರಾಹ್ಮಣೀ ಸರ್ವಕಾರ್ಯೇಷು ಜಯಾರ್ಥೇ ನೃಪವಂಶಜಾ ।**
**ಲಾಭಾರ್ಥೇ ವೈಶ್ಯವಂಶೋತ್ಥಾ ಮತಾ ವಾ ಶೂದ್ರವಂಶಜಾ ॥೫॥**

ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವಳನ್ನು ಎಲ್ಲ ಕಾರ್ಯಗಳಲ್ಲಿಯೂ, ಕ್ಷತ್ರಿಯ ಕನ್ಯೆಯನ್ನು ಜಯವಾಗಬೇಕೆನ್ನುವ ಕಾಲದಲ್ಲಿಯೂ, ವೈಶ್ಯವಂಶದಲ್ಲಿ ಹುಟ್ಟಿದ ಕನ್ಯೆಯನ್ನು ಲಾಭಸಂಪಾದಿಸಬೇಕಾಗಿರುವ ಸಂದರ್ಭದಲ್ಲಿಯೂ, ಮತ್ತು ಈ ಸಂದರ್ಭದಲ್ಲಿಯೇ ಶೂದ್ರವಂಶದಲ್ಲಿ ಹುಟ್ಟಿದವಳನ್ನೂ ಪುರಸ್ಕರಿಸಬೇಕು.

**ಬ್ರಾಹ್ಮಣೈರ್ಬ್ರಹ್ಮಜಾಃ ಪೂಜ್ಯಾ ರಾಜನ್ಯೈರ್ಬ್ರಹ್ಮವಂಶಜಾಃ ।**
**ವೈಶ್ಯೈಸ್ತ್ರಿವರ್ಗಜಾಃ ಪೂಜ್ಯಾಶ್ಚತಸ್ರಃ ಪಾದಸಂಭವೈಃ ॥೬॥**

ಬ್ರಾಹ್ಮಣರು ಕೇವಲ ಬ್ರಾಹ್ಮಣರಿಂದ ಜನಿಸಿದ ಕನ್ಯೆಯರನ್ನು ಮಾತ್ರ ಅರ್ಚಿಸಬೇಕು. ಕ್ಷತ್ರಿಯರು ಬ್ರಾಹ್ಮಣವಂಶದಲ್ಲಿ ಹುಟ್ಟಿದವರನ್ನು ಅರ್ಚಿಸಬೇಕು. ವೈಶ್ಯರು ಬ್ರಹ್ಮ ಕ್ಷತ್ರಿಯ ವೈಶ್ಯ ಕುಲಗಳಲ್ಲಿ ಹುಟ್ಟಿದವರನ್ನು ಅರ್ಚಿಸಬೇಕು. ಹಾಗೆಯೇ ಶೂದ್ರರು ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರಕುಲಗಳಲ್ಲಿ ಹುಟ್ಟಿದ ಕನ್ಯೆಯರನ್ನು ಅರ್ಚಿಸಬೇಕು.

**ಕಾರುಭಿಶ್ಚೈವ ವಂಶೋತ್ಥಾ ಯಥಾಯೋಗ್ಯಂ ಪ್ರಪೂಜಯೇತ್ ।**
**ನವರಾತ್ರವಿಧಾನೇನ ಭಕ್ತಿಪೂರ್ವಂ ಸದೈವ ಹಿ ॥೭॥**

ಶಿಲ್ಪಿಗಳ ಜಾತಿಯಲ್ಲಿ ಹುಟ್ಟಿದವರಿಂದ ಮಾತ್ರ ಕೇವಲ ಅವರ ಜಾತಿಯಲ್ಲಿ ಜನಿಸಿದವರು ಅವರವರ ಯೋಗ್ಯತೆಗೆ ತಕ್ಕಂತೆ ಪೂಜಾರ್ಹರು. ನವರಾತ್ರಿಯ ಕಾಲ ದಲ್ಲಿ ಮಾಡಬೇಕಾದ ದುರ್ಗಾಪೂಜೆಯ ಉತ್ಸವಕ್ರಮದ ವಿಧಾನದಿಂದ ಭಕ್ತಿಪೂರ್ವಕ ವಾಗಿ ದೇವಿಯನ್ನು ಯಾವಾಗಲೂ ಅರ್ಚಿಸಬೇಕು.

**ಅಶಕ್ತೋ ನಿಯತಂ ಪೂಜಾಂ ಕರ್ತುಂ ಚೇನ್ನವರಾತ್ರಕೇ ।**
**ಅಷ್ಟಮ್ಯಾಂ ಚ ವಿಶೇಷೇಣ ಕರ್ತವ್ಯಂ ಪೂಜನಂ ಸದಾ ॥೮॥**

ಈ ಒಂಬತ್ತು ದಿನಗಳಲ್ಲಿಯೂ ನಿಯಮದಿಂದ ದೇವಿಯ ಅರ್ಚನೆಯನ್ನು ನೆರವೇರಿಸಲು ಅಶಕ್ತನಾದವನು ನವರಾತ್ರಿಯ ಕಾಲದಲ್ಲಿ ವಿಶೇಷವಾಗಿ ಅಷ್ಟಮಿಯ ದಿವಸದಲ್ಲಿಯಾದರೂ ಅರ್ಚನೆಯನ್ನು ಮಾಡಬೇಕು.

**ಪುರಾಷ್ಟಮ್ಯಾಂ ಭದ್ರಕಾಲೀ ದಕ್ಷಯಜ್ಞವಿನಾಶಿನೀ ।**
**ಪ್ರಾದುರ್ಭೂತಾ ಮಹಾಘೋರಾ ಯೋಗಿನೀಕೋಟಿಭಿಃ ಸಹ ॥೯॥**

ಏಕೆಂದರೆ ಹಿಂದೆ ಈ ಅಷ್ಟಮಿಯ ದಿವಸದಲ್ಲಿ ಮಂಗಳಕಾರಿಣಿಯಾದ ದಕ್ಷ ಯಜ್ಞವನ್ನು ನಾಶಮಾಡಿದ ಈ ಕಾಳೀದೇವಿಯು ಅತಿಭಯಂಕರ ರೂಪವುಳ್ಳ ಅನೇಕ ಕೋಟಿ ಯೋಗಿನಿಯರಿಂದ ಕೂಡಿ ಅವತರಿಸಿದಳು.

**ಅತೋಽಷ್ಟಮ್ಯಾಂ ವಿಶೇಷೇಣ ಕರ್ತವ್ಯಂ ಪೂಜನಂ ಸದಾ ।**
**ನಾನಾವಿಧೋಪಹಾರೈಶ್ಚ ಗಂಧಮಾಲ್ಯಾನುಲೇಪನೈಃ ॥೧೦॥**

ಆದಕಾರಣದಿಂದ ಈ ನವರಾತ್ರಿಯಲ್ಲಿ ಪೂಜಿಸಬೇಕಾದ ಶಕ್ತಿದೇವತೆಗೆ ನಾನಾಬಗೆಯ ಕಾಣಿಕೆಗಳಿಂದಲೂ, ಸುಗಂಧ, ಹೂವು ಮುಂತಾದ ಪೂಜಾದ್ರವ್ಯ ಗಳಿಂದಲೂ ಅಷ್ಟಮಿಯ ದಿವಸದಲ್ಲಿ ವಿಶೇಷವಾದ ಅರ್ಚನೆಯನ್ನು ಮಾಡಬೇಕು.

**ಪಾಯಸೈರಾಮಿಷೈರ್ಹೋಮೈರ್ಬ್ರಾಹ್ಮಣಾನಾಂ ಚ ಭೋಜನೈಃ ।**
**ಫಲಪುಷ್ಪೋಪಹಾರೈಶ್ಚ ತೋಷಯೇಜ್ಜಗದಂಬಿಕಾಂ ॥೧೧॥**

ಪಾಯಸಗಳಿಂದಲೂ, ಮಾಂಸಗಳಿಂದಲೂ, ಹೋಮಗಳಿಂದಲೂ, ಹಣ್ಣು, ಹೂವು, ಕಾಣಿಕೆ ಇವುಗಳಿಂದ ಸಹಿತವಾಗಿಯೂ, ಬ್ರಾಹ್ಮಣರ ಭೋಜನಗಳಿಂದಲೂ ಜಗತ್ಕಲ್ಯಾಣಕಾರಿಣಿಯಾದ ಅಂಬಿಕೆಯನ್ನು ಪೂಜಿಸಿ ಸಂತೋಷಗೊಳಿಸಬೇಕು.

ಇಲ್ಲಿ ಹೇಳಿರುವ ಮಾಂಸನಿವೇದನೆಯು ಮಾಂಸಾಹಾರಿಗಳಿಗೆ ವಿಹಿತವಾಗಿದೆ. ಬ್ರಾಹ್ಮಣರಿಗೆ ಕಲಿಕಾಲದಲ್ಲಿ ಅದು ನಿಷಿದ್ಧವಾಗಿದೆ. ಮಾಂಸಾಹಾರವನ್ನು ಬಿಟ್ಟಿರುವ ಇತರರೂ, ಗಂಧ, ಹೂವು, ಹಣ್ಣು, ಅನ್ನ ಇವುಗಳಿಂದಲೇ ದೇವಿಯನ್ನು ಪೂಜಿಸಿದರೂ ಸಂಪೂರ್ಣವಾದ ಫಲಗಳು ದೊರೆಯುವುದರಲ್ಲಿ ಸಂದೇಹವಿಲ್ಲವೆಂಬುದನ್ನು ಯಾರೂ ಮರೆಯಬಾರದು. ಇದೇ ಸಾತ್ತ್ವಿಕವಾದ ಪೂಜೆಯು. ಈ ಅಂಶವನ್ನು ಈ ಸ್ಕಂಧದ ೨೬ನೆಯ ಅಧ್ಯಾಯದ ೩೨ನೆಯ ಶ್ಲೋಕದಲ್ಲೂ, ಮಾರ್ಕಂಡೇಯ ಪುರಾಣದ ದುರ್ಗಾಸಪ್ತಶತಿಯಲ್ಲಿನ ವೈಕೃತಿಕ ರಹಸ್ಯದ ೨೯ನೆಯ ಶ್ಲೋಕದಲ್ಲೂ ವಿಧಿಸಿದೆ. ಆದರೂ ಕೆಲವರು, ಶತ್ರುನಾಶ ಮುಂತಾದ ಘೋರವಾದ ಮಹಾಕಾರ್ಯಗಳು ನೆರವೇರಬೇಕಾಗಿರುವಾಗ ದುರ್ಗಾದೇವಿಯ ಕರಾಳ ಮತ್ತು ಭಯಂಕರವಾದ ಮೂರ್ತಿಯನ್ನೇ ಆರಾಧಿಸಬೇಕಾಗುವದೆಂದೂ ಅಂತಹ ಸಂದರ್ಭಗಳಲ್ಲಿ ಮಾಂಸ ನಿವೇದನವೇ ಫಲವನ್ನುಂಟುಮಾಡುವುದೆಂದೂ ಹೇಳುತ್ತಾರೆ.

**ಉಪವಾಸೇ ಹ್ಯಶಕ್ತಾನಾಂ ನವರಾತ್ರವ್ರತೇ ಪುನಃ ।**
**ಉಪೋಷಣತ್ರಯಂ ಪ್ರೋಕ್ತಂ ಯಥೋಕ್ತಂ ಫಲದಂ ನೃಪ ॥೧೨॥**

ಈ ವ್ರತವನ್ನು ಮಾಡುವವರು ಒಂಬತ್ತು ದಿನಗಳಲ್ಲೂ ಉಪವಾಸಮಾಡುವುದಕ್ಕೆ ಅಶಕ್ತರಾದಲ್ಲಿ ಅಂಥವರು ಕೇವಲ ಮೂರು ದಿನಗಳ ಉಪವಾಸವನ್ನು ಮಾಡಿದರೆ ಸಾಕು. ಅದರಿಂದಲೇ ಶಾಸ್ತ್ರದಲ್ಲಿ ಹೇಳಿರುವ ಸಂಪೂರ್ಣ ಫಲವು ಉಂಟಾಗುವುದೆಂದು ಹೇಳಿರುತ್ತದೆ.

**ಸಪ್ತಮ್ಯಾಂ ಚ ತಥಾಷ್ಟಮ್ಯಾಂ ನವಮ್ಯಾಂ ಭಕ್ತಿಭಾವತಃ ।**
**ತ್ರಿರಾತ್ರಕರಣಾತ್ಸರ್ವಂ ಫಲಂ ಭವತಿ ಪೂಜನಾತ್ ॥೧೩॥**

ಸಪ್ತಮಿ, ಅಷ್ಟಮಿ, ನವಮಿ ಈ ಮೂರು ದಿನಗಳಲ್ಲಿ ಭಕ್ತಿಭಾವದಿಂದ ಕೂಡಿ ಉಪವಾಸವನ್ನು ಮಾಡಿ ಪೂಜೆಮಾಡಿದಲ್ಲಿ ಸಕಲಫಲವೂ ಸಿದ್ಧಿಸುವುದು.

**ಪೂಜಾಭಿಶ್ಚೈವ ಹೋಮೈಶ್ಚ ಕುಮಾರೀಪೂಜನೈಸ್ತಥಾ ।**
**ಸಂಪೂರ್ಣಂ ತದ್ವ್ರತಂ ಪ್ರೋಕ್ತಂ ವಿಪ್ರಾಣಾಂ ಚೈವ ಭೋಜನೈಃ ॥೧೪॥**

ವಿಶೇಷವಾದ ಪೂಜೆಗಳಿಂದಲೂ, ಹೋಮಗಳಿಂದಲೂ, ಕುಮಾರಿಯರ ಸತ್ಕಾರ ಮತ್ತು ಪೂಜೆಯಿಂದಲೂ ಮತ್ತು ಬ್ರಾಹ್ಮಣರ ಸಂತರ್ಪಣೆಗಳಿಂದಲೂ ಈ ವ್ರತವು ಸಂಪೂರ್ಣವಾಗುವುದೆಂದು ಹೇಳಿರುತ್ತದೆ.

**ವ್ರತಾನಿ ಯಾನಿ ಚಾನ್ಯಾನಿ ದಾನಾನಿ ವಿವಿಧಾನಿ ಚ ।**
**ನವರಾತ್ರವ್ರತಸ್ಯಾಸ್ಯ ನೈವ ತುಲ್ಯಾನಿ ಭೂತಲೇ ॥೧೫॥**

ಈ ಭೂಲೋಕದಲ್ಲಿ ಇದಕ್ಕಿಂತ ಬೇರೆಬೇರೆಯಾಗಿರತಕ್ಕ ಯಾವ ವ್ರತಗಳಿರುವವೋ ಮತ್ತು ಅನೇಕವಾದ ಯಾವ ದಾನಗಳಿರುತ್ತವೆಯೋ ಅವುಗಳೆಲ್ಲವೂ ಈ ನವರಾತ್ರಿ ವ್ರತಕ್ಕೆ ಸಮಾನವಾಗುವುದಿಲ್ಲವು.

**ಧನಧಾನ್ಯಪ್ರದಂ ನಿತ್ಯಂ ಸುಖಸಂತಾನವೃದ್ಧಿದಂ ।**
**ಆಯುರಾರೋಗ್ಯದಂ ಚೈವ ಸ್ವರ್ಗದಂ ಮೋಕ್ಷದಂ ತಥಾ ॥೧೬॥**

ಪ್ರಸಿದ್ಧವಾದ ಈ ಮಹಾನವರಾತ್ರಿವ್ರತವು ನಿತ್ಯವಾದ ಅಂದರೆ ಶಾಶ್ವತವಾದ ಸಂಪತ್ತು, ಜೀವನಸಾಮಗ್ರಿಯಾದ ಆಹಾರ, ಯೋಗ್ಯರಾದ ಮಕ್ಕಳು, ಆಯುಸ್ಸು, ಆರೋಗ್ಯ ಇವುಗಳನ್ನು ಅನುಗ್ರಹಿಸಬಲ್ಲುದಾಗಿದೆ. ಅಲ್ಲದೆ ಸ್ವರ್ಗವನ್ನೂ, ಅದಕ್ಕೂ ಮಿಗಿಲಾದ ಮೋಕ್ಷವನ್ನೂ ಕೊಡತಕ್ಕುದಾಗಿದೆ. ಫಲಕಾಮನೆಯಿಂದ ವ್ರತವನ್ನು ಮಾಡಿದರೆ ಐಹಿಕವಾದ ಮತ್ತು ಆಮುಷ್ಮಿಕವಾದ ಫಲಗಳನ್ನೂ, ನಿಷ್ಕಾಮನೆಯಿಂದ ಆಚರಿಸಿದರೆ ಚಿತ್ತಶುದ್ಧಿ ಜ್ಞಾನಪ್ರಾಪ್ತಿ ಇವುಗಳುಂಟಾಗಿ ಅನಂತರ ಮೋಕ್ಷವನ್ನೂ ಕೊಡುತ್ತದೆಂದು ಭಾವವು.

**ವಿದ್ಯಾರ್ಥೀ ವಾ ಧನಾರ್ಥೀ ವಾ ಪುತ್ರಾರ್ಥೀ ವಾ ಭವೇನ್ನರಃ ।**
**ತೇನೇದಂ ವಿಧಿವತ್ಕಾರ್ಯಂ ವ್ರತಂ ಸೌಭಾಗ್ಯದಂ ಶಿವಂ ॥೧೭॥**

ವಿದ್ಯಾಪೇಕ್ಷಿಯಾದ ಅಥವಾ ತಿಳಿವಳಿಕೆಯನ್ನು ಬಯಸುವ, ಧನಾಪೇಕ್ಷಿಯಾದ ಎಂದರೆ ಐಶ್ವರ್ಯವನ್ನು ಆಶಿಸುವ, ಪುತ್ರಾಪೇಕ್ಷಿಯಾದ ಎಂದರೆ ಮಕ್ಕಳು, ಮೊಮ್ಮಕ್ಕಳನ್ನು ಇಚ್ಛಿಸುವ ಮನುಷ್ಯನು ಶುಭಪ್ರದವಾದ, ಐಶ್ವರ್ಯ ಸಂಪತ್ತು ಭಾಗ್ಯ ಮಂಗಳ ಇವುಗಳನ್ನುಂಟುಮಾಡುವ ಈ ವ್ರತವನ್ನು ಶಾಸ್ತ್ರನಿಯಮವನ್ನನುಸರಿಸಿ ವಿಧಿಪೂರ್ವಕವಾಗಿ ಮಾಡುವುದೇ ಆದರೆ ಅಂತಹ ಮನುಷ್ಯನು ತನ್ನ ಇಷ್ಟಾರ್ಥವನ್ನು ತಪ್ಪದೆ ಹೊಂದುವನು.

**ವಿದ್ಯಾರ್ಥೀ ಸರ್ವವಿದ್ಯಾಂ ವೈ ಪ್ರಾಪ್ನೋತಿ ವ್ರತಸಾಧನಾತ್ ।**
**ರಾಜ್ಯಭ್ರಷ್ಟೋ ನೃಪೋ ರಾಜ್ಯಂ ಸಮವಾಪ್ನೋತಿ ಸರ್ವಥಾ ॥೧೮॥**

ಈ ಸಕಲಸಂಪತ್ಪ್ರದಾತೃವಾದ ವ್ರತವನ್ನು ಮಾಡಿದ ವಿದ್ಯಾರ್ಥಿಯು ಎಲ್ಲ ವಿದ್ಯೆಗಳನ್ನೂ ಹೊಂದುವವನಾಗುತ್ತಾನೆ. ರಾಜ್ಯವನ್ನು ಕಳೆದುಕೊಂಡಿರುವ ರಾಜನು ಖಂಡಿತವಾಗಿಯೂ ಈ ವ್ರತವನ್ನಾಚರಿಸುವುದರಿಂದ ತನ್ನ ರಾಜ್ಯವನ್ನು ಪುನಃ ಹೊಂದುವನು.

**ಪೂರ್ವಜನ್ಮನಿ ಯೈರ್ನೂನಂ ನ ಕೃತಂ ವ್ರತಮುತ್ತಮಂ ।**
**ತೇ ವ್ಯಾಧಿನೋ ದರಿದ್ರಾಶ್ಚ ಭವಂತಿ ಪುತ್ರವರ್ಜಿತಾಃ ॥೧೯॥**

ಪೂರ್ವಜನ್ಮದಲ್ಲಿ ಯಾರಿಂದ ಈ ಸಕಲಸಂಕಷ್ಟಪರಿಹಾರಕವೂ, ಇಷ್ಟಾರ್ಥ ದಾಯಕವೂ ಆದ ವ್ರತವು ಆಚರಿಸಲ್ಪಡಲಿಲ್ಲವೋ ಅಂತಹವರು ರೋಗಗ್ರಸ್ತರಾಗಿಯೂ ಧನಹೀನರಾಗಿಯೂ ಸಂತಾನಹೀನರಾಗಿಯೂ ಇರುತ್ತಾರೆ.

**ವಂಧ್ಯಾ ಚ ಯಾ ಭವೇನ್ನಾರೀ ವಿಧವಾ ಧನವರ್ಜಿತಾ ।**
**ಅನುಮಾ ತತ್ರ ಕರ್ತವ್ಯಾ ನೇಯಂ ಕೃತವತೀ ವ್ರತಂ ॥೨೦॥**

ವಂಧ್ಯಳು ಎಂದರೆ ಮಕ್ಕಳಿಲ್ಲದ ಬಂಜೆಯಾಗಿ ಯಾವ ಹೆಂಗಸು ಇರುವಳೋ ಮತ್ತು ಯಾವ ಹೆಂಗಸು ನಿರ್ಗತಿಕಳಾಗಿಯೂ, ವಿಧವೆಯಾಗಿಯೂ ಇರುವಳೋ ಅಂಥವಳು ಹಿಂದೆ ಈ ವ್ರತವನ್ನು ಮಾಡಲಿಲ್ಲವೆಂದೂ, ಆ ಕಾರಣದಿಂದ ಈರೀತಿ ಯಾಗಿರುವಳೆಂದೂ ಅನುಮಾನದಿಂದ ಊಹಿಸಬೇಕು.

**ನವರಾತ್ರವ್ರತಂ ಪ್ರೋಕ್ತಂ ನ ಕೃತಂ ಯೇನ ಭೂತಲೇ ।**
**ಸ ಕಥಂ ವಿಭವಂ ಪ್ರಾಪ್ಯ ಮೋದತೇ ಚ ತಥಾ ದಿವಿ ॥೨೧॥**

ಇಲ್ಲಿ ಹೇಳಿರುವ ಸಕಲಫಲದಾಯಕವಾದ ಈ ವ್ರತವನ್ನು ಯಾರು ಈ ಭೂಲೋಕದಲ್ಲಿ ಮಾಡುವುದಿಲ್ಲವೋ ಅಂಥವರು ಹೇಗೆತಾನೇ ಐಶ್ವರ್ಯವನ್ನು ಹೊಂದಿದವರಾಗಿ ಸುಖಪಡುವರು? ಮತ್ತು ಸ್ವರ್ಗಸುಖವನ್ನು ಅನುಭವಿಸುವವ ರಾಗುವರು ?

**ರಕ್ತಚಂದನಸಂಮಿಶ್ರೈಃ ಕೋಮಲೈರ್ಬಿಲ್ವಪತ್ರಕೈಃ ।**
**ಭವಾನೀ ಪೂಜಿತಾ ಯೇನ ಸ ಭವೇನ್ನೃಪತಿಃ ಕ್ಷಿತೌ ॥೨೨॥**

ಕೆಂಪಾದ ಚಂದನಗಂಧದಿಂದ ಕೂಡಿರುವ ಚಿಗುರಾಗಿರುವ ಬಿಲ್ವಪತ್ರಗಳಿಂದ ಪರಾತ್ಪರದೇವಿಯಾದ ಭವಾನಿಯನ್ನು ಯಾರು ಪೂಜಿಸುವರೋ ಅಂಥಾ ಮಾನವರು ಭೂತಲದಲ್ಲಿ ರಾಜರಾಗಿ ಹುಟ್ಟುವರು.

**ನಾರಾಧಿತಾ ಯೇನ ಶಿವಾ ಸನಾತನೀ**
**ದುಃಖಾರ್ತಿಹಾ ಸಿದ್ಧಿಕರೀ ಜಗದ್ವರಾ ।**
**ದುಃಖಾವೃತಃ ಶತ್ರುಯುತಶ್ಚ ಭೂತಲೇ**
**ನೂನಂ ದರಿದ್ರೋ ಭವತೀಹ ಮಾನವಃ ॥೨೩॥**

ಜಗತ್ತಿನಲ್ಲೆಲ್ಲಾ ಶ್ರೇಷ್ಠಳಾದ, ಸಕಲಸಿದ್ಧಿಗಳನ್ನೂ ಅನುಗ್ರಹಿಸಲು ಮತ್ತು ದುಃಖದ ಸಂಕಟದಿಂದ ಪಾರುಮಾಡಲು ಶಕ್ತಳಾದ ಮಂಗಳರೂಪಿಣಿಯಾದ, ನಿತ್ಯ ಳಾದ ಈ ಶ್ರೀಭವಾನಿಯನ್ನು ಯಾರು ಆರಾಧಿಸಲಿಲ್ಲವೋ ಅಂಥವರು ಭೂಮಿಯಲ್ಲಿ ಖಂಡಿತವಾಗಿ ದುಃಖದಿಂದಲೂ ಶತ್ರುಗಳ ಭಯದಿಂದಲೂ ಆವರಿಸಲ್ಪಟ್ಟವರಾಗಿ ದಾರಿದ್ರ್ಯದಿಂದ ಪೀಡಿತರಾದವರಾಗಿರುವರು.

**ಯಾಂ ವಿಷ್ಣುರಿಂದ್ರೋ ಹರಪದ್ಮಜೌ ತಥಾ**
**ವಹ್ನಿಃ ಕುಬೇರೋ ವರುಣೋ ದಿವಾಕರಃ ।**
**ಧ್ಯಾಯಂತಿ ಸರ್ವಾರ್ಥಸಮಾಪ್ತಿನಂದಿತಾಃ**
**ತಾಂ ಕಿಂ ಮನುಷ್ಯಾ ನ ಭಜಂತಿ ಚಂಡಿಕಾಂ ॥೨೪॥**

ಪ್ರಸಿದ್ಧರಾದ ಬ್ರಹ್ಮ ವಿಷ್ಣು ಮಹೇಶ್ವರ ಇಂದ್ರ ಕುಬೇರ ಅಗ್ನಿ ವರುಣ ಸೂರ್ಯ ಮೊದಲಾದ ದೇವತೆಗಳಲ್ಲಿ ಶ್ರೇಷ್ಠರಾದವರೇ ಯಾವ ಜಗದಂಬಿಕೆಯನ್ನು ಪೂಜಿಸಿ ಎಲ್ಲ ಬಗೆಯ ಸಂಪೂರ್ಣ ಫಲವನ್ನು ಪಡೆದವರಾಗಿ, ಆನಂದದಿಂದ ಅವ ಳನ್ನು ಸದಾ ಧ್ಯಾನಿಸುತ್ತಾರೆಯೋ ಅಂತಹ ಪ್ರಭಾವದಿಂದ ಕೂಡಿದ ಜಗದಂಬಿಕೆ ಯಾದ ಚಂಡಿಕೆಯನ್ನು ಎಂದರೆ ಚಾಮುಂಡೇಶ್ವರಿಯನ್ನು ಏತಕ್ಕಾಗಿ ಮನುಷ್ಯರು ಆರಾಧಿಸುವುದಿಲ್ಲ? ಎಲ್ಲರೂ ಆರಾಧಿಸುತ್ತಾರೆಂದು ಭಾವವು.

**ಸ್ವಾಹಾ ಸ್ವಧಾ ನಾಮ ಮನುಪ್ರಭಾವೈ**
**ಸ್ತೃಪ್ಯಂತಿ ದೇವಾಃ ಪಿತರಸ್ತಥೈವ ।**

ಯಜ್ಞೇಷು ಸರ್ವೇಷು ಮುದಾ ಹರಂತಿ
ಯನ್ನಾಮಯುಗ್ಮಶ್ರುತಿಭಿರ್ಮುನೀಂದ್ರಾಃ ॥೨೫॥

ವೇದಗಳಲ್ಲಿನ ಮಂತ್ರಗಳಂತೆಯೇ ಪ್ರಭಾವದಿಂದ ಕೂಡಿರುವ ಸ್ವಾಹಾ ಸ್ವಧಾ ಎಂಬ ಮಂತ್ರಗಳ ಉಚ್ಚಾರಣದಿಂದ ದೇವತೆಗಳು ಮತ್ತು ಪಿತೃಗಳು ಸಂತೃಪ್ತಿಯನ್ನು ಹೊಂದುವರು. ಆದಕಾರಣದಿಂಧ ಮುನಿಶ್ರೇಷ್ಠರು ಹವ್ಯಕವ್ಯಗಳಲ್ಲಿ ಉಪಯೋಗಿಸುವ ವೇದದ ಮಂತ್ರಗಳ ಕೊನೆಯಲ್ಲಿ ಇದನ್ನೂ ತಕ್ಕಂತೆ ಸೇರಿಸಿ ಸಂತೋಷದಿಂದ ದೇವತೆಗಳನ್ನೂ ಮತ್ತು ಪಿತೃಗಳನ್ನೂ ಆರಾಧಿಸುತ್ತಾರೆ.

ಯಸ್ಯೇಚ್ಛಯಾ ಸೃಜತಿ ವಿಶ್ವಮಿದಂ ಪ್ರಜೇಶೋ
ನಾನಾವತಾರಕಲನಂ ಕುರುತೇ ಹರಿಶ್ಚ ।
ನೂನಂ ಕರೋತಿ ಜಗತಃ ಕಿಲ ಭಸ್ಮ ಶಂಭು
ಸ್ತಾಂ ಶರ್ಮದಾಂ ನ ಭಜತೇನು ಕಥಂ ಮನುಷ್ಯಃ ॥೨೬॥

ಯಾವ ಪರಾಶಕ್ತಿರೂಪಿಣಿಯಾದ ಭವಾನಿಯ ಇಚ್ಛೆಯನ್ನು ಅನುಸರಿಸಿ ಬ್ರಹ್ಮನು ಈ ಪ್ರಪಂಚವನ್ನು ಸೃಷ್ಟಿಸುವನೋ, ಮತ್ತು ಬಗೆಬಗೆಯ ಹತ್ತು ಅವತಾರಗಳನ್ನು ವಿಷ್ಣುವೂ ಯಾವಳ ಇಚ್ಛೆಯಂತೆಯೇ ಮಾಡುವನೋ, ಮತ್ತು ಈಜಗತ್ತನ್ನು ಪ್ರಳಯಕಾಲದಲ್ಲಿ ಯಾವಳ ಇಚ್ಛೆಯಿಂದ ಭಸ್ಮವಾಗುವಂತೆ ಶಂಭುವೂ ನಾಶಮಾಡುವನೋ, ಅಂತಹ ಅಪ್ರತಿಮಶಕ್ತಿಯುಳ್ಳ, ಸರ್ವದಾ ಸುಖವನ್ನುಂಟುಮಾಡುವ, ಆ ಕೃಪಾಮಯಿಯಾದ ಅಂಬಿಕೆಯನ್ನು ಮನುಷ್ಯನಾದವನು ಪೂಜೆಮಾಡದೆ ಇರುವುದು ಹೇಗೆ?

ನೈಕೋಽಸ್ತಿ ಸರ್ವಭುವನೇಷು ತಯಾ ವಿಹೀನೋ
ದೇವೋ ನರೋಽಥ ವಿಹಗಃ ಕಿಲ ಪನ್ನಗೋ ವಾ ।
ಗಂಧರ್ವರಾಕ್ಷಸಪಿಶಾಚನಗೇಷು ನೂನಂ
ಯಃ ಸ್ಪಂದಿತುಂ ಭವತಿ ಶಕ್ತಿಯುತೋ ಯಥೇಚ್ಛಂ ॥೨೭॥

ಎಲ್ಲ ಲೋಕಗಳಲ್ಲಿಯೂ ಇರುವ ಪ್ರಾಣಿಗಳಲ್ಲಿ ದೇವತೆಗಳಾಗಲಿ, ಮಾನವರಾಗಲಿ, ಪಕ್ಷಿಯಾಗಲಿ, ಸರ್ಪವಾಗಲಿ, ಗಂಧರ್ವ ರಾಕ್ಷಸ ಪಿಶಾಚಗಳೇ ಆಗಲಿ ಯಾರೊಬ್ಬರೂ ತಮಗೆ ತಕ್ಕಷ್ಟುಮಟ್ಟಿಗೆ ಆ ದೇವಿಯ ಶಕ್ತಿಯು ಇಲ್ಲದಿದ್ದಲ್ಲಿ

ಸ್ವತಂತ್ರರಾಗಿ ಎಂದರೆ ತಮ್ಮ ಇಚ್ಛಾನುಸಾರವಾಗಿ ಸ್ವಲ್ಪಮಟ್ಟಿನ ಚಲನಗಳನ್ನು ಮಾಡುವುದಕ್ಕೂ ಸಮರ್ಥರಾಗಿ ಇರುವುದಿಲ್ಲವು.

**ತಾಂ ನ ಸೇವೇತ ಕಶ್ಚಂಡೀಂ ಸರ್ವಕಾಮಾರ್ಥದಾಂ ಶಿವಾಂ ।**
**ವ್ರತಂ ತಸ್ಯಾ ನ ಕಃ ಕುರ್ಯಾದ್ವಾಂಛನ್ನರ್ಥಚತುಷ್ಟಯಂ ॥೨೮॥**

ಭಕ್ತರ ಎಲ್ಲ ಇಷ್ಟಾರ್ಥಗಳನ್ನೂ ಪರಿಪೂರ್ಣ ಮಾಡುವ, ಮಂಗಳಕಾರಿಣಿ ಯಾದ, ತನ್ನ ಇಚ್ಛೆಯನ್ನು ಯಾವಾಗಲೂ ತಪ್ಪದೆ ನಡೆಯಿಸುವ ಆ ದುರ್ಗಾದೇವಿ ಯನ್ನು, ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಗಳನ್ನೂ ಅಪೇಕ್ಷಿಸುವ ಯಾವ ಮನುಷ್ಯನು ತಾನೇ ಸೇವಿಸುವುದಿಲ್ಲ? ಮತ್ತು ಆ ತಾಯಿಯನ್ನು ಒಲಿಸಿ ಕೊಳ್ಳುವ ಈ ವ್ರತವನ್ನು ಯಾವನು ತಾನೇ ಮಾಡದೆ ಇರುತ್ತಾನೆ? ಎಲ್ಲರೂ ಕೂಡ ಆಚರಿಸುತ್ತಾರೆ ಎಂದು ಭಾವವು.

**ಮಹಾಪಾತಕಸಂಯುಕ್ತೋ ನವರಾತ್ರವ್ರತಂ ಚರೇತ್ ।**
**ಮುಚ್ಯತೇ ಸರ್ವಪಾಪೇಭ್ಯೋ ನಾತ್ರ ಕಾರ್ಯಾ ವಿಚಾರಣಾ ॥೨೯॥**

ಮಾನವನು ಬ್ರಹ್ಮಹತ್ಯಾದಿ ಮಹಾಪಾಪಗಳಿಂದ ಕೂಡಿದವನಾದರೂ ಈ ವ್ರತವನ್ನು ಶ್ರದ್ಧೆಯಿಂದ ಮಾಡಿದರೆ, ಅಂತಹ ಎಲ್ಲಾ ಪಾಪಗಳಿಂದಲೂ ವಿಮುಕ್ತ ನಾಗುವನೆಂಬ ವಿಷಯದಲ್ಲಿ ಸ್ವಲ್ಪವೂ ಯೋಚಿಸಬೇಕಾಗಿಲ್ಲ.

**ಪುರಾ ಕಶ್ಚಿದ್ವಣಿಕ್‌ಶೀನೋ ಧನಹೀನಃ ಸುದುಃಖಿತಃ ।**
**ಕುಟುಂಬೀ ಚಾಭವತ್ಕಶ್ಚಿತ್ಕೋಸಲೇ ನೃಪಸತ್ತಮ ॥೩೦॥**

ಓ ರಾಜರಲ್ಲಿ ಶ್ರೇಷ್ಠನಾದ ಜನಮೇಜಯನೇ, ಪೂರ್ವದಲ್ಲಿ ದುಡ್ಡು ಕಾಸಿಲ್ಲದೆ ಬಡವನಾದ ಒಬ್ಬಾನೊಬ್ಬ ವೈಶ್ಯನು ದುಃಖಪೀಡಿತನಾಗಿ ಹೆಂಡತಿ ಮಕ್ಕಳಿಂದೊಡ ಗೂಡಿ ಕೋಸಲದೇಶದಲ್ಲಿ ವಾಸಮಾಡುತ್ತಿದ್ದನು.

**ಅಪತ್ಯಾನಿ ಬಹೂನ್ಯಸ್ಯಾಭವನ್ ಕ್ಷುತ್ಪೀಡಿತಾನಿ ಚ ।**
**ಭಕ್ಷ್ಯಂ ಕಿಂಚಿತ್ತು ಸಾಯಾಹ್ನೇ ಪ್ರಾಪುಸ್ತಸ್ಯ ಚ ಬಾಲಕಾಃ ॥೩೧॥**

ಅವನಿಗೆ ತುಂಬ ಮಕ್ಕಳಿದ್ದರು. ಅವರೆಲ್ಲರೂ ಕೂಡ ಬಹಳ ಹಸಿವಿನಿಂದ ಪೀಡಿತರಾಗಿ ಸಾಯಂಕಾಲದ ಹೊತ್ತಿಗೆ ಅವನು ಭಿಕ್ಷೆಯಿಂದ ತಂದ ಸ್ವಲ್ಪ ಆಹಾರ ವನ್ನು ಸೇವಿಸುತ್ತಿದ್ದರು.

**ಭುಂಕ್ತೇ ಸ್ಮ ಕಾರ್ಯಕರ್ತಾಸೌ ಪರಸ್ಯಾಥ ಬುಭುಕ್ಷಿತಃ ।**
**ಕುಟುಂಬಭರಣಂ ತತ್ರ ಚಕಾರಾತಿನಿರಾಕುಲಃ ॥೩೨॥**

ಹಸಿವೆಯುಳ್ಳವನಾಗಿ ಇನ್ನೊಬ್ಬರ ಸೇವಾಕಾರ್ಯವನ್ನು ಮಾಡಿಕೊಡುತ್ತಾ ಇವನೂ ಕೂಡ ಸಾಯಂಕಾಲದ ಸಮಯದಲ್ಲಿ ತನಗೆ ದೊರೆತ ಸ್ವಲ್ಪ ಆಹಾರವನ್ನು ಸೇವಿಸುತ್ತಿದ್ದನು. ಈ ರೀತಿಯಲ್ಲಿ ಅವನು ತುಂಬ ಕಷ್ಟಪಡುತ್ತಿದ್ದರೂ ಆ ಕ್ಲೇಶವನ್ನು ಮನಸ್ಸಿಗೆ ಹೆಚ್ಚಾಗಿ ಹಚ್ಚಿಕೊಳ್ಳದೆ, ತನ್ನ ಸಂಸಾರದ ಜೀವನವನ್ನು ಸಾಗಿಸುತ್ತಿದ್ದನು.

**ಸದಾ ಧರ್ಮರತಃ ಶಾಂತಃ ಸದಾಚಾರಶ್ಚ ಸತ್ಯವಾಕ್ ।**
**ಅಕ್ರೋಧನಶ್ಚ ಧೃತಿಮಾನ್ನಿರ್ಮದಶ್ಚಾನಸೂಯಕಃ ॥೩೩॥**

ಅವನು ಯಾವಾಗಲೂ ಧರ್ಮಶೀಲನಾಗಿಯೂ, ಸಮಾಧಾನಚಿತ್ತವುಳ್ಳವನಾಗಿಯೂ, ಸದಾಚಾರಶೀಲನಾಗಿಯೂ, ನಿಜವನ್ನೇ ಆಡತಕ್ಕವನಾಗಿಯೂ, ಕೋಪವಿಲ್ಲದವನಾಗಿಯೂ, ಧೈರ್ಯಶಾಲಿಯಾಗಿಯೂ, ಅಹಂಕಾರವಿಲ್ಲದೆಯೂ ಮತ್ತು ಇತರರ ಒಳ್ಳೆಯ ಸ್ಥಿತಿಯನ್ನು ನೋಡಿ ಅಸೂಯೆ ಪಡದವನಾಗಿಯೂ, ಇರುತ್ತಿದ್ದನು.

**ಸಂಪೂಜ್ಯ ದೇವತಾ ನಿತ್ಯಂ ಪಿತೄನಪ್ಯತಿಥೀಂಸ್ತಥಾ ।**
**ಭುಂಜಾನೇ ಪೋಷ್ಯವರ್ಗೇಽಥ ಕೃತವಾನ್ಭೋಜನಂ ವಣಿಕ್ ॥೩೪॥**

ಅವನು ಪ್ರತಿದಿನವೂ ದೇವತೆಗಳನ್ನು ಪೂಜಿಸಿ, ಅನಂತರ ಪಿತೃಗಳನ್ನೂ ಮತ್ತು ಅತಿಥಿಗಳನ್ನೂ ಭಕ್ತಿಯಿಂದ ಪೂಜಿಸಿ ಸತ್ಕರಿಸಿ, ತನ್ನಿಂದ ರಕ್ಷಿಸಲ್ಪಡತಕ್ಕ ಕುಟುಂಬದವರೆಲ್ಲರೂ ಭೋಜನಮಾಡಿದ ಮೇಲೆ ತಾನು ಊಟವನ್ನು ಮಾಡುತ್ತಿದ್ದನು.

**ಏವಂ ಗಚ್ಛತಿ ಕಾಲೇ ವೈ ಸುಶೀಲೋ ನಾಮತೋ ಗುಣೈಃ ।**
**ದಾರಿದ್ರ್ಯಾರ್ತೋಽ ದ್ವಿಜಂ ಶಾಂತಂ ಪಪ್ರಚ್ಛಾತಿಬುಭುಕ್ಷಿತಃ ॥೩೫॥**

ಈರೀತಿಯಾಗಿ ಅವನು ಕಾಲವನ್ನು ಕಳೆಯುತ್ತಿರಲು ಒಂದುದಿನ ಬಹಳ ಹಸಿವಿನಿಂದಲೂ ಬಡತನದಿಂದಲೂ ಪೀಡಿತನಾಗಿದ್ದರೂ ಒಳ್ಳೆಯ ನಡತೆಯುಳ್ಳ ಸುಶೀಲನೆಂಬ ಆ ವೈಶ್ಯನು ಶಾಂತಚಿತ್ತನಾದ ಒಬ್ಬ ಬ್ರಾಹ್ಮಣಶ್ರೇಷ್ಠನನ್ನು ಹೀಗೆ ಕೇಳಿದನು.

**ಭೋ ಭೂದೇವ ಕೃಪಾಂ ಕೃತ್ವಾ ವದಸ್ವಾದ್ಯ ಮಹಾಮತೇ ।**
**ಕಥಂ ದಾರಿದ್ರ್ಯನಾಶಃ ಸ್ಯಾದಿತಿ ಮೇ ನಿಶ್ಚಯೇನ ವೈ ॥೩೬॥**

ತುಂಬ ತಿಳಿವಳಿಕೆಯುಳ್ಳ ಓ ಬ್ರಾಹ್ಮಣನೇ, ನನ್ನಲ್ಲಿ ಕರುಣೆಯನ್ನು ಇಟ್ಟು, ನನಗೆ ನನ್ನ ಈ ಬಡತನವು ಹೇಗೆ ನಾಶವಾಗುತ್ತದೆ ಎಂಬುದನ್ನು ನೀನು ದಯ ವಿಟ್ಟು ಹೇಳಬೇಕು.

**ಧನೇಷಣಾ ಮೇ ನೈವಾಸ್ತಿ ಧನೀ ಸ್ಯಾಮಿತಿ ಮಾನದ ।**
**ಕುಟುಂಬಭರಣಾರ್ಥಂ ವೈ ಪೃಚ್ಛಾಮಿ ತ್ವಾಂ ದ್ವಿಜೋತ್ತಮ ॥೩೭॥**

ತುಂಬ ಹಣಗಾರನಾಗಬೇಕೆಂಬ ಆಶೆಯು ಏನೂ ನನಗಿಲ್ಲವು. ಆದರೂ ಈ ನನ್ನ ಸಂಸಾರಕ್ಕೆ ಸೇರಿದ ಹೆಂಡತಿಮಕ್ಕಳನ್ನು ಕಾಪಾಡುವುದಕ್ಕೆ ಸಾಕಾಗುವಷ್ಟು ಮಟ್ಟಿನ ಸೌಕರ್ಯವನ್ನು ನಾನು ಅಪೇಕ್ಷಿಸುತ್ತಿದ್ದೇನೆ. ಅಷ್ಟೇ ಹೊರತು ಐಶ್ವರ್ಯ ದಲ್ಲಿ ನನಗೆ ಅತ್ಯಾಶೆ ಇಲ್ಲವು. ಆದುದರಿಂದ ಎಲೈ ವಿಪ್ರೋತ್ತಮನೇ, ನಿನ್ನನ್ನು ಕುರಿತು ಈ ಬಡತನವನ್ನು ನಿವಾರಣೆಮಾಡಿಕೊಳ್ಳುವ ಬಗೆ ಹೇಗೆ ಎಂದು ಪ್ರಶ್ನಿಸಿ ರುತ್ತೇನೆ. ಅಭಿಮಾನವನ್ನು ನಿವಾರಿಸುವ ಬ್ರಾಹ್ಮಣನೇ, ನನಗೆ ತಿಳಿಯಹೇಳು.

**ಪುತ್ರೀ ಸುತಸ್ತು ಮೇ ಬಾಲೋ ಭಕ್ಷ್ಯಾರ್ಥೀ ರೋದತೇ ಭೃಶಂ ।**
**ತಾವನ್ಮಾತ್ರಂ ಗೃಹೇ ನಾನ್ನಂ ಮುಷ್ಟಿಮೇಕಾಂ ದದಾಮ್ಯಹಂ ॥೩೮॥**

ಚಿಕ್ಕವಯಸ್ಸಿನ ನನ್ನ ಮಗಳೂ, ಮಗನೂ ಹಸಿವಿನಿಂದ ಬಹಳವಾಗಿ ನೊಂದು ಆಹಾರವನ್ನು ಅಪೇಕ್ಷಿಸಿ ಅಳುತ್ತಲಿದ್ದಾರೆ. ಅವರಿಗೆ ಹಸಿವನ್ನಿಂಗಿಸಲು ಸಾಕಾಗುವಷ್ಟು ಅನ್ನವೂ ನನ್ನ ಮನೆಯಲ್ಲಿಲ್ಲವು. ಆದುದರಿಂದ ನಾನು ಅವರಿಗೆ ಒಂದು ಕವಳದಷ್ಟನ್ನು ಮಾತ್ರ ಆಹಾರವನ್ನು ಕೊಡುತ್ತಿದ್ದೇನೆ.

**ವಿಸರ್ಜಿತೋ ಯತೋ ಗೇಹಾದ್ಗತೋ ಬಾಲೋ ರುದನ್ಮಯಾ ।**
**ಅತೋ ಮೇ ದಹ್ಯತೇಽತ್ಯರ್ಥಂ ಕಿಂ ಕರೋಮಿ ಧನಂ ವಿನಾ ॥೩೯॥**

ಅಳುತ್ತಿರುವ ನನ್ನ ಮಕ್ಕಳನ್ನು ನಾನು ಮನೆಯಿಂದ ಹೊರಡಿಸಿದೆನು. ಆದು ದರಿಂದ ನನ್ನ ಹೃದಯವು ಬಹಳವಾಗಿ ಸುಡುತ್ತಿದೆ. ಹಣವಿಲ್ಲದ ನಾನು ಏನನ್ನು ತಾನೇ ಮಾಡಲಿ ?

**ವಿವಾಹೋಽಸ್ತಿ ಸುತಾಯಾ ಮೇ ನಾಸ್ತಿ ವಿತ್ತಂ ಕರೋಮಿ ಕಿಂ ।**
**ದಶವರ್ಷಾಧಿಕಾಯಾಸ್ತು ದಾನಕಾಲೋಽಪಿ ಯಾತ್ಯಲಂ ॥೪೦॥**

ಓ ಬ್ರಾಹ್ಮಣನೇ, ನನ್ನ ಮಗಳಿಗೆ ಮದುವೆಯಾಗಬೇಕಾಗಿದೆ. ನನ್ನಲ್ಲಿ ಧನವಿಲ್ಲವು. ಏನನ್ನು ಮಾಡಲಿ? ಹತ್ತು ವರ್ಷಕ್ಕಿಂತಲೂ ಹೆಚ್ಚಾದ ವಯಸ್ಸಾದ ಅವಳಿಗೆ ಕನ್ಯಾದಾನವನ್ನು ಮಾಡುವ ಕಾಲವೂ ಜಾಗ್ರತೆಯಾಗಿ ಮೀರಿಹೋಗುತ್ತಿದೆ.

**ತೇನ ಶೋಚಾಮಿ ವಿಪ್ರೇಂದ್ರ ಸರ್ವಜ್ಞೋಽಸಿ ದಯಾನಿಧೇ ।**
**ತಪೋ ದಾನಂ ವ್ರತಂ ಕಿಂಚಿದ್ಬ್ರೂಹಿ ಮಂತ್ರಜಪಂ ತಥಾ ॥೪೧॥**

ಓ ಬ್ರಾಹ್ಮಣಶ್ರೇಷ್ಠನೇ, ಆದಕಾರಣದಿಂದ ನಾನು ದುಃಖಪಡುತ್ತಿದ್ದೇನೆ. ಕರುಣೆಗೆ ತವರುಮನೆಯಾಗಿರುವ ಮತ್ತು ಎಲ್ಲವನ್ನೂ ತಿಳಿದಿರುವ ನೀನು ಈ ನನ್ನ ಬಡತನವನ್ನು ನಿವಾರಿಸಬಲ್ಲಂತಹ ತಪಸ್ಸು, ದಾನ, ವ್ರತ, ಮಂತ್ರ, ಜಪ ಇವುಗಳಲ್ಲಿ ಯಾವುದನ್ನಾದರೂ ಹೇಳು.

**ಯೇನಾಹಂ ಪೋಷ್ಯವರ್ಗಸ್ಯ ಕರೋಮಿ ದ್ವಿಜ ಪೋಷಣಂ ।**
**ತಾವನ್ಮೇ ಸ್ಯಾದ್ಧನಪ್ರಾಪ್ತಿರ್ನಾಧಿಕಂ ಪ್ರಾರ್ಥಯೇ ಕಿಲ ॥೪೨॥**

ಓ ಬ್ರಾಹ್ಮಣನೇ, ಯಾವ ವ್ರತಾದಿಗಳ ಆಚರಣೆಯ ಫಲವಾಗಿ ನಾನು ನನ್ನ ಕುಟುಂಬವನ್ನು ಕಾಪಾಡಲೂ ಪೋಷಿಸಲೂ ಶಕ್ತನಾಗುವೆನೋ, ಅಷ್ಟುಮಾತ್ರ ಹಣದ ಲಾಭವಾದೀತೋ ಅಂಥದನ್ನು ನನಗೆ ಹೇಳು. ಹೆಚ್ಚಾದುದನ್ನು ಏನನ್ನೂ ನಾನು ಪ್ರಾರ್ಥಿಸುವುದಿಲ್ಲವು.

**ತ್ವತ್ಪ್ರಸಾದಾತ್ಕುಟುಂಬಂ ಮೇ ಸುಖಿತಂ ಪ್ರಭವೇದಿಹ ।**
**ತತ್ಕುರುಷ್ವ ಮಹಾಭಾಗ ಜ್ಞಾನೇನ ಪರಿಚಿಂತ್ಯ ಚ ॥೪೩॥**

ಓ ಪೂಜ್ಯನಾದ ಬ್ರಾಹ್ಮಣನೇ, ನಿನ್ನ ಅನುಗ್ರಹದಿಂದ ನನ್ನ ಕುಟುಂಬವು ಯಾವುದರಿಂದ ಸುಖವುಳ್ಳದ್ದಾಗಿ ಪರಿಣಮಿಸುತ್ತದೆಯೋ ಅಂತಹುದನ್ನು ನಿನ್ನ ಜ್ಞಾನಶಕ್ತಿಯಿಂದ ಆಲೋಚನೆಮಾಡಿ ನನಗೆ ಹೇಳು.

|| ವ್ಯಾಸ ಉವಾಚ ||

**ಇತಿ ಪೃಷ್ಟಸ್ತಥಾ ತೇನ ಬ್ರಾಹ್ಮಣಃ ಸಂಶಿತವ್ರತಃ ।**
**ಉವಾಚ ಪರಮಪ್ರೀತಸ್ತಂ ವೈಶ್ಯಂ ನೃಪಸತ್ತಮ ॥೪೪॥**

ವ್ಯಾಸಋಷಿಯು ಇಂತೆಂದನು—ದೊರೆಗಳಲ್ಲಿ ಉತ್ತಮನಾದ ಓ ಜನಮೇಜಯರಾಜನೇ, ಲಾಲಿಸು. ಈ ರೀತಿಯಾಗಿ ಆ ವೈಶ್ಯನು ಕ್ಲೃಪ್ತವಾಗಿ ಧರ್ಮಗಳನ್ನು ಆಚರಿಸುವ ಆ ದ್ವಿಜನನ್ನು ಕೇಳಲು ಆಗ ಆ ಬ್ರಾಹ್ಮಣನು ಬಹಳ ಸಂತೋಷಗೊಂಡವನಾಗಿ ಅವನನ್ನು ಕುರಿತು ಹೀಗೆ ಹೇಳಿದನು.

**ವೈಶ್ಯವರ್ಯ ಕುರುಷ್ವಾದ್ಯ ನವರಾತ್ರವ್ರತಂ ಶುಭಂ ।**
**ಪೂಜನಂ ಭಗವತ್ಯಾಶ್ಚ ಹವನಂ ಭೋಜನಂ ತಥಾ ॥೪೫॥**

ಓ ವೈಶ್ಯರಲ್ಲಿ ಶ್ರೇಷ್ಠನಾದವನೇ, ಈಗ ನೀನು ಭಕ್ತಿಯಿಂದ ಶುಭಕರವಾದ ನವರಾತ್ರವ್ರತವನ್ನು, ಮಹಾಮಹಿಮಳಾದ ದೇವಿಯ ಪೂಜೆ, ಹೋಮ, ಸಂತರ್ಪಣೆಗಳಿಂದ ಮಾಡುವವನಾಗು.

**ವೇದಪಾರಾಯಣಂ ಶಕ್ತಿಜಪಹೋಮಾದಿಕಂ ತಥಾ ।**
**ಕುರುಷ್ವಾದ್ಯ ಯಥಾಶಕ್ತಿ ತವ ಕಾರ್ಯಂ ಭವಿಷ್ಯತಿ ॥೪೬॥**

ಓ ವೈಶ್ಯಶ್ರೇಷ್ಠನೇ, ವೇದಗಳ ಪಾರಾಯಣ, ಆದಿಶಕ್ತಿಯ ಮಂತ್ರದ ಜಪ ಹೋಮಾದಿಗಳನ್ನು ನೀನು ನಿನ್ನ ಕೈಲಾದಮಟ್ಟಿಗೂ ನೆರವೇರಿಸುವವನಾಗು. ನಿನ್ನ ಇಷ್ಟಾರ್ಥವು ಕೈಗೂಡುವುದು.

**ಏತಸ್ಮಾದಪರಂ ಕಿಂಚಿದ್ವ್ರತಂ ನಾಸ್ತಿ ಧರಾತಲೇ ।**
**ನವರಾತ್ರಾಭಿಧಂ ವೈಶ್ಯ ಪಾವನಂ ಸುಖದಂ ತಥಾ ॥೪೭॥**

ಈ ಭೂಲೋಕದಲ್ಲಿ ಈ ಮೇಲೆ ಹೇಳಿದ ವ್ರತಕ್ಕಿಂತಲೂ ಶ್ರೇಷ್ಠವಾದ ಇನ್ನೊಂದು ವ್ರತವು ಇರುವುದಿಲ್ಲವು. ಈ ಶ್ರೇಷ್ಠವಾದ ವ್ರತಕ್ಕೆ ನವರಾತ್ರವ್ರತವೆಂದು ಹೆಸರು. ಇದು ಭಕ್ತರನ್ನು ಪರಿಶುದ್ಧರನ್ನಾಗಿ ಮಾಡುವುದಾಗಿಯೂ ಅವರಿಗೆ ಸುಖವನ್ನು ಕೊಡುವುದಾಗಿಯೂ ಇರುವುದು.

**ಜ್ಞಾನದಂ ಮೋಕ್ಷದಂ ಚೈವ ಸುಖಸಂತಾನವರ್ಧನಂ ।**
**ಶತ್ರುನಾಶಕರಂ ಕಾಮಂ ನವರಾತ್ರವ್ರತಂ ಸದಾ ॥೪೮॥**

ಈ ನವರಾತ್ರವ್ರತವು ಭಕ್ತರ ಉದ್ದೇಶಗಳಿಗೆ ಅನುಸಾರವಾಗಿ ತಿಳಿವಳಿಕೆಯನ್ನುಂಟುಮಾಡಿ ಮೋಕ್ಷವನ್ನು ಕೊಡತಕ್ಕದ್ದಾಗಿಯೂ, ಯೋಗ್ಯರಾದ ಪುತ್ರರನ್ನು ಕೊಡತಕ್ಕದ್ದಾಗಿಯೂ, ಶತ್ರುಗಳನ್ನು ನಾಶಮಾಡತಕ್ಕದ್ದಾಗಿಯೂ ಇರುವುದು.

**ರಾಜ್ಯಭ್ರಷ್ಟೇನ ರಾಮೇಣ ಸೀತಾವಿರಹಿತೇನ ಚ ।**
**ಕಿಷ್ಕಿಂಧಾಯಾಂ ವ್ರತಂ ಚೈತತ್ಕೃತಂ ದುಃಖಾತುರೇಣ ವೈ ॥೪೯॥**

ರಾಜ್ಯವನ್ನು ಕಳೆದುಕೊಂಡ, ಸೀತೆಯ ವಿಯೋಗದಿಂದ ಸಂಕಟಪಡುತ್ತಿದ್ದ, ದುಃಖಾತಿಶಯದಿಂದ ಕಂದಿದವನಾದ ಶ್ರೀರಾಮಚಂದ್ರನಿಂದ ಕಿಷ್ಕಿಂಧಾಪಟ್ಟಣದಲ್ಲಿ ಈ ವ್ರತವು ಆಚರಿಸಲ್ಪಟ್ಟಿತು.

**ಪ್ರತಪ್ತೇನಾಪಿ ರಾಮೇಣ ಸೀತಾವಿರಹವಹ್ನಿನಾ ।**
**ವಿಧಿವತ್ಪೂಜಿತಾ ದೇವೀ ನವರಾತ್ರವ್ರತೇನ ವೈ ॥೫೦॥**

ಸೀತಾದೇವಿಯ ವಿಯೋಗವೆಂಬ ಬೆಂಕಿಯಿಂದ ಬೆಂದವನಾಗಿದ್ದರೂ ಕೂಡ ಶ್ರೀರಾಮನು ಅತಿಭಕ್ತಿಯಿಂದ ಯಥಾವಿಧಿಯಾಗಿ ನವರಾತ್ರವ್ರತದ ವಿಧಾನದಿಂದ ಶ್ರೀದೇವಿಯನ್ನು ಪೂಜಿಸಿದನು.

**ತೇನ ಪ್ರಾಪ್ತಾಥ ವೈದೇಹೀ ಕೃತ್ವಾ ಸೇತುಂ ಮಹಾರ್ಣವೇ ।**
**ಹತ್ವಾ ಮಂಡೋದರೀನಾಥಂ ಕುಂಭಕರ್ಣಂ ಮಹಾಬಲಂ ॥೫೧॥**

ಅನಂತರದಲ್ಲಿ ಆ ಪೂಜಾಪ್ರಭಾವದಿಂದ ಆ ಶ್ರೀರಾಮನು ದೊಡ್ಡ ಸಾಗರಕ್ಕೆ ಸೇತುವೆಯನ್ನು ನಿರ್ಮಿಸಿ, ಮಂಡೋದರಿಯ ಗಂಡನಾದ ರಾವಣನನ್ನೂ, ಅವನ ತಮ್ಮನಾದ ಮಹಾಬಲಶಾಲಿಯಾದ ಕುಂಭಕರ್ಣನನ್ನೂ ಕೊಂದು, ಶ್ರೀ ಸೀತಾದೇವಿಯನ್ನು ಹೊಂದಿದನು.

**ಮೇಘನಾದಂ ಸುತಂ ಹತ್ವಾ ಕೃತ್ವಾ ಭೂಪಂ ವಿಭೀಷಣಂ ।**
**ಪಶ್ಚಾದಯೋಧ್ಯಾಮಾಗತ್ಯ ಪ್ರಾಪ್ತಂ ರಾಜ್ಯಮಕಂಟಕಂ ॥೫೨॥**

ರಾವಣನ ಪುತ್ರನಾದ ಮೇಘನಾದನನ್ನೂ ಕೊಂದು, ವಿಭೀಷಣನಿಗೆ ರಾಜ್ಯ ದಲ್ಲಿ ಪಟ್ಟಾಭಿಷೇಕವನ್ನು ಮಾಡಿಸಿ, ಅನಂತರದಲ್ಲಿ ಅಯೋಧ್ಯೆಗೆ ಹಿಂತಿರುಗಿದವ ನಾಗಿ, ಯಾವ ಅಡ್ಡಿಆತಂಕಗಳೂ ಇಲ್ಲದಿರುವ ರಾಜ್ಯವನ್ನು ಹೊಂದಿದನು.

**ನವರಾತ್ರವ್ರತಸ್ಯಾಸ್ಯ ಪ್ರಭಾವೇನ ವಿಶಾಂ ವರ ।**
**ಸುಖಂ ಭೂಮಿತಲೇ ಪ್ರಾಪ್ತಂ ರಾಮೇಣಾಮಿತತೇಜಸಾ ॥೫೩॥**

ಓ ವೈಶ್ಯರಲ್ಲಿ ಶ್ರೇಷ್ಠನಾದ ಸುಶೀಲನೇ, ಈ ನವರಾತ್ರವ್ರತದ ಪ್ರಭಾವದಿಂದ ಅತ್ಯಂತಬಲಶಾಲಿಯಾದ ಶ್ರೀರಾಮನು ಈ ಭೂಲೋಕದಲ್ಲಿ ಸುಖವನ್ನು ಹೊಂದಿ ದವನಾದನು.

॥ ವ್ಯಾಸ ಉವಾಚ ॥

**ಇತಿ ವಿಪ್ರವಚಃ ಶ್ರುತ್ವಾ ಸ ವೈಶ್ಯಸ್ತಂ ದ್ವಿಜಂ ಗುರುಂ ।**
**ಕೃತ್ವಾ ಜಗ್ರಾಹ ಸನ್ಮಂತ್ರಂ ಮಾಯಾಬೀಜಾಭಿಧಂ ನೃಪ ॥೫೪॥**

ವ್ಯಾಸಮುನಿಯು ಇಂತೆಂದನು—ಎಲೈ ಜನಮೇಜಯರಾಜನೇ, ಕೇಳು. ಈರೀತಿಯಾದ ಬ್ರಾಹ್ಮಣನ ಮಾತುಗಳನ್ನು ಕೇಳಿ, ಆ ವೈಶ್ಯನು ಆ ವಿಪ್ರವರ್ಯ ನನ್ನೇ ಗುರುವಾಗಿ ಭಾವಿಸಿ, ಅವನಿಂದ ಮಾಯಾಬೀಜವೆಂದು ಹೆಸರುಳ್ಳ ಉತ್ತಮ ವಾದ ಆದಿಶಕ್ತಿಯ ಮಂತ್ರವನ್ನು ಉಪದೇಶದ ಮೂಲಕವಾಗಿ ಪಡೆದುಕೊಂಡನು.

**ಜಜಾಪ ಪರಯಾ ಭಕ್ತ್ಯಾ ನವರಾತ್ರಮುತಂದ್ರಿತಃ ।**
**ನಾನಾವಿಧೋಪಹಾರೈಶ್ಚ ಪೂಜಯಾಮಾಸ ಸಾದರಂ ॥೫೫॥**

ಬ್ರಾಹ್ಮಣನಿಂದ ಮಂತ್ರೋಪದೇಶವನ್ನು ತೆಗೆದುಕೊಂಡ ಮೇಲೆ, ಒಂಭತ್ತು ರಾತ್ರಿಗಳ ಕಾಲವೂ ಅವಿಚ್ಛಿನ್ನವಾಗಿ ಆ ಮಹಾಮಂತ್ರವನ್ನು ಆಲಸ್ಯವಿಲ್ಲದವನಾಗಿ, ಹೆಚ್ಚಾದ ಭಕ್ತಿಯಿಂದ ಜಪಿಸಿದನು. ಮತ್ತು ನಾನಾವಿಧವಾದ ಕಾಣಿಕೆಗಳಿಂದ ದೇವಿ ಯನ್ನು ಭಕ್ತಿಭಾವದಿಂದ ಪೂಜಿಸಿದನು.

**ನವಸಂವತ್ಸರಂ ಚೈವ ಮಾಯಾಬೀಜಪರಾಯಣಃ ।**
**ನವಮೇ ವತ್ಸರಾಂತೇ ತು ಮಹಾಷ್ಟಮ್ಯಾಂ ಮಹೇಶ್ವರೀ ॥೫೬॥**

**ಅರ್ಧರಾತ್ರೇ ತು ಸಂಜಾತೇ ಪ್ರತ್ಯಕ್ಷಂ ದರ್ಶನಂ ದದೌ ।**
**ನಾನಾವರಪ್ರದಾನೈಶ್ಚ ಕೃತಕೃತ್ಯಂ ಚಕಾರ ತಂ ॥೫೭॥**

ಮತ್ತು ಹಾಗೆಯೇ ಅವನು ಆ ಮಾಯಾಬೀಜವೆಂಬ ನಾಮದಿಂದ ಪ್ರಸಿದ್ಧವಾಗಿರುವ ಮಂತ್ರವನ್ನು ಒಂಬತ್ತು ಸಂವತ್ಸರಗಳು ಕ್ರಮವಾಗಿ ಜಪಿಸಿದನು. ಮತ್ತು ಯಥಾಶಕ್ತಿ ಪೂಜೆಯನ್ನೂ ಮಾಡಿದನು. ಒಂಬತ್ತನೆಯ ವರ್ಷದ ಆಶ್ವಯುಜ ಶುಕ್ಲಪಕ್ಷದ ಮಹಾಷ್ಟಮಿಯ ದಿವಸದಲ್ಲಿ, ಅರ್ಧರಾತ್ರಿಯ ಸಮಯದಲ್ಲಿ ಸ್ವಯಂ ಪ್ರಕಾಶಳಾಗಿ ಆ ಮಹೇಶ್ವರಿಯು ಆ ವೈಶ್ಯನಿಗೆ ಪ್ರತ್ಯಕ್ಷಳಾಗಿ ಅವನಿಗೆ ಬೇಕಾದ ಅನೇಕವರಗಳನ್ನು ಅನುಗ್ರಹಿಸಿ ಆ ವೈಶ್ಯನನ್ನು ಸಂತೋಷವುಳ್ಳವನನ್ನಾಗಿ ಮಾಡಿದಳು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಸಪ್ತವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

## || ಅಷ್ಟಾವಿಂಶೋಽಧ್ಯಾಯಃ ||

### ಇಪ್ಪತ್ತೆಂಟನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಕಥಂ ರಾಮೇಣ ತಚ್ಚೀರ್ಣಂ ವ್ರತಂ ದೇವ್ಯಾಃ ಸುಖಪ್ರದಂ ।**
**ರಾಜ್ಯಭ್ರಷ್ಟಃ ಕಥಂ ಸೋಽಥ ಕಥಂ ಸೀತಾ ಹೃತಾ ಪುನಃ ॥೧॥**

ಜನಮೇಜಯರಾಜನು ವ್ಯಾಸಮುನಿಯನ್ನು ಪ್ರಶ್ನೆ ಮಾಡಿದನು—ಸುಖವನ್ನುಂಟುಮಾಡುವ ದೇವಿಯ ಆ ನವರಾತ್ರಿಯ ವ್ರತವು ರಾಮನಿಂದ ಹೇಗೆ ಆಚರಿಸಲ್ಪಟ್ಟಿತು? ಯಾವರೀತಿಯಿಂದ ಶ್ರೀರಾಮನು ರಾಜ್ಯವನ್ನು ಕಳೆದುಕೊಂಡನು? ಮತ್ತು ಸೀತಾದೇವಿಯು ಹೇಗೆ ಅಪಹರಿಸಲ್ಪಟ್ಟಳು ? ಇವೆಲ್ಲವನ್ನೂ ನನಗೆ ವಿವರವಾಗಿ ತಿಳಿಯಹೇಳು.

|| ವ್ಯಾಸ ಉವಾಚ ||

**ರಾಜಾ ದಶರಥಃ ಶ್ರೀಮಾನಯೋಧ್ಯಾಧಿಪತಿಃ ಪುರಾ ।**
**ಸೂರ್ಯವಂಶವರಶ್ಚಾಸೀದ್ದೇವಬ್ರಾಹ್ಮಣಪೂಜಕಃ ॥೨॥**

ವ್ಯಾಸಮಹರ್ಷಿಯು ಹೇಳಿದನು—ಪೂರ್ವದಲ್ಲಿ ಸೂರ್ಯವಂಶದ ರಾಜರಲ್ಲಿ ಶ್ರೇಷ್ಠನಾದ, ದೇವತೆಗಳನ್ನೂ, ಭೂಸುರೋತ್ತಮರನ್ನೂ ಪೂಜಿಸುವ, ಸಕಲಸಂಪತ್ತಿನಿಂದ ಕೂಡಿದವನಾದ, ಅಯೋಧ್ಯಾಪಟ್ಟಣಕ್ಕೆ ಅಧಿಪತಿಯಾದ ದಶರಥನೆಂಬ ರಾಜನು ಇದ್ದನು.

**ಚತ್ವಾರೋ ಜಜ್ಞಿರೇ ತಸ್ಯ ಪುತ್ರಾ ಲೋಕೇಷು ವಿಶ್ರುತಾಃ ।**
**ರಾಮಲಕ್ಷ್ಮಣಶತ್ರುಘ್ನಾ ಭರತಶ್ಚೇತಿ ನಾಮತಃ ॥೩॥**

ಆ ದಶರಥಮಹಾರಾಜನಿಗೆ ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯನ್ನು ಹೊಂದಿರುವ ರಾಮ, ಲಕ್ಷ್ಮಣ, ಭರತ, ಶತ್ರುಘ್ನ ಎಂಬ ಹೆಸರಿನಿಂದ ಕೂಡಿದ ನಾಲ್ಕುಜನ ಮಕ್ಕಳು ಜನಿಸಿದರು.

**ರಾಜ್ಞಃ ಪ್ರಿಯಕರಾಃ ಸರ್ವೇ ಸದೃಶಾ ಗುಣರೂಪತಃ ।**

ಆ ನಾಲ್ವರೂ ರಾಜನಾದ ದಶರಥನಿಗೆ ಪ್ರೀತಿಯನ್ನುಂಟುಮಾಡುವವರಾಗಿಯೂ, ಗುಣಗಳಲ್ಲಿಯೂ ರೂಪದಲ್ಲಿಯೂ, ದೊರೆಗೂ ಮತ್ತು ಪರಸ್ಪರವಾಗಿಯೂ ಹೋಲುವವರಾಗಿಯೂ ಇದ್ದರು.

**ಕೌಸಲ್ಯಾಯಾಃ ಸುತೋ ರಾಮಃ ಕೈಕೇಯ್ಯಾ ಭರತಃ ಸ್ಮೃತಃ ॥೪॥**
**ಸುಮಿತ್ರಾತನಯೌ ಜಾತೌ ಯಮಲೌ ದ್ವೌ ಮನೋಹರೌ ।**
**ತೇ ಜಾತಾ ವೈ ಕಿಶೋರಾಶ್ಚ ಧನುರ್ಬಾಣಧರಾಃ ಕಿಲ ॥೫॥**

ಆ ನಾಲ್ವರಲ್ಲಿ ರಾಮನು ಕೌಶಲ್ಯಾದೇವಿಯ ಪುತ್ರನು. ಭರತನು ಕೈಕೇಯಿದೇವಿಯ ಮಗನು. ಅವಳಿಜವಳಿ ಮಕ್ಕಳಾದ ಲಕ್ಷ್ಮಣ ಶತ್ರುಘ್ನರು ಸುಮಿತ್ರಾದೇವಿಯ ಮಕ್ಕಳು. ಆ ನಾಲ್ವರೂ ಕ್ರಮವಾಗಿ ಬಾಲ್ಯವನ್ನು ಕಳೆದು ಬಾಣಬತ್ತಲಿಕೆಯನ್ನು ಧರಿಸಲು ಯೋಗ್ಯವಾದ ವಯಸ್ಸಿನವರಾದರು.

**ಸೂನವಃ ಕೃತಸಂಸ್ಕಾರಾ ಭೂಪತೇಃ ಸುಖವರ್ಧಕಾಃ ।**
**ಕೌಶಿಕೇನ ತದಾಽಽಗತ್ಯ ಪ್ರಾರ್ಥಿತೋ ರಘುನಂದನಃ ॥೬॥**

ದೊರೆಯಾದ ದಶರಥನಿಗೆ ಹರ್ಷವನ್ನು ಹೆಚ್ಚಿಸುವವರಾಗಿದ್ದ ಆ ನಾಲ್ವರಿಗೂ ಉಪನಯನಾದಿ ಸಂಸ್ಕಾರಗಳು ಮಾಡಲ್ಪಟ್ಟವು. ಅನಂತರದಲ್ಲಿ ಕುಶಿಕವಂಶದಲ್ಲಿ ಹುಟ್ಟಿದವನಾದ ವಿಶ್ವಾಮಿತ್ರನು ಬಂದು ದಶರಥನನ್ನು ಕುರಿತು ಶ್ರೀರಾಮನನ್ನು ತನ್ನ ಯಾಗನಿರ್ವಹಣವನ್ನು ಕಾಪಾಡುವ ಕಾರ್ಯದಲ್ಲಿ ಸಹಾಯಕ್ಕಾಗಿ ಕಳುಹಿಸಿಕೊಡುವಂತೆ ಪ್ರಾರ್ಥಿಸಿದನು.

**ರಾಘವಂ ಮಖರಕ್ಷಾರ್ಥಂ ಸೂನುಂ ಷೋಡಶವಾರ್ಷಿಕಂ ।**
**ತಸ್ಮೈ ಸೋಽಯಂ ದದೌ ರಾಮಂ ಕೌಶಿಕಾಯ ಸಲಕ್ಷ್ಮಣಂ ॥೭॥**

ದಶರಥನು ಹದಿನಾರು ವರುಷ ವಯಸ್ಸಿನವನಾದ ಶ್ರೀರಾಮನನ್ನು ಲಕ್ಷ್ಮಣ ನೊಡನೆ ವಿಶ್ವಾಮಿತ್ರನ ಯಾಗದ ರಕ್ಷಣೆಗೋಸ್ಕರ ಕಳುಹಿಸಿಕೊಡಲು ಒಪ್ಪಿದನು.

**ತೌ ಸಮೇತ್ಯ ಮುನಿಂ ಮಾರ್ಗೇ ಜಗ್ಮತುಶ್ಚಾರುದರ್ಶನೌ ।**
**ತಾಟಕಾ ನಿಹತಾ ಮಾರ್ಗೇ ರಾಕ್ಷಸೀ ಘೋರದರ್ಶನಾ ॥೮॥**
**ರಾಮೇಣೈಕೇನ ಬಾಣೇನ ಮುನೀನಾಂ ದುಃಖದಾ ಸದಾ ।**

ವಿಶ್ವಾಮಿತ್ರನೊಡಗೂಡಿ ಸುಂದರರಾದ ಅವರಿಬ್ಬರೂ ಅವನ ಆಶ್ರಮವನ್ನು ಕುರಿತು ಹೊರಟರು. ಮಾರ್ಗದ ಮಧ್ಯದಲ್ಲಿ ನೋಡುವುದಕ್ಕೆ ಭಯಂಕರಳಾದ, ಯಾವಾಗಲೂ ಋಷಿಗಳಿಗೆ ದುಃಖವನ್ನುಂಟುಮಾಡುತ್ತಿದ್ದ ತಾಟಕಾ ಎಂಬ ರಾಕ್ಷಸಿ ಯನ್ನು ರಾಮನು ಒಂದೇ ಬಾಣದಿಂದ ಕೊಂದನು.

**ಯಜ್ಞರಕ್ಷಾ ಕೃತಾ ತತ್ರ ಸುಬಾಹುರ್ನಿಹತಃ ಶಠಃ ॥೯॥**

ಮತ್ತು ಅಲ್ಲಿ ಮೂರ್ಖನಾದ ಸುಬಾಹು ಎಂಬ ರಾಕ್ಷಸನನ್ನೂ ಸಂಹರಿಸಿ, ಯಜ್ಞವನ್ನು ಸುಗಮವಾಗಿ ನಡೆಯುವಂತೆ ಕಾಪಾಡಿದನು.

**ಮಾರೀಚೋಽಥ ಮೃತಪ್ರಾಯೋ ನಿಕ್ಷಿಪ್ತೋ ಬಾಣವೇಗತಃ ।**
**ಏವಂ ಕೃತ್ವಾ ಮಹತ್ಕರ್ಮ ಯಜ್ಞಸ್ಯ ಪರಿರಕ್ಷಣಂ ॥೧೦॥**

ಅನಂತರದಲ್ಲಿ ರಾಮನ ಬಾಣದ ವೇಗದಿಂದ, ಸಾಯುವಂತಾದ ಮಾರೀಚ ನೆಂಬ ರಾಕ್ಷಸನು ದೂರವಾಗಿ ಎಸೆಯಲ್ಪಟ್ಟನು. ಈ ರೀತಿಯಾದ ದೊಡ್ಡ ಕೆಲಸ ಗಳನ್ನು ಮಾಡುವುದರ ಮೂಲಕವಾಗಿ ರಾಮನು ಆ ಯಜ್ಞದ ಸಂರಕ್ಷಣೆಯನ್ನು ಮಾಡಿದನು.

**ಗತಾಸ್ತೇ ಮಿಥಿಲಾಂ ಸರ್ವೇ ರಾಮಲಕ್ಷ್ಮಣಕೌಶಿಕಾಃ ।**
**ಅಹಲ್ಯಾ ಮೋಚಿತಾ ಶಾಪಾನ್ನಿಷ್ಪಾಪಸಾ ಸಾ ಕೃತಾಽಬಲಾ ॥೧೧॥**

ಅನಂತರದಲ್ಲಿ ಅವರೆಲ್ಲರೂ ಎಂದರೆ ರಾಮನೂ, ಲಕ್ಷ್ಮಣನೂ, ವಿಶ್ವಾ ಮಿತ್ರನೂ ಮಿಥಿಲಾಪಟ್ಟಣವನ್ನು ಕುರಿತು ಹೊರಟರು. ಮಧ್ಯದಲ್ಲಿ ಶ್ರೀರಾಮನು ಶಿಲಾರೂಪವಾಗಿದ್ದ ಅಹಲ್ಯಾದೇವಿಯನ್ನು ಶಾಪದಿಂದ ಬಿಡುಗಡೆಮಾಡಿ ಪರಿಶುದ್ಧ ಳನ್ನಾಗಿ ಮಾಡಿದನು.

**ವಿದೇಹನಗರೇ ತೌ ತು ಜಗ್ಮತುರ್ಮುನಿನಾ ಸಹ ।**
**ಬಭಂಜ ಶಿವಚಾಪಂ ಚ ಜನಕೇನ ಪಣೀಕೃತಂ ॥೧೨॥**

ರಾಮಲಕ್ಷ್ಮಣರಿಬ್ಬರೂ ವಿಶ್ವಾಮಿತ್ರನೊಡಗೂಡಿ ವಿದೇಹಪಟ್ಟಣವನ್ನು ಪ್ರವೇಶಿಸಿದರು. ಅಲ್ಲಿ ಶ್ರೀರಾಮನು ಸೀತಾದೇವಿಯ ವಿವಾಹಕ್ಕಾಗಿ ಜನಕರಾಜನಿಂದ ಪಣವಾಗಿರಿಸಿದ್ದ ಶಿವಧನುಸ್ಸನ್ನು ಮುರಿದನು.

**ಉಪಯೇಮೇ ತತಃ ಸೀತಾಂ ಜಾನಕೀಂ ಚ ರಮಾಂಶಜಾಂ ।**
**ಲಕ್ಷ್ಮಣಾಯ ದದೌ ರಾಜಾ ಪುತ್ರೀಮೇಕಾಂ ತಥೋರ್ಮಿಲಾಂ ॥೧೩॥**

ಅನಂತರದಲ್ಲಿ ಲಕ್ಷ್ಮೀದೇವಿಯ ಅಂಶದಿಂದ ಜನಿಸಿದ್ದ ಜನಕರಾಜನ ಮಗಳಾದ ಸೀತಾದೇವಿಯನ್ನು ಮದುವೆಮಾಡಿಕೊಂಡನು. ಹಾಗೆಯೇ ಜನಕರಾಜನು ಊರ್ಮಿಲಾ ಎಂಬ ಪುತ್ರಿಯನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆಮಾಡಿದನು.

**ಕುಶಧ್ವಜಸುತೇ ಕನ್ಯೇ ಪ್ರಾಪತುರ್ಭ್ರಾತರಾವುಭೌ ।**
**ತಥಾ ಭರತಶತ್ರುಘ್ನೌ ಸುಶೀಲೌ ಶುಭಲಕ್ಷಣೌ ॥೧೪॥**

ಅದೇ ರೀತಿಯಲ್ಲಿ ಸುಶೀಲರೂ ಸುಲಕ್ಷಣವಂತರೂ ಆದ ಭರತ ಶತ್ರುಘ್ನರು ಕುಶಧ್ವಜಮಹಾರಾಜನ ಮಾಂಡವೀ, ಶ್ರುತಕೀರ್ತಿ ಎಂಬ ಕನ್ಯೆಯರನ್ನು ಮದುವೆಮಾಡಿಕೊಂಡರು.

**ಏವಂ ದಾರಕ್ರಿಯಾಸ್ತೇಷಾಂ ಭ್ರಾತೄಣಾಂ ಚಾಭವನ್ನೃಪ ।**
**ಚತುರ್ಣಾಂ ಮಿಥಿಲಾಯಾಂ ತು ಯಥಾವಿಧಿ ವಿಧಾನತಃ ॥೧೫॥**

ಸಹೋದರರಾದ ನಾಲ್ವರ ವಿವಾಹಮಹೋತ್ಸವಗಳೂ ಮಿಥಿಲಾನಗರದಲ್ಲಿ ವಿಧಿಪೂರ್ವಕವಾಗಿ ಓ ದೊರೆಯೇ, ಈಮೇರೆ ನೆರವೇರಿಸಲ್ಪಟ್ಟವು.

**ರಾಜ್ಯಯೋಗ್ಯಂ ಸುತಂ ದೃಷ್ಟ್ವಾ ರಾಜಾ ದಶರಥಸ್ತಥಾ ।**
**ರಾಘವಾಯ ಧುರಂ ದಾತುಂ ಮನಶ್ಚಕ್ರೇ ನಿಜಾಯ ವೈ ॥೧೬॥**

ಆಗ ರಾಜನಾದ ದಶರಥನು ರಾಜ್ಯಭಾರವನ್ನು ಮಾಡಲು ಸಮರ್ಥನಾದ ಶ್ರೀರಾಮನನ್ನು ನೋಡಿ ಅವನಿಗೆ ರಾಜ್ಯಭಾರವನ್ನು ಒಪ್ಪಿಸಲು ಮನಸ್ಸನ್ನು ಮಾಡಿದನು.

**ಸಂಭಾರಂ ವಿಹಿತಂ ದೃಷ್ಟ್ವಾ ಕೈಕಯೀ ಪೂರ್ವಕಲ್ಪಿತೌ ।**
**ವರೌ ಸಂಪ್ರಾರ್ಥಯಾಮಾಸ ಭರ್ತಾರಂ ವಶವರ್ತಿನಂ ॥೧೭॥**

ರಾಜ್ಯಾಭಿಷೇಕವನ್ನು ಮಾಡಲು ಸಿದ್ಧವಾದ ಎಲ್ಲ ಸಲಕರಣೆಗಳನ್ನೂ ನೋಡಿ ಕೈಕಯಿಯು ಅಸೂಯೆಗೊಂಡಳಾಗಿ ತನ್ನ ಇಚ್ಛೆಯಂತೆ ನಡೆಯುವ ಹಾಗೆ ಮಾಡಿ ಕೊಂಡಿರುವ ದಶರಥನನ್ನು ಪೂರ್ವದಲ್ಲಿ ಅವನು ಕೊಟ್ಟಿದ್ದ ಎರಡು ವರಗಳನ್ನು ಈಗ ನಡೆಯಿಸಿಕೊಡುವಂತೆ ಯಾಚಿಸಿದಳು.

**ರಾಜ್ಯಂ ಸುತಾಯ ಚೈಕೇನ ಭರತಾಯ ಮಹಾತ್ಮನೇ ।**
**ರಾಮಾಯ ವನವಾಸಂ ಚ ಚತುರ್ದಶಸಮಾಸ್ತಥಾ ॥೧೮॥**

ಆ ಎರಡು ವರಗಳಲ್ಲಿ ಒಂದರಿಂದ ತನ್ನ ಮಗನಾದ ಮಹಾತ್ಮನಾದ ಭರತ ನಿಗೆ ರಾಜ್ಯಭಾರವನ್ನೂ, ಎರಡನೆಯ ವರದಿಂದ ರಾಮನಿಗೆ ಹದಿನಾಲ್ಕು ವರ್ಷಗಳ ಪರ್ಯಂತ ವನವಾಸವನ್ನೂ ಯಾಚಿಸಿದಳು.

**ರಾಮಸ್ತು ವಚನಾತ್ತಸ್ಯಾಃ ಸೀತಾಲಕ್ಷ್ಮಣಸಂಯುತಃ ।**
**ಜಗಾಮ ದಂಡಕಾರಣ್ಯಂ ರಾಕ್ಷಸೈರುಪಸೇವಿತಂ ॥೧೯॥**

ಅನಂತರದಲ್ಲಿ ಶ್ರೀರಾಮನು ಕೈಕಯಿಯ ಮಾತಿನಂತೆ ಸೀತಾಲಕ್ಷ್ಮಣರೊ ಡನೆ, ರಾಕ್ಷಸರಿಂದ ನಿಬಿಡೀಕೃತವಾಗಿದ್ದ ದಂಡಕಾರಣ್ಯವನ್ನು ಕುರಿತು ಹೊರಟನು.

**ರಾಜಾ ದಶರಥಃ ಪುತ್ರವಿರಹೇಣ ಪ್ರಪೀಡಿತಃ ।**
**ಜಹೌ ಪ್ರಾಣಾನಮೇಯಾತ್ಮಾ ಪೂರ್ವಶಾಪಮನುಸ್ಮರನ್ ॥೨೦॥**

ಮಹಾತ್ಮನಾದ ದಶರಥರಾಜನು ಪುತ್ರನಾದ ರಾಮನ ವಿರಹದಿಂದ ಅತ್ಯಂತ ದುಃಖಪಡುತ್ತಾ, ಹಿಂದಿನ ಋಷಿಶಾಪವನ್ನು ಸ್ಮರಿಸುತ್ತಾ ಪ್ರಾಣವನ್ನು ತ್ಯಜಿಸಿದನು.

**ಭರತಃ ಪಿತರಂ ದೃಷ್ಟ್ವಾ ಮೃತಂ ಮಾತೃಕೃತೇನ ವೈ ।**
**ರಾಜ್ಯಮೃದ್ಧಂ ನ ಜಗ್ರಾಹ ಭ್ರಾತುಃ ಪ್ರಿಯಚಿಕೀರ್ಷಯಾ ॥೨೧॥**

ಆಮೇಲೆ ಧರ್ಮಾತ್ಮನಾದ ಭರತನು ತಾಯಿಯ ಈ ಕೆಟ್ಟಕೆಲಸದ ಫಲವಾಗಿ ಶೋಕದಿಂದ ಪ್ರಾಣವನ್ನು ಬಿಟ್ಟಿದ್ದ ತಂದೆಯನ್ನು ನೋಡಿ, ತನ್ನ ಅಣ್ಣನಾದ

ರಾಮನಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ, ಸಂಪತ್ತಿನಿಂದ ಕೂಡಿದ್ದ ಆ ರಾಜ್ಯವನ್ನು ತೆಗೆದುಕೊಳ್ಳಲಿಲ್ಲ.

**ಪಂಚವಟ್ಯಾಂ ವಸನ್ರಾಮೋ ರಾವಣಾವರಜಾಂ ವನೇ ।**
**ಶೂರ್ಪಣಖಾಂ ವಿರೂಪಾಂ ವೈ ಚಕಾರಾತಿಸ್ಮರಾತುರಾಂ ॥೨೨॥**

ಶ್ರೀರಾಮನು ಪಂಚವಟಿಯೆಂಬ ಸ್ಥಳದಲ್ಲಿ ವಾಸಮಾಡುತ್ತಿರುವಾಗ ಅತ್ಯಂತ ಮನ್ಮಥಾವಸ್ಥೆಯಿಂದ ಪೀಡಿತಳಾಗಿ ಬಂದ ರಾವಣನ ತಂಗಿಯಾದ ಶೂರ್ಪಣಖಾ ಎಂಬ ರಾಕ್ಷಸಿಯ ಕಿವಿಮೂಗುಗಳನ್ನು ಕತ್ತರಿಸಿ ವಿರೂಪಗೊಳಿಸಿದನು.

**ಖರಾದಯಸ್ತು ತಾಂ ದೃಷ್ಟ್ವಾ ಛಿನ್ನನಾಸಾಂ ನಿಶಾಚರಾಃ ।**
**ಚಕ್ರುಃ ಸಂಗ್ರಾಮಮತುಲಂ ರಾಮೇಣಾಮಿತತೇಜಸಾ ॥೨೩॥**

ಖರ ಮುಂತಾದ ರಾಕ್ಷಸರು ಕತ್ತರಿಸಿದ ಮೂಗುಳ್ಳ ತಂಗಿಯಾದ ಶೂರ್ಪನಖಿಯನ್ನು ನೋಡಿ ಅತ್ಯಂತ ಪರಾಕ್ರಮಶಾಲಿಯಾದ ರಾಮನೊಡನೆ ಅಸಾಧಾರಣವಾದ ಯುದ್ಧವನ್ನು ಮಾಡಿದರು.

**ಸ ಜಘಾನ ಖರಾದೀಂಶ್ಚ ದೈತ್ಯಾನತಿಬಲಾನ್ವಿತಾನ್ ।**
**ಮುನೀನಾಂ ಹಿತಮನ್ವಿಚ್ಛನ್ ರಾಮಃ ಸತ್ಯಪರಾಕ್ರಮಃ ॥೨೪॥**

ಮುನಿಗಳ ಹಿತವನ್ನು ಬಯಸುವವನಾಗಿ, ನಿಜವಾದ ಪರಾಕ್ರಮದಿಂದ ಕೂಡಿರುವ ಶ್ರೀರಾಮನು ಅತ್ಯಂತ ಬಲಶಾಲಿಗಳಾದ ಆ ಖರನೇ ಮೊದಲಾದ ರಾಕ್ಷಸರನ್ನು ಸಂಹಾರಮಾಡಿದನು.

**ಗತ್ವಾ ಶೂರ್ಪಣಖಾ ಲಂಕಾಂ ಖರದೂಷಣಘಾತನಂ ।**
**ದೂಷಿತಾ ಕಥಯಾಮಾಸ ರಾವಣಾಯ ಚ ರಾಘವಾತ್ ॥೨೫॥**

ದುಷ್ಟಶಿಕ್ಷಕನಾದ ರಾಮನಿಂದ ವಿಕಾರಗೊಳಿಸಲ್ಪಟ್ಟ ಶೂರ್ಪಣಖಿಯು ಲಂಕೆಗೆ ಹೋಗಿ, ರಾಮನು ಖರದೂಷಣರನ್ನು ಕೊಂದ ವೃತ್ತಾಂತವನ್ನು ರಾವಣನಿಗೆ ಹೇಳಿದಳು.

**ಸೋಽಪಿ ಶ್ರುತ್ವಾ ವಿನಾಶಂ ತಂ ಜಾತಃ ಕ್ರೋಧವಶಃ ಖಲಃ ।**
**ಜಗಾಮ ರಥಮಾರುಹ್ಯ ಮಾರೀಚಸ್ಯಾಶ್ರಮಂ ತದಾ ॥೨೬॥**

ದುಷ್ಟನಾದ ಆ ರಾವಣನು ಆಗ ಖರದೂಷಣ ಮುಂತಾದವರ ಸಂಹಾರ ವನ್ನು ಕೇಳಿ ಕೋಪದಿಂದ ಕೂಡಿದವನಾಗಿ ರಥವನ್ನು ಹತ್ತಿ ಮಾರೀಚನ ಆಶ್ರಮ ವನ್ನು ಕುರಿತು ಹೊರಟನು.

**ಕೃತ್ವಾ ಹೇಮಮೃಗಂ ನೇತುಂ ಪ್ರೇಷಯಾಮಾಸ ರಾವಣಃ ।**
**ಸೀತಾಪ್ರಲೋಭನಾರ್ಥಾಯ ಮಾಯಾವಿನಮಸಂಭವಂ ॥೨೭॥**

ಅವನನ್ನು ಎಲ್ಲೂ ಎಂದೂ ಕಾಣದಿದ್ದ ಚಿನ್ನದ ಜಿಂಕೆಯನ್ನಾಗಿ ಮಾಡಿ ಸೀತೆಯನ್ನು ಆಶೆಗೊಳಿಸಿ ಮೋಸಮಾಡುವುದರಿಂದ ಸೀತೆಯ ಸಮೀಪದಿಂದ ರಾಮ ನನ್ನು ದೂರಪ್ರದೇಶಕ್ಕೆ ಕರೆದುಕೊಂಡು ಹೋಗುವುದಕ್ಕಾಗಿ ಮಾಯಾವಿಯಾದ ಮಾರೀಚನನ್ನು ಕಳುಹಿಸಿದನು.

**ಸೋಽಥ ಹೇಮಮೃಗೋ ಭೂತ್ವಾ ಸೀತಾದೃಷ್ಟಿಪಥಂ ಗತಃ ।**
**ಮಾಯಾವೀ ಚಾತಿಚಿತ್ರಾಂಗಶ್ಚರನ್ ಪ್ರಬಲಮಂತಿಕೇ ॥೨೮॥**

ಅನಂತರದಲ್ಲಿ ಆ ಮಾಯಾವಿಯಾದ ಮಾರೀಚನು ವಿಚಿತ್ರಬಣ್ಣದಿಂದ ಕೂಡಿದ ಚಿನ್ನದ ಜಿಂಕೆಯಾಗಿ ಪರಿಣಮಿಸಿ, ಸಮೀಪದಲ್ಲೇ ಅಲ್ಲಲ್ಲಿ ಸಂಚರಿಸುತ್ತಾ ಸೀತಾದೇವಿಯ ದೃಷ್ಟಿಗೆ ಕಾಣಿಸಿಕೊಂಡನು.

**ತಂ ದೃಷ್ಟ್ವಾ ಜಾನಕೀ ಪ್ರಾಹ ರಾಘವಂ ದೈವನೋದಿತಾ ।**
**ಚರ್ಮಾನಯ ಸ್ವಕಾಂತೇತಿ ಸ್ವಾಧೀನಪತಿಕಾ ಯಥಾ ॥೨೯॥**

ಜನಕರಾಜನ ಮಗಳಾದ ಸೀತೆಯು ಅದನ್ನು ಕಂಡು, ಹೇಳಿದಹಾಗೆ ಕೇಳುವ ಗಂಡನುಳ್ಳ ಸ್ತ್ರೀಯಂತೆ, ದೈವದಿಂದ ಪ್ರೇರಿಸಲ್ಪಟ್ಟವಳಾಗಿ, ಶ್ರೀರಾಮನನ್ನು ಕುರಿತು ಎಲೈ ಕಾಂತನೇ, ಆ ಮೃಗದ ಚರ್ಮವನ್ನು ತೆಗೆದುಕೊಂಡು ಬಾ ಎಂದು ಹೇಳಿದಳು.

**ಅವಿಚಾರ್ಯಾಥ ರಾಮೋಽಪಿ ತತ್ರ ಸಂಸ್ಥಾಪ್ಯ ಲಕ್ಷ್ಮಣಂ ।**
**ಸಶರಂ ಧನುರಾದಾಯ ಯಯೌ ಮೃಗಪದಾನುಗಃ ॥೩೦॥**

ಅನಂತರದಲ್ಲಿ ರಾಮನೂ ಕೂಡ ಸ್ವಲ್ಪವೂ ಪರ್ಯಾಲೋಚಿಸದೆ ಅಲ್ಲಿ ಲಕ್ಷ್ಮಣ ನನ್ನು ಕಾವಲಾಗಿರಿಸಿ ಬಾಣಗಳಿಂದ ಕೂಡಿರುವ ಬಿಲ್ಲನ್ನು ತೆಗೆದುಕೊಂಡು ಜಿಂಕೆ ಯನ್ನು ಅನುಸರಿಸುತ್ತಾ ಹೋದನು.

**ಸಾರಂಗೋಽಪಿ ಹರಿಂ ದೃಷ್ಟ್ವಾ ಮಾಯಾಕೋಟಿವಿಶಾರದಃ ।**
**ದೃಶ್ಯಾದೃಶ್ಯೋ ಬಭೂವಾಥ ಜಗಾಮ ಚ ವನಾಂತರಂ ॥೩೦॥**

ಆ ಜಿಂಕೆಯ ವೇಷಧಾರಿಯಾದ, ಕಪಟಕಾರ್ಯದಲ್ಲಿ ಪ್ರವೀಣನಾದ ಮಾರೀಚನು ರಾಮನನ್ನು ನೋಡಿ ಕಣ್ಣಿಗೆ ಕಾಣಿಸುತ್ತಲೂ, ಮರೆಯಾಗುತ್ತಲೂ ಮುಂದುವರಿಯುತ್ತಾ ಕಾಡಿನ ಮಧ್ಯಕ್ಕೆ ಹೋದನು.

**ಮತ್ವಾ ಹಸ್ತಗತಂ ರಾಮಃ ಕ್ರೋಧಾಕೃಷ್ಟಧನುಃ ಪುನಃ ।**
**ಜಘಾನ ಚಾತಿತೀಕ್ಷ್ಣೇನ ಶರೇಣ ಕೃತ್ರಿಮಂ ಮೃಗಂ ॥೩೨॥**

ಇನ್ನೇನು ಕೈಗೆ ಸಿಕ್ಕಿಬಿಡುತ್ತದೆಯೆಂದು ರಾಮನು ತಿಳಿಯುತ್ತಾ ಮುಂದುವರಿಯುತ್ತಿದ್ದು ಅದು ಸಿಕ್ಕದಿರಲು, ಕಡೆಯಲ್ಲಿ ಕ್ರೋಧಾವೇಶದಿಂದ ಕೂಡಿದವನಾಗಿ, ಅತಿ ಚೂಪಾದ ಬಾಣದಿಂದ ಕೃತ್ರಿಮವಾದ ಆ ಮೃಗವನ್ನು ಸಂಹರಿಸಿದನು.

**ಸ ಹತೋಽತಿಬಲಾತ್ತೇನ ಚುಕ್ರೋಶ ಭೃಶದುಃಖಿತಃ ।**
**ಹಾ ಲಕ್ಷ್ಮಣ ಹತೋಽಸ್ಮೀತಿ ಮಾಯಾವೀ ನಶ್ವರಃ ಖಲಃ ॥೩೩॥**

ಪಾಪಿಯೂ, ಮಾಯಾವಿಯೂ ಆದ ಆ ಮಾರೀಚನು ತಾನು ಸಾಯುವ ಸಮಯದಲ್ಲಿ, ರಾಮನ ಬಲವಾದ ಬಾಣದಿಂದ ಬಹಳವಾಗಿ ದುಃಖಪಟ್ಟವನಾಗಿ ಬಹಳ ಗಟ್ಟಿಯಾದ ಧ್ವನಿಯಿಂದ " ಲಕ್ಷ್ಮಣ ! ನಾನು ಸತ್ತೆ " ಎಂದು ಕೂಗಿ ಹೇಳಿ ಪ್ರಾಣವನ್ನು ಬಿಟ್ಟನು.

**ಸ ಶಬ್ದಸ್ತುಮುಲಸ್ತಾವಜ್ಜಾನಕ್ಯಾ ಸಂಶ್ರುತಸ್ತದಾ ।**
**ರಾಘವಸ್ಯೇತಿ ಸಾ ಮತ್ವಾ ದೀನಾ ದೇವರಮಬ್ರವೀತ್ ॥೩೪॥**

ಆಗ ಗಟ್ಟಿಯಾದ ಆ ಶಬ್ದವನ್ನು ಸೀತೆಯು ಕೇಳಿ, ಆ ಶಬ್ದವು ರಾಮನದೆಂದೇ ತಿಳಿದು ಮೈದುನನನ್ನು ಕುರಿತು ದೀನಳಾಗಿ ಹೀಗೆ ಹೇಳಿದಳು.

**ಗಚ್ಛ ಲಕ್ಷ್ಮಣ ತೂರ್ಣಂ ತ್ವಂ ಹತೋಽಸೌ ರಘುನಂದನಃ ।**
**ತ್ವಾಮಾಹ್ವಯತಿ ಸೌಮಿತ್ರೇ ಸಾಹಾಯ್ಯಂ ಕುರು ಸತ್ವರಂ ॥೩೫॥**

ಓ ಲಕ್ಷ್ಮಣನೇ, ಶ್ರೀರಾಮನು ಹೊಡೆಯಲ್ಪಟ್ಟವನಾಗಿ ನಿನ್ನನ್ನು ಕೂಗುತ್ತಿರುವನು. ನೀನು ಜಾಗ್ರತೆಯಾಗಿ ಹೋಗಿ ಅವನಿಗೆ ಸಹಾಯವನ್ನು ಕೂಡಲೇ ಮಾಡುವವನಾಗು.

**ತತ್ರಾಹ ಲಕ್ಷ್ಮಣಃ ಸೀತಾಮಂಬ ರಾಮವಧಾದಪಿ ।**
**ನಾಹಂ ಗಚ್ಛೇಽದ್ಯ ಮುಕ್ತ್ವಾ ತ್ವಾಮಸಹಾಯಾಮಿಹಾಶ್ರಮೇ ॥೩೬॥**

ಓ ತಾಯಿಯಾದ ಸೀತಾದೇವಿಯೇ, ರಾಮನ ಸಂಹಾರದಿಂದಲಾದರೂ ಕೂಡ ಈಗ ಈ ಆಶ್ರಮದಲ್ಲಿ ಏಕಾಕಿನಿಯಾಗಿ ಸಹಾಯಕರಿಲ್ಲದ ನಿನ್ನನ್ನು ಬಿಟ್ಟು ನಾನು ಖಂಡಿತವಾಗಿಯೂ ಹೋಗುವುದಿಲ್ಲ, ಎಂದು ಲಕ್ಷ್ಮಣನು ಹೇಳಿದನು.

**ಆಜ್ಞಾ ಮೇ ರಾಘವಸ್ಯಾತ್ರ ತಿಷ್ಠೇತಿ ಜನಕಾತ್ಮಜೇ ।**
**ತದತಿಕ್ರಮಭೀತೋಽಹಂ ನ ತ್ಯಜಾಮಿ ತವಾಂತಿಕಂ ॥೩೭॥**

ಓ ಜನಕಮಹಾರಾಜನ ಕುಮಾರಿಯೇ, ಇಲ್ಲಿಯೇ ನೀನು ರಕ್ಷಕನಾಗಿರು, ಎಂದು ನನಗೆ ರಾಮನ ಅಪ್ಪಣೆಯಾಗಿದೆ: ಆ ಅಪ್ಪಣೆಯನ್ನು ಮೀರಿಹೋಗಲು ನಾನು ಹೆದರುತ್ತೇನೆ. ಆದುದರಿಂದ ನಿನ್ನ ಸಮೀಪವನ್ನು ಬಿಟ್ಟು ನಾನು ಹೋಗುವುದಿಲ್ಲವೆಂದು ಲಕ್ಷ್ಮಣನು ಹೇಳಿದನು.

**ಹೃತಂ ವೈ ರಾಘವಂ ದೃಷ್ಟ್ವಾ ವನೇ ಮಾಯಾವಿನಾ ಕಿಲ ।**
**ತ್ಯಕ್ತ್ವಾ ತ್ವಾಂ ನಾಧಿಗಚ್ಛಾಮಿ ಪದಮೇಕಂ ಶುಚಿಸ್ಮಿತೇ ॥೩೮॥**

ಓ ಪರಿಶುದ್ಧವಾದ ಮಂದಹಾಸವುಳ್ಳ ಸೀತೆಯೇ, ಮಾಯಾವಿಯಾದ ಆ ಮೃಗದಿಂದ ಕಾಡಿನಲ್ಲಿ ರಾಮನನ್ನು ಮೋಸಗೊಳಿಸಿ ದೂರಕ್ಕೆ ಎಳೆದುಕೊಂಡು ಹೋಗಿರುವುದನ್ನು ನೋಡಿ ನಾನು, ನಿನ್ನನ್ನು ಬಿಟ್ಟು ಒಂದು ಹೆಜ್ಜೆಯಷ್ಟು ದೂರವಾದರೂ ಮುಂದೆ ಹೋಗುವುದಿಲ್ಲವು.

**ಕುರು ಧೈರ್ಯಂ ನ ಮನ್ಯೇಽದ್ಯ ರಾಮಂ ಹಂತುಂ ಕ್ಷಮಂ ಕ್ಷಿತೌ ।**
**ನಾಹಂ ತ್ಯಕ್ತ್ವಾ ಗಮಿಷ್ಯಾಮಿ ವಿಲಂಘ್ಯ ರಾಮಭಾಷಿತಂ ॥೩೯॥**

ಓ ಮಾತೆಯೇ, ಧೈರ್ಯವನ್ನು ಹೊಂದಿದವಳಾಗು. ಏಕೆಂದರೆ, ಈಗ ಭೂಮಿಯಲ್ಲಿ ರಾಮನನ್ನು ಕೊಲ್ಲಲು ಶಕ್ತಿಯುಳ್ಳ ಪುರುಷನನ್ನು ನಾನು ಬೇರೆ

ಕಾಣೆನು. ಆದಕಾರಣದಿಂದ ನಾನು ಇಲ್ಲಿ ನಿನ್ನನ್ನು ಬಿಟ್ಟು, ರಾಮನ ಆಜ್ಞೆಯನ್ನು ಮೀರಿ, ಹೋಗುವವನಲ್ಲವು ಎಂದು ಹೇಳಿದನು.

|| ವ್ಯಾಸ ಉವಾಚ ||

**ರುದತೀ ಸುದತೀ ಪ್ರಾಹ ತಂ ತದಾ ವಿಧಿನೋದಿತಾ ।**
**ಅಕ್ರೂರಾ ವಚನಂ ಕ್ರೂರಂ ಲಕ್ಷ್ಮಣಂ ಶುಭಲಕ್ಷಣಂ ॥೪೦॥**

ವ್ಯಾಸಮಹರ್ಷಿಯು ಇಂತೆಂದನು—ಸುಂದರವಾದ ದಂತಪಂಕ್ತಿಯುಳ್ಳ ಆ ಸೀತಾದೇವಿಯು ಅಳುತ್ತಿರುವವಳಾಗಿ, ಉತ್ತಮವಾದ ಲಕ್ಷಣಗಳಿಂದ ಕೂಡಿರುವ, ಒಳ್ಳೆಯ ಮಾತನ್ನು ಹೇಳುತ್ತಿರುವ ಲಕ್ಷ್ಮಣನನ್ನು ಕುರಿತು, ತಾನು ಮೃದುವಾದ ಸ್ವಭಾವವುಳ್ಳವಳಾದರೂ ನಿಷ್ಠೂರವಾದ ಮಾತನ್ನು ಹೀಗೆ ಹೇಳಿದಳು.

**ಅಹಂ ಜಾನಾಮಿ ಸೌಮಿತ್ರೇ ಸಾನುರಾಗಂ ಚ ಮಾಂ ಪ್ರತಿ ।**
**ಪ್ರೇರಿತಂ ಭರತೇನೈವ ಮದರ್ಥಮಿಹ ಸಂಗತಂ ॥೪೧॥**

ಓ ಸುಮಿತ್ರೆಯ ಮಗನಾದ ಲಕ್ಷ್ಮಣನೇ, ನನ್ನನ್ನು ನೀನು ಕಾಮಿಸುತ್ತಿದ್ದೀಯೆ ಎಂಬುದನ್ನು ನಾನು ತಿಳಿದಿರುತ್ತೇನೆ. ಇದಕ್ಕಾಗಿಯೇ ನೀನು ಭರತನಿಂದ ಪ್ರೇರಿತನಾಗಿ ಇಲ್ಲಿಗೆ ನನ್ನನ್ನು ಹೊಂದುವ ಸಲುವಾಗಿ ಬಂದುಸೇರಿರುವೆಯಲ್ಲವೇ ?

**ನಾಹಂ ತಥಾವಿಧಾ ನಾರೀ ಸ್ವೈರಿಣೀ ಕುಹಕಾಧಮ ।**
**ಮೃತೇ ರಾಮೇ ಪತಿಂ ತ್ವಾಂ ನ ಕರ್ತುಮಿಚ್ಛಾಮಿ ಕಾಮತಃ ॥೪೨॥**

ಕುಮಾರ್ಗದಿಂದ ಕೂಡಿರುವ ನೀಚತಮನೇ, ನಾನು, ನೀನು ತಿಳಿದಿರುವಂತಹ ವ್ಯಭಿಚಾರಿಣಿಯಾದ ಹೆಂಗಸು ಅಲ್ಲವು. ಪ್ರಭುವಾದ ರಾಮನು ಮೃತಿಯನ್ನು ಹೊಂದಿದರೂ, ಕೇವಲ ಕಾಮವಾಸನೆಯಿಂದ ನಿನ್ನನ್ನು ಪತಿಯನ್ನಾಗಿ ನಾನು ಮಾಡಿಕೊಳ್ಳುವುದಿಲ್ಲವು.

**ನಾಗಮಿಷ್ಯತಿ ಚೇದ್ರಾಮೋ ಜೀವಿತಂ ಸಂತ್ಯಜಾಮ್ಯಹಂ ।**
**ವಿನಾ ತೇನ ನ ಜೀವಾಮಿ ವಿಧುರಾ ದುಃಖಿತಾ ಭೃಶಂ ॥೪೩॥**

ಪ್ರಭುವಾದ ರಾಮನು ಹಿಂತಿರುಗಿ ಬರದಿದ್ದಲ್ಲಿ ಪ್ರಾಣವನ್ನು ಬಿಡುವೆನು. ಪತಿಯಾದ ಆ ರಾಮನಿಲ್ಲದೆ ಅತ್ಯಂತ ದುಃಖವನ್ನನುಭವಿಸುತ್ತಾ ಗಂಡನಿಲ್ಲದ ನಾನು ಜೀವಿಸಿರುವುದಿಲ್ಲವು.

**ಗಚ್ಛ ವಾ ತಿಷ್ಠ ಸೌಮಿತ್ರೇ ನ ಜಾನೇಽಹಂ ತವೇಪ್ಸಿತಂ ।**
**ಕ್ವ ಗತಂ ತೇಽತ್ರ ಸೌಹಾರ್ದಂ ಜ್ಯೇಷ್ಠೇ ಧರ್ಮರತೇ ಕಿಲ ॥೪೪॥**

ಓ ಸುಮಿತ್ರಾಪುತ್ರನೇ, ನಾನು ಇಷ್ಟು ಹೇಳಿದರೂ ಸಹ ನೀನು ರಾಮನ ಸಹಾಯಕ್ಕೆ ಹೋಗಲು ಇಷ್ಟವಿಲ್ಲದೇ ಇದ್ದರೆ ಇಲ್ಲಿಯೇ ಬೇಕಾದರೂ ಇರು ಅಥವಾ ಹೋದರೂ ಹೋಗು. ನಿನ್ನ ಮನಸ್ಸಿನ ಇಷ್ಟವನ್ನು ನಾನು ತಿಳಿದಿಲ್ಲವು. ಧಾರ್ಮಿಕನೂ, ಜ್ಯೇಷ್ಠನೂ ಆದ ರಾಮನಲ್ಲಿ ತೋರಿಸಬೇಕಾಗಿರುವ ನಿನ್ನ ಪ್ರೀತಿವಿಶ್ವಾಸ ಧರ್ಮಗಳು ಈಗ ಎಲ್ಲಿ ಹೋದುವು ?

**ತಚ್ಛ್ರುತ್ವಾ ವಚನಂ ತಸ್ಯಾ ಲಕ್ಷ್ಮಣೋ ದೀನಮಾನಸಃ ।**
**ಪ್ರೋವಾಚ ರುದ್ಧಕಂಠಸ್ತು ತಾಂ ತದಾ ಜನಕಾತ್ಮಜಾಂ ॥೪೫॥**

ಜನಕಪುತ್ರಿಯಾದ ಸೀತೆಯು ಹೇಳಿದ ಈ ಕಠಿನವಾಕ್ಯಗಳನ್ನು ಕೇಳಿ, ಲಕ್ಷ್ಮಣನು ಅದರಿಂದ ಅತ್ಯಂತ ದುಃಖದಿಂದ ತುಂಬಿದ ಹೃದಯವುಳ್ಳವನಾಗಿ, ಆಗ ಕಂಠವು ಬಿಗಿದುಬರುತ್ತಿರಲು ಈರೀತಿಯಾಗಿ ಹೇಳಿದನು.

**ಕಿಮಾತ್ಥ ಕ್ಷಿತಿಜೇ ವಾಕ್ಯಂ ಮಯಿ ಕ್ರೂರತರಂ ಕಿಲ ।**
**ಕಿಂ ವದಸ್ಯತ್ಯನಿಷ್ಟಂ ತೇ ಭಾವಿ ಜಾನೇ ಧಿಯಾ ಹ್ಯಹಂ ॥೪೬॥**

ಓ ಭೂಮಿಪುತ್ರಿಯಾದ ಸೀತಾಜನನಿ, ನನ್ನಲ್ಲಿ ಅತ್ಯಂತ ನಿಷ್ಠುರವಾದ ಮಾತುಗಳನ್ನು ಏಕೆ ಆಡುವೆ? ಈರೀತಿಯಾಗಿ ನೀನು ಆಡಿದ ಮಾತುಗಳಿಂದ ನಿನಗೆ ಮುಂದೆ ಸಂಭವಿಸಬಹುದಾದ ಏನೋ ಒಂದು ದೊಡ್ಡ ಅನಿಷ್ಟವನ್ನು ನೀನು ಹೇಳುತ್ತಿರುವೆಯೆಂಬುದಾಗಿ ನಾನು ನನ್ನ ಬುದ್ಧಿಯಿಂದ ತಿಳಿಯುತ್ತೇನೆ.

**ಇತ್ಯುಕ್ತ್ವಾ ನಿರ್ಯಯೌ ವೀರಸ್ತಾಂ ತ್ಯಕ್ತ್ವಾ ಪ್ರರುದನ್ ಭೃಶಂ ।**
**ಅಗ್ರಜಸ್ಯ ಯಯೌ ಪಶ್ಯನ್ ಶೋಕಾರ್ತಃ ಪೃಥಿವೀಪತೇ ॥೪೭॥**

ಓ ದೊರೆಯಾದ ಜನಮೇಜಯನೇ, ಹೀಗೆ ಹೇಳಿದವನಾಗಿ, ವೀರನಾದ ಲಕ್ಷ್ಮಣನು ಬಹಳವಾಗಿ ಅಳುತ್ತಾ ಅವಳನ್ನು ಬಿಟ್ಟು, ದುಃಖದಿಂದ ಸಂಕಟ ಪಡುತ್ತಾ ತನ್ನ ಅಣ್ಣನ ಸಮೀಪವನ್ನು ಕುರಿತು ಹೊರಟನು.

**ಗತೇಽಥ ಲಕ್ಷ್ಮಣೇ ತತ್ರ ರಾವಣಃ ಕಪಟಾಕೃತಿಃ ।**
**ಭಿಕ್ಷುವೇಷಂ ತತಃ ಕೃತ್ವಾ ಪ್ರವಿವೇಶ ತದಾಶ್ರಮೇ ॥೪೮॥**

ಅತ್ತ ಲಕ್ಷ್ಮಣನು ಹೊರಟುಹೋಗಲು, ರಾವಣನು ಕೃತ್ರಿಮವಾದ ಭಿಕ್ಷು ವೇಷವನ್ನು ಧರಿಸಿ ಆ ಆಶ್ರಮವನ್ನು ಪ್ರವೇಶಿಸಿದನು.

**ಜಾನಕೀ ತಂ ಯತಿಂ ಮತ್ವಾ ದತ್ವಾಽರ್ಘ್ಯಂ ವನ್ಯಮಾದರಾತ್ ।**
**ಭೈಕ್ಷ್ಯಂ ಸಮರ್ಪಯಾಮಾಸ ರಾವಣಾಯ ದುರಾತ್ಮನೇ ॥೪೯॥**

ಸೀತಾದೇವಿಯು ಕೃತ್ರಿಮಭಿಕ್ಷುವೇಷಧಾರಿಯಾದ ರಾವಣನನ್ನು ನಿಜವಾದ ಯತಿಯೆಂದೇ ಭಾವಿಸಿ, ವನದಲ್ಲಿ ದೊರೆಯುವ ಪದಾರ್ಥಗಳಿಂದಲೇ ಅರ್ಘ್ಯಾದಿ ಗಳನ್ನು ಕೊಟ್ಟು ಆದರಪೂರ್ವಕವಾಗಿ ಪೂಜಿಸಿ, ಪಾಪಿಯಾದ ಆ ರಾವಣನಿಗೆ ಆಹಾರಾರ್ಥವಾಗಿ ತಿಂಡಿಯನ್ನು ಭಿಕ್ಷೆಯಾಗಿ ಸಮರ್ಪಿಸಿದಳು.

**ತಾಂ ಪಪ್ರಚ್ಛ ಸ ದುಷ್ಟಾತ್ಮಾ ನಮ್ರಪೂರ್ವಂ ಮೃದುಸ್ವರಂ ।**
**ಕಾಽಸಿ ಪದ್ಮಪಲಾಶಾಕ್ಷಿ ವನೇ ಚೈಕಾಕಿನೀ ಪ್ರಿಯೇ ॥೫೦॥**

ಆ ಪಾಪಿಯಾದ ರಾವಣನು ಅವಳನ್ನು ಕುರಿತು, ವಿನಯದಿಂದಲೂ ಸೌಮ್ಯ ವಾದ ಧ್ವನಿಯಿಂದಲೂ ಕೂಡಿರುವ ನಲ್ನುಡಿಗಳಿಂದ ಹೀಗೆ ಕೇಳಿದನು—ಪದ್ಮದಳ ದಂತೆ ನೇತ್ರವುಳ್ಳ ಪ್ರಿಯಕಾರಿಣಿಯೇ ನೀನು ಯಾರು ? ಈ ಕಾಡಿನಲ್ಲಿ ಒಬ್ಬಂಟಿಗ ಳಾಗಿ ಏಕೆ ವಾಸಮಾಡುತ್ತಿರುವೆ ?

**ಪಿತಾ ಕಸ್ತೇಽಥ ವಾಮೋರು ಭ್ರಾತಾ ಕಃ ಕಃ ಪತಿಸ್ತವ ।**
**ಮೂಢೇವೈಕಾಕಿನೀ ಚಾತ್ರ ಸ್ಥಿತಾಸಿ ವರವರ್ಣಿನಿ ॥೫೧॥**

ಎಲೌ ಸುಂದರಿಯೇ, ನಿನ್ನ ತಂದೆ ಯಾರು ? ಅಣ್ಣತಮ್ಮಂದಿರು ಯಾರು ? ಗಂಡನಾರು ? ಉತ್ತಮಸ್ತ್ರೀರತ್ನವಾದ ನೀನು ಮುಗ್ಧಳಂತೆ ಇಲ್ಲಿ ಒಬ್ಬಂಟಿಗಳಾಗಿ ಏಕೆ ಇರುತ್ತೀಯೆ ?

**ನಿರ್ಜನೇ ವಿಪಿನೇ ಕಿಂ ತ್ವಂ ಸೌಧಾರ್ಹಾ ತ್ವಮಸಿ ಪ್ರಿಯೇ ।**
**ಉಟಜೇ ಮುನಿಪತ್ನೀವ ದೇವಕನ್ಯಾಸಮಪ್ರಭಾ ॥೫೨॥**

ದೇವಕನ್ನಿಕೆಯಂತೆ ಕಾಂತಿಯುಳ್ಳ ಓ ಪ್ರಿಯತಮೆಯೇ, ಜನರಿಲ್ಲದ ಈ ವನದಲ್ಲಿ ಈ ಪರ್ಣಶಾಲೆಯಲ್ಲಿ ಮುನಿಪತ್ನಿಯಂತೆ, ಉಪ್ಪರಿಗೆಯಲ್ಲಿ ವಾಸಮಾಡಲು ಅರ್ಹಳಾದ ನೀನು ಏಕೆ ಇರುತ್ತೀಯೆ ?

|| ವ್ಯಾಸ ಉವಾಚ ||

**ಇತಿ ತದ್ವಚನಂ ಶ್ರುತ್ವಾ ಪ್ರತ್ಯುವಾಚ ವಿದೇಹಜಾ ।**
**ದಿವ್ಯಂ ದಿಷ್ಟ್ಯಾ ಯತಿಂ ಜ್ಞಾತ್ವಾ ಮಂಡೋದರ್ಯಾಃ ಪತಿಂ ತದಾ ॥೫೩॥**

ವ್ಯಾಸಮುನಿಯು ಇಂತೆಂದನು—ಈ ರೀತಿಯಾದ ಆ ರಾವಣನ ಮಾತುಗಳನ್ನು ಕೇಳಿ ವಿದೇಹರಾಜನ ಮಗಳಾದ ಸೀತಾದೇವಿಯು ಮಂಡೋದರಿಯ ಪತಿಯಾದ ರಾವಣನನ್ನು ದುರ್ದೈವಯೋಗದಿಂದ, ಪರಿಶುದ್ಧನಾದ ಯತಿಯೆಂದು ತಿಳಿದು ಹೀಗೆ ಪ್ರತ್ಯುತ್ತರವನ್ನು ಹೇಳಿದಳು.

**ರಾಜಾ ದಶರಥಃ ಶ್ರೀಮಾಂಶ್ಚತ್ವಾರಸ್ತಸ್ಯ ವೈ ಸುತಾಃ ।**
**ತೇಷಾಂ ಜ್ಯೇಷ್ಠಃ ಪತಿರ್ಮೇಽಸ್ತಿ ರಾಮನಾಮೇತಿ ವಿಶ್ರುತಃ ॥೫೪॥**

ರಾಜನಾದ ದಶರಥನೆಂಬವನು ಸಕಲಸಂಪತ್ತುಗಳಿಂದ ಕೂಡಿದವನಾಗಿದ್ದನು. ಅವನಿಗೆ ನಾಲ್ವರು ಸುತರಿರುವರು. ಅವರಲ್ಲಿ ಜ್ಯೇಷ್ಠನಾದ ರಾಮನೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆದಿರುವವನೇ ನನ್ನ ಪತಿಯು.

**ವಿವಾಸಿತೋಽಥ ಕೈಕೇಯ್ಯಾ ಕೃತೇ ಭೂಪತಿನಾ ವರೇ ।**
**ಚತುರ್ದಶ ಸಮಾ ರಾಮೋ ವಸತೇಽತ್ರ ಸಲಕ್ಷ್ಮಣಃ ॥೫೫॥**

ದೊರೆಯಾದ ದಶರಥನಿಂದ ಕೊಡಲ್ಪಟ್ಟಿದ್ದ ಎರಡು ವರಗಳನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳುವುದರ ಮೂಲಕ ಕೈಕೇಯಿಯಿಂದ ಹೊರಡಿಸಲ್ಪಟ್ಟವನಾಗಿ ಆ ರಾಮನು ತಮ್ಮನಾದ ಲಕ್ಷ್ಮಣನೊಡನೆ ಹದಿನಾಲ್ಕು ಸಂವತ್ಸರಗಳು ಇಲ್ಲಿ ವಾಸಮಾಡುವವನಾಗಿದ್ದಾನೆ.

**ಜನಕಸ್ಯ ಸುತಾ ಚಾಹಂ ಸೀತಾ ನಾಮ್ನೀತಿ ವಿಶ್ರುತಾ ।**
**ಭಂಕ್ತ್ವಾ ಶೈವಂ ಧನುಃ ಕಾಮಂ ರಾಮೇಣಾಹಂ ವಿವಾಹಿತಾ ॥೫೬॥**

ಪ್ರಖ್ಯಾತನಾದ ಜನಕಮಹಾರಾಜನ ಮಗಳಾದ ಸೀತೆ ಎಂಬ ಹೆಸರುಳ್ಳ ನನ್ನನ್ನು, ಶಿವಸಂಬಂಧವಾದ ಧನುಸ್ಸನ್ನು ಸುಲಭವಾಗಿ ಹೆದೆ ಏರಿಸುವಾಗ ಮುರಿದು ಹಾಕಿ, ರಾಮನು ವಿವಾಹಮಾಡಿಕೊಂಡನು.

**ರಾಮಬಾಹುಬಲೇನಾತ್ರ ವಸಾಮೋ ನಿರ್ಭಯಾ ವನೇ ।**
**ಕಾಂಚನಂ ಮೃಗಮಾಲೋಕ್ಯ ಹಂತುಂ ಮೇ ನಿರ್ಗತಃ ಪತಿಃ ॥೫೭॥**

ಪರಾಕ್ರಮಶಾಲಿಯಾದ ರಾಮನ ಬಾಹುಬಲದಿಂದ ನಾವುಗಳು ಈ ಕಾಡಿನಲ್ಲಿ ಯಾವ ಭಯವೂ ಇಲ್ಲದವರಾಗಿ ವಾಸಮಾಡುತ್ತಿರುವೆವು. ನನ್ನ ಗಂಡನಾದ ಶ್ರೀರಾಮನು ಚಿನ್ನದ ಜಿಂಕೆಯನ್ನು ನೋಡಿದವನಾಗಿ ಅದನ್ನು ಕೊಂದು ತರುವುದಕ್ಕಾಗಿ ಹೋಗಿರುತ್ತಾನೆ.

**ಲಕ್ಷ್ಮಣೋಽಪಿ ಪುನಃ ಶ್ರುತ್ವಾ ರವಂ ಭ್ರಾತುರ್ಗತೋಽಧುನಾ ।**
**ತಯೋರ್ಬಾಹುಬಲಾದತ್ರ ನಿರ್ಭಯಾಽಹಂ ವಸಾಮಿ ವೈ ॥೫೮॥**

ಲಕ್ಷ್ಮಣನೂ ಕೂಡ ತನ್ನ ಅಣ್ಣನ ಧ್ವನಿಯನ್ನು ಕೇಳಿದವನಾಗಿ ಸಹಾಯಾರ್ಥವಾಗಿ ಈಗ ಹೊರಟುಹೋಗಿರುವನು. ಅವರಿಬ್ಬರ ಬಾಹುಬಲದ ಧೈರ್ಯದಿಂದ ನಾನು ಈ ಕಾಡಿನಲ್ಲಿ ನಿರ್ಭಯವಾಗಿ ವಾಸಮಾಡುತ್ತಿರುವೆನು.

**ಮಯೇದಂ ಕಥಿತಂ ಸರ್ವಂ ವೃತ್ತಾಂತಂ ವನವಾಸಕೇ ।**
**ತೇಽತ್ರಾಗತ್ಯಾರ್ಹಣಾಂ ತೇ ವೈ ಕರಿಷ್ಯಂತಿ ಯಥಾವಿಧಿ ॥೫೯॥**

ವನವಾಸಕ್ಕೆ ಸಂಬಂಧಿಸಿದ ಈ ನನ್ನ ಎಲ್ಲ ವೃತ್ತಾಂತವನ್ನೂ ನಿನಗೆ ನಾನು ಹೇಳಿರುವೆನು. ರಾಮಲಕ್ಷ್ಮಣರು ಇಷ್ಟರಲ್ಲೇ ಬಂದು ನಿನಗೆ ಉಚಿತವಾದ ಅತಿಥಿಸತ್ಕಾರವನ್ನು ವಿಧಿವತ್ತಾಗಿ ಮಾಡುವರು.

**ಯತಿರ್ವಿಷ್ಣುಸ್ವರೂಪೋಽಸಿ ತಸ್ಮಾತ್ತ್ವಂ ಪೂಜಿತೋ ಮಯಾ ।**
**ಆಶ್ರಮೋ ವಿಪಿನೇ ಘೋರೇ ಕೃತೋಽಸ್ತಿ ರಕ್ಷಸಾಂ ಕುಲೇ ॥೬೦॥**

ಓ ಋಷಿಯೇ, ಯತಿಯು ವಿಷ್ಣುಸ್ವರೂಪನಾಗಿರುವುದರಿಂದಲೇ ನಾನು ನಿನ್ನನ್ನು ಪೂಜಿಸಿದೆನು. ರಾಕ್ಷಸರಿಂದ ನಿಬಿಡವಾದ ಈ ಭಯಂಕರವಾದ ಕಾಡಿನಲ್ಲಿ ಈ ಆಶ್ರಮವು ನಿರ್ಮಿಸಲ್ಪಟ್ಟುದಾಗಿ ಇರುವುದು.

**ತಸ್ಮಾತ್ತ್ವಾಂ ಪರಿಪೃಚ್ಛಾಮಿ ಸತ್ಯಂ ಬ್ರೂಹಿ ಮಮಾಗ್ರತಃ ।**
**ಕೋಽಸಿ ತ್ರಿದಂಡಿರೂಪೇಣ ವಿಪಿನೇ ತ್ವಂ ಸಮಾಗತಃ ॥೬೧॥**

ಆದುದರಿಂದ ನಿನ್ನನ್ನು ಪ್ರಶ್ನಿಸುವವಳಾಗಿರುವೆನು. ನನ್ನೆದುರಿನಲ್ಲಿ ನೀನು ಮರೆಮಾಚದೆ ನಿಜವನ್ನು ಹೇಳು. ಈ ತ್ರಿದಂಡಾದಿಗಳನ್ನು ಧರಿಸಿರುವ ನೀನು ಯಾರು ? ನೀನು ಇಲ್ಲಿಗೆ ಏತಕ್ಕಾಗಿ ಬಂದಿರುವೆ ?

|| ರಾವಣ ಉವಾಚ ||

**ಲಂಕೇಶೋಽಹಂ ಮರಾಲಾಕ್ಷಿ ಶ್ರೀಮಾನ್ಮಂಡೋದರೀಪತಿಃ ।**
**ತ್ವತ್ಕೃತೇ ತು ಕೃತಂ ರೂಪಂ ಮಯೇತ್ಥಂ ಶೋಭನಾಕೃತೇ ॥೬೨॥**

ರಾವಣನು ಹೇಳಿದನು — ಓ ಸುಂದರಿ, ಮಂಡೋದರಿಯ ಪತಿಯೂ ಅಷ್ಟೈಶ್ವರ್ಯಸಂಪನ್ನನೂ ಆದ ನಾನು ಲಂಕಾಪಟ್ಟಣಕ್ಕೆ ಅಧಿಪತಿಯಾಗಿರುವೆನು. ಮನೋಹರವಾದ ರೂಪವುಳ್ಳ ಸೀತೆಯೇ, ನಿನ್ನನ್ನು ಪಡೆಯುವುದಕ್ಕಾಗಿ ನನ್ನಿಂದ ಈ ರೂಪವು ಸ್ವೀಕರಿಸಲ್ಪಟ್ಟಿತು.

**ಆಗತೋಽಹಂ ವರಾರೋಹೇ ಭಗಿನ್ಯಾ ಪ್ರೇರಿತೋಽತ್ರ ವೈ ।**
**ಜನಸ್ಥಾನೇ ಹತೌ ಶ್ರುತ್ವಾ ಭ್ರಾತರೌ ಖರದೂಷಣೌ ॥೬೩॥**

ಓ ರಮಣಿಯೇ, ಈ ಜನಸ್ಥಾನದಲ್ಲಿ ನನ್ನ ಸಹೋದರರಾದ ಖರದೂಷಣರು ಹತರಾದರೆಂದು ನನ್ನ ಸಹೋದರಿಯಾದ ಶೂರ್ಪಣಖಿಯಿಂದ ತಿಳಿದವನಾಗಿ ಅವಳಿಂದ ಪ್ರೇರಿತನಾಗಿ ನಾನು ಇಲ್ಲಿಗೆ ಬಂದಿರುವೆನು.

**ಅಂಗೀಕುರು ನೃಪಂ ಮಾಂ ತ್ವಂ ತ್ಯಕ್ತ್ವಾ ತಂ ಮಾನುಷಂ ಪತಿಂ ।**
**ಹೃತರಾಜ್ಯಂ ಗತಶ್ರೀಕಂ ನಿರ್ಬಲಂ ವನವಾಸಿನಂ ॥೬೪॥**

ಐಶ್ವರ್ಯವನ್ನೂ ರಾಜ್ಯವನ್ನೂ ಕಳೆದುಕೊಂಡು ವನದಲ್ಲಿ ವಾಸಮಾಡುತ್ತಿರುವ, ಸಹಾಯಪರಾಕ್ರಮಗಳಿಲ್ಲದ ಮಾನವರೂಪದ ಆ ನಿನ್ನ ಪತಿಯನ್ನು ಬಿಟ್ಟು ದೊರೆಯಾದ ನನ್ನನ್ನು ಗಂಡನನ್ನಾಗಿ ಸ್ವೀಕಾರಮಾಡು.

**ಪಟ್ಟರಾಜ್ಞೀ ಭವ ತ್ವಂ ಮೇ ಮಂದೋದರ್ಯುಪರಿ ಸ್ಫುಟಂ ।**
**ದಾಸೋಽಸ್ಮಿ ತವ ತನ್ವಂಗಿ ಸ್ವಾಮಿನೀ ಭವ ಭಾಮಿನಿ ॥೬೫॥**

ಶರೀರಕಾಂತಿಯ ಸಂಪತ್ತಿನಿಂದ ಪ್ರಕಾಶಿಸುತ್ತಿರುವ ಓ ಭಾಮಿನಿ, ಮಂಡೋದರಿಗಿಂತಲೂ ನೀನು ಹೆಚ್ಚಿನ ಸ್ಥಾನವನ್ನು ಹೊಂದಿ ನನ್ನ ಪಟ್ಟದ ರಾಣಿಯಾಗು. ಓ ಕೃಶಾಂಗಿಯೇ, ದಾಸನಾಗಿರುವ ನನಗೆ ಒಡೆಯಳಾಗು.

ಜೇತಾಽಹಂ ಲೋಕಪಾಲಾನಾಂ ಪತಾಮಿ ತವ ಪಾದಯೋಃ ।
ಕರಂ ಗೃಹಾಣ ಮೇಽದ್ಯ ತ್ವಂ ಸನಾಥಂ ಕುರು ಜಾನಕಿ ॥೬೬॥

ಓ ಜನಕನಂದಿನಿಯೇ, ಇಂದ್ರಾದಿಲೋಕಪಾಲಕರನ್ನೆಲ್ಲಾ ಜಯಿಸಿರುವ ನಾನು ನಿನ್ನ ಪಾದಪದ್ಮಗಳಿಗೆ ಬೀಳುವೆನು. ನೀನು ನನ್ನ ಕೈಯನ್ನು ಹಿಡಿದೆತ್ತಿ ನನಗೆ ಒಡೆಯಳಾಗಿ ನನ್ನನ್ನು ಕೃಪೆಯಿಂದ ಕಾಪಾಡುವಳಾಗು.

ಪಿತಾ ತೇ ಯಾಚಿತಃ ಪೂರ್ವಂ ಮಯಾ ವೈ ತ್ವತ್ಕೃತೇಽಬಲೇ ।
ಜನಕೋ ಮಾಮುವಾಚೇತ್ಥಂ ಪಣಬಂಧೋ ಮಯಾ ಕೃತಃ ॥೬೭॥

ಓ ಅಬಲೆಯೇ, ನಿನ್ನ ಸಲುವಾಗಿ ನಿನ್ನ ತಂದೆಯಾದ ಜನಕರಾಜನನ್ನು ನಾನು ಹಿಂದೆಯೇ ಯಾಚಿಸಿದೆನು. ಅವನಾದರೋ 'ಅವಳ ವಿವಾಹದ ವಿಷಯವಾಗಿ ನಾನು ಒಂದು ಪಂಥವನ್ನಿಟ್ಟಿರುವೆನು' ಎಂದು ಹೇಳಿದನು.

ರುದ್ರಚಾಪಭಯಾನ್ನಾಹಂ ಸಂಪ್ರಾಪ್ತಸ್ತು ಸ್ವಯಂವರೇ ।
ಮನೋ ಮೇ ಸಂಸ್ಥಿತಂ ತಾವನ್ನಿಮಗ್ನಂ ವಿರಹಾತುರಂ ॥೬೮॥

ಪೂಜ್ಯನಾದ ಮಹೇಶ್ವರನ ಧನುಸ್ಸಿಗೆ ಅಪಚಾರವಾದೀತೆಂಬ ಭಯದದೆಸೆಯಿಂದ ನಾನು ನಿನ್ನ ಸ್ವಯಂವರಕ್ಕೆ ಬರಲಿಲ್ಲವು. ಈಗ ನನ್ನ ಹೃದಯವು ನಿನ್ನ ವಿರಹದಿಂದ ತವಕಪಡುತ್ತಾ ತಾಪದಲ್ಲಿ ಮುಳುಗಿಹೋಗಿರುತ್ತದೆ.

ವನೇಽತ್ರ ಸಂಸ್ಥಿತಾಂ ಶ್ರುತ್ವಾ ಪೂರ್ವಾನುರಾಗಮೋಹಿತಃ ।
ಆಗತೋಽಸ್ಮ್ಯಸಿತಾಪಾಂಗಿ ಸಫಲಂ ಕುರು ಮೇ ಶ್ರಮಂ ॥೬೯॥

ಓ ಶ್ಯಾಮಾಂಗಿಯೇ, ಕಪ್ಪಾಗಿರುವ ಕಡೆಗಣ್ಣಿನ ಕುಡಿನೋಟವುಳ್ಳ ಸೀತೆಯೇ, ಪೂರ್ವದ ಅನುರಾಗದಿಂದ ಪೀಡಿತನಾಗಿ ನಾನು, ನೀನು ಈ ಕಾಡಿನಲ್ಲಿರುವುದನ್ನು

ಕೇಳಿ ಬಂದಿರುವೆನು. ಈಗ ನೀನು ನನ್ನ ಶ್ರಮವನ್ನು ಸಫಲವನ್ನಾಗಿ ಮಾಡು ವವಳಾಗು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ ಅಷ್ಟಾವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### || ಏಕೋನತ್ರಿಂಶೋಽಧ್ಯಾಯಃ ||

### ಇಪ್ಪತ್ತೊಂಬತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತದಾಕರ್ಣ್ಯ ವಚೋ ದುಷ್ಟಂ ಜಾನಕೀ ಭಯವಿಹ್ವಲಾ ।**
**ವೇಪಮಾನಾ ಸ್ಥಿರಂ ಕೃತ್ವಾ ಮನೋ ವಾಚಮುವಾಚ ಹ ॥೧॥**

ವ್ಯಾಸಮಹರ್ಷಿಯು ಹೇಳಿದನು—ದುಷ್ಟನಾದ ರಾವಣನ ಈ ವಿಧವಾದ ಕೆಟ್ಟ ಮಾತುಗಳನ್ನು ಕೇಳಿ, ಜನಕಪುತ್ರಿಯಾದ ಸೀತೆಯು ಭಯದಿಂದ ದುಗುಡ ಪಡುವವಳಾಗಿ, ಅನಂತರದಲ್ಲಿ ಅದರಿಂದ ಹೆಚ್ಚಾಗಿ ನಡುಗುವವಳಾಗಿದ್ದರೂ ಹೇಗೋ ಧೈರ್ಯವನ್ನು ತಂದುಕೊಂಡು ಈ ರೀತಿಯಲ್ಲಿ ಪ್ರತ್ಯುತ್ತರವನ್ನು ಹೇಳಿದಳು.

**ಪೌಲಸ್ತ್ಯ ಕಿಮಸದ್ವಾಕ್ಯಂ ತ್ವಮಾತ್ಥ ಸ್ಮರಮೋಹಿತಃ ।**
**ನಾಹಂ ವೈ ಸ್ವೈರಿಣೀ ಕಿಂತು ಜನಕಸ್ಯ ಕುಲೋದ್ಭವಾ ॥೨॥**

ಪುಲಸ್ತ್ಯಬ್ರಹ್ಮನ ವಂಶದಲ್ಲಿ ಹುಟ್ಟಿರುವ ನೀನು ಮನ್ಮಥವಿಕಾರದಿಂದ ಹುಚ್ಚನಂತೆ ಈರೀತಿಯಾಗಿ ಕೆಟ್ಟ ನುಡಿಗಳನ್ನು ಏಕೆ ನುಡಿಯುವೆ? ನಾನು ಸ್ವೈರಿಣಿಯಲ್ಲವು, ಎಂದರೆ, ಮರ್ಯಾದೆಯನ್ನು ಮೀರಿ ಸಿಕ್ಕಿದಹಾಗೆ ತಿರುಗುವವಳಲ್ಲವು, ವ್ಯಭಿಚಾರಿಣಿಯಲ್ಲವು. ಮತ್ತೇನೆಂದರೆ ಅತ್ಯಂತ ಪವಿತ್ರವಾದ ಜನಕನ ವಂಶದಲ್ಲಿ ಹುಟ್ಟಿದವಳು.

**ಗಚ್ಛ ಲಂಕಾಂ ದಶಾಸ್ಯ ತ್ವಂ ರಾಮಸ್ತ್ವಾಂ ವೈ ಹನಿಷ್ಯತಿ ।**
**ಮತ್ಕೃತೇ ಮರಣಂ ತತ್ರ ಭವಿಷ್ಯತಿ ನ ಸಂಶಯಃ ॥೩॥**

ಎಲೈ ಹತ್ತು ಶಿರಸ್ಸುಳ್ಳ ರಾವಣನೇ, ಇಲ್ಲಿಂದ ನೀನು ಲಂಕೆಗೆ ಹೊರಟು ಹೋಗು. ಇಲ್ಲದಿದ್ದಲ್ಲಿ ರಾಮನು ನಿನ್ನನ್ನು ನನ್ನ ಸಲುವಾಗಿ ಕೊಂದುಬಿಡುವನು. ಲಂಕೆಯಲ್ಲಿ ನನಗಾಗಿ ನೀನು ಮರಣವನ್ನು ಹೊಂದುವುದು ಖಂಡಿತ. ಇದರಲ್ಲಿ ಸಂಶಯಪಡಬೇಡ.

**ಇತ್ಯುಕ್ತ್ವಾ ಪರ್ಣಶಾಲಾಯಾಂ ಗತಾ ಸಾ ವಹ್ನಿಸನ್ನಿಧೌ ।**
**ಗಚ್ಛ ಗಚ್ಛೇತಿ ವದತೀ ರಾವಣಂ ಲೋಕರಾವಣಂ ॥೪॥**

ಹೋಗು, ಹೊರಟುಹೋಗು ಎಂಬುದಾಗಿ ಲೋಕಕಂಟಕನಾದ ರಾವಣನನ್ನು ಕುರಿತು ಹೇಳುತ್ತಾ ಆ ಸೀತಾದೇವಿಯು ಪರ್ಣಶಾಲೆಯಲ್ಲಿ ಅಗ್ನಿಹೋತ್ರದ ಮನೆಯ ಸಮೀಪಕ್ಕೆ ಹೋದಳು.

**ಸೋಽಥ ಕೃತ್ವಾ ನಿಜಂ ರೂಪಂ ಜಗಾಮೋಟಜಮಂತಿಕಂ ।**
**ಬಲಾಜ್ಜಗ್ರಾಹ ತಾಂ ಬಾಲಾಂ ರುದತೀಂ ಭಯವಿಹ್ವಲಾಂ ॥೫॥**

ಅನಂತರದಲ್ಲಿ ಆ ದುಷ್ಟನಾದ ರಾವಣನು ತನ್ನ ನಿಜರೂಪವನ್ನು ಧರಿಸಿ ಪರ್ಣಶಾಲೆಯ ಹತ್ತಿರಕ್ಕೆ ಹೋದನು. ಮತ್ತು ಅಲ್ಲಿ ಭಯದಿಂದ ವ್ಯಾಕುಲಳಾಗಿರುವ ಸೀತೆಯನ್ನು ಬಲವಂತದಿಂದ ಹಿಡಿದುಕೊಂಡನು.

**ರಾಮ ರಾಮೇತಿ ಕ್ರಂದಂತೀಂ ಲಕ್ಷ್ಮಣೇತಿ ಮುಹುರ್ಮುಹುಃ ।**
**ಗೃಹೀತ್ವಾ ನಿರ್ಗತಃ ಪಾಪೋ ರಥಮಾರೋಪ್ಯ ಸತ್ವರಃ ॥೬॥**

ಮತ್ತು ಹಾ ರಾಮ ಎಂಬುದಾಗಿಯೂ, ಹಾ ಲಕ್ಷ್ಮಣ ಎಂಬುದಾಗಿಯೂ ಪುನಃ ಪುನಃ ಕೂಗುತ್ತಿರುವ ಮತ್ತು ಅಳುತ್ತಿರುವ ಅವಳನ್ನು ಬಲಾತ್ಕಾರದಿಂದ ಎಳೆದುತಂದು ರಥದಮೇಲೆ ಕೂರಿಸಿಕೊಂಡು ಪಾಪಿ ರಾವಣನು ಬೇಗನೆ ಹೊರಟನು.

**ಗಚ್ಛನ್ನರುಣಪುತ್ರೇಣ ಮಾರ್ಗೇ ರುದ್ಧೋ ಜಟಾಯುನಾ ।**
**ಸಂಗ್ರಾಮೋಽಭೂನ್ಮಹಾರೌದ್ರಸ್ತಯೋಸ್ತತ್ರ ವನಾಂತರೇ ॥೭॥**

ಹೀಗೆ ಹೋಗುತ್ತಿರುವಾಗ ಮಾರ್ಗದಲ್ಲಿ ಅರುಣನ ಮಗನಾದ ಜಟಾಯುವು ಇವನನ್ನು ತಡೆದನು. ಇವರಿಬ್ಬರಿಗೂ ಆ ಕಾಡಿನ ಮಧ್ಯದಲ್ಲಿ ದೊಡ್ಡದಾದ ಮತ್ತು ಭಯಂಕರವಾದ ಯುದ್ಧವು ನಡೆಯಿತು.

**ಹತ್ವಾ ತಂ ತಾಂ ಗೃಹೀತ್ವಾ ಚ ಗತೋಽಸೌ ರಾಕ್ಷಸಾಧಿಪಃ ।**
**ಲಂಕಾಯಾಂ ಕ್ರಂದತೀ ತಾತ ಕುರರೀವ ದುರಾತ್ಮನಾ ॥೮॥**

**ಅಶೋಕವನಿಕಾಯಾಂ ಸಾ ಸ್ಥಾಪಿತಾ ರಾಕ್ಷಸೀಯುತಾ ।**
**ಸ್ವವೃತ್ತಾನ್ನೈವ ಚಲಿತಾ ಸಾಮದಾನಾದಿಭಿಃ ಕಿಲ ॥೯॥**

ರಾಕ್ಷಸರ ಒಡೆಯನಾದ ರಾವಣನು ಯುದ್ಧದಲ್ಲಿ ಜಟಾಯುವನ್ನು ಕೊಂದು ಸೀತೆಯನ್ನು ಕರೆದುಕೊಂಡು ಹೊರಟುಹೋಗಿ, ಆ ಲಂಕಾಪಟ್ಟಣದಲ್ಲಿ ಅಶೋಕ ವನದಲ್ಲಿ ಚಿಮ್ಮಂಡೆ ಹುಳುವಿನಂತೆ ಅಳುತ್ತಿರುವ ಸೀತಾದೇವಿಯನ್ನು ರಾಕ್ಷಸ ಸ್ತ್ರೀಯರ ಕಾವಲಿನಲ್ಲಿ ಇರಿಸಿದನು. ಮತ್ತು ಸಾಮದಾನಭೇದದಂಡಗಳೆಂಬ ಉಪಾ ಯಗಳಿಂದ ಅವಳನ್ನು ಒಲಿಸಿಕೊಳ್ಳಲು ಬಹಳ ಪ್ರಯತ್ನಪಟ್ಟನು. ಆದರೂ ಅವಳು ಮಾತ್ರ ಸ್ವಲ್ಪವೂ ತನ್ನ ಸೌಶೀಲ್ಯವನ್ನು ಬಿಡದೆ ಇರುತ್ತಿದ್ದಳು.

**ರಾಮೋಽಪಿ ತಂ ಮೃಗಂ ಹತ್ವಾ ಜಗಾಮಾದಾಯ ನಿರ್ವೃತಃ ।**
**ಆಯಾಂತಂ ಲಕ್ಷ್ಮಣಂ ವೀಕ್ಷ್ಯ ಕಿಂ ಕೃತಂ ತೇಽನುಜಾಸಮಂ ॥೧೦॥**

**ಏಕಾಕಿನೀಂ ಪ್ರಿಯಾಂ ಹಿತ್ವಾ ಕಿಮರ್ಥಂ ತ್ವಮಿಹಾಗತಃ ।**
**ಶ್ರುತ್ವಾ ಸ್ವನಂ ತು ಪಾಪಸ್ಯ ರಾಘವಸ್ತ್ವಬ್ರವೀದಿದಂ ॥೧೧॥**

ಇತ್ತಲಾಗಿ ರಾಮನು ಆ ಮೃಗವನ್ನು ಕೊಂದು ಅದನ್ನು ತೆಗೆದುಕೊಂಡು ಸಂತೋಷಪಡುತ್ತಾ ಹಿಂತಿರುಗಿ ಬರುತ್ತಿದ್ದನು. ಆ ಸಮಯದಲ್ಲಿ ಎದುರಿಗೆ ಬರು ತ್ತಿರುವ ಲಕ್ಷ್ಮಣನನ್ನು ನೋಡಿ, ಎಲೈ ಲಕ್ಷ್ಮಣನೇ, ಎಂಥ ವಿಷಮವಾದ ಕೆಲಸ ವನ್ನು ನೀನು ಮಾಡಿದೆ? ದುಷ್ಟನಾದ ಮತ್ತು ಪಾಪಿಯಾದ ಆ ಮೃಗರೂಪಿಯಾದ ಮಾರೀಚನ ಶಬ್ದವನ್ನು ಕೇಳಿ ನೀನು ಪ್ರಾಣಪ್ರಿಯಳಾದ ಸೀತೆಯನ್ನು ಒಂಟಿ ಯಾಗಿ ಬಿಟ್ಟು ಈರೀತಿಯಾಗಿ ಏಕೆ ಬಂದೆ? ಎಂದು ಲಕ್ಷ್ಮಣನನ್ನು ರಾಮನು ಕೇಳಿದನು.

**ಸೌಮಿತ್ರಿಸ್ತ್ವಬ್ರವೀದ್ವಾಕ್ಯಂ ಸೀತಾವಾಗ್ಬಾಣತಾಡಿತಃ ।**
**ಪ್ರಭೋಽತ್ರಾಹಂ ಸಮಾಯಾತಃ ಕಾಲಯೋಗಾನ್ನ ಸಂಶಯಃ ॥೧೨॥**

ಸೀತಾದೇವಿಯ ನಿಷ್ಠುರವಾದ, ಕಠಿನವಾದ ಮಾತುಗಳೆಂಬ ಬಾಣಗಳಿಂದ ಪೀಡಿತನಾಗಿ ನಾನು ಇಲ್ಲಿಗೆ ಬಂದೆನೆಂದು ಲಕ್ಷ್ಮಣನು ರಾಮನಿಗೆ ಹೇಳಿದನು.

ಮತ್ತು ಎಲೈ ಪ್ರಭುವಾದ ರಾಮನೇ, ನಾನು ಇಲ್ಲಿಗೆ ಕಾಲವಶದಿಂದಲೂ, ದುರದೃಷ್ಟ ದಿಂದಲೂ ತರಲ್ಪಟ್ಟಿರುವೆನೇ ಹೊರತು ಅನ್ಯಥಾ ಇಲ್ಲವೆಂದೂ ಇದರಲ್ಲಿ ಸಂಶಯ ವೇನೂ ಇಲ್ಲವೆಂದೂ ಹೇಳಿದನು.

**ತದಾ ತೌ ಪರ್ಣಶಾಲಾಯಾಂ ಗತ್ವಾ ವೀಕ್ಷ್ಯಾತಿದುಃಖಿತೌ ।**
**ಜಾನಕ್ಯನ್ವೇಷಣೇ ಯತ್ನಮುಭೌ ಕರ್ತುಂ ಸಮುದ್ಯತೌ ॥೧೩॥**

ಅನಂತರದಲ್ಲಿ ಅವರಿಬ್ಬರೂ ಪರ್ಣಶಾಲೆಗೆ ಹಿಂತಿರುಗಿ ಬಂದು ಬರಿದಾಗಿರುವ ಆಶ್ರಮವನ್ನು ನೋಡಿ ಬಹಳ ದುಃಖಗೊಂಡರು. ಆಮೇಲೆ ಜಾನಕಿಯನ್ನು ಹುಡು ಕಲು ತಕ್ಕ ಪ್ರಯತ್ನವನ್ನು ಮಾಡುವುದಕ್ಕಾಗಿ ಇಬ್ಬರೂ ಹೊರಟರು.

**ಮಾರ್ಗಮಾಣೌ ತು ಸಂಪ್ರಾಪ್ತೌ ಯತ್ರಾಸೌ ಪತಿತಃ ಖಗಃ ।**
**ಜಟಾಯುಃ ಪ್ರಾಣಶೇಷಸ್ತು ಪತಿತಃ ಪೃಥಿವೀತಲೇ ॥೧೪॥**

ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಾ, ಜಟಾಯುವೆಂಬ ಪಕ್ಷಿಯು ಬಿದ್ದಿದ್ದ ಸ್ಥಳಕ್ಕೆ ಬಂದರು. ಅಲ್ಲಿ ಜಟಾಯುವು ರಾವಣನ ಪೆಟ್ಟುಗಳಿಂದ ಶಕ್ತಿಯನ್ನು ಕಳೆದುಕೊಂಡವನಾಗಿ, ಉಸಿರು ಮಾತ್ರ ಹತ್ತಿಕೊಂಡಿರುವವನಾಗಿ ಭೂಮಿಯ ಮೇಲೆ ಬಿದ್ದಿದ್ದನು.

**ತೇನೋಕ್ತಂ ರಾವಣೇನಾದ್ಯ ಹೃತಾಸೌ ಜನಕಾತ್ಮಜಾ ।**
**ಮಯಾ ನಿರುದ್ಧಃ ಪಾಪಾತ್ಮಾ ಪಾತಿತೋಽಹಂ ಮೃಧೇ ಪುನಃ ॥೧೫॥**

ಜನಕರಾಜನ ಮಗಳಾದ ಸೀತೆಯು ಈಗ ರಾವಣನಿಂದ ಅಪಹರಿಸಲ್ಪಟ್ಟು ಒಯ್ಯಲ್ಪಡುತ್ತಿದ್ದಾಗ ನಾನು ಆ ರಾವಣನನ್ನು ತಡೆದೆನು. ಮತ್ತು ದುರಾತ್ಮನಾದ ಆ ರಾವಣನು ನನ್ನನ್ನು ಹೊಡೆದು ಭೂಮಿಗೆ ಬೀಳಿಸಿದನು ಎಂದು ಜಟಾಯುವು ಹೇಳಿದನು.

**ಇತ್ಯುಕ್ತ್ವಾಽಸೌ ಗತಪ್ರಾಣಃ ಸಂಸ್ಕೃತೋ ರಾಘವೇಣ ವೈ ।**
**ಕೃತ್ವೌರ್ಧ್ವದೈಹಿಕಂ ರಾಮಲಕ್ಷ್ಮಣೌ ನಿರ್ಗತೌ ತತಃ ॥೧೬॥**

ಹೀಗೆ ಹೇಳಿದ ಅನಂತರದಲ್ಲಿ ಹತ್ತಿಕೊಂಡಿದ್ದ ಅವನ ಪ್ರಾಣವು ಹಾರಿಹೋ ಯಿತು. ಆಮೇಲೆ ಮೃತನಾದ ಆ ಪಕ್ಷಿಗೆ ಔರ್ಧ್ವದೈಹಿಕವೆಂಬ ಅಂತ್ಯಸಂಸ್ಕಾರ ಗಳನ್ನು ರಾಮಲಕ್ಷ್ಮಣರು ನೆರವೇರಿಸಿ ಮುಂದಕ್ಕೆ ಹೊರಟರು,

**ಕಬಂಧಂ ಘಾತಯಿತ್ವಾಽಸೌ ಶಾಪಾಚ್ಚಾಮೋಚಯತ್ಪ್ರಭುಃ ।**
**ವಚನಾತ್ತಸ್ಯ ಹರಿಣಾ ಸಖ್ಯಂ ಚಕ್ರೇಽಥ ರಾಘವಃ ॥೧೭॥**

ಹಾಗೆಯೇ ಮಾರ್ಗದಲ್ಲಿ ಮುಂದುವರಿಯುತ್ತಾ ದಾರಿಯ ಮಧ್ಯದಲ್ಲಿ ಅಡ್ಡ ಬಂದ ಕಬಂಧನೆಂಬ ರಾಕ್ಷಸನನ್ನು ಕೊಂದು, ಲೋಕಪ್ರಭುವಾದ ಶ್ರೀರಾಮನು ಅವನಿಗೆ ಶಾಪದಿಂದ ಬಿಡುಗಡೆಯನ್ನು ಉಂಟುಮಾಡಿದನು. ಅನಂತರದಲ್ಲಿ ಶ್ರೀರಾಮನು ಶಾಪಮುಕ್ತನಾದ ಕಬಂಧನ ಮಾತಿನಂತೆ ಕಪಿಶ್ರೇಷ್ಠನಾದ ಸುಗ್ರೀವನ ಸ್ನೇಹವನ್ನು ಪಡೆದನು.

**ಹತ್ವಾ ಚ ವಾಲಿನಂ ವೀರಂ ಕಿಷ್ಕಿಂಧಾರಾಜ್ಯಮುತ್ತಮಂ ।**
**ಸುಗ್ರೀವಾಯ ದದೌ ರಾಮಃ ಕೃತಸಖ್ಯಾಯ ಕಾರ್ಯತಃ ॥೧೮॥**

ಆಮೇಲೆ ಶ್ರೀರಾಮನು ವೀರಶ್ರೇಷ್ಠನಾದ ವಾಲಿಯನ್ನು ಸಂಹರಿಸಿ ಅವನ ಉತ್ತಮವಾದ ಕಿಷ್ಕಿಂಧೆಯ ರಾಜ್ಯವನ್ನು ನಡೆವಳಿಕೆಯಿಂದ ಸ್ನೇಹವನ್ನು ಬೆಳೆಸಿದ್ದ ಆ ಸುಗ್ರೀವನಿಗೆ ಕೊಟ್ಟನು.

**ತತ್ರೈವ ವಾರ್ಷಿಕಾನ್ಮಾಸಾಂಸ್ತಸ್ಥೌ ಲಕ್ಷ್ಮಣಸಂಯುತಃ ।**
**ಚಿಂತಯನ್ ಜಾನಕೀಂ ಚಿತ್ತೇ ದಶಾನನಹೃತಾಂ ಪ್ರಿಯಾಂ ॥೧೯॥**

ಆಮೇಲೆ ರಾವಣನಿಂದ ಅಪಹರಿಸಲ್ಪಟ್ಟ ತನ್ನ ಪ್ರಿಯಳಾದ ಜಾನಕಿಯನ್ನೇ ಬಹಳವಾಗಿ ಮನಸ್ಸಿನಲ್ಲಿ ಸ್ಮರಿಸುತ್ತಾ, ಆ ಕಿಷ್ಕಿಂಧಾನಗರದ ಸಮೀಪದಲ್ಲಿಯೇ ಲಕ್ಷ್ಮಣನೊಡನೆ ಮಳೆಗಾಲದ ತಿಂಗಳುಗಳೆಲ್ಲವನ್ನೂ ಕಳೆದನು.

**ಲಕ್ಷ್ಮಣಂ ಪ್ರಾಹ ರಾಮಸ್ತು ಸೀತಾವಿರಹಪೀಡಿತಃ ।**
**ಸೌಮಿತ್ರೇ ಕೈಕೆಯಸುತಾ ಜಾತಾ ಪೂರ್ಣಮನೋರಥಾ ॥೨೦॥**

ಸೀತಾವಿರಹದಿಂದ ಪೀಡಿತನಾದ ಶ್ರೀರಾಮನು ಲಕ್ಷ್ಮಣನನ್ನು ಕುರಿತು ಇಂತೆಂದನು—ಎಲೈ ಲಕ್ಷ್ಮಣನೇ, ಕೇಕಯರಾಜನ ಮಗಳಾದ ಕೈಕಯೀ ದೇವಿಯು ಸಂಪೂರ್ಣವಾಗಿ ನೆರವೇರಿದ ಮನೋರಥವುಳ್ಳವಳಾದಳು. ಎಂದರೆ, ನಮಗೆ ತೊಂದರೆಯೂ, ದುಃಖವೂ ಉಂಟಾಗಬೇಕೆಂಬ ಅವಳ ಬಯಕೆಯು ಈಗ ನೆರವೇರಿದಂತಾಯಿತು.

**ನ ಪ್ರಾಪ್ತಾ ಜಾನಕೀ ನೂನಂ ನಾಹಂ ಜೀವಾಮಿ ತಾಂ ವಿನಾ ।**
**ನಾಗಮಿಷ್ಯಾಮ್ಯಯೋಧ್ಯಾಯಾಮೃತೇ ಜನಕನಂದಿನೀಂ ॥೨೧॥**

ಏಕೆಂದರೆ ಸೀತಾದೇವಿಯು ಸಿಕ್ಕಲಿಲ್ಲವು, ಸಿಕ್ಕುವುದೂ ಇಲ್ಲವೆಂದು ತೋರುತ್ತದೆ. ಅವಳಿಲ್ಲದೆ ನಾನು ಖಂಡಿತವಾಗಿಯೂ ಜೀವಿಸಲಾರೆನು. ಅಲ್ಲದೆ, ಅವಳು ಇಲ್ಲದೆ ನಾನು ಖಂಡಿತವಾಗಿಯೂ ಅಯೋಧ್ಯೆಗಂತೂ ಹಿಂತಿರುಗುವುದಿಲ್ಲವು.

**ಗತಂ ರಾಜ್ಯಂ ವನೇ ವಾಸೋ ಮೃತಸ್ತಾತೋ ಹೃತಾ ಪ್ರಿಯಾ ।**
**ಪೀಡಯನ್ಮಾಂ ಸ ದುಷ್ಟಾತ್ಮಾ ದೈವೋಽಗ್ರೇ ಕಿಂ ಕರಿಷ್ಯತಿ ॥೨೨॥**

ಅಯೋಧ್ಯಾರಾಜ್ಯವೂ ನನ್ನ ಕೈಬಿಟ್ಟುಹೋಯಿತು. ಕಾಡಿನಲ್ಲಿ ವಾಸ ಮಾಡುವುದಾಯಿತು. ತಂದೆಯು ಪರಲೋಕವಾಸಿಯಾದನು. ಪ್ರಾಣಪ್ರಿಯಳಾದ ಸೀತೆಯೂ ಅಪಹರಿಸಲ್ಪಟ್ಟಳು. ಕೆಟ್ಟ ಹೃದಯವುಳ್ಳ ದೈವವು ನನ್ನನ್ನು ಈರೀತಿಯಾಗಿ ಅತ್ಯಂತ ಕಷ್ಟಕ್ಕೆ ಗುರಿಮಾಡಿರುವುದರಿಂದ ಮುಂದಕ್ಕೆ ಏನನ್ನು ಮಾಡುತ್ತದೆಯೋ ತಿಳಿಯಲಾಗುವುದಿಲ್ಲವು.

**ದುರ್ಜ್ಞೇಯಂ ಭವಿತವ್ಯಂ ಹಿ ಪ್ರಾಣಿನಾಂ ಭರತಾನುಜ ।**
**ಆವಯೋಃ ಕಾ ಗತಿಸ್ತಾತ ಭವಿಷ್ಯತಿ ಸುದುಃಖದಾ ॥೨೩॥**

ಭರತನ ಸಹೋದರನಾದ ಲಕ್ಷ್ಮಣನೇ, ಪ್ರಾಣಿಗಳಿಗೆ ಮುಂದಿನ ಕಾಲದಲ್ಲಿ ಏನೇನು ಸಂಭವಿಸಬಹುದೋ ಅದನ್ನು ಮುಂಚಿತವಾಗಿ ತಿಳಿಯಲು ಆಗುವುದಿಲ್ಲವು. ಅಪ್ಪಾ ಲಕ್ಷ್ಮಣ, ಮುಂದಕ್ಕೆ ನಮ್ಮಿಬ್ಬರ ಗತಿಯು ಯಾವ ರೀತಿಯಾಗಿ ಹೆಚ್ಚಿನ ದುಃಖವನ್ನುಂಟುಮಾಡುವಂತೆ ಪರಿಣಮಿಸುತ್ತದೆಯೋ ಗೊತ್ತಾಗುವುದಿಲ್ಲವೆಂದು ಹೇಳಿದನು.

**ಪ್ರಾಪ್ಯ ಜನ್ಮ ಮನೋರ್ವಂಶೇ ರಾಜಪುತ್ರಾವುಭೌ ಕಿಲ ।**
**ವನೇಽತಿದುಃಖಭೋಕ್ತಾರೌ ಜಾತೌ ಪೂರ್ವಕೃತೇನ ಚ ॥೨೪॥**

ಎಲೈ ಲಕ್ಷ್ಮಣನೇ, ನಾವಿಬ್ಬರೂ ಮನುವಂಶದಲ್ಲಿ ಹುಟ್ಟಿದರೂ, ರಾಜಪುತ್ರರಾದರೂ ಕೂಡ ಹಿಂದಿನ ಜನ್ಮದಲ್ಲಿ ಮಾಡಿದ ಪಾಪದ ದೋಷದಿಂದ ಈ ವನದಲ್ಲಿ ಅತಿ ದುಃಖವನ್ನು ಅನುಭವಿಸುತ್ತಿರುತ್ತೇವೆ.

ತ್ಯಕ್ತ್ವಾ ತ್ವಮಪಿ ಭೋಗಾಂಸ್ತು ಮಯಾ ಸಹ ವಿನಿರ್ಗತಃ ।
ದೈವಯೋಗಾಚ್ಚ ಸೌಮಿತ್ರೇ ಭುಂಕ್ಷ್ವ ದುಃಖಂ ದುರತ್ಯಯಂ ॥೨೫॥

ಓ ಲಕ್ಷ್ಮಣನೇ, ನೀನೂಕೂಡ ಅತ್ಯಂತ ಸುಖದಾಯಕವಾದ ಭೋಗಗಳನ್ನು ಬಿಟ್ಟು ನನ್ನ ಜೊತೆಯಲ್ಲಿ ಕಾಡಿಗೆ ಬಂದುದರಿಂದ ಮೀರುವುದಕ್ಕಾಗದೆ ಇರುವ, ಅಪಾರವಾಗಿರುವ ಈ ಕಷ್ಟಗಳನ್ನು ದೈವಯೋಗದಿಂದ ಅನುಭವಿಸಬೇಕಾಗಿದೆ.

ನ ಕೋಽಪ್ಯಸ್ಮತ್ಕುಲೇ ಪೂರ್ವಂ ಮತ್ಸಮೋ ದುಃಖಭಾಙ್ನರಃ ।
ಅಕಿಂಚನೋಽಕ್ಷಮಃ ಕ್ಲಿಷ್ಟೋ ನ ಭೂತೋ ನ ಭವಿಷ್ಯತಿ ॥೨೬॥

ನಮ್ಮ ವಂಶದಲ್ಲಿ ನನ್ನಂತೆ ದುಃಖವನ್ನು ಪಡೆದವನು ಯಾವ ಮನುಷ್ಯನೂ ಪೂರ್ವದಲ್ಲಿ ಇರಲಿಲ್ಲವು. ಅಲ್ಲದೆ ನನ್ನಂತೆ ಕಷ್ಟಗಳನ್ನು ಸಹಿಸಿದವನೂ ದೈವಬಲ ಹೀನನೂ ಹಿಂದೆ ಯಾರೂ ಇರಲಿಲ್ಲವು. ಮುಂದೆಯೂ ಹುಟ್ಟುವುದಿಲ್ಲವು.

ಕಿಂ ಕರೋಮ್ಯದ್ಯ ಸೌಮಿತ್ರೇ ಮಗ್ನೋಽಸ್ಮಿ ದುಃಖಸಾಗರೇ ।
ನ ಚಾಸ್ತಿ ತರಣೋಪಾಯೋ ಹ್ಯಸಹಾಯಸ್ಯ ಮೇ ಕಿಲ ॥೨೭॥

ಎಲೈ ಸುಮಿತ್ರಾದೇವಿಯ ಪುತ್ರನಾದ ಲಕ್ಷ್ಮಣನೇ, ಈಗ ನಾನು ಏನನ್ನು ಮಾಡಲಿ? ಅತ್ಯಂತ ಅಗಾಧವಾದ ದುಃಖಸಮುದ್ರದಲ್ಲಿ ಮುಳುಗಿಬಿಟ್ಟಿರುವೆನು. ಸಹಾಯಮಾಡುವವರಿಲ್ಲದ ನನಗೆ ಇದನ್ನು ದಾಟುವುದಕ್ಕೆ ಯಾವ ಉಪಾಯವೂ ಇರುವುದಿಲ್ಲವು.

ನ ವಿತ್ತಂ ನ ಬಲಂ ವೀರ ತ್ವಮೇಕಃ ಸಹಚಾರಕಃ ।
ಕೋಪಂ ಕಸ್ಮಿನ್ ಕರೋಮ್ಯದ್ಯ ಭೋಗೇಽಸ್ಮಿನ್ ಸ್ವಕೃತೇಽನುಜ ॥೨೮॥

ಓ ಪರಾಕ್ರಮಿಯಾದ ಲಕ್ಷ್ಮಣನೇ, ನನಗೆ ಹಣದ ಸಹಾಯವಿಲ್ಲವು. ಸೈನ್ಯದ ಸಹಾಯವೂ ಇಲ್ಲವು. ಕೇವಲ ನೀನೊಬ್ಬನು ಮಾತ್ರ ನನ್ನ ಸಹಚರನಾಗಿರುತ್ತೀಯೆ. ಅಲ್ಲದೆ ಈ ನನ್ನ ಅವಸ್ಥೆಯಲ್ಲಿ ಎಂದರೆ ನಾನೇ ಮಾಡಿದ ಕರ್ಮದ ಫಲವಾದ ಈ ದುಃಖಾನುಭವದ ವಿಷಯದಲ್ಲಿ ಕೋಪವನ್ನು ತಾನೇ ಯಾರ ಮೇಲೆ ಮಾಡಲಿ?

**ಗತಂ ಹಸ್ತಗತಂ ರಾಜ್ಯಂ ಕ್ಷಣಾದಿಂದ್ರಸಭೋಪಮಂ ।**
**ವನೇ ವಾಸಸ್ತು ಸಂಪ್ರಾಪ್ತಃ ಕೋ ವೇದ ವಿಧಿನಿರ್ಮಿತಂ ॥೨೯॥**

ಕೈಗೆ ಸಿಕ್ಕಿದ ರಾಜ್ಯವು ಒಂದು ಕ್ಷಣಕಾಲದಲ್ಲಿಯೇ ಕೈಬಿಟ್ಟುಹೋಯಿತು. ಮತ್ತು ಇಂದ್ರಸಭೆಗೆ ಸಮಾನವಾದ ಪದವಿಯೂ ಹೋಯಿತು. ಸಾಲದ್ದಕ್ಕೆ ಕಾಡಿನಲ್ಲಿ ವಾಸಮಾಡುವ ಅವಸ್ಥೆಯು ಉಂಟಾಯಿತು. ಯಾರುತಾನೇ ಬ್ರಹ್ಮನು ಗೊತ್ತುಮಾಡಿರುವ ಏರ್ಪಾಡನ್ನು ತಿಳಿಯಬಲ್ಲರು ?

**ಬಾಲಭಾವಾಚ್ಚ ವೈದೇಹೀ ಚಲಿತಾ ಚಾವಯೋಃ ಸಹ ।**
**ನೀತಾ ದೈವೇನ ದುಷ್ಟೇನ ಶ್ಯಾಮಾ ದುಃಖತರಾಂ ದಶಾಂ ॥೩೦॥**

ಹುಡುಗುತನದ ಬುದ್ಧಿಯಿಂದ ಸೀತಾದೇವಿಯೂ ಕೂಡ ನಮ್ಮೊಡನೆ ಕಾಡಿಗೆ ಬಂದುಬಿಟ್ಟಳು. ಆದರೆ ನೀಲೋತ್ಪಲಾಂಗಿಯಾದ ಅವಳು ಕೆಟ್ಟ ದೈವದಿಂದ ದುಃಖದ ಹೆಚ್ಚು ಕಷ್ಟಕರವಾದ ಅವಸ್ಥೆಯನ್ನು ಹೊಂದಿದಳು.

**ಲಂಕೇಶಸ್ಯ ಗೃಹೇ ಶ್ಯಾಮಾ ಕಥಂ ದುಃಖಂ ಭವಿಷ್ಯತಿ ।**
**ಪತಿವ್ರತಾ ಸುಶೀಲಾ ಚ ಮಯಿ ಪ್ರೀತಿಯುತಾ ಭೃಶಂ ॥೩೧॥**

ಲಂಕಾಪಟ್ಟಣದ ಅಧಿಪತಿಯಾದ ರಾವಣನ ಮನೆಯಲ್ಲಿ, ಪತಿವ್ರತೆಯೂ ಸುಶೀಲೆಯೂ ಆದ ಮತ್ತು ನನ್ನಲ್ಲಿ ಹೆಚ್ಚು ಪ್ರೀತಿಯನ್ನಿಟ್ಟಿರುವ ಸೀತಾದೇವಿಯು ಹೇಗೆ ಕಷ್ಟಪಟ್ಟುಕೊಂಡು ಇರುವಳೋ !

**ನ ಚ ಲಕ್ಷ್ಮಣ ವೈದೇಹೀ ಸಾ ತಸ್ಯ ವಶಗಾ ಭವೇತ್ ।**
**ಸ್ವೈರಿಣೀವ ವರಾರೋಹಾ ಕಥಂ ಸ್ಯಾಜ್ಜನಕಾತ್ಮಜಾ ॥೩೨॥**

ಅಲ್ಲದೆ ಓ ಲಕ್ಷ್ಮಣನೇ, ಪರಿಶುದ್ಧನಾದ ಜನಕಮಹಾರಾಜನ ಮಗಳಾದ ಆ ಸೀತಾದೇವಿಯು ರಾವಣನ ವಶಳಾಗುವುದಿಲ್ಲವೆಂಬುದು ಖಂಡಿತವು. ಜನಕಮಹಾ ರಾಜನ ಮಗಳಾಗಿಯೂ ಉತ್ತಮಸ್ತ್ರೀಯಾಗಿಯೂ ಇರುವ ಆ ಸೀತೆಯು ಸ್ವೈರಿಣಿ ಯಂತೆ ಹೇಗೆತಾನೇ ಆಗುವಳು ? ಖಂಡಿತವಾಗಿಯೂ ಆಗುವುದಿಲ್ಲವು.

**ತ್ಯಜೇತ್ಪ್ರಾಣಾನ್ನಿಯಂತ್ವತ್ತೇ ಮೈಥಿಲೀ ಭರತಾನುಜ ।**
**ನ ರಾವಣಸ್ಯ ವಶಗಾ ಭವೇದಿತಿ ಸುನಿಶ್ಚಿತಂ ॥೩೩॥**

ಎಲೈ ಭರತನ ತಮ್ಮನಾದ ಲಕ್ಷ್ಮಣನೇ, ಒಂದುವೇಳೆ ರಾವಣನೇನಾದರೂ ತನ್ನ ಸ್ವತಂತ್ರಾಧಿಕಾರದಿಂದ ಬಲಾತ್ಕಾರಮಾಡಿ ಮುಂದುವರೆದ ಪಕ್ಷದಲ್ಲಿ ಸೀತಾ ದೇವಿಯು ಪ್ರಾಣವನ್ನಾದರೂ ಬಿಡುವಳೇ ಹೊರತು, ರಾವಣನಿಗೆ ಅಧೀನಳಾಗುವು ದಿಲ್ಲವು. ಇದು ನಿಶ್ಚಯವು.

**ಮೃತಾ ಚೇಜ್ಜಾನಕೀ ವೀರ ಪ್ರಾಣಾಂಸ್ತ್ಯಕ್ಷ್ಯಾಮ್ಯಸಂಶಯಂ ।**
**ಮೃತಾ ಚೇದಸಿತಾಪಾಂಗೀ ಕಿಂ ಮೇ ದೇಹೇನ ಲಕ್ಷ್ಮಣ ॥೩೪॥**

ವೀರನಾದ ಲಕ್ಷ್ಮಣನೇ, ಜಾನಕಿಯೇನಾದರೂ ಸತ್ತುಹೋಗಿದ್ದಲ್ಲಿ ನಾನೂ ಕೂಡ ಖಂಡಿತವಾಗಿಯೂ ಪ್ರಾಣಗಳನ್ನು ಬಿಡುವೆನು. ಇದರಲ್ಲಿ ಸಂಶಯವಿಲ್ಲವು. ಎಲೈ ಲಕ್ಷ್ಮಣನೇ, ಶ್ಯಾಮವರ್ಣದ ದೇಹಕಾಂತಿಯುಳ್ಳ ಆ ಸೀತೆಯು ಸತ್ತರೆ ಈ ನನ್ನ ದೇಹದಿಂದ ತಾನೇ ಏನು ಪ್ರಯೋಜನವು ?

**ಏವಂ ವಿಲಪಮಾನಂ ತಂ ರಾಮಂ ಕಮಲಲೋಚನಂ ।**
**ಲಕ್ಷ್ಮಣಃ ಪ್ರಾಹ ಧರ್ಮಾತ್ಮಾ ಸಾಂತ್ವಯನ್ನೃತಯಾ ಗಿರಾ ॥೩೫॥**

ಈ ರೀತಿಯಾಗಿ ದುಃಖಿಸುತ್ತಿರುವ, ಕಮಲಪತ್ರದಂತಿರುವ ಕಣ್ಣುಳ್ಳ ರಾಮ ನನ್ನು ಸಮಾಧಾನಪಡಿಸುತ್ತಾ, ಧರ್ಮಾತ್ಮನಾದ ಲಕ್ಷ್ಮಣನು ನಿಜವೂ ಹಿತವೂ ಆಗಿರುವ ಮಾತನ್ನು ಈ ರೀತಿಯಾಗಿ ಹೇಳಿದನು.

**ಧೈರ್ಯಂ ಕುರು ಮಹಾಬಾಹೋ ತ್ಯಕ್ತ್ವಾ ಕಾತರತಾಮಿಹ ।**
**ಆನಯಿಷ್ಯಾಮಿ ವೈದೇಹೀಂ ಹತ್ವಾ ತಂ ರಾಕ್ಷಸಾಧಮಂ ॥೩೬॥**

ಆಜಾನುಬಾಹುವಾದ ಓ ರಾಮನೇ, ಅಧೈರ್ಯವನ್ನು ಬಿಟ್ಟು ಧೈರ್ಯ ವನ್ನು ಹೊಂದುವವನಾಗು. ಆ ರಾಕ್ಷಸಚಂಡಾಲನನ್ನು ಕೊಂದು ಸೀತೆಯನ್ನು ಪುನಃ ಕರೆದುತರುವೆನು.

**ಆಪದಿ ಸಂಪದಿ ತುಲ್ಯಾ ಧೈರ್ಯಾದ್ಭವಂತಿ ತೇ ಧೀರಾಃ ।**
**ಅಲ್ಪಧಿಯಸ್ತು ನಿಮಗ್ನಾಃ ಕಷ್ಟೇ ಭವಂತಿ ವಿಭವೇಽಪಿ ॥೩೭॥**

ಎಲೈ ಧೀರನಾದ ರಾಮನೇ, ಯಾರು ಆಪತ್ತಿನಲ್ಲಿಯೂ ಸಂಪತ್ತಿನಲ್ಲಿಯೂ ಒಂದೇಸಮನಾದ ಧೈರ್ಯದ ಮನೋವೃತ್ತಿಯುಳ್ಳವರಾಗಿರುತ್ತಾರೆಯೋ ಅಂಥವರೇ

ಧೀರರೆನಿಸಿಕೊಳ್ಳುತ್ತಾರೆ. ಅಲ್ಪಜ್ಞರು ಮಾತ್ರ ಸಂಪತ್ತು ಬಂದರೂ, ಆಪತ್ತು ಬಂದರೂ ಅವುಗಳಲ್ಲಿಯೇ ಮುಳುಗಿಹೋದಂತೆ ಹಿಗ್ಗಿ ಮೆರೆಯುವವರೂ, ಕುಗ್ಗಿ ಕುಂದಿದವರೂ ಆಗುವರು.

**ಸಂಯೋಗೋ ವಿಪ್ರಯೋಗಶ್ಚ ದೈವಾಧೀನಾವುಭಾವಪಿ ।**
**ಶೋಕಸ್ತು ಕೀದೃಶಸ್ತತ್ರ ದೇಹೇಽನಾತ್ಮನಿ ಚ ಕ್ವಚಿತ್ ॥೩೮॥**

ಓ ರಾಮನೇ, ಮಾನವರಿಗೆ ಪರಸ್ಪರ ಸೇರುವಿಕೆಯೂ, ಅಗಲುವಿಕೆಯೂ ಈ ಎರಡೂ ಕೂಡ ದೈವಬಲದಿಂದ ಸಂಭವಿಸುವುದಾಗಿದೆ. ಆದರಲ್ಲಿ ಆತ್ಮವಸ್ತುವಿಗಿಂತ ಬೇರೆಯಾದ ದೇಹ ಮುಂತಾದವುಗಳಲ್ಲಿ ಶೋಕವೆಂಬುದು ಎಂತಹುದು ?

**ರಾಜ್ಯಾದ್ಯಥಾ ವನೇ ವಾಸೋ ವೈದೇಹ್ಯಾ ಹರಣಂ ಯಥಾ ।**
**ತಥಾ ಕಾಲೇಽ ಸಮೀಚೀನೇ ಸಂಯೋಗೋಽಪಿ ಭವಿಷ್ಯತಿ ॥೩೯॥**

ರಾಜ್ಯದಿಂದ ವಿಯೋಗವೂ, ಕಾಡಿನಲ್ಲಿ ವಾಸವೂ, ಕಾಡಿನಲ್ಲಿ ವೈದೇಹಿಯ ಅಪಹರಣವೂ ಹೇಗೆ ಉಂಟಾಯಿತೋ, ಹಾಗೆಯೇ ಒಳ್ಳೆಯ ಕಾಲವು ಬಂದಾಗ ಆ ಎಲ್ಲದರ ಸೇರುವಿಕೆಯೂ ಆಗಿಯೇ ಆಗುತ್ತದೆ.

**ಪ್ರಾಪ್ತವ್ಯಂ ಸುಖದುಃಖಾನಾಂ ಭೋಗಾನ್ನಿರ್ವರ್ತನಂ ಕ್ವಚಿತ್ ।**
**ನಾನ್ಯಥಾ ಜಾನಕೀಜಾನೇ ತಸ್ಮಾಚ್ಛೋಕಂ ತ್ಯಜಾಧುನಾ ॥೪೦॥**

ಓ ಜಾನಕೀರಮಣನೇ, ಬಂದೊದಗಿದ ಸುಖದುಃಖಗಳನ್ನು ಕೇವಲ ಭೋಗದಿಂದಲೇ ಕಳೆಯಬೇಕು. ಬೇರೆ ಯಾವ ವಿಧದಿಂದಲೂ ಸಾಧ್ಯವಿಲ್ಲ. ಆದುದರಿಂದ ಈಗ ನೀನು ಶೋಕವನ್ನು ಬಿಡುವವನಾಗು.

**ವಾನರಾಃ ಸಂತಿ ಭೂಯಾಂಸೋ ಗಮಿಷ್ಯಂತಿ ಚತುರ್ದಿಶಂ ।**
**ಶುದ್ಧಿಂ ಜನಕನಂದಿನ್ಯಾ ಆನಯಿಷ್ಯಂತಿ ತೇ ಕಿಲ ॥೪೧॥**

ಇಲ್ಲಿ ಗಟ್ಟಿಗರಾದ ಅನೇಕಮಂದಿ ಕಪಿಶ್ರೇಷ್ಠರು ಇರುತ್ತಾರೆ. ಅವರೆಲ್ಲರೂ ನಾಲ್ಕು ದಿಕ್ಕುಗಳಿಗೂ ಸೀತೆಯನ್ನು ಹುಡುಕಲು ಹೋಗುವರು. ಪವಿತ್ರಳಾದ ಜನಕಪುತ್ರಿಯಾದ ಸೀತಾದೇವಿಯ ಯೋಗಕ್ಷೇಮದ ಪಾತಿವ್ರತ್ಯಪಾಲನೆಯ ವಿಷಯದಲ್ಲೂ ಶುಭಸಮಾಚಾರವನ್ನು ತಂದೇತರುವರು.

**ಜ್ಞಾತ್ವಾ ಮಾರ್ಗಸ್ಥಿತಿಂ ತತ್ರ ಗತ್ವಾ ಕೃತ್ವಾ ಪರಾಕ್ರಮಂ ।**
**ಹತ್ವಾ ತಂ ಪಾಪಕರ್ಮಾಣಮಾನಯಿಷ್ಯಾಮಿ ಮೈಥಿಲೀಂ ॥೪೨॥**

ಅನಂತರದಲ್ಲಿ ಅಲ್ಲಿಗೆ ಹೋಗುವ ಮಾರ್ಗವನ್ನು ತಿಳಿದುಕೊಂಡು ಅಲ್ಲಿಗೆ ಹೋಗಿ ಪರಾಕ್ರಮವನ್ನು ಪ್ರದರ್ಶಿಸಿ ಪಾಪಕರ್ಮನಿರತನಾದ ರಾವಣನನ್ನು ಕೊಂದುಹಾಕಿ ಸೀತಾದೇವಿಯನ್ನು ತರುವೆನು.

**ಸಸೈನ್ಯಂ ಭರತಂ ವಾಪಿ ಸಮಾಹೂಯ ಸಹಾನುಜಂ ।**
**ಹನಿಷ್ಯಾಮೋ ವಯಂ ಶತ್ರುಂ ಕಿಂ ಶೋಚಸಿ ವೃಥಾಗ್ರಜ ॥೪೩॥**

ಅದು ಸಾಧ್ಯವಿಲ್ಲದಿದ್ದಲ್ಲಿ ಸೈನ್ಯದಿಂದ ಕೂಡಿದ, ತಮ್ಮನೊಡಗೂಡಿದ ಭರತನನ್ನಾದರೂ ಬರಮಾಡಿ ನಾವೆಲ್ಲರೂ ಶತ್ರುವನ್ನು ಸಂಹಾರಮಾಡೋಣ. ಆದುದರಿಂದ ಓ ಅಣ್ಣನೇ, ಏತಕ್ಕೆ ಸುಮ್ಮನೆ ಶೋಕಿಸುವೆ ?

**ರಘುಣೈಕರಥೇನೈವ ಜಿತಾಃ ಸರ್ವಾ ದಿಶಃ ಪುರಾ ।**
**ತದ್ವಂಶಜಃ ಕಥಂ ಶೋಕಂ ಕರ್ತುಮರ್ಹಸಿ ರಾಘವ ॥೪೪॥**

ಓ ರಾಘವನೇ, ಅಷ್ಟೇ ಅಲ್ಲದೆ, ಪೂರ್ವದಲ್ಲಿ ನಮ್ಮ ವಂಶದವನಾದ ರಘುಮಹಾರಾಜನು ಒಂದೇ ರಥದಿಂದ ಹತ್ತು ದಿಕ್ಕುಗಳನ್ನೂ ಗೆದ್ದನು. ಅಂಥವನ ವಂಶದಲ್ಲಿ ಹುಟ್ಟಿದ ನೀನು ಏತಕ್ಕೆ ಶೋಕಪಡುವೆ? ಈ ರೀತಿ ದುಃಖಿಸುವುದು ಉಚಿತವಲ್ಲವು.

**ಏಕೋಽಹಂ ಸಕಲಾನ್ ಜೇತುಂ ಸಮರ್ಥೋಽಸ್ಮಿ ಸುರಾಸುರಾನ್ ।**
**ಕಿಂ ಪುನಸ್ಸಸಹಾಯೋ ವೈ ರಾವಣಂ ಕುಲಪಾಂಸನಂ ॥೪೫॥**

ನಾನೊಬ್ಬನೇ ಎಲ್ಲ ದೇವತೆಗಳನ್ನೂ, ರಾಕ್ಷಸರನ್ನೂ ಗೆಲ್ಲಲು ಸಮರ್ಥನಾಗಿದ್ದೇನೆ. ಅಂಥಾದ್ದರಲ್ಲಿ ಸಹಾಯದಿಂದ ಕೂಡಿರುವಾಗ ಕುಲಘಾತಕನಾದ ರಾವಣನನ್ನು ಜಯಿಸಬಲ್ಲೆನೆಂಬ ವಿಷಯದಲ್ಲಿ ಹೇಳುವುದೇನಿದೆ ?

**ಜನಕಂ ವಾ ಸಮಾನೀಯ ಸಾಹಾಯ್ಯೇ ರಘುನಂದನ ।**
**ಹನಿಷ್ಯಾಮಿ ದುರಾಚಾರಂ ರಾವಣಂ ಸುರಕಂಟಕಂ ॥೪೬॥**

ಅಥವಾ ಜನಕಮಹಾರಾಜನನ್ನಾದರೂ ಸಹಾಯಕ್ಕೆ ಕರೆದುಕೊಂಡು ಬಂದು ದೇವತೆಗಳಿಗೆ ಕಂಟಕಪ್ರಾಯನಾದ, ಕೆಟ್ಟ ನಡೆವಳಿಕೆಯುಳ್ಳ ಆ ರಾವಣನನ್ನು ಕೊಂದುಹಾಕುವೆನು.

**ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ ।**
**ಚಕ್ರನೇಮಿರಿವೈಕಂ ತನ್ನ ಭವೇದ್ರಘುನಂದನ ॥೪೭॥**

ಓ ರಘುವಂಶದ ರಾಜರೆಲ್ಲರಿಗೂ ಸಂತೋಷವನ್ನುಂಟುಮಾಡಬಲ್ಲ ರಾಮನೇ, ಸುಖದ ಅನಂತರದಲ್ಲಿ ದುಃಖವೂ, ದುಃಖದ ಅನಂತರದಲ್ಲಿ ಸುಖವೂ ಚಕ್ರದ ಪಟ್ಟಿಗಳಂತೆ ಒಂದಾಗುತ್ತಲೊಂದು ತಪ್ಪದೆ ಮರಳಿಬರುತ್ತಿರುವುವು. ಆ ಸುಖದುಃಖಗಳಲ್ಲಿ ಯಾವುದೊಂದೇ ಬಂದು ನೆಲಸಿರುವುದಿಲ್ಲ.

**ಮನೋಽತಿಕಾತರಂ ಯಸ್ಯ ಸುಖದುಃಖಸಮುದ್ಭವೇ ।**
**ಸ ಶೋಕಸಾಗರೇ ಮಗ್ನೋ ನ ಸುಖೀ ಸ್ಯಾತ್ಕದಾಚನ ॥೪೮॥**

ಸುಖವಾಗಲೀ ದುಃಖವಾಗಲೀ ಉಂಟಾಗಲು ಯಾರ ಮನಸ್ಸು ಅತಿಯಾಗಿ ಗಾಬರಿಗೊಂಡು ಚಂಚಲವಾಗುತ್ತದೆಯೋ ಅಂತಹನು ಶೋಕಸಮುದ್ರದಲ್ಲಿ ಮುಳುಗುತ್ತಾನೆ. ಅಲ್ಲದೆ, ಅವನೆಂದಿಗೂ ಸುಖಿಯಾಗಲಾರನು.

**ಇಂದ್ರೇಣ ವ್ಯಸನಂ ಪ್ರಾಪ್ತಂ ಪುರಾ ವೈ ರಘುನಂದನ ।**
**ನಹುಷಃ ಸ್ಥಾಪಿತೋ ದೇವೈಃ ಸರ್ವೈರ್ಮಘವತಃ ಪದೇ ॥೪೯॥**

ಓ ರಘುನಂದನನೇ, ಪೂರ್ವಕಾಲದಲ್ಲಿ ಇಂದ್ರನಿಗೂ ಒಂದು ಸಂಕಟವು ಪ್ರಾಪ್ತವಾಯಿತು. ಏಕೆಂದರೆ, ವೃತ್ರಾಸುರನನ್ನು ಸಂಹರಿಸಿದುದರಿಂದ ಉಂಟಾದ ಬ್ರಹ್ಮಹತ್ಯಾದೋಷದ ಸಂಬಂಧದಿಂದ ಇಂದ್ರನಿಗೆ ದೇವರಾಜ್ಯಪದವಿಯು ತಪ್ಪಬೇಕಾಗಿಬರಲು, ಎಲ್ಲ ದೇವತೆಗಳಿಂದಲೂ ಆಗ ಧರ್ಮಾತ್ಮನಾಗಿದ್ದ ನಹುಷಚಕ್ರವರ್ತಿಯು ಇಂದ್ರನ ಪದವಿಗೆ ಏರಿಸಲ್ಪಟ್ಟನು.

**ಸ್ಥಿತಃ ಪಂಕಜಮಧ್ಯೇ ಚ ಬಹುವರ್ಷಗಣಾನಪಿ ।**
**ಅಜ್ಞಾತವಾಸಂ ಮಘವಾ ಭೀತಸ್ತ್ಯಕ್ತ್ವಾ ನಿಜಂ ಪದಂ ॥೫೦॥**

ಆದುದರಿಂದ ಆಗ ಇಂದ್ರನು ತನ್ನ ಸಾಮ್ರಾಜ್ಯ ಪದವಿಯನ್ನು ಬಿಟ್ಟುಕೊಟ್ಟು ತುಂಬ ಹೆದರಿಕೊಂಡವನಾಗಿ ಅನೇಕ ವರ್ಷಗಳವರೆಗೆ ಕಮಲಮಧ್ಯದಲ್ಲಿ ಯಾರಿಗೂ ತಿಳಿಯದಂತೆ ವಾಸಮಾಡಿಕೊಂಡಿದ್ದನು.

**ಪುನಃ ಪ್ರಾಪ್ತಂ ನಿಜಸ್ಥಾನಂ ಕಾಲೇ ವಿಪರಿವರ್ತಿತೇ ।**
**ನಹುಷಃ ಪತಿತೋ ಭೂಮೌ ಶಾಪಾದಜಗರಾಕೃತಿಃ ॥೫೦॥**

ಕಾಲವು ಬದಲಾಯಿಸಲು, ಇಂದ್ರನು ತನ್ನ ಸ್ಥಾನವನ್ನು ಪುನಃ ಪಡೆದನು. ನಹುಷನು ಧರ್ಮವನ್ನು ಬಿಟ್ಟು ಶಚೀದೇವಿಯನ್ನು ಕಾಮಿಸಿ ಅವಳ ಸಮೀಪಕ್ಕೆ ಹೊರಟಾಗ ಅಗಸ್ತ್ಯರ ಶಾಪದಿಂದ ಅಜಗರವೆಂಬ ಸರ್ಪನಾಗಿ ಸ್ವರ್ಗರಾಜ್ಯವನ್ನು ಕಳೆದುಕೊಂಡು ಭೂಮಿಯಮೇಲೆ ಬಿದ್ದನು.

**ಇಂದ್ರಾಣೀಂ ಕಾಮಯಾನಸ್ತು ಬ್ರಾಹ್ಮಣಾನವಮನ್ಯ ಚ ।**
**ಅಗಸ್ತಿಕೋಪಾತ್ಸಂಜಾತಃ ಸರ್ಪದೇಹೋ ಮಹೀಪತಿಃ ॥೫೧॥**

ನಹುಷನು, ಇಂದ್ರನ ಹೆಂಡತಿಯಾದ ಶಚೀದೇವಿಯನ್ನು ಕಾಮಿಸಿ ಅವ ಳನ್ನು ಪಡೆಯಲು ಉದ್ಯುಕ್ತನಾದುದರಿಂದಲೂ, ಬ್ರಾಹ್ಮಣರನ್ನು ಅವಮಾನ ಮಾಡಿ ದುದರಿಂದಲೂ ಕೂಡ ಅಗಸ್ತ್ಯಋಷಿಯ ಕೋಪಕ್ಕೆ ಗುರಿಯಾದನು. ಆ ಮುನಿಯು ಕೋಪಾವಿಷ್ಟನಾಗಿ ಕೊಟ್ಟ ಶಾಪದಿಂದ ಸರ್ಪಾಕಾರವನ್ನು ಹೊಂದಿ ಭೂಮಿಗೆ ಬಿದ್ದನು.

**ತಸ್ಮಾಚ್ಛೋಕೋ ನ ಕರ್ತವ್ಯೋ ವ್ಯಸನೇ ಸತಿ ರಾಘವ ।**
**ಉದ್ಯಮೇ ಚಿತ್ತಮಾಸ್ಥಾಯ ಸ್ಥಾತವ್ಯಂ ವೈ ವಿಪಶ್ಚಿತಾ ॥೫೩॥**

ಓ ರಾಘವನೇ, ವ್ಯಸನವು ಬಂದಿರುವಾಗ ದುಃಖವನ್ನು ಅತಿಯಾಗಿ ಮಾಡ ಬಾರದು. ಬುದ್ಧಿವಂತನಾದವನು ಪುರುಷಪ್ರಯತ್ನದಲ್ಲಿ ತನ್ನ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ ಧೈರ್ಯದಿಂದಿರಬೇಕು.

**ಸರ್ವಜ್ಞೋಽಸಿ ಮಹಾಭಾಗ ಸಮರ್ಥೋಽಸಿ ಜಗತ್ಪತೇ ।**
**ಕಿಂ ಪ್ರಾಕೃತ ಇವಾತ್ಯರ್ಥಂ ಕುರುಷೇ ಶೋಕಮಾತ್ಮನಿ ॥೫೪॥**

ಓ ಪುಣ್ಯಾತ್ಮನೇ, ನೀನು ಎಲ್ಲವನ್ನೂ ತಿಳಿದವನಾಗಿರುತ್ತೀಯೆ. ಜಗತ್ತಿಗೆಲ್ಲಾ ಒಡೆಯನಾದ ಓ ರಾಮನೇ, ನೀನು ಎಲ್ಲ ಕಾರ್ಯಗಳನ್ನೂ ನೆರವೇರಿಸುವುದಕ್ಕೂ

ಸಮರ್ಥನಾಗಿರುತ್ತೀಯೆ. ಹೀಗಿರುವಾಗ ನೀನು, ಏನನ್ನೂ ತಿಳಿಯದ ಪಾಮರಜನ ರಂತೆ, ಏಕೆ ಮನಸ್ಸಿನಲ್ಲಿ ಸುಮ್ಮನೆ ಅತಿಯಾಗಿ ದುಃಖಪಡುತ್ತಿರುವೆ? ಎಂದು ಲಕ್ಷ್ಮಣನು ಶ್ರೀರಾಮನನ್ನು ಸಮಾಧಾನಮಾಡಿದನು.

|| ವ್ಯಾಸ ಉವಾಚ ||

**ಇತಿ ಲಕ್ಷ್ಮಣವಾಕ್ಯೇನ ಬೋಧಿತೋ ರಘುನಂದನಃ ।**
**ತ್ಯಕ್ತ್ವಾ ಶೋಕಂ ತಥಾऽತ್ಯರ್ಥಂ ಬಭೂವ ವಿಗತಜ್ವರಃ ॥೫೫॥**

ವ್ಯಾಸಮುನಿಯು ಹೇಳಿದನು—ಈ ರೀತಿಯಾಗಿ ಲಕ್ಷ್ಮಣನು ರಾಮನನ್ನು ಕುರಿತು ವಿಜ್ಞಾಪಿಸಿ ತಿಳಿಯಹೇಳಲು, ಶ್ರೀರಾಮನು ಲಕ್ಷ್ಮಣನ ಸಮಾಧಾನೋಕ್ತಿ ಯಿಂದ ಎಚ್ಚತ್ತು, ಹೆಚ್ಚಾಗಿ ಚಿಂತಿಸುವುದನ್ನು ಬಿಟ್ಟು, ವಿರಹದುಃಖದ ಸಂತಾಪ ದಿಂದ ಬಿಡುಗಡೆಯನ್ನು ಹೊಂದಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ತೃತೀಯಸ್ಕಂಧೇ**
**ಏಕೋನತ್ರಿಂಶೋऽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ತೃತೀಯಸ್ಕಂಧೇ

### ॥ ತ್ರಿಂಶೋಽಧ್ಯಾಯಃ ॥

### ಮೂವತ್ತನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಏವಂ ತೌ ಸಂವಿದಂ ಕೃತ್ವಾ ಯಾವತ್ತೂಷ್ಣೀಂ ಬಭೂವತುಃ ।**
**ಆಜಗಾಮ ತದಾಕಾಶಾನ್ನಾರದೋ ಭಗವಾನೃಷಿಃ ॥೧॥**

ವ್ಯಾಸಮಹರ್ಷಿಯು ಇಂತೆಂದನು—ಈ ರೀತಿಯಾಗಿ ರಾಮಲಕ್ಷ್ಮಣರು ಮಾತಾಡುತ್ತಾ ತಿಳಿವಳಿಕೆಯನ್ನು ತಂದುಕೊಂಡು ಮನಸ್ಸಮಾಧಾನವನ್ನು ಹೊಂದಿದವರಾಗಿ ಸುಮ್ಮನಾದರು. ಆ ಸಮಯದಲ್ಲಿ ಆಕಾಶಮಾರ್ಗದಿಂದ ಭಗವಂತನಾದ ನಾರದಮಹರ್ಷಿಯು ಇಳಿದುಬಂದನು.

**ರಣಯನ್ಮಹತೀಂ ವೀಣಾಂ ಸ್ವರಗ್ರಾಮವಿಭೂಷಿತಾಂ ।**
**ಗಾಯನ್ ಬೃಹದ್ರಥಂ ಸಾಮ ತದಾ ತಮುಪತಸ್ಥಿವಾನ್ ॥೨॥**

ಆಗ ನಾರದನು ಮಹತೀ ಎಂಬ ತನ್ನ ವೀಣೆಯಿಂದ ಸ್ವರಗ್ರಾಮಾದಿಗಳಿಂದ ಶೋಭಿಸುತ್ತಿರುವ ಬೃಹದ್ರಥವೆಂಬ ಸಾಮವೇದಮಂತ್ರವನ್ನು ಮನೋಹರವಾಗಿ ನುಡಿಯಿಸುತ್ತಾ, ಹಾಡುತ್ತಾ ಶ್ರೀರಾಮನ ಸಮೀಪದಲ್ಲಿ ಬಂದುನಿಂತನು.

**ದೃಷ್ಟ್ವಾ ತಂ ರಾಮ ಉತ್ಥಾಯ ದದಾವಥ ವೃಷಂ ಶುಭಂ ।**
**ಆಸನಂ ಚಾರ್ಘ್ಯಪಾದ್ಯಂ ಚ ಕೃತವಾನಮಿತದ್ಯುತಿಃ ॥೩॥**

ಅಪಾರವಾದ ವರ್ಚಸ್ಸಿನ ಕಾಂತಿಯುಳ್ಳ ಶ್ರೀರಾಮನು ಆ ನಾರದಮಹರ್ಷಿಯನ್ನು ಕಂಡು ಇದಿರ್ಗೊಂಡು, ಶ್ರೇಷ್ಠವೂ ಮಂಗಳಕರವೂ ಆದ ಆಸನವನ್ನು ಕೊಟ್ಟನು. ಅನಂತರ ಅವನನ್ನು ಅರ್ಘ್ಯಪಾದ್ಯಗಳಿಂದ ಉಪಚರಿಸಿದನು.

**ಪೂಜಾಂ ಪರಮಿಕಾಂ ಕೃತ್ವಾ ಕೃತಾಂಜಲಿರುಪಸ್ಥಿತಃ ।**
**ಉಪವಿಷ್ಟಃ ಸಮೀಪೇ ತು ಕೃತಾಜ್ಞೋ ಮುನಿನಾ ಹರಿಃ ॥೪॥**

ಹೀಗೆ ಉತ್ತಮವಾದ ರೀತಿಯಲ್ಲಿ ಆ ಮಹರ್ಷಿಯನ್ನು ಸತ್ಕರಿಸಿ ಅನಂತರದಲ್ಲಿ ಎರಡು ಕೈಗಳನ್ನೂ ಜೋಡಿಸಿಕೊಂಡು ಸಮೀಪದಲ್ಲಿ ನಿಂತಿದ್ದನು. ಮತ್ತು ಆ ನಾರದಮುನಿಯಿಂದ ಕುಳಿತುಕೊಳ್ಳುವಂತೆ ಆಜ್ಞಪ್ತನಾಗಿ ಆ ಮುನಿಯ ಸಮೀಪದಲ್ಲಿಯೇ ಕುಳಿತುಕೊಂಡನು.

**ಉಪವಿಷ್ಟಂ ತದಾ ರಾಮಂ ಸಾನುಜಂ ದುಃಖಮಾನಸಂ ।**
**ಪಪ್ರಚ್ಛ ನಾರದಃ ಪ್ರೀತ್ಯಾ ಕುಶಲಂ ಮುನಿಸತ್ತಮಃ ॥೫॥**

ಆಗ ನಾರದಮಹರ್ಷಿಯು ತನ್ನ ಸಮೀಪದಲ್ಲಿ ತಮ್ಮನೊಡನೆ ಕುಳಿತುಕೊಂಡ ರಾಮನನ್ನು ನೋಡಿ ಅವನು ಅತಿದುಃಖಪಟ್ಟ ಮನಸ್ಸುಳ್ಳವನಾಗಿದ್ದುದನ್ನು ತಿಳಿದು, ಬಹಳ ವಿಶ್ವಾಸದಿಂದ ಅವರ ಕ್ಷೇಮಸಮಾಚಾರವನ್ನು ಕೇಳಿದನು.

**ಕಥಂ ರಾಘವ ಶೋಕಾರ್ತೋ ಯಥಾ ವೈ ಪ್ರಾಕೃತೋ ನರಃ ।**
**ಹೃತಾಂ ಸೀತಾಂ ಚ ಜಾನಾಮಿ ರಾವಣೇನ ದುರಾತ್ಮನಾ ॥೬॥**

ಎಲೈ ರಘುವಂಶೋತ್ಪನ್ನನೇ, ವಿವೇಕ ಮುಂದಾಲೋಚನೆಗಳಿಲ್ಲದ ಪಾಮರ ಜನರಂತೆ ಏಕೆ ನೀನು ಶೋಕದಿಂದ ಸಂಕಟಪಡುತ್ತಿರುವೆ? ಕೆಟ್ಟಮನಸ್ಸಿನ ರಾವಣನು ಸೀತೆಯನ್ನು ಕದ್ದುಕೊಂಡು ಹೋಗಿದ್ದಾನೆಂಬುದು ನನಗೆ ತಿಳಿದಿದೆ.

**ಸುರಸದ್ಮ ಗತಶ್ಚಾಹಂ ಶ್ರುತವಾನ್ ಜನಕಾತ್ಮಜಾಂ ।**
**ಪೌಲಸ್ತ್ಯೇನ ಹೃತಾಂ ಮೋಹಾನ್ಮರಣಂ ಸ್ವಮಜಾನತಾ ॥೭॥**

ನಾನು ದೇವಲೋಕಕ್ಕೆ ಹೋಗಿದ್ದೆನು. ಅಲ್ಲಿ ಈ ವಿಚಾರವನ್ನು ಎಂದರೆ, ಪುಲಸ್ತ್ಯನ ಮಗನಾದ ರಾವಣನು ಜನಕಮಹಾರಾಜನ ಮಗಳಾದ ಸೀತೆಯನ್ನು

ಕದ್ದನೆಂಬುದನ್ನು ಕೇಳಿದೆನು. ಆದರಿಂದ ಮುಂದೆ ತನಗೆ ಮರಣವು ಸಂಭವಿಸುವು ದೆಂಬುದನ್ನು ಅವನು ತಿಳಿಯದೆ ಇದ್ದಾನೆ.

**ತವ ಜನ್ಮ ಚ ಕಾಕುತ್ಸ್ಥ ಪೌಲಸ್ತ್ಯನಿಧನಾಯ ವೈ ।**
**ಮೈಥಿಲೀಹರಣಂ ಜಾತಮೇತದರ್ಥಂ ನರಾಧಿಪ ॥೮॥**

ಅಲ್ಲದೆ, ಎಲೈ ರಾಜನೇ, ನಿನ್ನ ಅವತಾರವೂ ಕೂಡ ಆ ಪುಲಸ್ತ್ಯನ ಮಗ ನಾದ ರಾವಣನನ್ನು ಸಂಹರಿಸುವುದಕ್ಕಾಗಿಯೇ ಅಲ್ಲವೇ? ಈ ಕಾರಣದಿಂದಲೇ ಅಲ್ಲವೇ ಸೀತೆಯ ಅಪಹರಣವೂ ಆ ರಾವಣನಿಂದ ನಡೆಯಿತು.

**ಪೂರ್ವಜನ್ಮನಿ ವೈದೇಹೀ ಮುನಿಪುತ್ರೀ ತಪಸ್ವಿನೀ ।**
**ರಾವಣೇನ ವನೇ ದೃಷ್ಟಾ ತಪಸ್ಯಂತೀ ಶುಚಿಸ್ಮಿತಾ ॥೯॥**

ಪೂರ್ವಜನ್ಮದಲ್ಲಿ ಈ ಸೀತಾದೇವಿಯು ರಮೆಯ ಶಾಪದಿಂದ ಒಬ್ಬ ಋಷಿಯ ಮಗಳಾಗಿ ಹುಟ್ಟಿ ತಪಸ್ಸನ್ನು ಆಚರಿಸುತ್ತಿದ್ದಳು. ಈ ವಿಷಯವನ್ನು ಸ್ಕಾಂದ ಪುರಾಣದಲ್ಲಿ ಹೇಳಿದೆ. ಶುಭ್ರವೂ ಶುದ್ಧವೂ ಆದ ಮಂದಹಾಸವುಳ್ಳ, ತಪಸ್ಸನ್ನು ಮಾಡುತ್ತಿರುವ ಇವಳನ್ನು, ರಾವಣನು ಒಂದು ದಿನ ನೋಡಿದನು.

**ಪ್ರಾರ್ಥಿತಾ ರಾವಣೇನಾಸೌ ಭವ ಭಾರ್ಯೇತಿ ರಾಘವ ।**
**ತಿರಸ್ಕೃತಸ್ತಯಾಽಸೌ ವೈ ಜಗ್ರಾಹ ಕಬರಂ ಬಲಾತ್ ॥೧೦॥**

ಓ ರಾಘವನೇ, ಅನಂತರದಲ್ಲಿ ರಾವಣನು ಇವಳನ್ನು ಕುರಿತು, ಓ ತರು ಣಿಯೇ ನೀನು ನನ್ನ ಪತ್ನಿಯಾಗೆಂದು ಪ್ರಾರ್ಥಿಸಿದನು. ಅವಳು ಅವನನ್ನು ತಿರಸ್ಕ ರಿಸಿದಳು. ಆಗ ಕೋಪಗೊಂಡ ರಾವಣನು ಬಲಾತ್ಕಾರದಿಂದ ಅವಳ ಕೇಶಪಾಶ ವನ್ನು ಹಿಡಿದುಕೊಂಡನು.

**ಶಶಾಪ ತತ್ಕ್ಷಣಂ ರಾಮ ರಾವಣಂ ತಾಪಸೀ ಭೃಶಂ ।**
**ಕುಪಿತಾ ತ್ಯಕ್ತುಮಿಚ್ಛಂತೀ ದೇಹಂ ಸಂಸ್ಪರ್ಶದೂಷಿತಂ ॥೧೧॥**

ಓ ರಾಮನೇ, ಕೂಡಲೇ ಈ ತಪಸ್ವಿನಿಯು ಕೋಪಗೊಂಡವಳಾಗಿ ರಾವಣನ ಸ್ಪರ್ಶದೋಷವನ್ನು ನಿವಾರಣೆಮಾಡಿಕೊಳ್ಳಲು ದೇಹವನ್ನು ಬಿಡಲು ನಿಶ್ಚಯಿಸಿ ಆ ರಾವಣನನ್ನು ಹೀಗೆ ಶಪಿಸಿದಳು.

**ದುರಾತ್ಮಂಸ್ತವ ನಾಶಾರ್ಥಂ ಭವಿಷ್ಯಾಮಿ ಧರಾತಲೇ ।**
**ಅಯೋನಿಜಾ ವರಾ ನಾರೀ ತ್ಯಕ್ತ್ವಾ ದೇಹಂ ಜಹಾವಪಿ ॥೧೨॥**

ಎಲೈ ಕೆಟ್ಟಮನಸ್ಸಿನ ರಾವಣನೇ, ನಾನು ನಿನ್ನ ನಾಶಕ್ಕಾಗಿಯೇ ಭೂಮಿಯಲ್ಲಿ ಮನುಷ್ಯರ ಗರ್ಭದಲ್ಲಿ ಹುಟ್ಟದೆ ಅಯೋನಿಜಳಾದ ಉತ್ತಮಸ್ತ್ರೀಯಾಗಿ ಹುಟ್ಟುವೆನು. ಅದಕ್ಕಾಗಿಯೇ ಈ ಶರೀರವನ್ನು ಬಿಡುವೆನು ಎಂದು ಶಾಪವಾಕ್ಯವನ್ನು ಹೇಳಿ ಆ ತಪಸ್ವಿನಿಯು ಶರೀರವನ್ನು ಬಿಟ್ಟಳು.

**ಸೇಯಂ ರಮಾಂಶಸಂಭೂತಾ ಗೃಹೀತಾ ತೇನ ರಕ್ಷಸಾ ।**
**ವಿನಾಶಾರ್ಥಂ ಕುಲಸ್ಯೈವ ವ್ಯಾಲೀ ಸ್ರಗಿವ ಸಂಭ್ರಮಾತ್ ॥೧೩॥**

ಆ ತಪಸ್ವಿನಿಯೇ ಲಕ್ಷ್ಮಿಯ ಅಂಶದಿಂದ ಈಗ ಹುಟ್ಟಿದ್ದಾಳೆ. ಆ ರಾವಣನು ತನ್ನ ವಂಶವನ್ನೇ ಹಾಳುಮಾಡಿಕೊಳ್ಳಲು ಅವಳನ್ನೇ ಅಪಹರಿಸಿರುವುದು, ಸಂಭ್ರಮದಿಂದ ಹಾವನ್ನೇ ಹಾರವೆಂದು ಭ್ರಮಿಸಿ ಕೊರಳಿಗೆ ಹಾಕಿಕೊಂಡಂತೆ ಆಗಿರುತ್ತದೆ.

**ತವ ಜನ್ಮ ಚ ಕಾಕುತ್ಸ್ಥ ತಸ್ಯ ನಾಶಾಯ ಚಾಮರೈಃ ।**
**ಪ್ರಾರ್ಥಿತಸ್ಯ ಹರೇರಂಶಾದಜವಂಶೇಽಪ್ಯಜನ್ಮನಃ ॥೧೪॥**

ಅಲ್ಲದೆ, ಓ ಕಾಕುತ್ಸ್ಥನೇ, ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ವಿಷ್ಣುವಿನ ಅಂಶದಿಂದಲೇ ನೀನು, ನಿನ್ನ ವಾಸ್ತವಸ್ವರೂಪದಲ್ಲಿ ಜನ್ಮವಿಲ್ಲದ ನಿತ್ಯಪುರುಷನಾದರೂ, ಈಗ ಅಜಮಹಾರಾಜನ ವಂಶದಲ್ಲಿ ರಾವಣನ ಮರಣಕ್ಕಾಗಿಯೇ ಜನ್ಮವೆತ್ತಿರುವುದು.

**ಕುರು ಧೈರ್ಯಂ ಮಹಾಬಾಹೋ ತತ್ರ ಸಾ ವರ್ತತೇಽವಶಾ ।**
**ಸತೀಧರ್ಮರತಾ ಸೀತಾ ತ್ವಾಂ ಧ್ಯಾಯಂತೀ ದಿವಾನಿಶಂ ॥೧೫॥**

ಅಲ್ಲದೆ ಆ ಲಂಕಾಪಟ್ಟಣದಲ್ಲಿ ಸೀತಾದೇವಿಯು ಬಂಧನದಲ್ಲಿ ಪರಾಧೀನಳಾಗಿ ಇರುವಳು. ಆದರೂ ಎಲೈ ಪರಾಕ್ರಮಶಾಲಿಯಾದ ರಾಮನೇ, ಧೈರ್ಯವನ್ನು ಹೊಂದು. ನಿನ್ನ ಹೆಂಡತಿಯು ಸದಾ ನಿನ್ನನ್ನೇ ಧ್ಯಾನಿಸುತ್ತಾ ಪತಿವ್ರತೆಯಾಗಿ ಧರ್ಮದಲ್ಲೇ ನಿರತಳಾಗಿರುವಳು. ಆದುದರಿಂದ ನೀನು ಅನ್ಯಥಾ ಭಾವಿಸಬೇಕಾಗಿಲ್ಲ.

**ಕಾಮಧೇನುಪಯಃ ಪಾತ್ರೇ ಕೃತ್ವಾ ಮಘವತಾ ಸ್ವಯಂ ।**
**ಪಾನಾರ್ಥಂ ಪ್ರೇಷಿತಂ ತಸ್ಯಾಃ ಪೀತಂ ಚೈವಾಮೃತಂ ತಥಾ ॥೧೬॥**

ಅವಳ ಆಹಾರಾದಿ ವಿಷಯದಲ್ಲೂ ನೀನು ಸ್ವಲ್ಪವೂ ಚಿಂತಿಸಬೇಕಾದುದಿಲ್ಲವು. ಸ್ವತಃ ಇಂದ್ರನೇ ಕಾಮಧೇನುವಿನ ಹಾಲನ್ನು ಪಾತ್ರೆಯಲ್ಲಿ ಅವಳಿಗಾಗಿ ಕಳುಹಿಸಿರುತ್ತಾನೆ. ಹಾಗೆಯೇ ಕಳುಹಿಸಿದ ಅಮೃತವನ್ನು ಅವಳು ಪಾನಮಾಡಿರುವಳು.

**ಸುರಭೀದುಗ್ಧಪಾನಾತ್ಸಾ ಕ್ಷುತ್ತೃಡ್ದುಃಖವಿವರ್ಜಿತಾ ।**
**ಜಾತಾ ಕಮಲಪತ್ರಾಕ್ಷೀ ವರ್ತತೇ ವೀಕ್ಷಿತಾ ಮಯಾ ॥೧೭॥**

ಓ ರಾಮನೇ, ಕಾಮಧೇನುವಿನ ಹಾಲನ್ನು ಕುಡಿದಿರುವುದರಿಂದ, ಹಸಿವು ಬಾಯಾರಿಕೆಗಳಿಂದ ಬಿಡಲ್ಪಟ್ಟವಳಾಗಿ, ಕಮಲದಂತೆ ಕಣ್ಣುಳ್ಳ ಸೀತಾದೇವಿಯು ಸುಖವಾಗಿರುವುದನ್ನು ನಾನೇ ನೋಡಿರುತ್ತೇನೆ.

**ಉಪಾಯಂ ಕಥಯಾಮ್ಯದ್ಯ ತಸ್ಯ ನಾಶಾಯ ರಾಘವ ।**
**ವ್ರತಂ ಕುರುಷ್ವ ಶ್ರದ್ಧಾವಾನಾಶ್ವಿನೇ ಮಾಸಿ ಸಾಂಪ್ರತಂ ॥೧೮॥**

ಆ ರಾವಣನ ನಾಶಕ್ಕಾಗಿ ಒಂದು ಉಪಾಯವನ್ನು ಹೇಳುತ್ತೇನೆ, ಕೇಳು. ಅಶ್ವಿನೀನಕ್ಷತ್ರದಿಂದ ಕೂಡಿರುವ ಪೂರ್ಣಿಮೆಯುಳ್ಳ ಈ ಆಶ್ವಯುಜಮಾಸದಲ್ಲಿ ನೀನು ತುಂಬ ಶ್ರದ್ಧೆಯಿಂದ ಕೂಡಿ ಒಂದು ವ್ರತವನ್ನು ಮಾಡುವವನಾಗು.

**ನವರಾತ್ರೋಪವಾಸಂ ಚ ಭಗವತ್ಯಾಃ ಪ್ರಪೂಜನಂ ।**
**ಸರ್ವಸಿದ್ಧಿಕರಂ ರಾಮ ಜಪಹೋಮವಿಧಾನತಃ ॥೧೯॥**

ಒಂಬತ್ತು ರಾತ್ರಿಗಳು ಉಪವಾಸಮಾಡಿ ಮಹಾಮಹಿಮಶಾಲಿನಿಯಾದ ಸರ್ವಶಕ್ತಿಸ್ವರೂಪಳಾದ, ಎಲ್ಲ ಸಿದ್ಧಿಯನ್ನೂ ಕೊಡತಕ್ಕ ನವದುರ್ಗಾದೇವಿಯ ಪೂಜೆಯನ್ನು ಜಪ ಹೋಮ ಅರ್ಚನೆ ಮುಂತಾದ ವಿಧಿಗಳಿಂದ ಮಾಡುವವನಾಗು.

**ಮೇಧ್ಯೈಶ್ಚ ಪಶುಭಿರ್ದೇವ್ಯಾ ಬಲಿಂ ದತ್ವಾ ವಿಶಂಸಿತೈಃ ।**
**ದಶಾಂಶಂ ಹವನಂ ಕೃತ್ವಾ ಸುಶಕ್ತಸ್ತ್ವಂ ಭವಿಷ್ಯಸಿ ॥೨೦॥**

ಶುದ್ಧವಾದ ಪಶುಗಳನ್ನು ದೇವಿಗೆ ಭಕ್ತಿಯಿಂದ ಬಲಿಯಾಗಿ ಅರ್ಪಿಸು. ಮತ್ತು ಜಪಮಾಡಿದುದರ ಹತ್ತರಲ್ಲಿ ಒಂದರಷ್ಟು ಹೋಮವನ್ನು ಮಾಡು. ಇದರಿಂದ ನೀನು ಅತ್ಯಂತ ಬಲಶಾಲಿಯಾಗುತ್ತೀಯೆ.

**ವಿಷ್ಣುನಾಽಽಚರಿತಂ ಪೂರ್ವಂ ಮಹಾದೇವೇನ ಬ್ರಹ್ಮಣಾ ।**
**ತಥಾ ಮಘವತಾ ಚೀರ್ಣಂ ಸ್ವರ್ಗಮಧ್ಯಸ್ಥಿತೇನ ವೈ ॥೨೦॥**

ಇದನ್ನು ಯಾರು ಯಾರು ಆಚರಿಸಿ ಫಲವನ್ನು ಪಡೆದರೆಂಬುದನ್ನು ಹೇಳುವೆನು ಕೇಳು. ವಿಷ್ಣುವಿನಿಂದಲೂ, ಮಹಾದೇವನಿಂದಲೂ, ಬ್ರಹ್ಮನಿಂದಲೂ ಮತ್ತು ಸ್ವರ್ಗದಲ್ಲಿರುವ ಇಂದ್ರನಿಂದಲೂ ಈ ವ್ರತವು ಪೂರ್ವದಲ್ಲಿ ಮಾಡಲ್ಪಟ್ಟಿತು. ಇದರಿಂದ ಅವರೆಲ್ಲರೂ ತಮ್ಮ ಮನೋರಥಗಳನ್ನು ಪಡೆದರು.

**ಸುಖಿನಾ ರಾಮ ಕರ್ತವ್ಯಂ ನವರಾತ್ರವ್ರತಂ ಶುಭಂ ।**
**ವಿಶೇಷೇಣ ಚ ಕರ್ತವ್ಯಂ ಪುಂಸಾ ಕಷ್ಟಗತೇನ ವೈ ॥೨೨॥**

ಎಲೈ ರಾಮನೇ, ಸುಖಿಯಾಗಿರುವವನಿಂದಲೂ ಈ ನವರಾತ್ರಿವ್ರತವು ಮಾಡಲ್ಪಡಬೇಕು. ಇದು ಅತ್ಯಂತ ಶುಭದಾಯಕವಾದುದು. ಅಲ್ಲದೆ, ವಿಶೇಷವಾದ ಕಷ್ಟದಲ್ಲಿರುವ ಮನುಷ್ಯನು ಇದನ್ನು ಅವಶ್ಯಕವಾಗಿ ಮಾಡಲೇಬೇಕು. ಇದರಿಂದ ಅವನ ಕಷ್ಟಗಳು ಪರಿಹಾರವಾಗುವುವು.

**ಗುರುಣಾ ಹೃತದಾರೇಣ ಕೃತಮೇತನ್ಮಹಾವ್ರತಂ ।**
**ತಸ್ಮಾತ್ತ್ವಂ ಕುರು ರಾಜೇಂದ್ರ ರಾವಣಸ್ಯ ವಧಾಯ ಚ ॥೨೩॥**

ಚಂದ್ರನಿಂದ ತನ್ನ ಹೆಂಡತಿಯು ಅಪಹರಿಸಲ್ಪಟ್ಟಾಗ ಗುರುವು ಕೂಡ ಈ ಮಹಾವ್ರತವನ್ನು ತನ್ನ ಇಷ್ಟಾರ್ಥಸಿದ್ಧಿಗಾಗಿ ಮಾಡಿರುತ್ತಾನೆ. ಆದುದರಿಂದ ರಾಜಶ್ರೇಷ್ಠನಾದ ಎಲೈ ರಾಮನೇ, ಈ ಮಹಾವ್ರತವನ್ನು ರಾವಣನ ಸಂಹಾರಕ್ಕಾಗಿ ನೀನೂ ಮಾಡಬೇಕು.

**ವಿಶ್ವಾಮಿತ್ರೇಣ ಕಾಕುತ್ಸ್ಥ ಕೃತಮೇತನ್ನ ಸಂಶಯಃ ।**
**ಭೃಗುಣಾಥ ವಸಿಷ್ಠೇನ ಕಶ್ಯಪೇನ ತಥೈವ ಚ ॥೨೪॥**

ಓ ರಾಮನೇ, ಹಿಂದೆ ವಿಶ್ವಾಮಿತ್ರನಿಂದ ತನ್ನ ಕಷ್ಟನಿವಾರಣೆಗಾಗಿ ಈ ವ್ರತವು ಮಾಡಲ್ಪಟ್ಟಿತು. ಇದರಲ್ಲಿ ಸಂಶಯಪಡಬೇಡ. ಭೃಗು, ವಸಿಷ್ಠ, ಕಶ್ಯಪ ಇಂತಹ ಮಹರ್ಷಿಗಳಿಂದಲೂ ಈ ವ್ರತವು ಆಚರಿಸಲ್ಪಟ್ಟಿದೆ.

**ಇಂದ್ರೇಣ ವೃತ್ರನಾಶಾಯ ಕೃತಂ ವ್ರತಮನುತ್ತಮಂ ।**
**ತ್ರಿಪುರಸ್ಯ ವಿನಾಶಾಯ ಶಿವೇನಾಪಿ ಪುರಾ ಕೃತಂ ॥೨೫॥**

ಇನ್ನೂ ಕೆಲವು ಉದಾಹರಣೆಗಳನ್ನು ಹೇಳುವೆನು ಕೇಳು. ಹಿಂದೆ ಇಂದ್ರನು ವೃತ್ರಾಸುರನ ಸಂಹಾರಕ್ಕಾಗಿ ಈ ಉತ್ತಮ ವ್ರತವನ್ನು ಮಾಡಿದನು. ತ್ರಿಪುರಾ ಸುರರನ್ನು ಸಂಹರಿಸುವುದಕ್ಕಾಗಿ ಈಶ್ವರನಿಂದಲೂ ಕೂಡ ಈ ವ್ರತವು ಮಾಡ ಲ್ಪಟ್ಟಿತು.

**ಹರಿಣಾ ಮಧುನಾಶಾಯ ಕೃತಂ ಮೇರೌ ಮಹಾಮತೇ ।**
**ವಿಧಿವತ್ಕುರು ಕಾಕುತ್ಸ್ಥ ವ್ರತಮೇತದತಂದ್ರಿತಃ ॥೨೬॥**

ಎಲೈ ಮಹಾಬುದ್ಧಿಶಾಲಿಯಾದ ರಾಮನೇ, ಇಷ್ಟೇ ಅಲ್ಲದೆ ಶ್ರೀಮನ್ನಾರಾ ಯಣನಿಂದಲೂ ಮಧು ಎಂಬ ರಾಕ್ಷಸನನ್ನು ಸಂಹರಿಸುವುದಕ್ಕಾಗಿ ಈ ವ್ರತವು ಮೇರುಪರ್ವತದಲ್ಲಿ ಆಚರಿಸಲ್ಪಟ್ಟಿತು. ಆದುದರಿಂದ ನೀನೂ ಕೂಡ ವಿಧ್ಯುಕ್ತ ವಾಗಿ ಆಲಸ್ಯವಿಲ್ಲದೆ ಈ ವ್ರತವನ್ನು ಮಾಡಿ ಸಿದ್ಧಿಯನ್ನು ಪಡೆಯುವವನಾಗು.

॥ ಶ್ರೀರಾಮ ಉವಾಚ ॥

**ಕಾ ದೇವೀ ಕಿಂ ಪ್ರಭಾವಾ ಸಾ ಕುತೋ ಜಾತಾ ಕಿಮಾಹ್ವಯಾ ।**
**ವ್ರತಂ ಕಿಂ ವಿಧಿವದ್ಬ್ರೂಹಿ ಸರ್ವಜ್ಞೋಽಸಿ ದಯಾನಿಧೇ ॥೨೭॥**

ರಾಮನು ಹೇಳಿದನು——ಓ ನಾರದನೇ, ನೀನು ಇದುವರಿಗೂ ಹೇಳಿದೆಯಲ್ಲ, ಆ ದೇವಿಯು ಯಾರು? ಅವಳ ಪ್ರಭಾವವು ಎಂತಹುದು? ಅವಳು ಹುಟ್ಟಿದುದು ಎಲ್ಲಿ? ಯಾವ ಹೆಸರಿನಿಂದ ಪ್ರಸಿದ್ಧಳಾದಳು? ಆ ದೇವಿಯ ವ್ರತದ ಸ್ವರೂಪ ವೇನು? ದಯಾನಿಧಿಯಾದ ನಾರದನೇ, ನೀನು ಎಲ್ಲವನ್ನೂ ತಿಳಿದವನಾಗಿರುವೆ. ಆದುದರಿಂದ ಆ ವ್ರತಸ್ವರೂಪವನ್ನು ಶಾಸ್ತ್ರದಲ್ಲಿ ಹೇಳಿರುವಂತೆಯೇ ನನಗೆ ಹೇಳು.

|| ನಾರದ ಉವಾಚ ||

**ಶೃಣು ರಾಮ ಸದಾ ನಿತ್ಯಾ ಶಕ್ತಿರಾದ್ಯಾ ಸನಾತನೀ ।**
**ಸರ್ವಕಾಮಪ್ರದಾ ದೇವೀ ಪೂಜಿತಾ ದುಃಖನಾಶಿನೀ ||೨೮||**

ನಾರದಮುನಿಯು ರಾಮನು ಕೇಳಿದ ಆ ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರ ವನ್ನು ಹೇಳಿದನು—ಎಲೈ ರಾಮನೇ ಕೇಳು. ಆ ದೇವಿಯು ಕಾಲತ್ರಯದಲ್ಲಿಯೂ ಅಬಾಧಿತಳಾದವಳು, ನಿತ್ಯಳಾದವಳು. ವಾಸ್ತವವಾಗಿ ·ಬ್ರಹ್ಮಸ್ವರೂಪಳು. ಅಲ್ಲದೆ ತನ್ನನ್ನು ಪೂಜೆಮಾಡಿದವರಿಗೆ ಅವರ ಎಲ್ಲ ಇಷ್ಟಾರ್ಥಗಳನ್ನೂ ಕೊಡುವವಳು ಮತ್ತು ಆ ಭಕ್ತರ ಎಲ್ಲ ಬಗೆಯ ಕಷ್ಟಗಳನ್ನೂ ಪರಿಹರಿಸಿ ಕಾಪಾಡುವವಳು.

**ಕಾರಣಂ ಸರ್ವಜಂತೂನಾಂ ಬ್ರಹ್ಮಾದೀನಾಂ ರಘೂದ್ವಹ ।**
**ತಸ್ಯಾಃ ಶಕ್ತಿಂ ವಿನಾ ಕೋಽಪಿ ಸ್ಪಂದಿತುಂ ನ ಕ್ಷಮೋ ಭವೇತ್ ||೨೯||**

ಆ ದೇವಿಯು ಬ್ರಹ್ಮನೇ ಆದಿಯಾಗಿರುವ ಈ ಎಲ್ಲ ಪ್ರಾಣಿವರ್ಗಗಳ ಉತ್ಪತ್ತಿಗೂ ಸಹ ಕಾರಣಳು. ಆ ದೇವಿಯ ಮಾಯಾಶಕ್ತಿಯಿಂದಲ್ಲದೆ ಮತ್ತೆ ಯಾವುದರಿಂದಲೂ ಯಾರೂ, ಯಾವುದೂ, ಕೊಂಚವೂ ಅಲುಗಾಡಲು ಸಹ ಸಾಮರ್ಥ್ಯವುಳ್ಳದು ಆಗುವುದಿಲ್ಲವು.

**ವಿಷ್ಣೋಃ ಪಾಲನಶಕ್ತಿಃ ಸಾ ಕರ್ತೃಶಕ್ತಿಃ ಪಿತುರ್ಮಮ ।**
**ರುದ್ರಸ್ಯ ನಾಶಶಕ್ತಿಃ ಸಾ ತ್ವನ್ಯಶಕ್ತಿಃ ಪರಾ ಶಿವಾ ||೩೦||**

ಈ ಪ್ರಪಂಚವನ್ನು ಸೃಷ್ಟಿಸುವ ನನ್ನ ತಂದೆಯಾದ ಬ್ರಹ್ಮನ ಶಕ್ತಿಯೂ, ಅದನ್ನು ಕಾಪಾಡುವ ವಿಷ್ಣುವಿನ ಸಾಮರ್ಥ್ಯವೂ, ಕಡೆಗೆ ಅದನ್ನು ಉಪಸಂಹರಿಸುವ ರುದ್ರನ ಶಕ್ತಿಯೂ ಇವೆಲ್ಲವೂ ಆ ದೇವಿಯ ಶಕ್ತಿರೂಪಗಳಾಗಿವೆ. ಈ ಎಲ್ಲ ಶಕ್ತಿ ವಿಶೇಷಗಳ ಮೂಲರೂಪವೇ ಪರಬ್ರಹ್ಮಶಕ್ತಿಯಾಗಿದೆ. ಈ ಶಕ್ತಿಗೆ ಪರಾಶಕ್ತಿ ಎಂದೂ ಮಾಯಾಶಕ್ತಿ ಎಂದೂ, ಮಂಗಳಕರಳೆಂದೂ ಹೆಸರುಗಳಿವೆ. ಅಗ್ನಿಯೂ ಅದರ ದಾಹಶಕ್ತಿಯೂ ಪರಸ್ಪರ ಸೇರಿಕೊಂಡಿರುವಂತೆ ಆ ಬ್ರಹ್ಮಚೈತನ್ಯವೂ ಅದರ ಶಕ್ತಿಯೂ ಅಭಿನ್ನವಾಗಿರುವ ಒಂದೇ ತತ್ತ್ವವಾಗಿದೆ.

**ಯಚ್ಚ ಕಿಂಚಿತ್ಕ್ವಚಿದ್ವಸ್ತು ಸದಸದ್ಭುವನತ್ರಯೇ ।**
**ತಸ್ಯ ಸರ್ವಸ್ಯ ಯಾ ಶಕ್ತಿಸ್ತದುತ್ಪತ್ತಿಃ ಕುತೋ ಭವೇತ್ ||೩೧||**

ಓ ರಾಮನೇ, ಈ ಮೂರು ಲೋಕಗಳಲ್ಲೆಲ್ಲ ಇರುವ ಕೆಟ್ಟದ್ದು ಒಳ್ಳೆಯದು ಎಂಬ ಎಲ್ಲ ಪದಾರ್ಥಗಳ ಉತ್ಪತ್ತಿಸ್ಥಾನವಾಗಿರುವ ಈ ಪರಾಶಕ್ತಿಯು ಎಲ್ಲಿ ತಾನೇ ಹುಟ್ಟುತ್ತದೆ? ಅನವಸ್ಥಾದೋಷವಾರಣೆಗಾಗಿ ಇದಕ್ಕೆ ಯಾವುದೂ ಕಾರಣವಾದ ಉತ್ಪತ್ತಿಸ್ಥಾನವಿಲ್ಲೆಂದು ಸಿದ್ಧಾಂತ ಮಾಡಿದೆ.

**ನ ಬ್ರಹ್ಮಾ ನ ಯದಾ ವಿಷ್ಣುರ್ನ ರುದ್ರೋ ನ ದಿವಾಕರಃ ।**
**ನ ಚೇಂದ್ರಾದ್ಯಾಃ ಸುರಾಃ ಸರ್ವೇ ನ ಧರಾ ನ ಧರಾಧರಾಃ ॥೩೨॥**

**ತದಾ ಸಾ ಪ್ರಕೃತಿಃ ಪೂರ್ಣಾ ಪುರುಷೇಣ ಪರೇಣ ವೈ ।**
**ಸಂಯುತಾ ವಿಹರತ್ಯೇವ ಯುಗಾದೌ ನಿರ್ಗುಣಾ ಶಿವಾ ॥೩೩॥**

ಬ್ರಹ್ಮ, ವಿಷ್ಣು, ರುದ್ರ, ಸೂರ್ಯ, ಭೂಮಿ, ಪರ್ವತಗಳು ಇವೇ ಮೊದಲಾದವುಗಳು ಯಾವುವೂ ಈ ಸೃಷ್ಟಿಗಿಂತ ಮುಂಚೆ ಯುಗಾದಿಯಲ್ಲಿ ಇರುವುದಿಲ್ಲವೋ ಆಗಲೂ ಕೂಡ ಈ ಪರಾತ್ಪರಶಕ್ತಿಯು ಪರಾಪ್ರಕೃತಿ ಎನಿಸಿಕೊಂಡು ಪರಚಿದ್ರೂಪನಾದ ಪುರುಷನಿಂದ ಕೂಡಿ ವಿಹರಿಸುತ್ತಿರುತ್ತದೆ. ಆಗ ಗುಣಗಳ ವೈಷಮ್ಯವಿಲ್ಲದೆ ಸಾಮ್ಯಾವಸ್ಥೆಯಲ್ಲಿರುವುದರಿಂದ ಪರಿಣಮಿಸದೇ ಇರುವ ಈ ಪರಾತ್ಪರಶಕ್ತಿಯು ನಿರ್ಗುಣಳೂ ಅನಾದಿಯೂ ಎನ್ನಿಸಿಕೊಂಡು ಪರಬ್ರಹ್ಮತತ್ತ್ವವಾಗಿರುತ್ತಾ ಪೂರ್ಣಳೂ ಮಂಗಳಕರಳೂ ಆಗಿರುತ್ತಾಳೆ. ಈ ಮಾತಿನಲ್ಲೂ ತೋರುವ ಆಕಾರ, ಗುಣ, ಲಿಂಗಗಳು ಭೂತಪೂರ್ವಗತಿಯಿಂದ ಉಪಲಕ್ಷಣವಿಧದಿಂದ ಇವೆ ಎಂದು ತಿಳಿಯಬೇಕು.

**ಸಾ ಭೂತ್ವಾ ಸಗುಣಾ ಪಶ್ಚಾತ್ಕರೋತಿ ಭುವನತ್ರಯಂ ।**
**ಪೂರ್ವಂ ಸಂಸೃಜ್ಯ ಬ್ರಹ್ಮಾದೀನ್ ದತ್ವಾ ಶಕ್ತೀಶ್ಚ ಸರ್ವಶಃ ॥೩೪॥**

ಎಲೈ ರಾಘವನೇ ಕೇಳು, ಆ ಪರಾಶಕ್ತಿರೂಪಳಾದ ದೇವಿಯಿಂದ ಉಂಟಾಗುವ ಮುಂದಿನ ಸೃಷ್ಟಿಕ್ರಮವನ್ನು ವರ್ಣಿಸುವೆನು. ಹಿಂದೆ ಹೇಳಿದಂತೆ ನಿರ್ಗುಣ ಪರಬ್ರಹ್ಮರೂಪಳಾಗಿದ್ದ ದೇವೀಶಕ್ತಿಯು ಅನಂತರದಲ್ಲಿ ಸತ್ತ್ವ ಮುಂತಾದ ಗುಣಗಳ ವೈಷಮ್ಯದಿಂದ ಪರಿಣಾಮಗಳುಂಟಾಗಲು, ಸಗುಣಳಾಗಿ ಈ ಮೂರು ಲೋಕಗಳನ್ನೂ ಸೃಷ್ಟಿಸುವಳು. ಮೊದಲು ಬ್ರಹ್ಮವಿಷ್ಣುಮಹೇಶ್ವರರನ್ನು ಸೃಷ್ಟಿಸುವಳು. ಆಮೇಲೆ ಅವರೆಲ್ಲರಿಗೂ ಈ ಜಗತ್ತಿನ ಸರ್ಜನ, ಪಾಲನ, ನಾಶನ, ಮುಂತಾದ ಕಾರ್ಯಗಳನ್ನು ನೆರವೇರಿಸಲು ಅನುಕೂಲವಾಗಿರುವಂತೆ ತನ್ನ ಅಂಶಗಳಾದ ಶಕ್ತಿಗಳನ್ನೂ ಕೊಡುವಳು.

**ತಾಂ ಜ್ಞಾತ್ವಾ ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ।**
**ಸಾ ವಿದ್ಯಾ ಪರಮಾ ಜ್ಞೇಯಾ ವೇದಾದ್ಯಾ ವೇದಕಾರಿಣೀ ॥೩೫॥**

ಅಂತಹ ಪರಾತ್ಪರ ಬ್ರಹ್ಮಶಕ್ತಿಯನ್ನು ಯಾರು ಬ್ರಹ್ಮರೂಪಳೆಂದು ಅಭೇದ ಭಾವನೆಯಿಂದ ಮನಸ್ಸಿನಲ್ಲಿ ನಿರ್ವಿಕಲ್ಪಸಮಾಧಿಯಲ್ಲಿ ಸಿದ್ಧಿಯನ್ನು ಪಡೆದವರಾಗಿ ಧ್ಯಾನಿಸುವರೋ ಅಂಥವರು, ಅನಂತವಾಗಿ ಹುಟ್ಟು ಸಾವುಗಳನ್ನು ಪಡೆಯುತ್ತಿರುವು ದೆಂಬ ಈ ಸಂಸಾರದ ನಿರ್ಬಂಧ ದುಃಖದಿಂದ ಮೋಕ್ಷವನ್ನು ಹೊಂದುವರು. ಅಂತಹ ಆ ವಿದ್ಯೆಯೇ ಶ್ರೇಷ್ಠವಾದುದು. ಅವಳೇ ವೇದಕ್ಕೆಲ್ಲಾ ಆದಿಭೂತಳು. ಅವಳೇ ವೇದವನ್ನು ಸೃಷ್ಟಿಸಿದವಳು.

**ಅಸಂಖ್ಯಾತಾನಿ ನಾಮಾನಿ ತಸ್ಯಾ ಬ್ರಹ್ಮಾದಿಭಿಃ ಕಿಲ ।**
**ಗುಣಕರ್ಮವಿಧಾನೈಸ್ತು ಕಲ್ಪಿತಾನಿ ಚ ಕಿಂ ಬ್ರುವೇ ॥೩೬॥**

ಇಂತಹ ಪರಾಶಕ್ತಿಗೆ ಲೆಕ್ಕವಿಲ್ಲದಷ್ಟು ಹೆಸರುಗಳಿವೆ. ಎಂದರೆ ಅಸಂಖ್ಯಾತ ನಾಮಗಳುಂಟು. ಈ ನಾಮಗಳನ್ನೆಲ್ಲಾ ಬ್ರಹ್ಮಾದಿಗಳು ಗುಣಕರ್ಮಗಳಿಗೆ ಅನುಸಾರ ವಾದ ವಿಧಾನಗಳಿಂದ ಕಲ್ಪಿಸಿರುತ್ತಾರೆ. ಅವುಗಳ ಸಾಮಾನ್ಯರೂಪವನ್ನು ಮಾತ್ರ ಹೇಳಿರುವೆನೇ ಹೊರತು ಅವೆಲ್ಲವನ್ನೂ ವಿವರವಾಗಿ, ಸಮಗ್ರವಾಗಿ, ಹೇಗೆ ಹೇಳಲಿ ?

**ಅಕಾರಾದಿಕ್ಷಕಾರಾಂತೈಃ ಸ್ವರೈರ್ವರ್ಣೈಸ್ತು ಯೋಜಿತೈಃ ।**
**ಅಸಂಖ್ಯೇಯಾನಿ ನಾಮಾನಿ ಭವಂತಿ ರಘುನಂದನ ॥೩೭॥**

ಓ ರಘುವಂಶದವರನ್ನು ಸಂತೋಷಪಡಿಸುವ ರಾಮನೇ, ಅಕಾರದಿಂದ ಪ್ರಾರಂಭಿಸಿ ಕ್ಷಕಾರಾಂತವಾಗಿರುವ ಸ್ವರ ಮತ್ತು ವ್ಯಂಜನಗಳಿಂದ ಏರ್ಪಡುವ ಅಸಂಖ್ಯಾತವಾದ ನಾಮಗಳು ಆ ಪರಾಶಕ್ತಿಗೆ ಇರುವುವು. ಹೇಗೆಂದರೆ, ಈ ಪ್ರಪಂಚ ದಲ್ಲಿರುವ ಎಲ್ಲ ಪದಾರ್ಥಗಳೂ ಆ ಭಗವತೀದೇವಿಯ ರೂಪಗಳೇ ಆಗಿವೆ. ವಾಗರ್ಥ ಗಳು ಅಭಿನ್ನಗಳಾಗಿವೆ. ಆದುದರಿಂದ ಇದು ಮಾತ್ರ ದೇವಿಯ ನಾಮವು, ಇದು ಅಲ್ಲವು, ಎಂದು ವಿಂಗಡಿಸಿ,ಪ್ರತ್ಯೇಕಿಸಿ ಹೇಳುವುದು ಅಸಾಧ್ಯವೂ ಅನುಚಿತವೂ ಆಗಿದೆ ಎಂದು ಭಾವವು.

॥ ರಾಮ ಉವಾಚ ॥

**ವಿಧಿಂ ಮೇ ಬ್ರೂಹಿ ವಿಪ್ರರ್ಷೇ ವ್ರತಸ್ಯಾಸ್ಯ ಸಮಾಸತಃ ।**
**ಕರೋಮ್ಯದ್ಯೈವ ಶ್ರದ್ಧಾವಾನ್ ಶ್ರೀದೇವ್ಯಾಃ ಪೂಜನಂ ತಥಾ ॥೩೮॥**

ಶ್ರೀರಾಮನು ನಾರದಮುನಿಯನ್ನು ಕೇಳಿದನು—ಎಲೈ ನಾರದಮಹರ್ಷಿಯೇ, ದಯವಿಟ್ಟು ನೀನು ಆ ವ್ರತದ ವಿಧಿನಿಯಮಗಳನ್ನು ಸಮಗ್ರವಾಗಿ ನನಗೆ ತಿಳಿಯ ಹೇಳು. ಈ ದಿವಸದಿಂದಲೇ ನಾನು ಹೆಚ್ಚಾದ ಭಕ್ತಿಶ್ರದ್ಧೆಗಳೊಡನೆ ಶ್ರೀದೇವಿಯ ಪೂಜೆಯನ್ನು ಕ್ರಮವಾಗಿ ಮಾಡುತ್ತೇನೆ.

|| ನಾರದ ಉವಾಚ ||

**ಪೀಠಂ ಕೃತ್ವಾ ಸಮೇ ಸ್ಥಾನೇ ಸಂಸ್ಥಾಪ್ಯ ಜಗದಂಬಿಕಾಂ |**
**ಉಪವಾಸಾನ್ನವೈವ ತ್ವಂ ಕುರು ರಾಮ ವಿಧಾನತಃ ||೩೯||**

ನಾರದಮಹರ್ಷಿಯು ಹೇಳಿದನು—ಎಲೈ ರಾಮನೇ, ಕೇಳು. ಸಮವಾದ ಭೂಮಿಯಲ್ಲಿ ಪೀಠವನ್ನು ಹಾಕಿ ಅದರ ಮೇಲೆ ಜಗನ್ಮಾತೆಯನ್ನು ಆವಾಹನೆ ಮಾಡಿ ಸ್ಥಾಪಿಸಬೇಕು. ಒಂಬತ್ತು ದಿನಗಳೂ ಉಪವಾಸವನ್ನು ಮಾಡುತ್ತಾ ವಿಧಿ ಪೂರ್ವಕವಾಗಿ ನೀನು ಈ ವ್ರತವನ್ನಾಚರಿಸು.

**ಆಚಾರ್ಯೋಽಹಂ ಭವಿಷ್ಯಾಮಿ ಕರ್ಮಣ್ಯಸ್ಮಿನ್ಮಹೀಪತೇ |**
**ದೇವಕಾರ್ಯವಿಧಾನಾರ್ಥಮುತ್ಸಾಹಂ ಪ್ರಕರೋಮ್ಯಹಂ ||೪೦||**

ಓ ದೊರೆಯಾದ ರಾಮನೇ, ಈ ಕರ್ಮದ ಆಚರಣೆಯಲ್ಲಿ ನಾನೇ ಆಚಾರ್ಯನಾಗಿರುತ್ತಾ ನಿನಗೆ ಸಹಾಯ ಮಾಡುತ್ತೇನೆ. ಈ ದೇವಕಾರ್ಯಸಾಧನೆಗೆ ನಾನು ಅತ್ಯಂತ ಉತ್ಸಾಹವುಳ್ಳವನಾಗಿ ನಿನಗೂ ಪ್ರೋತ್ಸಾಹವನ್ನುಂಟುಮಾಡುತ್ತಿರುತ್ತೇನೆ.

|| ವ್ಯಾಸ ಉವಾಚ ||

**ತಚ್ಛ್ರುತ್ವಾ ವಚನಂ ಸತ್ಯಂ ಮತ್ವಾ ರಾಮಃ ಪ್ರತಾಪವಾನ್ |**
**ಕಾರಯಿತ್ವಾ ಶುಭಂ ಪೀಠಂ ಸ್ಥಾಪಯಿತ್ವಾಂಬಿಕಾಂ ಶಿವಾಂ ||೪೧||**

**ವಿಧಿವತ್ಪೂಜನಂ ತಸ್ಯಾಶ್ಚಕಾರ ವ್ರತವಾನ್ ಹರಿಃ |**
**ಸಂಪ್ರಾಪ್ತೇ ಚಾಶ್ವಿನೇ ಮಾಸಿ ತಸ್ಮಿನ್ ಗಿರಿವರೇ ತದಾ ||೪೨||**

ವ್ಯಾಸಮಹರ್ಷಿಯು ಮುಂದೆ ಹೇಳಿದನು.—ಓ ಜನಮೇಜಯರಾಜನೇ ಪರಾಕ್ರಮಶಾಲಿಯಾದ ರಾಮನು ಆ ಮಾತುಗಳನ್ನು ಕೇಳಿ ಸತ್ಯವೆಂದು ತಿಳಿದು, ಮಂಗಳಕರವಾದ ಪೀಠವನ್ನು ಸ್ಥಾಪಿಸಿ ಅದರಲ್ಲಿ ಜಗನ್ಮಾತೆಯನ್ನು ಅಲಂಕರಿಸಿ

ಪ್ರತಿಷ್ಠೆಮಾಡಿ ವ್ರತಧಾರಿಯಾದನು. ಅನಂತರದಲ್ಲಿ ಆಶ್ವಯುಜ ಮಾಸವು ಪ್ರಾಪ್ತ ವಾಗಲು, ಶ್ರೀರಾಮನು ಆ ಬೆಟ್ಟದಲ್ಲೇ ಆ ವ್ರತದ ನಿಯಮಗಳನ್ನು ಪಾಲಿಸುತ್ತಾ ದೇವಿಯ ಪೂಜೆಯನ್ನು ವಿಧ್ಯುಕ್ತವಾಗಿ ಆಚರಿಸಿದನು.

**ಉಪವಾಸಪರೋ ರಾಮಃ ಕೃತವಾನ್ ವ್ರತಮುತ್ತಮಂ ।**
**ಹೋಮಂ ಚ ವಿಧಿವತ್ತತ್ರ ಬಲಿದಾನಂ ಚ ಪೂಜನಂ ॥೪೩॥**

ಅಲ್ಲಿ ಶ್ರೀರಾಮನು ಉಪವಾಸದ ನಿಯಮದಲ್ಲಿ ಆದರದಿಂದ ಆ ಶ್ರೇಷ್ಠವಾದ ನವರಾತ್ರಿವ್ರತವನ್ನು ನಿಯಮಾನುಸಾರವಾಗಿ, ಪೂಜೆ, ಹೋಮ, ಬಲಿ, ದಾನ ಇವು ಗಳನ್ನು ಮಾಡುತ್ತಾ ನೆರವೇರಿಸಿದನು.

**ಭ್ರಾತರೌ ಚಕ್ರತುಃ ಪ್ರೇಮ್ಣಾ ವ್ರತಂ ನಾರದಸಂಮತಂ ।**
**ಅಷ್ಟಮ್ಯಾಂ ಮಧ್ಯರಾತ್ರೇ ತು ದೇವೀ ಭಗವತೀ ಹಿ ಸಾ ॥೪೪॥**
**ಸಿಂಹಾರೂಢಾ ದದೌ ತತ್ರ ದರ್ಶನಂ ಪ್ರತಿಪೂಜಿತಾ ।**

ಸಹೋದರರಾದ ಶ್ರೀರಾಮಲಕ್ಷ್ಮಣರು ವಿಶೇಷವಾದ ಭಕ್ತಿಯಿಂದ ನಾರದ ಮಹರ್ಷಿಯು ಒಪ್ಪಿ ಉಪದೇಶಿಸಿದ್ದ ಉತ್ತಮವಾದ ಆ ನವರಾತ್ರಿವ್ರತವನ್ನು ನೆರವೇ ರಿಸಿದರು. ಆ ಮೇಲೆ ಹೀಗೆ ಆರಾಧಿಸಲ್ಪಟ್ಟ, ಪ್ರಸಿದ್ಧಳೂ ಮಹಾಮಹಿಮಶಾಲಿನಿಯೂ ಬ್ರಹ್ಮರೂಪಿಣಿಯೂ ಆದ ಆ ಶ್ರೀಶಕ್ತಿಯು ಅಷ್ಟಮಿದಿನದ ಮಧ್ಯರಾತ್ರಿಯಲ್ಲಿ ಸಿಂಹವಾಹಿನಿಯಾಗಿ ಅವರಿಬ್ಬರಿಗೂ ತನ್ನ ದರ್ಶನವನ್ನು ದಯಪಾಲಿಸಿದಳು.

**ಗಿರಿಶೃಂಗೇ ಸ್ಥಿತೋವಾಚ ರಾಘವಂ ಸಾನುಜಂ ಗಿರಾ ॥೪೫॥**
**ಮೇಘಗಂಭೀರಯಾ ಚೇದಂ ಭಕ್ತಿಭಾವೇನ ತೋಷಿತಾ ॥**

ಅವರು ಭಕ್ತಿಭಾವದಿಂದ ಕೂಡಿ ಮಾಡಿದ ಪೂಜೆಯಿಂದ ತೃಪ್ತಿಪಟ್ಟವಳಾಗಿ, ಶ್ರೀಶಕ್ತಿದೇವಿಯು ಆ ಬೆಟ್ಟದ ತುದಿಯಲ್ಲಿ ನಿಂತುಕೊಂಡು ಮೇಘದಂತೆ ಗಂಭೀರ ವಾದ ಧ್ವನಿಯಿಂದ ಕೂಡಿದ ವಾಣಿಯಿಂದ ತಮ್ಮನೊಡಗೂಡಿರುವ ಭಗವಂತನಾದ ಶ್ರೀರಾಮನನ್ನು ಕುರಿತು ಈ ರೀತಿಯಾಗಿ ಹೇಳಿದಳು.

॥ ದೇವ್ಯುವಾಚ ॥

**ರಾಮ ರಾಮ ಮಹಾಬಾಹೋ ತುಷ್ಟಾಸ್ಮ್ಯದ್ಯ ವ್ರತೇನ ತೇ ॥೪೬॥**
**ಪ್ರಾರ್ಥಯಸ್ವ ವರಂ ಕಾಮಂ ಯತ್ತೇ ಮನಸಿ ವರ್ತತೇ ।**

ನೀಳವೂ ಗಟ್ಟಿಯೂ ಆದ ಬಾಹುಗಳುಳ್ಳ ಓ ರಾಮಚಂದ್ರಮೂರ್ತಿಯೇ, ಈಗ ನೀನು ಮಾಡಿದ ವ್ರತದಿಂದ ನಾನು ಸಂತೋಷಪಟ್ಟಿರುತ್ತೇನೆ. ನಿನ್ನ ಮನಸ್ಸಿನಲ್ಲಿರುವ ಇಷ್ಟವಾದ ವರವನ್ನು ಕೇಳುವವನಾಗು.

**ನಾರಾಯಣಾಂಶಸಂಭೂತಸ್ತ್ವಂ ವಂಶೇ ಮಾನವೇऽನಘೇ ॥೪೭॥**
**ರಾವಣಸ್ಯ ವಧಾಯೈವ ಪ್ರಾರ್ಥಿತಸ್ತ್ವಮರೈರಸಿ ।**

ದೇವತೆಗಳಿಂದ ರಾವಣನನ್ನು ಕೊಲ್ಲುವುದಕ್ಕಾಗಿಯೇ ಪ್ರಾರ್ಥಿಸಲ್ಪಟ್ಟು ಪರಿಶುದ್ಧವಾದ ಮನುಚಕ್ರವರ್ತಿಯ ವಂಶದಲ್ಲಿ ನೀನು ಶ್ರೀಭಗವಂತನಾದ ನಾರಾಯಣನ ಅಂಶದಿಂದ ಜನ್ಮವನ್ನು ತಾಳಿರುವೆ.

**ಪುರಾ ಮತ್ಸ್ಯತನುಂ ಕೃತ್ವಾ ಹತ್ವಾ ಘೋರಂ ಚ ರಾಕ್ಷಸಂ ॥೪೮॥**
**ತ್ವಯಾ ವೈ ರಕ್ಷಿತಾ ವೇದಾಃ ಸುರಾಣಾಂ ಹಿತಮಿಚ್ಛತಾ ।**

ಇದೇ ರೀತಿಯಾಗಿ ಹಿಂದೆಯೂ ದೇವತೆಗಳಿಂದ ನೀನು ಪ್ರಾರ್ಥಿಸಲ್ಪಟ್ಟು ದೇವತೆಗಳ ಹಿತವನ್ನು ಇಚ್ಛಿಸುವವನಾಗಿ ಮತ್ಸ್ಯರೂಪವನ್ನು ಧರಿಸಿ ಅವತಾರ ಮಾಡಿ ಭಯಂಕರನಾದ ರಾಕ್ಷಸನನ್ನು ಕೊಂದು ವೇದಗಳನ್ನು ರಕ್ಷಿಸಿದೆ.

**ಭೂತ್ವಾ ಕಚ್ಛಪರೂಪಸ್ತು ಧೃತವಾನ್ಮಂದರಂ ಗಿರಿಂ ॥೪೯॥**
**ಅಕೂಪಾರಂ ಪ್ರಮಂಥಾನಂ ಕೃತ್ವಾ ದೇವಾನಪೋಷಯತ್ ।**

ಅನಂತರದಲ್ಲಿ ದೇವತೆಗಳು ಸಮುದ್ರವನ್ನು ಕಡೆದು ಅಮೃತವನ್ನು ಪಡೆಯಲು ಅನುಕೂಲವಾಗುವಂತೆ, ಆಮೆಯ ರೂಪದಲ್ಲಿ ಅವತರಿಸಿ ಕಡೆಗೋಲಾಗಿದ್ದ ಮಂದರಪರ್ವತವನ್ನು ಮುಳಿಗಿಹೋಗದಂತೆ ಹೊತ್ತುಕೊಂಡಿದ್ದು ಸಹಾಯಮಾಡಿದೆ.

**ಕೋಲರೂಪಂ ಪುರಾ ಕೃತ್ವಾ ದಶನಾಗ್ರೇಣ ಮೇದಿನೀಂ ॥೫೦॥**
**ಧೃತವಾನಸಿ ಯದ್ರಾಮ ಹಿರಣ್ಯಾಕ್ಷಂ ಜಘಾನ ಚ ।**

ಪೂರ್ವಕಾಲದಲ್ಲಿ ಮತ್ತೊಮ್ಮೆ ನೀನು ವರಾಹರೂಪದಲ್ಲಿ ಅವತರಿಸಿ ಬಂದು ಭೂಮಿಯನ್ನು ಚಾಪೆಯಂತೆ ಸುತ್ತಿ ತೆಗೆದುಕೊಂಡು ಹೋಗಿ, ಸಮುದ್ರದಲ್ಲಿ ಅಡಗಿಕೊಂಡಿದ್ದ ಹಿರಣ್ಯಾಕ್ಷನೆಂಬ ರಾಕ್ಷಸನನ್ನು ಸಂಹರಿಸಿ ನಿನ್ನ ಕೋರೆಹಲ್ಲುಗಳ ಕೊನೆ

ಯಲ್ಲಿ ಭೂಮಿಯನ್ನು ಧರಿಸಿ ತಂದು ಪುನಃ ಅದರ ಸ್ಥಾನದಲ್ಲಿರುವಂತೆ ಮಾಡಿ ಎಲ್ಲರನ್ನೂ ಉದ್ಧಾರಮಾಡಿದೆ.

**ನಾರಸಿಂಹೀಂ ತನುಂ ಕೃತ್ವಾ ಹಿರಣ್ಯಕಶಿಪುಂ ಪುರಾ ॥೫೧॥**
**ಪ್ರಹ್ಲಾದಂ ರಾಮ ರಕ್ಷಿತ್ವಾ ಹತವಾನಸಿ ರಾಘವ ।**

ಎಲೈ ರಘುಕುಲೋತ್ಪನ್ನನಾದ ರಾಮನೇ, ಹಿಂದೆ ನೀನು ನಾರಸಿಂಹರೂಪವನ್ನು ಧರಿಸಿ ಬಂದು ವಿಷ್ಣುದ್ವೇಷಿಯಾದ ಮತ್ತು ಧರ್ಮದ್ವೇಷಿಯಾಗಿದ್ದ ಹಿರಣ್ಯಕಶಿಪು ಎಂಬ ರಾಕ್ಷಸನನ್ನು ಕೊಂದು ಭಕ್ತನಾದ ಪ್ರಹ್ಲಾದನಿಗೆ ಉಂಟಾಗಿದ್ದ ಕಷ್ಟಗಳನ್ನು ಪರಿಹರಿಸಿ ಅವನನ್ನು ಕಾಪಾಡಿದೆ.

**ವಾಮನಂ ವಪುರಾಸ್ಥಾಯ ಪುರಾ ಛಲಿತವಾನ್ ಬಲಿಂ ॥೫೨॥**
**ಭೂತ್ವೇಂದ್ರಸ್ಯಾನುಜಃ ಕಾಮಂ ದೇವಕಾರ್ಯಪ್ರಸಾಧಕಃ ।**

ಹಾಗೆಯೇ ಹಿಂದೆ ಇನ್ನೊಂದುಸಲ ದೇವೇಂದ್ರನ ತಮ್ಮನಾಗಿ ವಾಮನರೂಪದಿಂದ ಅವತರಿಸಿದವನಾಗಿ ದೇವತೆಗಳ ಕಾರ್ಯವನ್ನು ಸಾಧಿಸುವವನಾಗಿ ಬಲಿಚಕ್ರವರ್ತಿಯನ್ನು ಮೋಸಗೊಳಿಸಿ ದೇವತೆಗಳ ರಾಜನಾದ ಇಂದ್ರನನ್ನು ಪುನಃ ದೇವರಾಜ್ಯದ ಪದವಿಯಲ್ಲಿ ಸ್ಥಾಪಿಸುವುದೆಂಬ ಕಾರ್ಯವನ್ನು ಕೈಗೂಡಿಸಿ ಸಂರಕ್ಷಿಸಿದೆ.

**ಜಮದಗ್ನಿಸುತಸ್ತ್ವಂ ಮೇ ವಿಷ್ಣೋರಂಶೇನ ಸಂಗತಃ ॥೫೩॥**
**ಕೃತ್ವಾಂತಂ ಕ್ಷತ್ರಿಯಾಣಾಂ ತು ದಾನಂ ಭೂಮೇರದಾದ್ದ್ವಿಜೇ ।**

ಆಮೇಲೆ ಮುಂದಿನ ಯುಗದಲ್ಲೂ ಮುಂಚಿನಂತೆಯೇ ನನ್ನ ಅಂಶರೂಪನಾದ ಶ್ರೀವಿಷ್ಣುವಿನ ಅಂಶದಿಂದ ಕೂಡಿದವನಾಗಿ ನೀನು ಜಮದಗ್ನಿಮಹರ್ಷಿಯ ಮಗನಾಗಿ ಹುಟ್ಟಿ, ದುಷ್ಟರಾದ ಕ್ಷತ್ರಿಯರನ್ನು ಸಂಹರಿಸಿ ಬ್ರಾಹ್ಮಣಶ್ರೇಷ್ಠರಿಗೆ ಭೂಮಿಯನ್ನೆಲ್ಲಾ ದಾನಮಾಡಿದೆ.

**ತಥೇದಾನೀಂ ತು ಕಾಕುತ್ಸ್ಥ ಜಾತೋ ದಶರಥಾತ್ಮಜಃ ॥೫೪॥**
**ಪ್ರಾರ್ಥಿತಸ್ತು ಸುರೈಃ ಸರ್ವೈ ರಾವಣೇನಾತಿಪೀಡಿತೈಃ ।**

ಓ ರಾಮನೇ, ಅದರಂತೆಯೇ ಈಗಲೂ ದೇವತೆಗಳು ರಾವಣನಿಂದ ಅತಿಯಾಗಿ ಹಿಂಸಿಸಲ್ಪಟ್ಟು ದುಃಖವನ್ನನುಭವಿಸಿ ನಿನ್ನನ್ನು ಪ್ರಾರ್ಥಿಸಲು, ಈಗ ನೀನು ಅವರ

ಸಂರಕ್ಷಣಾರ್ಥವಾಗಿ ದಶರಥಮಹಾರಾಜನ ಪುತ್ರನಾಗಿ ಜನ್ಮವನ್ನು ತಳೆದಿರುತ್ತೀಯೆ. ಹೀಗೆ ನೀನು ನಿನ್ನ ಹತ್ತು ಅವತಾರಗಳಲ್ಲಿ ಏಳನೆಯ ಅವತಾರವನ್ನು ಮಾಡಿ ಈಗ ಬಂದಿರುವೆ. ಆದುದರಿಂದ ನೀನು ನನ್ನ ಅಂಶಾಂಶನಾಗಿರುವೆ. ದೇ. ಭಾ. ೪ ಸ್ಕಂಧ ದಲ್ಲೂ ಹೀಗೆ ಹೇಳಿದೆ.

**ಕಪಯಸ್ತೇ ಸಹಾಯಾ ವೈ ದೇವಾಂಶಾ ಬಲವತ್ತರಾಃ ॥೫೫॥**
**ಭವಿಷ್ಯಂತಿ ನರವ್ಯಾಘ್ರ ಮಚ್ಛಕ್ತಿಸಂಯುತಾ ಹ್ಯಮೀ ।**

ಓ ಮಾನವಶ್ರೇಷ್ಠನಾದ ರಾಮನೇ, ದೇವತೆಗಳ ಅಂಶದಿಂದ ಅವತರಿಸಿರುವ ಪರಾಕ್ರಮಶಾಲಿಗಳಾದ ಈ ಕಪಿಶ್ರೇಷ್ಠರು ನನ್ನ ಶಕ್ತಿಯಿಂದ ಕೂಡಿದವರಾಗಿ ನಿನಗೆ ಸಹಾಯಕರಾಗಿ ಆಗುವರು.

**ಶೇಷಾಂಶೋಽಪ್ಯನುಜಸ್ತೇಽಯಂ ರಾವಣಾತ್ಮಜನಾಶಕಃ ॥೫೬॥**
**ಭವಿಷ್ಯತಿ ನ ಸಂದೇಹಃ ಕರ್ತವ್ಯೋಽತ್ರ ತ್ವಯಾಽನಘ ।**

ಈ ನಿನ್ನ ತಮ್ಮನೂ ಕೂಡ ಆದಿಶೇಷನ ಅಂಶದಿಂದ ಕೂಡಿ ಅವತರಿಸಿರು ತ್ತಾನೆ. ಅವನು ಮುಂದೆ ರಾವಣನ ಮಗನಾದ ಇಂದ್ರಜಿತನನ್ನು ಕೊಲ್ಲುವವನಾಗು ವನು. ಎಲೈ ಪುಣ್ಯಶಾಲಿಯಾದ ರಾಮನೇ, ಈ ವಿಚಾರದಲ್ಲಿ ನೀನು ಸ್ವಲ್ಪವೂ ಸಂಶಯಪಡಬೇಕಾದುದಿಲ್ಲವು.

**ವಸಂತೇ ಸೇವನಂ ಕಾರ್ಯಂ ತ್ವಯಾ ತತ್ರಾತಿಶ್ರದ್ಧಯಾ ॥೫೭॥**
**ಹತ್ವಾಽಥ ರಾವಣಂ ಪಾಪಂ ಕುರು ರಾಜ್ಯಂ ಯಥಾಸುಖಂ ।**

ವಸಂತಋತುವಿನಲ್ಲಿ ನೀನು ತುಂಬ ಶ್ರದ್ಧೆಯನ್ನು ವಹಿಸಿ ಕಾರ್ಯೋನ್ಮುಖ ನಾಗು. ಅನಂತರದಲ್ಲಿ ಪಾಪಿಷ್ಠನಾದ ರಾವಣನನ್ನು ಕೊಂದು ಸುಖವಾಗಿ ರಾಜ್ಯ ಭಾರವನ್ನು ಮಾಡುವವನಾಗು.

**ಏಕಾದಶಸಹಸ್ರಾಣಿ ವರ್ಷಾಣಿ ಪೃಥಿವೀತಲೇ ॥೫೮॥**
**ಕೃತ್ವಾ ರಾಜ್ಯಂ ರಘುಶ್ರೇಷ್ಠ ಗಂತಾಸಿ ತ್ರಿದಿವಂ ಪುನಃ ।**

ಓ ರಘುಶ್ರೇಷ್ಠನಾದ ರಾಮನೇ, ಹೀಗೆ ನೀನು ಹನ್ನೊಂದುಸಾವಿರ ವರ್ಷಗಳು ಭೂಮಿಯಲ್ಲಿ ರಾಜ್ಯಭಾರವನ್ನು ಮಾಡಿ ಅನಂತರದಲ್ಲಿ ಮತ್ತೆ ಸ್ವರ್ಗಕ್ಕೆ ಹೋಗುವ ವನಾಗಿರುವೆ.

|| ವ್ಯಾಸ ಉವಾಚ ||

**ಇತ್ಯುಕ್ತ್ವಾಂತರ್ದಧೇ ದೇವೀ ರಾಮಸ್ತು ಪ್ರೀತಮಾನಸಃ ||೫೯||**
**ಸಮಾಪ್ಯ ತದ್ವ್ರತಂ ಚಕ್ರೇ ಪ್ರಯಾಣಂ ದಶಮೀದಿನೇ ।**
**ವಿಜಯಾಪೂಜನಂ ಕೃತ್ವಾ ದತ್ವಾ ದಾನಾನ್ಯನೇಕಶಃ ||೬೦||**

ವ್ಯಾಸಮುನಿಯು ಮುಂದುವರಿಯುತ್ತಾ ಹೀಗೆ ಹೇಳಿದನು—ಈ ರೀತಿಯಾಗಿ ಶ್ರೀರಾಮನನ್ನು ಕುರಿತು ಶ್ರೀ ಬ್ರಹ್ಮರೂಪಿಣಿಯಾದ ದೇವಿಯು ಹೇಳಿ ಅಂತರ್ಧಾನವನ್ನು ಹೊಂದಿದಳು. ಅನಂತರದಲ್ಲಿ ಶ್ರೀರಾಮನೂ ಸಹ ಸಂತೋಷಗೊಂಡ ಮನಸ್ಸುಳ್ಳವನಾಗಿ ಆ ಶುಭವಾದ ನವರಾತ್ರವ್ರತವನ್ನು ಸಂಪೂರ್ಣವಾಗಿ ನೆರವೇರಿಸಿ, ವಿಜಯಾಪೂಜೆಯನ್ನು ಮಾಡಿ, ಬ್ರಾಹ್ಮಣರಿಗೆಲ್ಲಾ ಅನೇಕವಾದ ದಾನಗಳನ್ನು ಕೊಟ್ಟು, ವಿಜಯದಶಮಿ ದಿವಸದಲ್ಲಿ ಶತ್ರುಜಯವನ್ನು ಪಡೆಯಲು ಪ್ರಯಾಣಮಾಡಿದನು.

**ಕಪಿಪತಿಬಲಯುಕ್ತಃ ಸಾನುಜಃ ಶ್ರೀಪತಿಶ್ಚ**
**ಪ್ರಕಟಪರಮಶಕ್ತ್ಯಾ ಪ್ರೇರಿತಃ ಪೂರ್ಣಕಾಮಃ ।**
**ಉದಧಿತಟಗತೋಽಸೌ ಸೇತುಬಂಧಂ ವಿಹಾಯಾ-**
**ತ್ಯಹನದಮರಶತ್ರುಂ ರಾವಣಂ ಗೀತಕೀರ್ತಿಃ ||೬೧||**

ಕಪಿಗಳ ಒಡೆಯನಾದ ಸುಗ್ರೀವ ಮತ್ತು ಅವನ ಸೈನ್ಯದಿಂದಲೂ, ಸಹೋದರನಾದ ಲಕ್ಷ್ಮಣನಿಂದಲೂ ಕೂಡಿರುವ, ಸಂಪೂರ್ಣವಾದ ಮನೋರಥವುಳ್ಳ, ಪ್ರತ್ಯಕ್ಷವಾಗಿ ಪರಾತ್ಪರಶಕ್ತಿಸ್ವರೂಪಳಾದ ದೇವಿಯಿಂದ ಪ್ರೇರಿತನಾಗಿದ್ದ ಶ್ರೀರಾಮನು ಸಮುದ್ರದ ದಡವನ್ನು ಸಮೀಪಿಸಿ ಅದಕ್ಕೆ ಸೇತುವೆಯನ್ನು ಕಟ್ಟಿಸಿ, ದೇವತೆಗಳ ವೈರಿಯಾದ ರಾವಣನನ್ನು ಸಂಹರಿಸಿದನು. ಮತ್ತು ಎಲ್ಲ ದೇಶಕಾಲಗಳಲ್ಲಿಯೂ ಜನರಿಂದ ಸಂತೋಷಪೂರ್ವಕವಾಗಿ ಹಾಡಿ ಹೊಗಳಲ್ಪಡುತ್ತಿರುವ ಯಶಸ್ಸುಳ್ಳವನೂ ಆದನು.

**ಯಃ ಶೃಣೋತಿ ನರೋ ಭಕ್ತ್ಯಾ ದೇವ್ಯಾಶ್ಚರಿತಮುತ್ತಮಂ ।**
**ಸ ಭುಕ್ತ್ವಾ ವಿಪುಲಾನ್ಭೋಗಾನ್ ಪ್ರಾಪ್ನೋತಿ ಪರಮಂ ಪದಂ||೬೨||**

ಯಾವ ಮಾನವನು, ಉತ್ತಮವಾದ ಶ್ರೀದೇವಿಯ ಈ ಚರಿತ್ರೆಯನ್ನು ಭಕ್ತಿಭಾವದೊಡನೆ ಕೇಳುತ್ತಾನೆಯೋ ಅಂತಹ ಮಾನವನು ಇಹದಲ್ಲಿ ಹೇರಳವಾದ ಭೋಗಗಳನ್ನು ಅನುಭವಿಸಿ ಪರದಲ್ಲಿ ಶ್ರೇಷ್ಠವಾದ ಗತಿಯನ್ನು ಹೊಂದುವನು.

**ಸಂತ್ಯನ್ಯಾನಿ ಪುರಾಣಾನಿ ವಿಸ್ತರಾಣಿ ಬಹೂನಿ ಚ ।**
**ಶ್ರೀಮದ್ಭಾಗವತಸ್ಯಾಸ್ಯ ನ ತುಲ್ಯಾನೀತಿ ಮೇ ಮತಿಃ ॥೬೩॥**

ವಿಸ್ತಾರವಾದಂಥಾ ಅನೇಕವಾದ ಬೇರೆ ಪುರಾಣಗಳು ಬೇಕಾದಷ್ಟಿವೆ. ಆದರೆ ಅವು ಈ ದೇವಿಯ ಶ್ರೀಮದ್ಭಾಗವತಕ್ಕೆ ಸರಿಸಮಾನವಾದುವೆಂದು ಹೇಳಲು ಸಾಧ್ಯವಿಲ್ಲವೆಂಬುದಾಗಿ ನನ್ನ ಅಭಿಪ್ರಾಯವೆಂದು ಭಗವಾನ್ ವ್ಯಾಸಮಹರ್ಷಿಯು ಹೇಳಿರುವನು.

ಏಕೆಂದರೆ ಶೈವ, ವೈಷ್ಣವ ಮುಂತಾದ ಇತರ ಪುರಾಣಗಳಲ್ಲಿ ಸತ್ತ್ವರಜಸ್ತಮೋಗುಣಗಳ ಪೈಕಿ ಒಂದೊಂದು ಗುಣವು ಪ್ರಧಾನವಾಗಿರುವ ಮಾಯೆಯೇ ಉಪಾಧಿಯಾಗಿವುಳ್ಳ ಬ್ರಹ್ಮ ವಿಷ್ಣು ಮುಂತಾದ ದೇವತೆಗಳ ಉತ್ಕರ್ಷವನ್ನು ಹೇಳಿದೆ. ಈ ದೇವೀಭಾಗವತದಲ್ಲಿಯಾದರೋ ಆ ಎಲ್ಲ ಗುಣಗಳ ಸಾಮ್ಯಾವಸ್ಥಾರೂಪವಾದ ಮಹಾಮಾಯೆಯೇ ಉಪಾಧಿಯಾಗಿ ಉಳ್ಳ, ಪರಬ್ರಹ್ಮಸ್ವರೂಪಿಣಿಯಾದ ಪರಾಶಕ್ತಿಯ ಪರಮೋತ್ಕರ್ಷವನ್ನು ಪ್ರತಿಪಾದಿಸಿರುವುದರಿಂದಲೂ, ಈ ದೇವೀಭಾಗವತ ಮಹಾಪುರಾಣವು ಇತರ ಪುರಾಣಗಳಿಗಿಂತ ಹೆಚ್ಚು ವಿಶಾಲವಾದ ತತ್ತ್ವವನ್ನು ಬೋಧಿಸುತ್ತಿರುವುದರಿಂದಲೂ, ಆ ಪುರಾಣಗಳು ಸಂಕುಚಿತವಾದ ತತ್ತ್ವವನ್ನು ತಿಳಿಸುತ್ತಿರುವುದರಿಂದಲೂ, ಈ ಪುರಾಣದೊಡನೆ ಸರಿದೂಗಲಾರವು ಎಂದು ತಾತ್ಪರ್ಯವು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇಽಷ್ಟಾದಶಸಾಹಸ್ರ್ಯಾಂ**
**ಸಂಹಿತಾಯಾಂ ತೃತೀಯಸ್ಕಂಧೇ ತ್ರಿಂಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಹದಿನೆಂಟುಸಾವಿರ ಶ್ಲೋಕಸಂಖ್ಯೆಯುಳ್ಳ
ಶ್ರೀದೇವೀಭಾಗವತಮಹಾಪುರಾಣದ ಮೂರನೆಯ ಸ್ಕಂಧದಲ್ಲಿ
ಮೂವತ್ತನೆಯ ಅಧ್ಯಾಯವು ಮುಗಿದುದು.

## ॥ ತೃತೀಯಸ್ಕಂಧಶ್ಚ ಸಮಾಪ್ತಃ ॥

## । ಮೂರನೆಯ ಸ್ಕಂಧವು ಮುಗಿದುದು ॥

ಕರ್ಣಾಟಾಧಿಪತಿಶ್ರೀಮಜ್ಜಯಚಾಮೇಂದ್ರಶಾಸನಾತ್ ।
ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾದೇವಯಜ್ವತನಯಶ್ಚಂದ್ರಶೇಖರಃ ।
ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥
ಸೇವಿತಾವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।
ಪ್ರಾಣಿಕರ್ಮವಶಾದ್ಬ್ರಹ್ಮಣೀಚ್ಛಾಜ್ಞಾನಕ್ರಿಯಾತ್ಮಿಕಾ ॥

॥ ಶ್ರೀರಸ್ತು ॥



